ಅಖಿಲ ಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರಕಟಣೆ

## ಲಿಂಗಣ್ಣ ಕವಿಯ

# ಕೆಳದಿನೃಪ ವಿಜಯ

ಗದ್ಯಾನುವಾದ

**ಕೆಳದಿ ಗುಂಡಾಜೋಯಿಸ್**




**ಕನ್ನಡ ಸಾಹಿತ್ಯ ಪರಿಷತ್ತು**

ಪಂಪಮಹಾಕವಿ ರಸ್ತೆ ಚಾಮರಾಜಪೇಟೆ

ಬೆಂಗಳೂರು - ೫೬೦ ೦೧೮

Linganna Kaviya **KELADINRIPA VIJAYA** - Original with Proserendering by : Sri Keladi Gundajois,
Published by : **Kannada Sahitya Parishat**
Pampa Mahakavi Road Chamarajapet Bangalore - 560 018
Pages : 281 + v ; Price : **Rs. 60/-** 1999

ಮೊದಲ ಮುದ್ರಣ : ೧೯೭೬
ಎರಡನೆಯ ಮುದ್ರಣ : ೧೯೯೯



ಬೆಲೆ ರೂ. ೬೦/-



ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು - ೧೮

# ಅಧ್ಯಕ್ಷರ ನುಡಿ

ಅಖಿಲಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಕನಕಪುರದಲ್ಲಿ ೧೯೯೯ನೇ ಇಸವಿಯ ಫೆಬ್ರವರಿ ತಿಂಗಳ ಕೊನೆಯಲ್ಲಿ ಅತ್ಯಂತ ವೈಭವದಿಂದ ನೆರವೇರಿತು. ಸಮ್ಮೇಳನದ ಸವಿನೆನಪು ಬಹುಕಾಲ ಉಳಿಯುವಂತಹುದು. ಈ ಸಂದರ್ಭದಲ್ಲಿ ೬೭ ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸಬೇಕು, ಅವುಗಳನ್ನು ಸುಲಭ ಬೆಲೆಯಲ್ಲಿ ಕನ್ನಡಿಗರ ಕೈಯಲ್ಲಿಡಬೇಕು ಎಂಬುದು ಪರಿಷತ್ತಿನ ಸಂಕಲ್ಪವಾಗಿತ್ತು. ಆ ಸಂಕಲ್ಪದ ಸಾಕಾರವೇ ಈ ಪುಸ್ತಕ.

ಪರಿಷತ್ತು ಈ ಹಿಂದೆ ಮುದ್ರಿಸಿದ್ದ ಅನೇಕ ಉತ್ತಮ ಕೃತಿಗಳ ಮರುಮುದ್ರಣವನ್ನೂ ಒಳಗೊಂಡಂತೆ ೬೭ ಪುಸ್ತಕಗಳನ್ನು ಗ್ರಂಥ ಸಮಿತಿ ಆಯ್ಕೆ ಮಾಡಿತು. ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಗದ್ಯಾನುವಾದಗಳು, ಕನ್ನಡ ಭಾಷೆ, ಲಿಪಿ, ಸಂಸ್ಕೃತಿ ಬಗೆಗಿನ ಗ್ರಂಥಗಳು, ಕವಿ ಕಾವ್ಯ ವಿಚಾರಸಂಕಿರಣಗಳ ಪ್ರಬಂಧಗಳು, ಜೀವನಚರಿತ್ರೆ, ಜಾನಪದ, ಆರೋಗ್ಯವಿಚಾರ ಹೀಗೆ ಮುಂತಾಗಿ ವೈವಿಧ್ಯಮಯ ಪ್ರಕಾರದ ಪುಸ್ತಕಗಳು ಈ ಮಾಲೆಯಲ್ಲಿ ಸೇರಿವೆ.

ಸಮ್ಮೇಳನದ ಸಂದರ್ಭದಲ್ಲಿಯೇ ಈ ಎಲ್ಲ ೬೭ ಪುಸ್ತಕಗಳನ್ನು ಮುದ್ರಿಸಿ ಹೊರತರಲು ಪ್ರಯತ್ನಿಸಲಾಯಿತು. ಸಾಧ್ಯವಾಗಲಿಲ್ಲ. ಪರಿಷತ್ತು ಹೊಸದಾಗಿ ಸ್ಥಾಪಿಸಿದ ಆಫ್‌ಸೆಟ್ ಮುದ್ರಣಾಲಯದಲ್ಲಿಯೇ ಎಲ್ಲ ಪುಸ್ತಕಗಳನ್ನು ಮುದ್ರಿಸಬೇಕು, ತನ್ಮೂಲಕ ಬಿ.ಎಂ.ಶ್ರೀ ಅಚ್ಚುಕೂಟವನ್ನು ಅಭಿವೃದ್ಧಿಪಡಿಸಬೇಕು ಎಂಬ ಆಕಾಂಕ್ಷೆಯೇ ಈ ವಿಳಂಬಕ್ಕೆ ಕಾರಣ. ಸಮ್ಮೇಳನ ಮುಗಿದು ಮೂರುನಾಲ್ಕು ತಿಂಗಳುಗಳಲ್ಲಾದರೂ ಪುಸ್ತಕಗಳು ಹೊರಬರುತ್ತಿರುವುದು ಸಂತೋಷದ ಸಂಗತಿ. ಅರವತ್ತೇಳು ಪುಸ್ತಕಗಳ ಮುದ್ರಣಕ್ಕೆ ಅಗತ್ಯವಾದ ಕಾಗದವನ್ನು ಉಚಿತವಾಗಿ ಒದಗಿಸಿ ಮಹೋಪಕಾರವನ್ನು ಮಾಡಿದ ಅಖಿಲಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರೂ, ಅಂದಿನ ಸಾರಿಗೆ ಸಚಿವರೂ ಇಂದಿನ ಗೃಹ ಸಚಿವರೂ ಆಗಿರುವ ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರಿಗೆ ಹೃತ್ಪೂರ್ವಕ ಧನ್ಯವಾದಗಳು.

ಲಿಂಗಣ್ಣ ಕವಿಯ 'ಕೆಳದಿ ನೃಪ ವಿಜಯ' ಕಾವ್ಯವನ್ನು ಶ್ರೀ ಕೆಳದಿ ಗಂಡಾ ಜೋಯಿಸ್ ಅವರು ಅನುವಾದ ಮಾಡಿಕೊಟ್ಟಿದ್ದು, ಈಗ ಪುನರ್ ಮುದ್ರಣವಾಗುತ್ತಿದೆ. ಈ ಕೃತಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದಿರುವ ಬಿ.ಎಂ.ಶ್ರೀ. ಆಫ್‌ಸೆಟ್ ಅಚ್ಚುಕೂಟದ ಸಿಬ್ಬಂದಿ ವರ್ಗಕ್ಕೆ ಹಾಗೂ ಈ ಕಾರ್ಯದಲ್ಲಿ ಸಹಾಯ ಸಹಕಾರ ನೀಡಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

**ಎನ್. ಬಸವಾರಾಧ್ಯ**
ಅಧ್ಯಕ್ಷರು

# ಪೀಠಿಕೆ

ಕೆಳದಿನೃಪವಿಜಯವು ಕರ್ನಾಟಕಕ್ಕೆ ಸಂಬಂಧಿಸಿದಂತೆ ಭಾರತದ ಇತಿಹಾಸವನ್ನು ಪ್ರತಿಬಿಂಬಿಸುವಲ್ಲಿ ವಿಶಿಷ್ಟ ಸ್ಥಾನವೊಂದನ್ನು ಪಡೆದಿದೆ. ವಿದ್ವಾಂಸರಾದಿಯಾಗಿ ಇತಿಹಾಸ ತಜ್ಞರು ಈ ಗ್ರಂಥವನ್ನು ವಿಶ್ವವಿದ್ಯಾನಿಲಯದ ಮಹಾಪ್ರಬಂಧಗಳಿಗೆ ಹಾಗೂ ಸಂಶೋಧನೆಗೆ ಆಕರಗ್ರಂಥವಾಗಿ ಯಥೇಚ್ಛವಾಗಿ ಬಳಸಿಕೊಂಡಿದ್ದಾರೆ. ಐತಿಹಾಸಿಕ ಸಪ್ರಮಾಣ ಗ್ರಂಥಗಳ ಸಾಲಿನಲ್ಲಿ ಶೋಭಿಸಿದ ಈ ಕೃತಿಯನ್ನು ಕನ್ನಡ ಸಾಹಿತ್ಯ ಪರಿಷತ್ತಿನವರು ಪ್ರಾಚೀನ ಕನ್ನಡ ಸಾಹಿತ್ಯ ಗ್ರಂಥಗಳ ಗದ್ಯಾನುವಾದ ಮಾಲೆಯ ಯೋಜನೆಯಲ್ಲಿ ಅಳವಡಿಸಿಕೊಂಡಿದ್ದುದಕ್ಕೆ ಅಧ್ಯಕ್ಷರಾದ ಶ್ರೀ ಜಿ.ನಾರಾಯಣರವರು ಅಭಿನಂದನಾರ್ಹರಾಗಿದ್ದಾರೆ. ಈ ಅನುವಾದ ಕಾರ್ಯವನ್ನು ಕೃತಿಯ ಕವಿ ಲಿಂಗಣ್ಣನ ವಂಶದ ಅನುಬಂಧಿಗಳಲ್ಲಿ ಒಬ್ಬನಾದ ನನಗೆ ವಹಿಸಿ ಪ್ರೋತ್ಸಾಹಿಸಿರುವುದು ಕವಿ ಲಿಂಗಣ್ಣನಿಗೂ, ನಮ್ಮ ಪೂರ್ವಿಕರಿಗೂ ಹಾಗೂ ಕೆಳದಿ ಪ್ರಾಚ್ಯ ಐತಿಹಾಸಿಕ ಸಂಶೋಧನಾಲಯಕ್ಕೂ ಪರಿಷತ್ತಿನಿಂದ ಸಂದ ಗೌರವವೆಂದು ಹೇಳದಿರಲಾರೆನು.

ಈ ಅನುವಾದದಿಂದ ಕೃತಿಯ ಪರಿಚಯವು ಮೂಲಕ್ಕೆ ವಿಭಿನ್ನವಾಗದಂತೆ ಜನ ಸಾಮಾನ್ಯರಿಗೆ ಆಗುವಂತಾಗಿ ಇತಿಹಾಸದ ಅಭ್ಯಾಸಕ್ಕೂ ಚೇತನವೀಯುವಂತಿದೆ. ಈ ನಿಟ್ಟಿನಲ್ಲಿ ಲಂಡನ್‌ನಲ್ಲಿರುವ ಕೆಳದಿ ನೃಪ ವಿಜಯದ ಪ್ರತಿಯ ಪರಿಚಯವು ಲಭ್ಯವಾಗುವಂತಾಗಿ ಅದರ ಪಾಠಾಂತರದಲ್ಲಿ ಸಂಶೋಧನೆಯು ಮುಂದುವರಿದರೆ ಭಾರತದ ಸಾಹಿತ್ಯ ಅಕಾಡೆಮಿಯ ಮುಖಾಂತರ ಇತರ ಭಾಷೆಗಳಿಗೂ ಇದರ ಅನುವಾದನೆಗೆ ಪುರಸ್ಕಾರವಿತ್ತಂತಾಗುತ್ತದೆ.

ನನ್ನ ಅನುವಾದಕಾರ್ಯದಲ್ಲಿ ಆರಂಭದಿಂದ ಅಂತ್ಯದವರೆಗೂ ವಿಪುಲವಾಗಿ ಪ್ರೋತ್ಸಾಹಿಸಿದ ವಿದ್ವಾನ್ ಶ್ರೀರಂಗನಾಥ ಶರ್ಮರವರಿಗೂ ಶ್ರೀ ರಾಮರಾಯರಿಗೂ ತಾಳೇಗರಿಯ ಫೋಟೋ ದಯಪಾಲಿಸಿದ ಕರ್ನಾಟಕ ಗೆಜೆಟಿಯರ್ ಸಂಪಾದಕರಾದ ಶ್ರೀ ಅಭಿಶಂಕರ ಅವರಿಗೂ ಈ ಮೂಲಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಅನುವಾದ ಕೆಲಸದಲ್ಲಿ ಸಹಕರಿಸಿದ ಶ್ರೀ ಎಂ.ಎನ್. ಮಧ್ಯಸ್ಥರವರಿಗೂ ಇತರ ಸನ್ಮಿತ್ರರಿಗೂ ಹೃತ್ಪೂರ್ವಕ ವಂದನೆಗಳು.

ಕೆಳದಿ
೮-೭-೧೯೭೬

**ಕೆಳದಿ ಗುಂಡಾಜೋಯಿಸ್**
ಗೌರವ ಕ್ಯೂರೇಟರ್,
ಕೆಳದಿ ಪ್ರಾಚ್ಯ ಐತಿಹಾಸಿಕ ಸಂಶೋಧನಾಲಯ, ಕೆಳದಿ

# ಪರಿವಿಡಿ

# ಉಪೋದ್ಘಾತ

ಕರ್ನಾಟಕದ ಹಲವಾರು ಸಂಸ್ಥಾನಗಳಲ್ಲಿ ಕೆಳದಿಯು ಪ್ರಮುಖವಾದುದಾಗಿದೆ. ಕ್ರಿ.ಶ. ೧೫ನೆಯ ಶತಮಾನದಲ್ಲಿ ಜನಿಸಿದ ಈ ಪಾಳೆಯಪಟ್ಟು ೨೫೦ ವರ್ಷಗಳವರೆಗೂ ಬಲಿಷ್ಠವಾಗಿ ಆಳಿದ ರಾಜ್ಯವೆನಿಸಿದ್ದಿತು. ವಿಜಯನಗರ ಸಾಮ್ರಾಜ್ಯದ ಪತನಾನಂತರ ಕೆಳದಿಯು ಹಿಂದೂ ತತ್ವ ಹಾಗೂ ಸಂಸ್ಕೃತಿಯ ರಕ್ಷಣೆಯ ಸ್ಥಾನವನ್ನು ವಹಿಸಿಕೊಂಡಿತು. ಈ ರಾಜ್ಯವು ತನ್ನ ಉನ್ನತಿಯ ಕಾಲದಲ್ಲಿ ಮೈಸೂರಿಗಿಂತಲೂ ಅಧಿಕ ವಿಸ್ತಾರವನ್ನು ಒಳಗೊಂಡ ಸಂಪದ್ಭರಿತ ರಾಜ್ಯವಾಗಿ ಮೆರೆಯಿತು.

ಕೆಳದಿ ಅರಸರ ವಂಶಪರಂಪರೆಯನ್ನು ಕುರಿತು ರಚಿಸಿದ ಕೆಳದಿ ನೃಪ ವಿಜಯವು ಕೆಳದಿ ಆಸ್ಥಾನದ ಸಮಕಾಲೀನ ಕೃತಿಗಳಲ್ಲಿ ಶ್ರೇಷ್ಠ ಐತಿಹಾಸಿಕ ಆಕರಗ್ರಂಥವೆನಿಸಿದೆ. ಇದಕ್ಕಿಂತಲೂ ಮುಂಚಿನ ಕೃತಿಯಾದ ಶಿವತತ್ವರತ್ನಾಕರವು ಕೆಳದಿ ಅರಸ ಬಸವರಾಜನಿಂದ ರಚಿಸಲ್ಪಟ್ಟಿದೆ. ವಿಶ್ವಕೋಶವೆನಿಸಿದ ಇದು ಸಂಸ್ಕೃತಭಾಷೆಯಲ್ಲಿದೆ.

ಕೆಳದಿ ನಾಯಕರ ಚರಿತ್ರೆಯನ್ನು ಯಥಾವತ್ತಾಗಿ ನಿರೂಪಿಸುವ ಕೆಳದಿ ನೃಪವಿಜಯವು ೧೨ ಆಶ್ವಾಸಗಳನ್ನೊಳಗೊಂಡ ಚಂಪೂಗ್ರಂಥ. ನೃಪವಿಜಯದಲ್ಲಿಯೇ ಉಲ್ಲೇಖಿಸಿರುವಂತೆ.... "ಇಂತಪ್ಪ ರಾಜಲಾಂಛನೋಪಯುಕ್ತಮಾದ ಬಿರುದುಗಳುಮನಿತ್ತು ಮನ್ನಿಸಿ ತದಾರಭ್ಯ ಕೆಳದಿ ಮೂಲಸಂಸ್ಥಾನದ ಮನ್ನೆಯ ಚೌಡಪ್ಪನಾಯಕನೆಂದು ಕರೆವುದೆಂದು ನಿಯಾಮಿಸಿ ಪ್ರಖ್ಯಾತಮಪ್ಪಂತು".... ಎಂದು ಹೇಳಿರುವುದರಿಂದ ಇವರಿಗೆ ಕೆಳದಿ ಸಂಸ್ಥಾನದ ನಾಯಕರು ಎಂಬುದಾಗಿಯೂ ಹೆಸರುಂಟಾಗಿದೆ.

ಕರ್ನಾಟಕದ ಅದರಲ್ಲೂ ದೇಶೀಯ ಕೃತಿಗಳಲ್ಲಿ ಕೆಳದಿ ಸಂಸ್ಥಾನದ ಅರಸರ ವಿಜಯಗಳನ್ನು ವರ್ಣಿಸುವ ಕೆಳದಿ ನೃಪ ವಿಜಯವು ಒಂದು ಗಮನಾರ್ಹ ಕೃತಿ. ಇದು 'ಕಂಠೀರವ ನರಸರಾಜ ವಿಜಯ' ಹಾಗು 'ಚಿಕ್ಕದೇವರಾಜ ವಂಶಾವಳಿ'ಗಳಂತೆ ಐತಿಹಾಸಿಕ ಪ್ರಾಮುಖ್ಯವುಳ್ಳದ್ದು.[೧]

**ಕೃತಿ ಪರಿಚಯ**

ಕ್ರಿ. ಶ. ೧೮ನೆಯ ಶತಮಾನದಲ್ಲಿ ರಚಿಸಲ್ಪಟ್ಟ ಈ ಕೃತಿಯು, ಇತಿಹಾಸಕ್ಕೆ ಕರ್ನಾಟಕದ ಕೊಡುಗೆಗಳಲ್ಲಿ ಉತ್ಕೃಷ್ಟ ಕೃತಿಯೆನಿಸಿದೆ. ಈ ಗ್ರಂಥವನ್ನು ಬರೆದವನು ಕೆಳದಿ ಅರಸರ ಆಸ್ಥಾನಕವಿ ಲಿಂಗಣ್ಣ. ಕೆಳದಿ ಅರಸರ ಆಸ್ಥಾನದಲ್ಲಿದ್ದುಕೊಂಡು ರಚನೆಮಾಡಿರುವುದರಿಂದ ಈ ಐತಿಹಾಸಿಕ ಕೃತಿಯು ಇತಿಹಾಸಜ್ಞರಿಗೆ ಮಹತ್ವಪೂರ್ಣ ಆಕರಗ್ರಂಥವೆನಿಸಿದೆ. ಎ. ಆರ್. ಕೃ. ಅವರು ಹೇಳಿದಂತೆ ಈ ಕೃತಿಯಲ್ಲಿ ಕಾವ್ಯಾಂಶಕ್ಕಿಂತಲೂ ಚಾರಿತ್ರಿಕಾಂಶಗಳೇ ಹೆಚ್ಚಾಗಿವೆ. ಆರಂಭದಿಂದ ಅಂತ್ಯದವರೆಗೂ ಕವಿಯು ಕೆಳದಿ ಅರಸರ ಸಮಗ್ರ ಪರಿಚಯವನ್ನು ನೀಡಲು ಪ್ರಯತ್ನಿಸಿ, ಪ್ರಾಸಂಗಿಕವಾಗಿ ಚಿತ್ರದುರ್ಗದ ನಾಯಕರು, ಬೇಲೂರ ನಾಯಕರು, ವಿಜಯನಗರದ ಚಕ್ರವರ್ತಿಗಳು, ಷಾಹಿ ರಾಜರು, ಮೈಸೂರು

---

೧ ಕರ್ನಾಟಕದ ಪರಂಪರೆ, ಸಂಪುಟ ೨, ಪುಟ ೨೮೮

ಒಡೆಯರು, ತರಿಕೆರೆಯ ನಾಯಕರು, ದೆಹಲಿಯ ಬಾದಷಹರು, ಅಹಮ್ಮದ್ ನಗರದ ನಿಜಾಂಷಹನೇ ಮುಂತಾದವರು, ಬಿಜಾಪುರದವರು, ಸೋದೆ, ಗೇರುಸೊಪ್ಪೆ, ಬಿಳಗಿ ಇತ್ಯಾದಿ ಅರಸರ ಚರಿತ್ರೆಗಳು, ಶ್ರೀ ಶೃಂಗೇರಿ ಮಠದ ಪರಂಪರೆಯ ಗುರುಗಳು ಮುಂತಾದ ಚರಿತ್ರೆಗಳನ್ನು ಹಾಸುಹೊಕ್ಕಾಗಿ ಹೆಣೆದಿದ್ದಾನೆ. ಶಾಸನಾದಿ ಸಂಶೋಧನೆಗಳಲ್ಲಿ ಹಾಗೂ ಇತರ ಚಾರಿತ್ರಿಕಾಂಶ ಅಧ್ಯಯನದ ಉಲ್ಲೇಖನಗಳಲ್ಲಿ ಇವುಗಳನ್ನು ವಿವೇಚಿಸಲಾಗಿ ಈತನು ಹೇಳಿದ ಐತಿಹಾಸಿಕ ಸಂಗತಿಯು ಸಾಕ್ಷೀಭೂತವಾಗಿ ಸತ್ಯವೆಂದು ಹೇಳುವಂತಿವೆ.[೧] ವಿದ್ವಾಂಸರು ಹಾಗೂ ಇತಿಹಾಸ ತಜ್ಞರು ನಡೆಸಿದ ಈಚೆಗಿನ ಸಂಶೋಧನೆಗಳಲ್ಲಿ ಕೆಳದಿ ನೃಪ ವಿಜಯವನ್ನೇ ಹೆಚ್ಚಾಗಿ ಆಧರಿಸಿರುವುದೂ ಇದು ಪ್ರಾಮಾಣಿಕ ಗ್ರಂಥವೆಂಬುದನ್ನು ಸಮರ್ಥಿಸುತ್ತದೆ.

ಗ್ರಂಥಗಳ ವಿಶ್ಲೇಷಣೆಯಲ್ಲಿ ಹಲವಾರು ಕುತೂಹಲಕಾರಕ ಅಂಶಗಳು ವ್ಯಕ್ತಪಡುತ್ತವೆ. ಕೃತಿಯಲ್ಲಿ ಕಂಡುಬರುವ ಇತರ ದೊರೆಗಳ ಚರಿತ್ರೆಗಳನ್ನು ಕವಿಯು ಸಂಗ್ರಹಿಸಿರುವ ಕ್ರಮವು ಗಮನಾರ್ಹವೆನಿಸಿದೆ. ಕೃತಿಯ ಪರಿಮಾಣವು ಕೇವಲ ಕಾವ್ಯ ಸಾಹಿತ್ಯದ ಧಾಟಿಗೇ ಸೀಮಿತಗೊಳ್ಳದೆ ಪ್ರಮುಖವಾಗಿ ಐತಿಹಾಸಿಕ ಸಂಗತಿಗಳನ್ನೇ ಕುರಿತೇಟಾಗಿ ನಿರೂಪಿಸಲು ಪ್ರಯತ್ನಿಸಿದಂತಿದೆ. ಒಂದಾದಮೇಲೊಂದರಂತೆ ಕವಿಯು ಅರಸರ ಚರಿತ್ರೆಯನ್ನು ಹೇಳುತ್ತಾ ಒಂದೊಂದೇ ಆಶ್ವಾಸದಂತೆ ಮುಂದುವರಿದಿದ್ದಾನೆ. ಈ ಕೃತಿಯ ವಿಶ್ಲೇಷಣೆಯಿಂದ ಇದು ಕೆಳದಿ ಸರಕಾರದ ಅಧಿಕೃತ ವರದಿಯೋಪಾದಿಯಲ್ಲಿ ರಚಿಸಿದಂತಿದೆ. ಎ. ಆರ್. ಕೃ. ಅವರೇ ನುಡಿದಂತೆ ಚರಿತ್ರೆಯನ್ನು ಕನ್ನಡದಲ್ಲಿ ಇದ್ದದ್ದು ಇದ್ದ ಹಾಗೆ ವರ್ಣಿಸಿರುವುದು ಈ ಕೃತಿಯ ವೈಶಿಷ್ಟ್ಯವನ್ನು ತೋರಿಸುತ್ತದೆ. ಕ್ರಿ.ಶ. ೧೮ನೆಯ ಶತಮಾನದಲ್ಲಿಯೇ ಇಂತಹ ಕೃತಿಗಳನ್ನು ರಚಿಸಿರುವುದು ಚಾರಿತ್ರಿಕ ಗ್ರಂಥಗಳ ಸಾಲಿನಲ್ಲಿ ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯೆನ್ನಬಹುದು.

### ಕೃತಿಯ ಮೌಲ್ಯಮಾಪನ

ಕೆಳದಿನೃಪವಿಜಯದ ಅವಲೋಕನದಲ್ಲಿ ಕೆಲವು ಅಂಶಗಳು ತರ್ಕಬದ್ಧ ನಿಲುಮೆಯಿಂದ ಕೂಡಿದ್ದು ವಿಶ್ಲೇಷಣಾರ್ಹವೆನಿಸಿವೆ.

(೧) ಕೆಳದಿ ಇತಿಹಾಸಕಥನದಲ್ಲಿ ತೆರೆಯ ಮರೆಯಲ್ಲಿ ಹಲವಾರು ಅಸ್ಪಷ್ಟ ಸಂಗತಿಗಳು ಜರುಗಿರಬಹುದು. ಲಿಂಗಣ್ಣನು ಅವುಗಳನ್ನು ಉಲ್ಲೇಖಿಸದಿರಬಹುದು; ಹಾಗೂ ತರ್ಕಬದ್ಧವಾಗಿ ಇವುಗಳನ್ನು ಸಂಶಯಕ್ಕೆಡೆಗೊಡುವಂತೆ ಹೇಳಿರಬಹುದು. ಇದಕ್ಕೆ ಕಾರಣಗಳನ್ನು ಹೀಗೆ ವಿವೇಚಿಸಬಹುದಾಗಿದೆ. ಕೆಳದಿ ಅರಸರ ಆಸ್ಥಾನದಲ್ಲಿದ್ದು ಕೊಂಡೇ ನಾಯಕನ ಅನುಮತಿಯಿಂದಲೇ ಅವನು ಈ ಕೃತಿಯನ್ನು ರಚಿಸಿರಬಹುದು. ಅರಮನೆಯಲ್ಲಿ ನಡೆದ ಅನೇಕ ಸಂಗತಿಗಳು ಗೊತ್ತಿದ್ದರೂ ಅವುಗಳನ್ನು ವಿವಿಧ ಕಾರಣಗಳಿಂದ ಕೈಬಿಟ್ಟಿರಬಹುದು. ಅರಮನೆಯಲ್ಲಿನ ಅನೇಕ ಮಾಹಿತಿಗಳು ಉಪಲಬ್ಧವಿಲ್ಲದಿರಬಹುದು.

---

೧ ಅನುಬಂಧ ೧ ನೋಡಿ

ವಿದೇಶೀಯ ಪ್ರವಾಸಿ ಪಿಯತ್ರೋ ಡೆಲ್ಲಾ ವಲ್ಲೆಯು ತಾನು ಪ್ರವಾಸೀ ಕಥನದ ರೂಪದಲ್ಲಿ ಕ್ರಿ.ಶ. ೧೭ನೆಯ ಶತಮಾನದಲ್ಲಿಯೇ ಉಲ್ಲೇಖಿಸಿರುವಂತೆ ಲಿಂಗಣ್ಣನಿಗೂ ಅವಕಾಶವಿದ್ದಲ್ಲಿ ಅಥವಾ ಮನಸ್ಸು ಮಾಡಿದ್ದಲ್ಲಿ ಅನೇಕ ಸಂಗತಿಗಳು ಬೆಳಕಿಗೆ ಬರುವಂತಾಗುತ್ತಿತ್ತೋ ಏನೋ? ಅವುಗಳಲ್ಲಿ ಹಲವನ್ನು ಇಲ್ಲಿ ಉದಾಹರಿಸಬಹುದಾಗಿದೆ.

(ಅ) ಈ ಸದಾಶಿವನಾಯಕರಿಗೆ ರಾಯರ ರಾಜಕಾರ್ಯದ ಮೇಲೆ ಜಗ್ಗುಪಾಳ್ಯವೆಂಬ ಸ್ಥಳದಲ್ಲೂ ದೇಹಾಯಾಸ ತೊಡಗಿ ಐಕ್ಯವಾದಲ್ಲಿ ಆ ಸ್ಥಳದಲ್ಲಿಯೇ ಸಮಾಧಿಯಾಯ್ತು (ಕ) ಪ್ರತಿ ಪು. ೩೮.

ಇಲ್ಲಿ ಉಲ್ಲೇಖಿಸಿದ ರಾಜಕಾರ್ಯವು ಯಾವುದು ಎಂಬ ಸಂದೇಹವು ತಲೆದೋರುತ್ತದೆ.

(ಆ) ವರಕರಿಯ ಮೇಲೆ ಮದುವೆಯ
ಮೆರೆವಣಿಗೆಯ ಮಾಡೆ ಜನರಿಗಪ್ಪಣೆಯಂ ತಾ
ನಿರದಿತ್ತ ಬಿಳಿಗಿಯರಸಗೆ
ಹರಮತಚರ ಶೀಲವಂತನೆನಿಪಪ್ಪಣನಿಂ ॥

ದೊರೆತನಂ ನಡೆಯದೊಲ್ವಿ
ಡ್ದುರಮಡಸಿಸೆ ತಾನೆ ಬಂದು ಬಿಳಿಗಿಯ ಭೂಪಂ
ನೆರೆಬೇಟೆಗೊಂಡು ದೈನ್ಯದೊ
ಳೊರೆಯಲ್ಕಪ್ಪಣನ ಮುಖದೆ ಬಂದಾದೆಸೆಯಂ ॥

೧೧-೩೪, ೩೫

ಹೀಗೆಯೇ ಪಿಯತ್ರೋ ಡೆಲ್ಲಾ ವಲ್ಲೆಯು ಉಲ್ಲೇಖಿಸಿದ ವೆಂಕಟಪ್ಪನಾಯಕನ ಪತ್ನಿ ಭದ್ರಮ್ಮನ ತ್ಯಾಗಜೀವನದ ದುರಂತಕಥೆ ಮುಂತಾದುವನ್ನು ಪ್ರತೀಕ್ಷಿಸಲು ಉದಾಹರಿಸಬಹುದಾಗಿದೆ.

(೨) ಈ ಕೃತಿಯಲ್ಲಿ ಉಲ್ಲೇಖಿಸಿದ ಕಾಲ ಕಾರ್ಯಾದಿಗಳು ಸಂಶೋಧನೆಯಲ್ಲಿ ಸಂವತ್ಸರ ಹಾಗೂ ಕ್ರಿಸ್ತಶಕಗಳ ಕಾಲಮಾನಾದಿಗಳೊಡನೆ ಸರಿಸುಮಾರಾಗಿ ಹೋಲಿಕೆಯನ್ನು ಪಡೆದಿರುವುದು.[೧] ಕವಿಯು ಒಂದೆಡೆ ಹೇಳುತ್ತಾ... "ತದ್ರಕ್ತಾಕ್ಷಿ ಸಂವತ್ಸರದ ಮಾಘಮಾಸದೊಳ್ ತುರುಷ್ಕ ಸೈನ್ಯಕ್ಕಂ ರಾಯ ಸೈನ್ಯಕ್ಕಂ ಮಹಾದ್ಭುತಮಾದ ಯುದ್ಧಂ ಪಣ್ಣಿ"..... ಎಂದು ಹೇಳಿ ಅದೇ ಪುಟದ ಮಗುದೊಂದೆಡೆಯಲ್ಲಿ...... ಶಾಲಿವಾಹನ ಶಕ ೧೪೮೭ನೆಯ ರಕ್ತಾಕ್ಷಿ ಸಂವತ್ಸರದ ಮಾಘ ಬಹುಳದಲ್ಲಿ ರಕ್ಕಸದಂಗಡಿಯೆಂಬ ಸ್ಥಳದಲ್ಲಿ ರಾಮರಾಯರಂ ಪಿಡಿದು ಶಿರಚ್ಛೇದನಂಗೈದು...." ಎಂದು ಹೇಳಿರುವುದು ಗಮನಾರ್ಹವೆನಿಸಿದೆ. ಇದನ್ನು ಇದೇ ಕೃತಿಯ ಪು. ೧೮ರಲ್ಲೂ ಗಮನಿಸಬಹುದು[೨]

---

೧ ಅನುಬಂಧ ೨ ನೋಡಿ

೨ ಕೆ.ನೃ.ವಿ. ಪು. ೧೮-ದ್ವಿತೀಯ ಮುದ್ರಣ

(೩) ಕೃತಿಯಲ್ಲಿ ಉಲ್ಲೇಖಿಸಿದ ಇತರ ರಾಜರ ಹಾಗೂ ನಾಯಕರ ವಂಶಾವಳಿಗಳಿಗೂ ಮತ್ತು ಕೆಳದಿ ವಂಶದ ನಾಯಕರ ಕಾಲದಲ್ಲಿ ನಡೆದ ಘಟನಾವಳಿಗಳಿಗೂ ಸಾಮ್ಯವು ಕಂಡುಬಂದಿರುವುದು.

(೪) (a) ಕವಿ ಲಿಂಗಣ್ಣನ ಈ ಕೃತಿಯಲ್ಲಿ ಉಲ್ಲೇಖಿಸಿದ ಅನೇಕ ಅವಶೇಷಗಳು ಉಪಲಬ್ಧವಿರುವುದು. ಇವುಗಳು ಪ್ರಾಚ್ಯ ಅವಶೇಷಗಳ ಸಮೀಕ್ಷಾದಾಖಲೆಗೆ ಅಮೂಲ್ಯ ಶೇಖರಣೆಗಳಾಗಿವೆ. ಸಂಶೋಧನೆಯಲ್ಲಿಯೂ ಇವುಗಳ ಅಸ್ತಿತ್ವವನ್ನು ಈಗಲೂ ಗುರುತಿಸಬಹುದಾಗಿದೆ. ಹಲವು ಉದಾಹರಣೆಗಳನ್ನು ಮೂರನೆಯ ಅನುಬಂಧದಲ್ಲಿ ಗಮನಿಸಬಹುದಾಗಿದೆ.[೩]

(b) ಲಿಂಗಣ್ಣನು ಮಲೆನಾಡಿನ ಪ್ರಕೃತಿ ಸೌಂದರ್ಯವನ್ನು ಹಾಗೂ ಕರಾವಳಿಯ ರಮ್ಯತೆಯನ್ನು ಸುಂದರವಾಗಿ ಚಿತ್ರಿಸಿದ್ದಾನೆ. ಕವಿಯು ಉಲ್ಲೇಖಿಸಿದ ಭರತಖಂಡದ ಕರ್ಣಾಟಕದ ಸಹ್ಯಾದ್ರಿ ಹಾಗೂ ಕೆಳದಿಯ ಸುತ್ತುಮುತ್ತಣ ಭೂಗೋಳ ಮತ್ತು ಮೇಲ್ಮೈಲಕ್ಷಣಗಳನ್ನು ಯಥಾವತ್ತಾಗಿ ಚಿತ್ರಿಸುತ್ತಾ ಕಾವ್ಯದ ಸೊಬಗನ್ನು ಐತಿಹಾಸಿಕ ವಸ್ತುವಿನ ಹಿನ್ನೆಲೆಯಲ್ಲಿ ಹೀಗೆ ವರ್ಣಿಸಿದ್ದಾನೆ:

ಆ ಗಿರಿಯ ದಕ್ಷಿಣಾಶಾ<br>
ಭಾಗದೊಳುರೆ ಕರ್ಮಭೂಮಿ ಸಂಜ್ಞೆಯಿನಧಿಕ<br>
ಶ್ರೀಗೆಡೆಯೆನಿಸಿ ಮನೋಹರ<br>
ಮಾಗಿರ್ಪುದು ಭರತಖಂಡಮನಘಕರಂಡಂ ೧-೧೦

ಆ ಸಹ್ಯಾದ್ರಿಯೊಳೊಪ್ಪುವ<br>
ದೇಶಂಗಳೊಳಧಿಕಮೆನಿಸಿ ನಿರುಪಮ ಲಕ್ಷ್ಮೀ<br>
ಕೋಶಂ ವಿಲಸತ್ತುಣ್ಯನಿ<br>
ವೇಶಂ ಕರ್ಣಾಟದೇಶಮುರೆ ರಂಜಿಸುಗುಂ ೧-೧೨

ಇದಲ್ಲದೆ ಪದ್ಯ ೧೩ ರಿಂದ ೩೯ರವರೆಗೆ ಹಾಗೂ

ಆ ಕರ್ಣಾಟಕ ದೇಶದ<br>
ಭೂಕಾಂತೆಯ ವಕ್ತ್ರಪದ್ಮಮೆನೆ ರಾಜಿಸುಗುಂ<br>
ಶ್ರೀಕರಮೆನಿಸಿಯಜಸ್ರಂ<br>
ನಾಕವನಿಳಿಕ್ಕೆದ ಕೆಳದಿಯೆಂದೆನಿಪ ಪುರಂ ॥ ೧-೩೦

(೫) ಶಾಸನಾದಿಗಳ ಹಾಗೂ ವಿದೇಶೀಯ ಪ್ರವಾಸೀಕಥನಗಳ ಅಧ್ಯಯನದಲ್ಲಿ ಈ ಕೃತಿಯ ಸಾಮ್ಯತೆಯು ಕುತೂಹಲಕರವಾಗಿ ಹೊಂದಿಕೊಳ್ಳುತ್ತದೆ. ಲಿಂಗಣ್ಣ ಕವಿಯು ಉಲ್ಲೇಖಿಸಿದ ಅನೇಕ ರಾಜರುಗಳ ಹೆಸರುಗಳು, ಮಂತ್ರಿಗಳ, ಕರಣಿಕರ, ರಾಯಸದವರ, ಪ್ರಧಾನಿಗಳ, ಸೇನಾಧಿಕಾರಿಗಳ ನಾಮಗಳು ಐತಿಹಾಸಿಕ ಅಧ್ಯಯನದಲ್ಲಿ ಗಮನಾರ್ಹ ಸಾಮಗ್ರಿಗಳನ್ನು ಒದಗಿಸುತ್ತವೆ. ಉದಾಹರಣೆಗಾಗಿ ಒಂದೆಡೆಯಲ್ಲಿ... ಸೋದೆಯ ಹಿರಿಯ

---

೩. ಅನುಬಂಧ ೩ ನೋಡಿ.

ಅರಸಪ್ಪನು ವಿಜಾಪುರದೊಡನೆ ಸೇರಿ ಚಿಕ್ಕಸಂಕಣ್ಣನ ಕಾಲದಲ್ಲಿ ದಂಡೆತ್ತಿ ಬಂದನೆಂದು ಈ ಕೃತಿಯ IV, ೬,[೧] ತಿಳಿಸುತ್ತದೆ. E. C. VIII, ೫೬, ೩೦೧ರ ಶಾಸನದ ದಾಖಲೆಯು ಆ ವರ್ಷ ಈ ದೊರೆಯು ಆಳುತ್ತಿದ್ದ ಮತ್ತು ಈ ಯುದ್ಧ ನಡೆದ ವಿಚಾರ ತಿಳಿಸುತ್ತದೆ.[೨] ಇಂತಹ ಅನೇಕ ಅಂಶಗಳನ್ನು ಉದಾಹರಿಸಬಹುದು.

(೬) ಕೆಳದಿ ನೃಪವಿಜಯದಂತೆ ಶಿವತತ್ವರತ್ನಾಕರವೂ ಕೆಳದಿ ಅರಸರ ಚರಿತ್ರೆಯನ್ನು ಉಲ್ಲೇಖಿಸಿದೆ. ಇದು ಕೆಳದಿನಾಯಕ ಬಸವರಾಜನಿಂದ ರಚಿಸಲ್ಪಟ್ಟ ಕೃತಿಯಾಗಿದ್ದು, ಸಂಸ್ಕೃತದಲ್ಲಿ ವಿಶ್ವಕೋಶವೆಂದೆನಿಸಿದೆ. ಕೆಳದಿ ಅರಸರ ಚರಿತ್ರೆಯನ್ನು ಪ್ರಬುದ್ಧಾತ್ಮಕವಾಗಿ ಹಾಗೂ ಪ್ರಾಮಾಣಿಕ ರೀತಿಯಲ್ಲಿ ರಚಿಸಿರುವ ಕೃತಿಯಲ್ಲಿ ಶಿವತತ್ವ ರತ್ನಾಕರಕ್ಕಿಂತ ಕೆಳದಿ ನೃಪವಿಜಯವೇ ಅಗ್ರಮಾನ್ಯತೆ ಪಡೆದಿದೆ. ಶಿವತತ್ವರತ್ನಾಕರವು ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಇತ್ಯಾದಿ ಇತರ ವಿಧಗಳಲ್ಲಿ ಆ ಕಾಲದ ಘಟನೆಗಳನ್ನು ಆಧರಿಸಿ ಬೆಳಕು ಚೆಲ್ಲುವುದಲ್ಲದೆ ಕೆಳದಿ ನೃಪವಿಜಯಕ್ಕಿಂತಲೂ ಮುಂಚಿನದಾಗಿದ್ದು ಅದರಲ್ಲಿ ಚಾರಿತ್ರಿಕ ಅಂಶಗಳು ಅಲ್ಪವಾಗಿವೆ.[೩]

## ಕೃತಿಗಳ ಪರಿಪೂರ್ಣತೆಯಲ್ಲಿ ಕೊರತೆಗಳು

ಕೆಳದಿ ನೃಪವಿಜಯ ಗ್ರಂಥವು ೧೯೨೧ರಲ್ಲಿ ಆರ್. ಶಾಮಶಾಸ್ತ್ರಿಗಳವರಿಂದ ಸಂಪಾದಿಸಲ್ಪಟ್ಟು, ಎ. ಆರ್. ಕೃಷ್ಣಶಾಸ್ತ್ರಿಗಳವರಿಂದ ಉಪೋದ್ಘಾತದ ಮುಖಾಂತರ ವಿದ್ವತ್ಪೂರ್ಣವಾಗಿ ಚರ್ಚಿಸಲ್ಪಟ್ಟಿರುತ್ತದೆ. ಮೈಸೂರು ವಿಶ್ವವಿದ್ಯಾನಿಲಯವು ಹಲವು ಮಾರ್ಪಾಡುಗಳೊಡನೆ ಇದನ್ನು ೧೯೭೩ರಲ್ಲಿ ಪುನರ್ಮುದ್ರಿಸಿದೆ.[೪] ಪ್ರಥಮ ಮುದ್ರಣದ ಕೃತಿಯು 'ಒ' ಮತ್ತು 'ಕ' ಎಂಬ ಕೇವಲ ಎರಡು ಪ್ರತಿಗಳನ್ನು ಮಾತ್ರ ಆಧರಿಸಿಕೊಂಡು

---

೧. ಪು ೫೯.

೨. ಕರ್ನಾಟಕದ ಪರಂಪರೆ ಸಂ. ೨. ಪು. ೨೩೨, ೨೩೩. (ಇದೇ ಸಂಪುಟದಲ್ಲಿ ಪು. ೧೮೯ರಲ್ಲಿ ಭದ್ರಪ್ಪನ ಅಳಿಯ ದೊಡ್ಡ ಸಂಕಣ್ಣ ಎಂದಿರುವುದು ತಪ್ಪಾಗಿರುತ್ತದೆ. ಪು. ೧೯೪ರಲ್ಲಿ ಕೆಳದಿ ಚೆನ್ನಮ್ಮಾಜಿಯು ಚಿತ್ತೂರನ್ನು ಕ್ರಿ.ಶ. ೧೬೭೧-೧೬೯೭ರಲ್ಲಿ ಆಳಿದುದು ಅಸಂಭವ. ಈಕೆಯು ಕ್ರಿ. ಶ. ಸು. ೧೬೭೧ ರಿಂದ ೧೬೯೭ರ ವರೆಗೆ ಕೆಳದಿಯನ್ನು ಆಳಿದಳೇ ಹೊರತು, ಚಿತ್ತೂರನ್ನಲ್ಲ.

೩. ಎ. ಆರ್. ಕೃ. ಅವರು ತಮ್ಮ ಉಪೋದ್ಘಾತದಲ್ಲಿ ಕೆಳದಿ ನೃಪವಿಜಯವು ಶಿವತತ್ವರತ್ನಾಕರದ ಮೇಲೆ ಬರೆದುದೋ ಅಥವಾ ಇವರೆಡಕ್ಕೂ ಮೂಲವಾಗಿ ಮತ್ತಾವುದಾದರೂ ಗ್ರಂಥವಿದ್ದಿತೋ ಗೊತ್ತಾಗುವುದಿಲ್ಲವೆಂದಿದ್ದಾರೆ. ಅದೇ ಅಡಿಟಿಪ್ಪಣಿಯ ಒಂದೆಡೆಯಲ್ಲಿ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ಶಿವತತ್ವರತ್ನಾಕರದ ಪ್ರತಿಯಲ್ಲಿ ಕೆಳದಿಯ ಅರಸರಿಗೆ ಸಂಬಂಧಪಟ್ಟ ವಿಷಯಗಳೆಲ್ಲಾ ಸಂಪೂರ್ಣವಾಗಿ ಬಿಟ್ಟುಹೋಗಿವೆ, ಏನು ಕಾರಣವೋ ತಿಳಿಯದು ಎಂದಿದ್ದಾರೆ. ಇದೂ ಪರಿಶೀಲನಾರ್ಹ ಅಂಶವಾಗಿದೆ. (ಪು. xviii ದ್ವಿ. ಮು.)

೪. ಡಾ. ಬಸವಾರಾಧ್ಯರ ವಿಭಾಗ ಸಂಪಾದನದಲ್ಲಿ ಹಾಗೂ ಡಾ. ಹಾ.ಮಾ. ನಾಯಕರ ನಿರ್ದೇಶನದಲ್ಲಿ (ಸಂಪಾದಿಸಲ್ಪಟ್ಟಿರುವ) ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಕಟವಾಗಿದೆ.

ವಿಮರ್ಶಿಸಿರುವುದು ಕಂಡುಬರುತ್ತದೆ. ದ್ವಿತೀಯ ಮುದ್ರಣದಲ್ಲಿ 'ಗ' ಮತ್ತು 'ಮ' ಪ್ರತಿಗಳನ್ನು ಸೇರಿಸಿ ಹಿಂದಿನ ಪಾಠಾಂತರಗಳಿಗಿಂತ ಅಧಿಕ ಪಾಠಾಂತರಗಳು ದೊರೆತುದರಿಂದ ಇವುಗಳನ್ನು ಹೆಚ್ಚಾಗಿ ಸೇರಿಸಲಾಗಿದೆ.[೧] ಆದರೆ ಲಂಡನಿನಲ್ಲಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಈ ಕೃತಿಯ ಪ್ರತಿಯೊಂದು ಇದೆಯೆಂದು ತಿಳಿದುಬಂದಿದೆ.[೨] ಇದರ ಪ್ರಮಾಣಗಳು, ಕೃತಿಗಳ ವಿಶ್ಲೇಷಣೆ ಮುಂತಾದ ವಿವರಗಳು ಈವರೆಗೂ ಉಪಲಬ್ಧವಿಲ್ಲದಿರುವುದರಿಂದ ಹಲವು ಕೊರತೆಗಳು ಇದರ ಪರಿಪೂರ್ಣತೆಯನ್ನು ಪ್ರಶ್ನಿಸಿ ಚರ್ಚೆಗೆಡೆಯೀಯುತ್ತವೆ. 'ಮ' ಪ್ರತಿ ಮತ್ತು 'ಕ' ಪ್ರತಿಯಲ್ಲಿಯೂ ಈ ಕೊರತೆಯು ಕಂಡುಬಂದಿರುವುದು ಗಮನಾರ್ಹವಾಗಿದೆ.

ಎರಡು ಮುದ್ರಣಗಳಲ್ಲಿಯೂ ಪೀಠಿಕೆಯು ಇಲ್ಲದಿರುವುದೂ ಕೃತಿಯ ಪರಿಪೂರ್ಣತೆಯಲ್ಲಿ ಇನ್ನೊಂದು ಕೊರತೆಯನ್ನು ವ್ಯಕ್ತಪಡಿಸುತ್ತದೆ. ಈ ಕೊರತೆಯನ್ನು ತುಂಬಿ ಕೊಡಲು ಉಪಲಬ್ಧವಾದ ಗರಿಯೊಂದರಲ್ಲಿ ಉಲ್ಲೇಖಿಸಿದ ಈ ಕೆಳಗಿನ ಸಾಲುಗಳು—

ತಿಳಿಯಲ್ಕೀ ಕೃತಿನಾಮಂ
ಕೆಳದೀನೃಪವಿಜಯಮೆಂದಿದಕ್ಕಧಿನಾಥಂ
ಕೆಳದಿಪ ರಾಮೇಶ್ವರನಿದ
ನೊಲಿದುಸುರ್ದಂ ವೆಂಕಪಾತ್ಮಜಂ ಲಿಂಗಬುಧಂ ೧೮

---

೧. ನೋಡಿ : ಕೆಳದಿ ನೃಪ ವಿಜಯ, ಒಂದು ವಿಶ್ಲೇಷಣೆ-ಕರ್ನಾಟಕ ಭಾರತಿ, ಸಂಪುಟ ೫, ಸಂ. ೩. ೧೯೭೩. ಕರ್ನಾಟಕ ವಿಶ್ವವಿದ್ಯಾಲಯ.

ಓಲೆ (K ೨೬) ಮತ್ತು ಕಾಗದ (KA ೧೧೬) ಇವುಗಳು ಮೈಸೂರಿನ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ದೊರೆಯುವ ಪ್ರತಿಗಳು. 'ಗ' ಓಲೆಯ ಪ್ರತಿ 'ಮ' ಕಡತದ ಪ್ರತಿ. ಇವುಗಳು ಮದರಾಸಿನಿಂದ ತರಿಸಿದ ಮೈಕ್ರೋಫಿಲಂ ಪ್ರತಿಗಳು (ಕೆ. ನೃ. ವಿ. ಪು. ix ದ್ವಿ. ಮು.). ಎ. ಆರ್. ಕೃ. ಅವರು ಹೀಗೆ ಹೇಳುತ್ತಾ ನಾವು ನೋಡಿದ ನಾಲ್ಕು ಪ್ರತಿಗಳಲ್ಲಿ ಒಂದರಲ್ಲಿಯೂ ಇದರ ಪೀಠಿಕಾ ಪ್ರಕರಣವು ಕಂಡುಬರುವುದಿಲ್ಲವೆಂದಿದ್ದಾರೆ. ಈ ನಾಲ್ಕುಪ್ರತಿಗಳು ಡಾ. ಎನ್. ಬಸವಾರಾಧ್ಯರು ಹೇಳಿದಂತೆ 'ಓ' ಮತ್ತು 'ಕ' ಪ್ರತಿಗಳ ಪಾಠಾಂತರಗಳು. ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಓಲೆ (K ೨೬) ಮತ್ತು ಕಾಗದ (KA ೧೧೬) ಪ್ರತಿಗಳೆಂದು ಪರಿಶೀಲನೆಯಿಂದ ಕಂಡು ಬಂದಿದೆ ಎಂದು ಹೇಳಿದ್ದಾರೆ. ಉಳಿದ ಎರಡು ಪ್ರತಿಗಳೂ ಮದರಾಸಿನಿಂದ ತರಿಸಿದ ಪ್ರತಿ ಇರಬಹುದೆಂಬುದಾಗಿಯೂ ಹಾಗೂ ಇವುಗಳನ್ನೇ ಎ.ಆರ್.ಕೃರವರು ಪರಿಶೀಲಿಸಿರಬಹುದೇ ಎಂಬ ಸಂದೇಹವೂ ವ್ಯಕ್ತಪಡುತ್ತದೆ. ಪುಟ XIV. ಉಪೋದ್ಘಾತ, ದ್ವಿ. ಮು. ನೋಡಿರಿ. ಡಾ. ಚಿಟ್ನೀಸ್‌ರವರ Keladi Polity ಯಲ್ಲಿ (1) Keladi Nrupa Vijaya Kavya, palm leaf manuscripts D. No. 1123, Government Oriental Manuscripts Library, Madras. (2) Linga Budha (Linganna Kavi) Keladi Nrupa Vijaya Kavya a Kadata manuscript D. No. 1124, Govt. Oriental Manuscripts Library Madras, ಹೀಗೆ ಹೇಳಿದ್ದಾರೆ ಪು. ೨೪೪, ೨೪೫.

೨. A palm leaf copy of the work is in the India Office Library at London. (N.I. p 7)

ಪ್ರಾಕೃತ ಸಂಸ್ಕೃತ ಮೃದು ಭಾ
ಷಾಕವನದಿನಧಿಕರಮ್ಯಮಾಗಿರ್ಪುದರಿಂ
ಶ್ರೀಕೆಳದಿ ನೃಪವಿಜಯಮೆನಿ
ಪೀ ಕಾವ್ಯಂ ಸೇವ್ಯಮೆನಿಸಿ ಶೋಭಿಸುತಿರ್ಕುಂ ೧೯

ಪರಿಷ್ಕೃತವೆನಿಸಿವೆ.

ಕೆಳದಿ ನೃಪವಿಜಯದಲ್ಲಿನ ಎ. ಆರ್. ಕೃ. ಅವರ ಉಪೋದ್ಘಾತದಲ್ಲಿ ಚರ್ಚಿಸಿದ ೪೦೦ ಶ್ಲೋಕ ಅಥವಾ ಪದ್ಯಗ್ರಂಥಗಳು ದಿವಾನ್ ಪೂರ್ಣಯ್ಯನವರ ಮುಖಾಂತರ ಬಂಗಾಳಾ ಸರಕಾರಕ್ಕೆ ಕೊಂಡು ಹೋಗಿರುವುದೂ[೧] ಮತ್ತು ಮೆಕಂಜ್ಜಿ ಸಾಹೇಬರ ಮುತ್ಸದ್ದಿ ನಾರಾಯಣರಾಯರು ಬರೆಸಿಕೊಂಡು ಹೋದರೆಂದು ಒಂದು ಪ್ರತಿಯ ಕೊನೆಯಲ್ಲಿ ಹೇಳಿರುವುದೂ ಈ ಕೃತಿಯ ಪರಿಪೂರ್ಣತೆಯ ಅಧ್ಯಯನದಲ್ಲಿ ಕುತೂಹಲಕರ ಅಂಶಗಳಾಗಿವೆ. ಇಲ್ಲಿ ಹೇಳಿದಂತೆ ನಾರಾಯಣರಾಯರು ಬರೆಸಿಕೊಂಡು ಹೋದ ಪ್ರತಿ, ಅದನ್ನು ಕೊನೆಯಲ್ಲಿ ಬರೆದ ಮಗುದೊಂದು ಪ್ರತಿ ಹೀಗೆ ಈ ಪ್ರತಿಗಳೂ ಗಣನೆಗೆ ಬರುತ್ತವೆ.[೨]

ದ್ವಿತೀಯ ಮುದ್ರಣದಲ್ಲಿ ವಚನಗಳಿಗೆ ಕ್ರಮಾಂಕವನ್ನು ಕೊಡದಿರುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ, ಕಾರಣ, ಈ ಕೃತಿಯ ಪೂರ್ಣ ಪರಿಷ್ಕರಣವಾಗುವವರೆಗೂ ಇದು ಇದ್ದಿದ್ದರೆ ಒಳಿತಾಗುತ್ತಿತ್ತೆನ್ನಿಸುತ್ತದೆ. ಮುದ್ರಾರಾಕ್ಷಸನ ಹಾವಳಿ ವಗೈರೆ ಚಿಕ್ಕ ಪುಟ್ಟ ನ್ಯೂನತೆಗಳನ್ನು ಬಿಟ್ಟರೆ ಪ್ರತಿಗಳ ಪಾಠಾಂತರಗಳಲ್ಲಿ ವಿಭಿನ್ನ ರೂಪಗಳು ತಲೆದೋರಿರುವುದರಿಂದ, ಪರಿಷ್ಕರಣೆಯ ಅಗತ್ಯತೆಯನ್ನು ಕುರಿತು ನಡೆಸ ಬೇಕಾಗಿರುವ ಸಂಶೋಧನೆಯನ್ನು ಅನುಬಂಧ ೪ರಲ್ಲಿ ಕಾಣಬಹುದಾಗಿದೆ.[೩] ಉದಾಹರಣೆಗೆ ತೃತೀಯಾಶ್ವಾಸದಲ್ಲಿನ ೫೮, ೫೯ನೇ ಪದ್ಯಗಳು ಎಣಿಕೆಯಲ್ಲಿ ೫೦, ೫೧ ಆಗುತ್ತವೆ. ಇದು ದ್ವಿತೀಯ ಮುದ್ರಣದ ಹಲವಾರು ಲೋಪಗಳಲ್ಲಿ ಒಂದಾಗಿದೆ. ಪುಟ xxii ಅಡಿಟಿಪ್ಪಣಿಯಲ್ಲಿ ಹೇಳಿದ ೫೮, ೫೯ನೇ ಭಾಗವು ೫೦, ೫೧ ಆಗಬೇಕಾಗಿತ್ತು.[೪]

## ಕವಿ ಪರಿಚಯ

ಕೆಳದಿ ನೃಪ ವಿಜಯದ ಕವಿ ಕೆಳದಿ ಆಸ್ಥಾನದಲ್ಲಿದ್ದ ಲಿಂಗಣ್ಣ. ಈತನಿಗೆ ಕವಿ ಲಿಂಗಣ್ಣನೆಂದೂ, ಲಿಂಗಣ್ಣ ಕವಿಯೆಂದೂ ಹೆಸರುಂಟು. ಕೆಳದಿ ರಾಜ್ಯದ ಅಂತ್ಯದವರೆಗೂ

---

೧ "ಕೆಳದಿ ರಾಯ ಪದ್ಧತಿ" (?) ಎಂಬ ಒಂದು ಪದ್ಯಗ್ರಂಥವೂ ಇದ್ದಹಾಗೆ ಬುಕನನ್ ಸಾಹೇಬರ ಹೇಳಿಕೆಯಿಂದ ತಿಳಿಯುತ್ತದೆ. ಉಪೋದ್ಘಾತ XIII ನೋಡಿರಿ.

೨ ಉಪೋದ್ಘಾತ XVI

೩ ಅನುಬಂಧ ೪ ನೋಡಿರಿ. ಕರ್ನಾಟಕ ಭಾರತಿ ಸಂಪುಟ ೭, ಸಂ. ೨, ಪುಟ ೮೩ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ

೪ ಉಪೋದ್ಘಾತ xxii ಮತ್ತು ಪು ೫೨ ನೋಡಿರಿ.

ಈತನು ಚರಿತ್ರೆಯನ್ನು ಬರೆದಿರುವುದರಿಂದ (೧೨ನೆಯ ಆಶ್ವಾಸದ ಹಲವು ಭಾಗಗಳು ಈತನಿಂದ ರಚಿಸಲ್ಪಟ್ಟದ್ದೇ ಅಲ್ಲವೇ ಎಂಬ ಬಗ್ಗೆಯೂ ತುಸು ಸಂದೇಹವೂ ತಲೆದೋರುತ್ತದೆ) ಈ ಕವಿಯು ಅಲ್ಲಿಯವರೆಗೆ ಹಾಗೂ ಮುಂದೆ ಸ್ವಲ್ಪ ಕಾಲದವರೆಗೆ ಜೀವಿಸಿದ್ದಿರಬಹುದೆಂದು ಊಹಿಸಲವಕಾಶವಿದೆ. 'ಕೆಳದಿ ವರಬಸವೇಂದ್ರಾಶ್ರಿತ'ನೆಂದು ಹಲವು ಗ್ರಂಥಗಳಲ್ಲಿ ಹೇಳಿಕೊಂಡಿರುವುದರಿಂದ ಈತನು ಎರಡನೆಯ ಬಸವಪ್ಪನಾಯಕನ ಕಾಲದಲ್ಲಿ ಜೀವಿಸಿದ್ದಿರಬಹುದಾಗಿ ಕಂಡುಬರುತ್ತದೆ. ಇದೇ ಲೇಖಕರಿಂದ ಪ್ರಕಟವಾದ ಪ್ರಬುದ್ಧಕರ್ಣಾಟಕ ಸಂ. ೫೨, ಸಂ. ೩, ೧೯೭೦ದಲ್ಲಿನ ಲೇಖನದಲ್ಲಿ ಈತನನ್ನು ಕುರಿತ ಚರ್ಚೆ ನಡೆದಿದೆ. ಕವಿಯು ಪ್ರೌಢವಾಗಿಯೂ, ಮನೋಹರವಾಗಿಯೂ ಕಾವ್ಯವನ್ನು ರಚಿಸಬಲ್ಲನೆಂಬುದಕ್ಕೆ ಉದಾಹರಣೆಗಳು ಬೇಕಾದಷ್ಟಿವೆ. ಶಬ್ದಾಲಂಕಾರ ಅರ್ಥಾಲಂಕಾರ ಗಳೊಡನೆ ಅನೇಕ ರಚನೆಗಳು ಈತನ ಕಾವ್ಯದಲ್ಲಿ ಕಾಣಸಿಗುತ್ತವೆ. ಕವಿ ಸಂಪ್ರದಾಯದಂತೆ ಸಮುದ್ರ ವರ್ಣನೆ, ಮೇರುಪರ್ವತದ ವರ್ಣನೆ, ಜಂಬೂದ್ವೀಪದ ವರ್ಣನೆ, ಕರ್ಣಾಟಕ ದೇಶದ ವರ್ಣನೆ ಮುಂತಾದುವುಗಳನ್ನು ಕ್ರಮವಾಗಿ ಕವಿಯು ಸೇರಿಸಿದ್ದಾನೆ.

> ಸಸಿಯಂ ಶಿವಮೌಳಿಯನ್ನೈ
> ದಿಸಿ ಕಡಲಂ ಪುಗಿಸಿ ಬಾಂಬೊಳೆಯನಹಿಪತಿಯಂ
> ರಸೆಯಡಿಗಳಿಂ ಶಿವೇಂದ್ರನ
> ಜಸಮೆಸಕದಿನುರ್ವಿ ಪರ್ವಿದುದು ಮೂಜಗಮಂ ॥ ೭-೧೧

> ತರಣಿಜನಿಂ ಶಿಬಿ ಶಿಬಿಯಿಂ
> ದುರುಬಲಿ ಬಲಿಯಿಂ ದಧೀಚಿಮುನಿಯಾ ಮುನಿಯಿಂ
> ಕರಮೀವರೊಳಂ ಭದ್ರಪ
> ಧರಣೀಶ್ವರನಧಿಕನೆನಿಸಿ ರಾರಾಜಿಸಿದಂ ॥ ೮-೧೩

> ಬೆಳದಾ ಶಾಲಿವನಂ ಕಂ
> ಗೊಳಿಪುದು ಭೂವನಿತೆಯುಟ್ಟ ಪೊಂಬಟ್ಟೆಯವೋಲ್ ೧-೧೮

ಹೀಗೆ ಕವಿಸಮಯ ಹಾಗೂ ಅಲಂಕಾರಗಳ ಪ್ರಯೋಗಗಳು ಈ ಕೃತಿಯಲ್ಲಿ ಅಲ್ಲಲ್ಲಿಯೇ ಹಾಸು ಹೊಕ್ಕಾಗಿ ಬಂದಿರುವುದನ್ನು ಗಮನಿಸಬಹುದು. ಭೂಮಿಯ ಕಬ್ಬನ್ನು ಅಮೃತಕ್ಕೆ ಹೋಲಿಸಿರುವುದು, ಮಕರಂದ ಮತ್ತು ಪರಾಗವನ್ನು ತೆಪ್ಪದಲ್ಲಿ ದಾಟುವುದು ಮುಂತಾದ ವರ್ಣನೆಗಳು ಹಾಗೂ ಉತ್ಪ್ರೇಕ್ಷಾಲಂಕಾರಗಳು ಮಲೆನಾಡಿನ ಸಹಜಸ್ಥಿತಿಗೆ ಹೋಲಿಕೆಗೊಂಡಿವೆ, ಭಕ್ತರ ಕಣಜವೆಂದೆನಿಸಿದ ಕೆಳದಿ ನಾಡಿನ ವರ್ಣನೆಗೆ ಕವಿಯ ವಾಣಿಯು ಪುಟಗೊಟ್ಟಂತಿದೆ. ಅಂತೆಯೇ ಈ ಕೃತಿಯಲ್ಲಿ ಬಂದಿರುವ ವಿದ್ಯಾರಣ್ಯ ಕಾಲಜ್ಞಾನದ ಶ್ಲೋಕಗಳನ್ನು ಇಲ್ಲಿ ಸೇರಿಸಿರುವುದು ಯಾವ ಉದ್ದೇಶದಿಂದಲೋ ತಿಳಿಯದು.

### ಸಂಶೋಧನಾ ಸಾಮಗ್ರಿಗಳು

ಹಲವು ಸಂಶೋಧನಾ ಸಾಮಗ್ರಿಗಳು ಈ ಕೃತಿಯ ವೈಶಿಷ್ಟ್ಯವನ್ನು ಹೆಚ್ಚಿಸಿವೆ. ಅವುಗಳಲ್ಲಿ ಕೆಲವನ್ನಾದರೂ ಇಲ್ಲಿ ವಿಶ್ಲೇಷಿಸಿದರೆ ಅಪ್ರಕೃತವಾಗಲಾರದು.

(೧)...ಕಾಸರಗೋಡು ತಿಮ್ಮಣ್ಣನೆಂಬಾತನುಂ ಸಬ್ಬುನೀಸ ಕೃಷ್ಣಪ್ಪಯ್ಯನುಮೀ ವೃತ್ತಾಂತಮಂ ಕೇಳ್ದು ಜಾತಪ್ಪನ ಮಗ ಭದ್ರಯ್ಯನ ಮಗನಂ ರಾಜಾಧಿಕಾರಕ್ಕೆ ನಿಲಿಸಬೇಕೆಂದು....

ರಾಜ್ಯಾಧಿಕಾರಕ್ಕೆ ಅರ್ಹನನ್ನಾಗಿಸುವ ಈ ಜಾತಪ್ಪನ ಭದ್ರಪ್ಪನ ಮಗ ಯಾರು ಎಂಬುದು ಕುತೂಹಲಕರವಾಗಿದೆ. ಪು. ೧೧೪-೩೦ ವ.

(೨)... ಮತ್ತಮದಲ್ಲದೆ ಸರಪನಮಲುಕನೆಂಬ ತಾಮ್ರ ಮುಖಂ ತಾಂ ದಿವಾಣದ ವಕೀಲಿಯಾಗಿ ವರ್ತಿಸುತ್ತುಮಿರ್ದು ಅವಂ ಮುನ್ನಾಳ್ದ ಪಂಚಮಹಲೊಳಗಣ[1] ಮಿಡಿಜೆಯೆಂಬ ಪರಿಸ್ತರಣಮಂ......

ಈ ಸರ್ಪನ್ ಮಲ್ಲಿಕ್ ಐರೋಪ್ಯದವನೇ ಎಂಬ ವಿಷಯದಲ್ಲಿಯೂ ಸಂದೇಹವಿದೆ. ಈತನು ದಿವಾಣದ ವಕೀಲಿಯಾಗಿರುವುದೂ ಗಮನಾರ್ಹವೆನಿಸಿದೆ. ಪು. ೧೧೭-೨ ವ.

(೩) ..... ಕಬ್ಬಿ ಪ್ರತಿನಾಮವನುಳ್ಳ ಕವಿ ಕಳಸಂಗೆ ನಿಯಾಮಿಸಿ....

ಪು. ೧೩೪-೩೪ ವ.

(೪) ನವಮಾಶ್ವಾಸದಲ್ಲಿ ಹೇಳಿದ ಅನೇಕ ವಂಶಗಳ ಪೂರ್ವೇತಿಹಾಸಗಳು. ಇವುಗಳು ಗಮನಾರ್ಹವೆನಿಸಿವೆ ಹಾಗೂ ಕುತೂಹಲಕರಗಳಾಗಿವೆ.

(೫) ಹಲವು ನಾಯಕರು ಹುಟ್ಟಿದ ತೇದಿಗಳು, ವಿವಾಹದ ಕಾಲಗಳು ಮುಂತಾದುವು ನಡೆದ ಕರಾರುವಾಕ್ಕಾದ ದಿವಸಗಳ ವಿವರಣೆ.

(೬) .... ಮಾರ್ಗಶಿರ ಶುದ್ಧ ಸಪ್ತಮಿಯಲ್ಲಿ ನಾಲಕಿಯೆಂಬ ಮನೋಹರವಾದ ಮಹಾಯಾನಮನಾರೂಢನಾಗಿ...

(೩)ರಲ್ಲಿ ಹೇಳಿದ ಕವಿಯ ವಿಚಾರ (೬)ರಲ್ಲಿ ಹೇಳಿದ 'ನಾಲಕಿ'ಯೆಂಬ ಮಹಾಯಾನ ಮುಂತಾದುವುಗಳೂ ವಿಚಾರಾರ್ಹಗಳೆನಿಸಿವೆ.

---

೧. ಸೋದೆಯ ಅರಸನನ್ನು ಉಲ್ಲೇಖಿಸುವ ೧೬೯೪ರ ಒಂದು ಮರಾಠಿ ಪತ್ರವಿದೆ. ಈ ದೊರೆಯು ಶಿವಾಜಿಯ ಮಗ ರಾಜಾರಾಮನಿಗೆ ನೀಡಿದ್ದ ಸಾಲದ ವಿಚಾರ ಈ ಪತ್ರ ತಿಳಿಸುತ್ತದೆ. ಅವನ ನಂತರ ಅವನ ಮಗ ಇಮ್ಮಡಿ ಸದಾಶಿವನಾಯಕನ ಆಳಿಕೆಯನ್ನು ಸೂಚಿಸುವ ೧೬೯೬ ಮತ್ತು ೧೭೦೨ ನಡುವಿನ ಪತ್ರಗಳಿವೆ. ಈ ಕಾಲದಲ್ಲಿ ಈ ದೊರೆ ಅಂಕೋಲಾ, ಕಾರವಾರ (ಕಡವಾಡ) ಮುಂತಾದ ಪ್ರದೇಶಗಳನ್ನೊಳಗೊಂಡ 'ಪಂಚಮಹಲ್' ಎಂಬ ಪ್ರದೇಶವನ್ನು ರಾಜಾರಾಮನಿಂದ ಪಡೆದು ಅವನಿಗೆ ಪ್ರತಿಯಾಗಿ ಕಪ್ಪವನ್ನು ಕೊಡಲೊಪ್ಪಿದ ವಿಚಾರ ತಿಳಿಯುತ್ತದೆ. ವಿಜಾಪುರದ ಪತನಾನಂತರ ಈತ ಮೊಗಲ್ ಸಾಮ್ರಾಟ ಔರಂಗಜೇಬನನ್ನು ಭೇಟಿಯಾಗಿದ್ದನೆಂದು ತಿಳಿಯುತ್ತದೆ.

ಕರ್ಣಾಟಕದ ಪರಂಪರೆ ಸಂ. ೨, ಪು. ೨೩೩

ಆ ಕಾಲದ ಹಲವು ಶಬ್ದಗಳಂತೂ ಭಾಷಾಸಂಶೋಧನೆಯಲ್ಲಿ ಪ್ರಮುಖ ಅಂಶಗಳಾಗಿವೆ. ಉಲುಪೆ, ತಳಿಸುರಂಗಗಳು, ಕಾಶೀಧರ್ಮ, ಚೌಕಿ, ಬಣ್ಣದ ಹಾಗೂ ಕಡಿತದ ಚಾವಡಿ, ಮೇರುಮಾನಿ, ಪ್ರಾಜ್ಯ ರಾಜ್ಯಭಾರ, ನೆಲದಂಡು, ಮೊಳಕಾಲ ಬಾಸಿಗ; ಪಥಪೈಕ ಕಂಡಿ ಕಣಿವೆ, ಹೊರನಿಲ, ಮಾಯಾವಿ, ಶೃಂಗೇರಿಯ ಧರ್ಮ, ಬಾಳೇಹಳ್ಳಿ ಸಿಂಹಾಸನದ ಧರ್ಮ, ಶಾಲೀಕ್ಷೇತ್ರ, ಪುಂಡ್ರೇಕ್ಷುವಾಟಿ, ಜಕೀರಿರಸ್ತು ಮುಸ್ತೈದೆ ಇತ್ಯಾದಿಯಾಗಿ ಇಂತಹ ಪದಪ್ರಯೋಗಗಳೂ ಹಾಗೂ ಹೊಸಗನ್ನಡ ರೂಪಗಳೂ ಅಲ್ಲಲ್ಲಿಯೇ ಹೇರಳವಾಗಿವೆ. ಮರಾಠಿ ಹಾಗೂ ಹಿಂದೂಸ್ತಾನಿಯ ಪದಗಳೂ ಇಲ್ಲಿ ಸಮ್ಮಿಶ್ರಗೊಂಡಿವೆ.

ರಾಜ್ಯಭಾರಕ್ರಮದಲ್ಲಿ ಕೆಳದಿ ಅರಸರ ಸಾಧನೆಗಳನ್ನು ಲಿಂಗಣ್ಣ ಕವಿಯು ಹೇಳುತ್ತಾ

ಪ್ರಜೆಗಳುಸಿರ್ವ ಬಿನ್ನಪವಾಲಿಸಿಯೊಳ್ಗಿರೆ ಕಾಳ್ವುರಂಗಳಂ  
ಸೃಜಿಯಿಸಿ ಮೇಣವರ್ಗೆ ಕರಮೂಲಧನಂಗಳನಿತ್ತು ಬಿತ್ತುಮಂ  
ನಿಜಮೆನಲಿತ್ತು ಗೋಷ್ಪದವನಿತ್ತಿಳೆಯಂ ಮಿಗೆ ಬೀಳಲೀಯದಾ  
ದ್ವಿಜಸುರಪಾದಪಂ ಶಿವನೃಪಂ ಮಿಗೆ ಗೈಮೆಗೆ ತಂದನಳ್ತಿಯಿಂ ೭-೧೪

ವ ॥ ಅಂತುಮಲ್ಲದೆ

ಚಂ॥ ಕಡುಗಿ ದುರಾಸೆಯಿಂ ಪ್ರಜೆಗಳಂ ನೆರೆನೋಯಿಸದಾ ನೃಪಾರ್ಥಮಂ  
ಬಿಡದೆ ತದೀಯ ಸೌಮ್ಯಸುಪದಾರ್ಥಗಳಂ ಲವಮಾತ್ರಮಾದೊಡಂ  
ಪೊಡವಿಯನೈದೆ ಪಾಳ್ಗಿಡಹಲೀಯದೆ ಬಲ್ಪಿಡಿದಂಕೆಝುಂಕೆಯಿಂ  
ನಡೆಯಿಪನಿಂತು ನಾಡಿನಧಿಕಾರವನೇಳ್ಗೆಗೆ ತಂದನುರ್ವಿಯಂ ೭-೧೫

ಶಿವಪ್ಪನಾಯಕನ ರಾಜ್ಯಭಾರವನ್ನು ಕುರಿತು, ಹೀಗೆ ರಾಜ್ಯದ ಭೂಸುಧಾರಣೆಯನ್ನು ಕುರಿತು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಇದು ಆಧುನಿಕ ಸಮಾಜವನ್ನು ಕಣ್ತೆರೆಸಿ ಸುಧಾರಿಸುವ ದಿಸೆಯಲ್ಲಿ ಅತ್ಯವಶ್ಯ ನಿಲುಮೆಯಾಗಿದೆ.

ಕೆಳದಿ ಸರಕಾರದ ವರದಿಯೋಪಾದಿಯಲ್ಲಿ ಚಾರಿತ್ರಿಕಾಂಶಗಳನ್ನೊಳಗೊಂಡು ಪ್ರಾಮಾಣಿಕ ಗ್ರಂಥವೆನಿಸಿದ ಕೆಳದಿ ನೃಪವಿಜಯವು ಕರ್ನಾಟಕದಲ್ಲಿ ಕನ್ನಡ ಸಾಹಿತ್ಯಕ್ಕಷ್ಟೇ ಸೀಮಿತ ಕೊಡುಗೆಯಲ್ಲದೆ ಇಡೀ ಭಾರತದ ಇತಿಹಾಸಕ್ಕೆ ಮಾರ್ಗದರ್ಶನ ನೀಡುವ ಕೈದೀವಿಗೆಯ ಕೃತಿಯಾಗಿದೆ.

## ಪ್ರಥಮಾಶ್ವಾಸಂ

ಈ ಕೃತಿಗಾದಿಯಾವುದೆನಲುಜ್ವಲ ತುಂಗತರಂಗಸಂಚರ
ದ್ಭೀಕರಮೀನ ಕರ್ಕಟಕಕೂರ್ಮ ಕನತ್ಸಲಿಲೇಭನಕ್ರದ
ರ್ವೀಕರ ಶಿಂಶುಮಾರ ಮುಖವಾಶ್ಚರಸಂಚಯಚಾಲನೋಚ್ಚಲ
ಚ್ಛೀಕರ ಫೇನ ಕಂಬು ಕುಲರತ್ನಗಳಿಂದೆಸೆದತ್ತು ಸಾಗರಂ ೧

ಹರನ ನಿಷಂಗವಚ್ಯುತನ ಪಾಸು ಜಲೇಶನ ರಾಜಮಂದಿರಂ
ನಿರುಪಮಮಪ್ಪ ಲಕ್ಷ್ಮಿಯ ತವರ್ಮನೆ ಚಂದ್ರನ ಜನ್ಮಭೂಮಿ ಭೂ
ಧರವರಪುತ್ರನುದ್ಧಕವಚಂ ಬಡಬಾನಲಪಾನಪಾತ್ರಮು
ತ್ಕುರುತರಮಪ್ಪ ಸನ್ಮಣಿಗಳಾಗರಮೊಪ್ಪಿದುದ್ದೆದೆ ಸಾಗರಂ ೨

ವಳಿತೋಳ್ ಸುಳಿ ಚಕ್ರಂ ನೊರೆ
ಯೆಳನಗೆ ಬೊಬ್ಬುಳಿಗಳುದರದೊಳಗಣಜಾಂಡಾ
ವಳಿ ನೀರ್ತನುರುಚಿ ಬಡಬಾ
ನಲನಂಬರಮಾಗಲಬುಧಿ ಹರಿಯವೊಲೆಸೆಗುಂ ೩

ವ|| ಮತ್ತಮದಲ್ಲದಾ ಮಹಾರ್ಣವಂ ಸಾರ್ವಭೌಮವಿಭವದಂತಪರಿಮಿತ ವಾಹಿನೀ ಸಂಗತಮುಂ, ನಂದಗೋಕುಲದಂತೆ ಕಂಸಾರಾತಿರಮಣೀಯಮುಂ ವೈನತೇಯನಂತೆ ವಿಲಸದ್ವಿಷ್ಣು ಪದಾವಲಂಬಿಯುಂ, ವಸಂತಸಮಯದಂತುಜ್ವಲತ್ಕಳಿಕಾಪ್ರತಾನಪ್ರಶೋಭಿತಮುಂ, ಜ್ಯೋತಿಶ್ಚಕ್ರದಂತೆ

೧. ಈ ಕೃತಿಗೆ ಮೂಲ ಯಾವುದು ಎನ್ನುವ ಪ್ರಶ್ನೆಗೆ ಉತ್ತರವಾಗಿ ಸಮುದ್ರವು ಶೋಭಿಸುತ್ತಿದೆ. ಆ ಸಮುದ್ರವು ಎತ್ತರವಾಗಿ ಹೊಳೆಯುವ ಅಲೆಗಳ ಮೇಲೆ ಸಂಚರಿಸುವ ಭಯಂಕರವಾದ ಮೀನುಗಳು, ಏಡಿಗಳು, ಆಮೆಗಳು, ನೀರಾನೆಗಳು, ಮೊಸಳೆಗಳು, ಹಾವುಗಳು, ಸಮುದ್ರವ್ಯಾಘ್ರ-ಮುಂತಾದ ಜಲಚರಗಳ ಸಮೂಹದ ಓಡಾಟದಿಂದ ಹಾರುವ ತುಂತುರು ಹನಿಗಳಿಂದಲೂ, ನೊರೆಗಳಿಂದಲೂ, ಶಂಖಗಳಿಂದಲೂ, ರತ್ನಗಳಿಂದಲೂ ಮೆರೆಯುತ್ತಿತ್ತು. ೨. ಆ ಸಮುದ್ರವು ಶಿವನ ಬತ್ತಳಿಕೆ, ವಿಷ್ಣುವಿನ ಹಾಸಿಗೆ, ವರುಣನ ಅರಮನೆ, ಲಕ್ಷ್ಮೀದೇವಿಯ ತವರುಮನೆ, ಚಂದ್ರನ ಜನ್ಮಸ್ಥಾನ, ಹಿಮವಂತನ ಮಗ ಮೈನಾಕನ ರಕ್ಷಾಕವಚ, ವಡಬಾಗ್ನಿಯ ಕುಡಿಯುವ ಜಲಪಾತ್ರೆ ಮತ್ತು ಶ್ರೇಷ್ಠವಾದ ಒಳ್ಳೆಯ ರತ್ನಗಳ ಭಂಡಾರವಾಗಿ ಶೋಭಿಸುತ್ತದೆ. ೩. ಸಮುದ್ರವು ಹರಿಯ ಹಾಗೆ ಶೋಭಿಸುತ್ತದೆ. ಅಲೆಗಳೇ ತೋಳುಗಳು; ಸುಳಿಯೇ ಚಕ್ರ, ನೊರೆಯೇ ಮಂದಹಾಸ, ನೀರುಗುಳ್ಳೆಗಳೇ ಹೊಟ್ಟೆಯೊಳಗಿನ ಬ್ರಹ್ಮಾಂಡ ಸಮೂಹ, ನೀರೇ ದೇಹದ ಕಾಂತಿ, ಬಡಹಾಗ್ನಿಯೇ ಪೀತಾಂಬರ. ಹೀಗೆ ಹರಿಯ ಲಕ್ಷಣಗಳು ಸಮುದ್ರದಲ್ಲಿವೆ. ವ|| ಇಷ್ಟು ಮಾತ್ರವಲ್ಲದೆ ಆ ದೊಡ್ಡ ಸಮುದ್ರವು ಚಕ್ರವರ್ತಿಯ ವೈಭವದ ಹಾಗೆ ಅಸಂಖ್ಯಾತವಾಹಿನಿ (ನದಿ ಮತ್ತು ಸೈನ್ಯ)ಗಳಿಂದ ಕೂಡಿದೆ: ನಂದಗೋಕುಲದ ಹಾಗೆ ಕಂಸವಿರೋಧಿ (ವಿಷ್ಣು ಮತ್ತು ಕೃಷ್ಣ) ಇರುವುದರಿಂದ ಸುಂದರವಾಗಿದೆ. ಗರುಡನ ಹಾಗೆ ಮೆರೆಯುವ ವಿಷ್ಣುಪದವನ್ನು ಹೊತ್ತುಕೊಂಡಿದೆ. ವಸಂತಕಾಲದ ಹಾಗೆ ಪ್ರಕಾಶಿಸುವ

ಮನೋಹರಮೀನ ಮಿಥುನ ಕರ್ಕಾಟಕ ರಾಶಿಸಮಾವೃತಮುಂ, ಮಾರ್ತಾಂಡನಂತುಜ್ವಲಾಬ್ಜ ಕದಂಬಸಮುಚ್ಛ್ರಯಕಾರಿಯುಂ, ಯೋಗಿಜನದಂತೆ ಮುಕ್ತಾಮಯಮುಂ ಕಂದರ್ಪನಂತನವರತ ಮನುಪಮಾಗಣ್ಯ ಲಾವಣ್ಯ ಸ್ವಭಾವಮುಂ, ಶಶಾಂಕೋದಯದಂತೆ ಕುವಲಯೋತ್ಸವಕಾರಿಯುಮೆನಿಸಿ ವಿಭ್ರಾಜಿಸುತ್ತಿರ್ದುದಂತುಮಲ್ಲದೆಯುಂ

ತಿಳಿಯಲ್ಕತಿಚಂಚಲೆ ಮಗ
ಳಳಿಯಂ ಪೂಗಣ್ಣನಾತ್ಮಜಂ ಕ್ಷಯಿ ಮೊಮ್ಮಂ
ಒಡಲಿಲಿಯೆನುತಂ ಚಿಂತಿಸಿ
ಸಲೆ ಸುಯ್ವವೊಲಾದುದಬ್ಧಿಯದ್ಭುತರಾವಂ ೪

ಅಮರರ್ಗಮೃತಾಶನರೆಂ
ದುಮೆಯಾಣ್ಮಗೆ ನೀಲಕಂಠನೆಂದಚ್ಯುತಗಂ
ಕ್ರಮದಿಂ ಕಮಲಾಪತಿಯೆಂ
ದಮರ್ದಿರೆ ಪೆಸರಿತ್ತ ಜಲಧಿಯೇಂ ರಂಜಿಸಿತೋ ೫

ಇಂತೆಸೆವಂಬುಧಿಮಧ್ಯದೊ
ಳಂ ತವೆ ಕಂಗೊಳಿಸುತಿರ್ಪ ಜಂಬೂದ್ವೀಪಾ
ಬ್ಜಾಂತರದ ಚಾರುಕರ್ಣಿಕೆ
ಯಂತಿರೆ ಕನಕಾಚಲಂ ವಿರಾಜಿಸುತಿರ್ಕುಂ ೬

ಕಲಿಕೆಗಳಿಂದ (ಮತ್ತು ಮೊಗ್ಗು) ಶೋಭಿಸುತ್ತದೆ. ಜ್ಯೋತಿಶ್ಚಕ್ರದ ಹಾಗೆ ಮನೋಹರವಾದ ಮೀನ-ಮಿಥುನ-ಕರ್ಕಾಟಕ ರಾಶಿಗಳಿಂದ (ಮೀನುಗಳ ಜೋಡಿಗಳು ಏಡಿಗಳ ಗುಂಪು ಮತ್ತು ಮೀನಾದಿ ರಾಶಿಗಳು) ಆವರಿಸಲ್ಪಟ್ಟಿದೆ. ಸೂರ್ಯನ ಹಾಗೆ ಹೊಳೆಯುವ ಅಬ್ಜ (ಚಂದ್ರ ಮತ್ತು ತಾವರೆ) ಸಮೂಹದ ಉನ್ನತಿಯನ್ನು ಮಾಡುತ್ತವೆ. ಯೋಗಿಗಳ ಹಾಗೆ ಮುಕ್ತಾಮಯವಾಗಿದೆ. (ಮುತ್ತಿನಿಂದ ಕೂಡಿದೆ; ರೋಗವಿಲ್ಲದಾಗಿದೆ). ಮನ್ಮಥನ ಹಾಗೆ ಯಾವಾಗಲೂ ಅಸಮಾನವೆಂದು ಲೆಕ್ಕಿಸಲ್ಪಡುವ ಲಾವಣ್ಯ (ಸೌಂದರ್ಯ ಮತ್ತು ಉಪ್ಪು) ಸ್ವಭಾವವುಳ್ಳದ್ದಾಗಿದೆ. ಚಂದ್ರೋದಯದ ಹಾಗೆ ಕುವಲಯಕ್ಕೆ (ಭೂಮಂಡಲಕ್ಕೆ ಮತ್ತು ನೈದಿಲೆಗೆ) ಆನಂದವನ್ನು ಉಂಟುಮಾಡುತ್ತಾ ಶೋಭಿಸುತ್ತದೆ. ಅಲ್ಲದೆ-೪. ಸಮುದ್ರ ರಾಜನ ಮಗಳು ಲಕ್ಷ್ಮಿ; ಅತ್ಯಂತ ಚಂಚಲೆ ಎನಿಸಿದವಳು; ಅಳಿಯನಾದ ವಿಷ್ಣುವು ಹೂಗಣ್ಣಿನವನು (ತಾವರೆಯಂತಹ ಕಣ್ಣುಳ್ಳವನು), ಮಗನಾದ ಚಂದ್ರ ಕ್ಷಯರೋಗಿ, ಮೊಮ್ಮಗ ಮನ್ಮಥನಿಗೆ ದೇಹವೇ ಇಲ್ಲ (ಅನಂಗ), ತನ್ನ ಬಳಗವೆಲ್ಲ ಹೀಗಾಯಿತೆಂದು ಚಿಂತಿಸುತ್ತಾ ನಿಟ್ಟುಸಿರು ಬಿಡುವ ರೀತಿಯಲ್ಲಿ ಸಮುದ್ರದ ಅದ್ಭುತವಾದ ಗರ್ಜನೆಯಿದೆ. ೫. ಈ ಸಮುದ್ರದ ದೆಸೆಯಿಂದ ದೇವತೆಗಳು ಅಮೃತವನ್ನುಂಡು ಅಮರರಾದರು. ಶಿವನಿಗೆ (ಇದರಲ್ಲಿ ಹುಟ್ಟಿದ ವಿಷವನ್ನು ಕುಡಿದಿದ್ದರಿಂದ) ನೀಲಕಂಠನೆಂಬ ಹೆಸರುಂಟಾಯಿತು. ವಿಷ್ಣುವಿಗೆ (ಮಗಳಾದ ಲಕ್ಷ್ಮಿಯನ್ನು ಕೊಟ್ಟುದರಿಂದ) ಲಕ್ಷ್ಮೀಪತಿಯೆಂದು ಹೆಸರಾಯಿತು. ಹೀಗೆ ದೇವತೆಗಳಿಗೂ ಹರಿಹರರಿಗೂ ಒಳ್ಳೆಯ ಹೆಸರನ್ನು ಕೊಟ್ಟು ಸಮುದ್ರವು ಎಷ್ಟೊಂದು ಹಿರಿಯತನದಿಂದ ಮೆರೆಯುತ್ತಿದೆ! ೬. ಈ ರೀತಿ ಶೋಭಿಸುವ ಸಮುದ್ರದ ಮಧ್ಯದಲ್ಲಿ ವಿರಾಜಿಸುತ್ತಿದ್ದ

ಜಲಜಜ ವಿಷ್ಣುವಿವಾದವ
ನಿಲಿಸಲ್ ಕಲ್ಪಾಂತದೆಡೆಯೊಳೊಗೆದತಿ ತೇಜೋ
ಜ್ಜ್ವಲ ದಿವ್ಯಮಹಾಲಿಂಗದ
ನಿಲವೆನೆ ಚೆಲ್ವಾಯ್ತು ಕಣ್ಗೆ ಕಾಂಚನಶೈಲಂ ೭

ಮಿಸುಪಾ ಮೇರುವ ತೆಂಕಣ
ದೆಸೆಯೊಳ್ಪೂರ್ವಾಪರಾಂಬುನಿಧಿಗಳನವಗಾ
ಹಿಸಿ ನಭಮಂ ತುಡುಕುತೆ ಕ
ಣ್ಗೆಸೆದುದು ಹಿಮವನ್ನಗೇಂದ್ರಮುರುಗುಣಸಾಂದ್ರಂ ೮

ಮೇನಾಧಾರಂ ವಿನತಾ
ಸೂನುವಿನೊಲ್ಸತ್ವಥಾಶ್ರಯಂ ಸುಜನನೊಲಾ
ಯ್ತಾನಗಮಸ್ತ್ರೀಕೃತ ಜಿತ
ದಾನವನೊಲನಂತಕಟಕಭೂಷಿತಪಾದಂ ೯

ವ|| ಇಂತು ಹಿಮಾಚಲಂ ವಿರಾಜಿಸುತ್ತುಮಿರಲ್

ಆ ಗಿರಿಯ ದಕ್ಷಿಣಾಶಾ
ಭಾಗದೊಳುರೆ ಕರ್ಮಭೂಮಿಸಂಜ್ಞೆಯಿನಧಿಕ
ಶ್ರೀಗೆಡೆಯೆನಿಸಿ ಮನೋಹರ
ಮಾಗಿರ್ಪುದು ಭರತಖಂಡಮನಘಕರಂಡಂ ೧೦

ಜಂಬೂದ್ವೀಪವೆಂಬ ಕಮಲದ ನಡುವೆ ಇರುವ ಮನೋಹರವಾದ ದಳ ಅಥವಾ ಮೊಗ್ಗಿನಂತೆ ಮೇರುಪರ್ವತವು ಶೋಭಾಯಮಾನವಾಗಿತ್ತು. ೭. ಹಿಂದಿನ ಕಲ್ಪದಲ್ಲಿ ಬ್ರಹ್ಮ ವಿಷ್ಣು ಇವರಿಬ್ಬರ ನಡುವಣ ವಿವಾದವನ್ನು ನಿಲ್ಲಿಸಲು ಒಡಮೂಡಿದ ಅಸಮಾನವಾದ ಹಾಗೂ ಶ್ರೇಷ್ಠವಾದ ತೇಜೋರಾಜಿತ ಮಹಾಲಿಂಗದ (ಈಶ್ವರನ) ಹಾಗೆ ಕಾಂಚನಶೈಲವು ಕಣ್ಣಿಗೆ ರಂಜಿಸುತ್ತಿತ್ತು. ೮. ಆ ಮೇರುಪರ್ವತದ ದಕ್ಷಿಣದಿಕ್ಕಿನಲ್ಲಿ ಪೂರ್ವಪಶ್ಚಿಮ ಸಮುದ್ರಗಳನ್ನು ತಾಗಿ, ಆಕಾಶವನ್ನು ತುಡುಕುತ್ತಿರುವ ಹಿಮಾಲಯ ಪರ್ವತವು ಉತ್ತಮ ಗುಣಯುಕ್ತವಾಗಿ ಶೋಭಿಸುತ್ತಿತ್ತು. ೯. ಆ ಹಿಮಾಲಯ ಪರ್ವತವು ವೈನತೇಯನಂತೆ ಮೇನಾಧಾರವಾಗಿ (ಮೇನೆಯೆಂಬವಳ ಪತಿ, ಮತ್ತು ಮಾ + ಇನ = ಲಕ್ಷ್ಮೀಪತಿಯಾದ ವಿಷ್ಣುವಿನ ವಾಹನ) ಸಜ್ಜನನ ಹಾಗೆ ಸತ್ವಥಾಶ್ರಯ (ದೇವತೆಗಳಿಗೆ ಮತ್ತು ಸಜ್ಜನರಿಗೆ ಆಶ್ರಯ). (ತ್ರಿಪುರಾಸುರಸಂಹಾರ ಕಾಲದಲ್ಲಿ ಶಿವನ) ಅಸ್ತ್ರವಾದ ವಿಷ್ಣುವಿನಂತೆ ಅಸಂಖ್ಯವಾದ ತೊಪ್ಪಲುಗಳಿಂದ ಭೂಷಿತಪಾದ ಸಮೀಪವರ್ತಿ ಬೆಟ್ಟಗಳುಳ್ಳವನು. ವಿಷ್ಣುಪಕ್ಷದಲ್ಲಿ-ಆದಿಶೇಷನೆಂಬ ಕಾಲ್ಕಡಗದಿಂದ ಭೂಷಿತ ಪಾದವುಳ್ಳವನು. ವ|| ಈ ರೀತಿ ಹಿಮಾಚಲ ಪರ್ವತವು ಶೋಭಿಸುತ್ತಿರಲಾಗಿ ೧೦. ಆ ಪರ್ವತದ ದಕ್ಷಿಣದಿಕ್ಕಿನಲ್ಲಿ ಕರ್ಮಭೂಮಿಯೆಂದೆನಿಸಿ ಹೆಚ್ಚು ಸಂಪತ್ತಿಗೆ ಆಶ್ರಯವಾಗಿ

ವ|| ಇಂತೆಸೆವ ಭರತಖಂಡದ ತೆಂಕಣಾಶಾಭಾಗದೊಳ್ ನಾನಾವಿಧವರ್ಣಾಶ್ರಮಸುಖ ಸಂಪತ್ಸಮಾಜಕಾಸ್ಪದಮೆನಿಸಿ ಮೆರೆವ ಕನ್ಯಾಖಂಡಪ್ರದೇಶದೊಳ್

ಅಗಣಿತತೀರ್ಥ ನದೀನದ
ನಗಪುಣ್ಯಾರಣ್ಯವಿಷಯಸುಕ್ಷೇತ್ರಸಮೂ
ಹಗಳಿಗೆಡೆಯೆನಿಸಿ ಮಿಗೆ ಝಗ
ಝಗಿಪುದು ಸಹ್ಯಾಚಲಂ ಮಹಾಸುಖಮೂಲಂ ೧೧

ಆ ಸಹ್ಯಾದ್ರಿಯೊಳೊಪ್ಪುವ
ದೇಶಂಗಳೊಳಧಿಕಮೆನಿಸಿ ನಿರುಪಮಲಕ್ಷ್ಮೀ
ಕೋಶಂ ವಿಲಸತ್ಪುಣ್ಯನಿ
ವೇಶಂ ಕರ್ಣಾಟದೇಶಮುರೆ ರಂಜಿಸುಗುಂ ೧೨

ಕೆರೆಯಿಂ ಕಾಳ್ವರದಿಂ ಕನತ್ಕುವಲಯಾಂಭೋಜಂಗಳಿಂ ಶೋಭಿಪೊ
ಳ್ಸರದಿಂ ಪುಷ್ಪಲತಾಪ್ರತಾನ ಲಸದಾರಾಮಪ್ರದೇಶಂಗಳಿಂ
ತೊರೆಯಿಂ ರಾಜಿಪ ಗಂಧಶಾಲಿವನದಿಂ ಕ್ರೀಡಾದ್ರಿಯಿಂ ಕಣ್ಗೆ ಭಾ
ಸುರಮಾಗಿರ್ದುದು ದೇಶಮುನ್ನತಸುಖಾವಾಸಂ ದಲೇಂ ವರ್ಣಿಪೆಂ ೧೩

ವ|| ಮತ್ತಮದಲ್ಲದಾದೇಶಂ ಸ್ವರ್ಲೋಕದಂತೆ ಸುರುಚಿರ ಸುರಭಿ ಸುಮನೋವೃಕ್ಷ ಪರಿಶೋಭಿತಮುಂ ಸುತ್ರಾಮನೋಲಗಶಾಲೆಯಂತೆ ಸುಧರ್ಮಾನ್ವಿತಮುಂ, ವಧೂಪಯೋಧರ ದಂತಗ್ರಹಾರಮಾಲಾಲಂಕೃತಮುಂ, ಗಗನಮಂಡಲದಂತೆ ಭಾಸ್ವದ್ದ್ವಿಜರಾಜಾಭಿರಾಮಮುಂ, ಅಳಕಾನಗರದಂತಗಣ್ಯ ಪುಣ್ಯಜನಾಧಿಷ್ಠಿತಮುಂ, ಸಮಾಸಚಕ್ರದಂತೆ ಬಹುವ್ರೀಹಿಸಮಾವೃತಮುಂ,

ಭರತಖಂಡವು ಪುಣ್ಯದ ಪೆಟ್ಟಿಗೆಯೆನಿಸಿ ಮನೋಹರವಾಗಿದೆ. ವ|| ಈ ರೀತಿ ಶೋಭಿಸುವ ಭರತಖಂಡದ ದಕ್ಷಿಣಭಾಗದಲ್ಲಿ ಅನೇಕ ವರ್ಣಾಶ್ರಮಧರ್ಮಗಳ ಜನಸಮಾಜಕ್ಕೆ ಆಶ್ರಯವಾಗಿ ಮೆರೆಯುವ ಕನ್ಯಾಖಂಡ ಪ್ರದೇಶದಲ್ಲಿ ೧೧. ಲೆಕ್ಕವಿಲ್ಲದ ತೀರ್ಥಗಳು, ನದಿಗಳು, ಪರ್ವತಗಳು, ಪುಣ್ಯಾರಣ್ಯಗಳಿರುವ ಪವಿತ್ರಕ್ಷೇತ್ರಗಳಿಗೆ ಆಶ್ರಯ ಭೂತವಾಗಿರುವ ಸಹ್ಯಾಚಲವು ಹೆಚ್ಚಿನ ಸುಖಕ್ಕೆ ಕಾರಣೀಭೂತವಾಗಿ ಮೆರೆಯುತ್ತಿದೆ. ೧೨. ಆ ಸಹ್ಯಾದ್ರಿಭಾಗ ದಲ್ಲಿ ಮೆರೆಯುತ್ತಿರುವ ಅನೇಕ ದೇಶಗಳಲ್ಲಿ ಹೆಚ್ಚಿನದಾದ, ಅಸಮಾನ ಸಂಪತ್ತಿನಿಂದ ಕೂಡಿದ ಪುಣ್ಯದ ನೆಲೆಯಾದ ಕರ್ಣಾಟಕ ದೇಶವು ಅಧಿಕವಾಗಿ ಕಂಗೊಳಿಸುತ್ತಿದೆ. ೧೩. ಆ ದೇಶವು ಕೆರೆಯಿಂದಲೂ, ಹಳ್ಳದಿಂದಲೂ, ನೈದಿಲೆ ತಾವರೆಯುಳ್ಳ ಸರೋವರ ದಿಂದಲೂ, ಹೂಬಳ್ಳಿಗಳಿಂದ ಮೆರೆಯುವ ಉದ್ಯಾನವನಗಳಿಂದಲೂ, ಹೊಳೆಯಿಂದಲೂ, ಭತ್ತದ ಹೊಲದಿಂದಲೂ, ಆಟದ ಬೆಟ್ಟಗಳಿಂದಲೂ, ಹೆಚ್ಚಿನ ಸುಖದ ನೆಲೆಯಾಗಿದೆ. ಇದನ್ನು ಏನೆಂದು ವರ್ಣಿಸಲಿ? ವ|| ಇಷ್ಟು ಮಾತ್ರವಲ್ಲದೆ ಆ ದೇಶವು ಸುಂದರವಾದ ಪರಿಮಳಭರಿತವಾದ ಮನೋಹರ ವೃಕ್ಷಗಳಿಂದ ಕೂಡಿದ, ಸುಧರ್ಮ ಎಂಬ ಹೆಸರುಳ್ಳ ಇಂದ್ರನ ಓಲಗಶಾಲೆಯ ಹಾಗೆ ಸುಧರ್ಮದಿಂದ ಕೂಡಿದೆ. (ಸುಧರ್ಮ-ದೇವಸಭೆ ಮತ್ತು ಧರ್ಮ) ಮೇಲುಬದಿಯ ಹಾರ-ಮಾಲೆಗಳಿಂದ ಶೋಭಿಸುವ ವಧೂಸ್ತನದಂತೆ ಅಗ್ರಹಾರಗಳ ಸಾಲಿನಿಂದ ಶೋಭಿಸುತ್ತಿದೆ. ಹೊಳೆಯುವ ಚಂದ್ರನಿಂದ ಸುಂದರವಾದ

ಪದ್ಮಪೀಠನಂತನಂತನಿಗಮಾಶ್ರಯಮುಮಂ, ನಾರಾಯಣನಂತೆ ಸುದರ್ಶನೋಪಸೇವ್ಯಮುಮಂ, ಮಹಾದೇವನಂತಚಲಿತದುರ್ಗಾಸ್ಪದಮುಮೆನಿಸಿ ವಿರಾಜಿಸುತಿರ್ದುದಂತುಮಲ್ಲದೆಯುಂ-

ಪುಸಿ ಕಳವು ಪಾದರಂ ಬೇ
ವಸಮಟ್ಟುಳಿ ದಾಳಿ ಠೌಳಿಯಪಹೃತಿ ಮೋಸಂ
ಪಿಸುಣನ್ಯಾಯಮೆನಿಪ್ಪೀ
ಪೆಸರ್ಗಳ್ ಪೆಸರ್ಗೊಂಬೊಡಿಲ್ಲವಾಂತಾ ನಾಡೊಳ್ ೧೪

ವ|| ಮತ್ತಮಂತುಮಲ್ಲದೆ

ಪೊಡೆಯೆಂಬರ್ಶಾಲಿಯನಾ
ರಡಿಯೆಂಬರ್ಷಟ್ಪದಾಳಿಯಂ ಕರಿಣಿಯುಮಂ
ಪಿಡಿಯೆಂಬರಲ್ಲದೀಪರಿ
ನುಡಿಯಾಲಿಪೊಡಿಲ್ಲ ಜನರೊಳಂತಾ ನಾಡೊಳ್ ೧೫

ಕಡೆಯೆಂಬರ್ದಧಿಮಥನದೊ
ಳೊಡೆಯೆಂಬರ್ಭಕ್ಷ್ಯಭೇದದೊಳ್ ಕಬರಿಗಳೊಳ್
ಮುಡಿಯೆಂಬರಲ್ಲದೀ ಬಿರು
ನುಡಿ ಕನಸಿನೊಳಾದೊಡಂ ವಿಚಾರಿಪೊಡಿಲ್ಲಂ ೧೬

ಅಳಿಯಿಲ್ಲದಬ್ಜಮಬ್ಜಾ
ವಳಿಯಿಲ್ಲದ ಸರಸಿ ಸರಸಿಯಿಲ್ಲದ ಸನ್ಮಂ
ಜುಳನಂದನ ಮುರುನಂದನ
ಕುಳಮಿಲ್ಲದ ಪೊಳಲ್ಗಳಿಲ್ಲವಂತಾ ನಾಡೊಳ್ ೧೭

ಆಕಾಶಮಂಡಲದಂತೆ ಪ್ರಕಾಶಿಸುವ ಬ್ರಾಹ್ಮಣಶ್ರೇಷ್ಠರ ವಿಹಾರಸ್ಥಾನವಾಗಿದೆ. ಅಸಂಖ್ಯಾತ ಯಕ್ಷರಿಂದ ಕೂಡಿದ ಅಲಕಾಪಟ್ಟಣದ ಹಾಗೆ ಲೆಕ್ಕವಿಲ್ಲದಷ್ಟು ಪುಣ್ಯಾತ್ಮರಿಂದ ಕೂಡಿದೆ. ಬಹುವ್ರೀಹಿ ಸಮಾಸವುಳ್ಳ ಸಮಾಸಚಕ್ರದ ಹಾಗೆ ತುಂಬಾ ಭತ್ತದಿಂದ ಕೂಡಿದೆ. ಅನಂತ ವೇದಗಳಿಗೆ ಆಶ್ರಯನಾದ ಬ್ರಹ್ಮನಂತೆ ಅನೇಕ ವೈದಿಕರಿಗೆ ಆಶ್ರಯವಾಗಿದೆ. ಸುದರ್ಶನ ಚಕ್ರವುಳ್ಳ ನಾರಾಯಣನಂತೆ ಪ್ರೇಕ್ಷಣೀಯವೂ, ಆಶ್ರಯನೀಯವೂ ಆಗಿದೆ. ದುರ್ಗಾವಲ್ಲಭನಾದ ಮಹದೇವನಂತೆ ಸ್ಥಿರವಾದ ಕೋಟೆಗಳಿಂದ ಕೂಡಿದೆ. ವ|| ಇಷ್ಟು ಮಾತ್ರವಲ್ಲದೆ ೧೪. ಸುಳ್ಳು, ಕಳ್ಳತನ, ಹಾದರ, ದಬ್ಬಾಳಿಕೆ, ಆಕ್ರಮಣ, ಮುತ್ತಿಗೆ, ಸೆಣಸಾಟ, ಅಪಹರಣ, ಮೋಸ, ಚಾಡಿ, ಅನ್ಯಾಯ ಎಂಬುವುಗಳು ಹೆಸರು ಹೇಳುವುದಕ್ಕೂ ಆ ನಾಡಿನಲ್ಲಿಲ್ಲ. ವ|| ಮತ್ತೆ ಮಾತ್ರವಲ್ಲದೆ ೧೫. ಭತ್ತವನ್ನು 'ಪೊಡೆ' ಎನ್ನುತ್ತಾರೆಯೇ ಹೊರತು, ಜನರನ್ನು 'ಹೊಡೆ' ಎಂಬರ್ಥದಲ್ಲಿ ಆ ಶಬ್ದವನ್ನು ಬಳಸುವುದೇ ಇಲ್ಲ. ದುಂಬಿಗಳ ಸಮೂಹವನ್ನು 'ಆರಡಿ' ಎನ್ನುತ್ತಾರೆ. ಹೆಣ್ಣಾನೆಯನ್ನು 'ಪಿಡಿ' ಎನ್ನುತ್ತಾರೆ. ಈ ಶಬ್ದಗಳು ಬೇರೆ ಅರ್ಥದಲ್ಲಿ ಆ ನಾಡಿನಲ್ಲಿ ಇರುವುದಿಲ್ಲ. ೧೬. ಮೊಸರು ಕಡೆಯುವುದನ್ನು 'ಕಡೆ' ಎನ್ನುತ್ತಾರೆ. 'ಒಡೆ' ಎಂಬುದು ಒಂದು ಭಕ್ಷ್ಯದ ಹೆಸರು. 'ಮುಡಿ' ಎಂದರೆ ತುರುಬು ಮಾತ್ರ. ಇದರ ಹೊರತು 'ಕಡೆ', 'ಒಡೆ', 'ಮುಡಿ' ಎಂಬ ಬಿರುನುಡಿಗಳು ಆ ನಾಡಿನಲ್ಲಿ ಕನಸಿನಲ್ಲಿಯೂ ಇಲ್ಲ. ೧೭. ದುಂಬಿಯಿಲ್ಲದ ತಾವರೆ, ತಾವರೆಗಳಿಲ್ಲದ ಸರೋವರ, ಸರೋವರಗಳಿಲ್ಲದ ಉದ್ಯಾನವನ, ಉದ್ಯಾನವನಗಳಿಲ್ಲದ

ವ।। ಮತ್ತಮದಲ್ಲದೆ

ಎಳಎಲರಿಂದೊಡೆದೊಸರ್ವು
ಜ್ಜ್ವಲ ಧವಳೇಕ್ಷುಗಳ ಪಾಳಿ ಕಾಲ್ಗಳಿನೆತ್ತಂ
ಬೆಳದಾ ಶಾಲಿವನಂ ಕಂ
ಗೊಳಿಪುದು ಭೂವನಿತೆಯುಟ್ಟ ಪೊಂಬಟ್ಟೆಯವೋಲ್ ೧೮

ನೆರೆ ತಿಳಿದು ನಿಂದ ನೀರೊಳ್
ತರದಿಂ ಮಾರ್ಪೊಳೆವ ಶಾಲಿಮಂಜರಿ ನಿಕರಂ
ವರಭೂಸಾರತೆಯಿಂ ತಾ
ನುರೆ ಬೇರೊಳ್ ಬೇರೆ ಫಲಿಸಿತೆಂಬವೊಲೆಸೆಗುಂ ೧೯

ವ।। ಮತ್ತಮದಲ್ಲದೆ

ಜಲಜಜನಮರ್ದಂ ಬೆಳ್ಳಿಯ
ಕೊಳವಿಗಳೊಳ್ ತುಂಬಿ ಗಂಟನೊಂದಿಸಿ ಗರುಡಂ
ತಿಳಿಯದೊಲವನಿಳೆಯೊಳ್ನಿಲೆ
ಗೊಳಿಸಿದನೆನೆ ಮೆರೆದುದಮಳಪುಂಡ್ರೇಕ್ಷುವನಂ ೨೦

ಹರಿಯೊರ್ಮೆಯಮರ್ದನಮರ
ರ್ಗೆರೆದೊಡೆ ನವಸುಧೆಯನೆರೆದಪೆವು ನಿಮಗನಿಶಂ
ನರರಿತ್ತ ಬನ್ನಿಮೆನುತುಂ
ಕರೆವಂತಿರೆ ಮೊರೆವುವಿಕ್ಷುಯಂತ್ರಪ್ರಚಯಂ ೨೧

ವ।। ಮತ್ತಮದಲ್ಲದೆ

ಮಿಂಚುವ ಪೊಸ ನೆಲ್ದೆನೆಗಳ
ಗೊಂಚಲ್ಗಳನಡಸಿ ಬಾಯ್ಗಳೊಳ್ ನಲಿಯುತ್ತುಂ
ಚಂಚುಗಳಿನಲೆವ ಗಿಳಿಗಳ
ಸಂಚಯಮಂ ಸೋವುತಿರ್ಪರುರೆ ಪಾಮರಿಯರ್ ೨೨

ಪಟ್ಟಣಗಳು ಆ ನಾಡಿನಲ್ಲಿಲ್ಲ. ವ।। ಮತ್ತೆ ಅದಲ್ಲದೆ ೧೮. ಎಳೆಗಾಳಿಯಿಂದಲೇ ಒಡೆದು ರಸ ಸುರಿಸುವ ಬಿಳಿಕಬ್ಬುಗಳ ಸಾಲು ಅಲ್ಲಿದೆ. ನೀರ್ಗಾಲುವೆಗಳಿಂದ ಸುತ್ತಲೂ ಬೆಳೆದಿರುವ ಭತ್ತದ ಹೊಲವು, ಭೂಮಿ ಎಂಬ ಹೆಂಗಸು ಉಟ್ಟ ಬಂಗಾರದ ಬಟ್ಟೆಯ ಹಾಗೆ ಇದೆ. ೧೯. ತಿಳಿಯಾದ ನೀರಿನಲ್ಲಿ ಪ್ರತಿಬಿಂಬಿಸಿದ ಬತ್ತದ ತೆನೆಗಳ ಸಮೂಹವು ಸಾರವತ್ತಾದ ಭೂಮಿಯಲ್ಲಿ ಬೇರಿನಲ್ಲಿಯೂ ತೆನೆಬಂದ ಹಾಗೆ ಕಾಣುತ್ತದೆ. ವ।। ಮತ್ತೆ ಅದಲ್ಲದೆ ೨೦. ಬ್ರಹ್ಮನು ಅಮೃತವನ್ನು ಬೆಳ್ಳಿಯ ಕೊಳವೆಗಳಲ್ಲಿ ತುಂಬಿಸಿ, ಗಂಟು ಮುಚ್ಚಿ, ಅಪಹರಿಸಲು ಬರುವ ಗರುಡನಿಗೆ ತಿಳಿಯದ ಹಾಗೆ ಈ ಭೂಮಿಯಲ್ಲಿ ಇಟ್ಟ ರೀತಿಯಲ್ಲಿ ಪಟ್ಟೆ ಕಬ್ಬುಗಳ ಹೊಲ ಅಥವಾ ತೋಟ ಕಾಣಿಸುತ್ತಿದೆ. ೨೧. ಹರಿಯು ಒಂದು ಸಲ ಮಾತ್ರ ದೇವತೆಗಳಿಗೆ ಅಮೃತವನ್ನು ನೀಡಿದ್ದಾನೆ, ನಿಮಗೆ ನಿತ್ಯವೂ ಹೊಸ ಅಮೃತವನ್ನು ಹೊಯ್ಯುತ್ತೇವೆ; ಮನುಷ್ಯರೆಲ್ಲರೂ ಬನ್ನಿ ಎಂದು ಕರೆಯುತ್ತಿರುವ ಹಾಗೆ ಕಬ್ಬಿನ ಗಾಣಗಳು ಶಬ್ದಮಾಡುತ್ತವೆ. ವ।। ಮಾತ್ರವಲ್ಲದೆ ೨೨. ಹೊಳೆಯುವ ಹೊಸಭತ್ತದ ತೆನೆಗಳ

ಸಲೆ ಸೋವ ಪಾಮರಿಯರು
ಜ್ಜ್ವಲಿಪಧರವನೀಕ್ಷಿಸುತ್ತೆ ಪಣ್ತುರುಬಿಂಬೀ
ಫಲವೆಂದು ಕರ್ದುಕಬಗೆದವ
ರ್ಗಳ ಸಿರಿಮೊಗಕೆರಪುವಲ್ಲಿ ಗಿಳಿಗಳ ಬಳಗಂ ೨೩

ನೋಡಿ ನಗುವಬಲೆಯರ ಪ
ಲ್ಗಾಡಿಯನಭಿವೀಕ್ಷಿಸುತ್ತೆ ಪರಿಪಕ್ವಲಸ
ದ್ದಾಡಿಮಿಯ ಬೀಜಮೆನುತೆಡೆ
ಯಾಡುತೆ ಕಾಲ್ದೆಗೆಯುತಿರ್ಪುವಾ ಕೀರಂಗಳ್ ೨೪

ವ|| ಮತ್ತಮದಲ್ಲದಾ ದೇಶದೊಳ್

ಪೊಸ ಪೂಗಳ ರಸದಿಕ್ಸು
ಪ್ರಸರದ ಪಾಲ್ಗಳ ಸುನಾರಿಕೇಳಫಲಾಂಭೋ
ವಿಸರದ ಪರಿಕಾಲ್ಗಳನುಡು
ಪಸಮೂಹದೆ ಪಾಯ್ವುದಲ್ಲಿ ಪಾಂಥಸಮಾಜಂ ೨೫

ಬಾಳೆಯ ಬಟ್ಟಗಂಬಗಳಿನಿಕ್ಷುಗಳೊಳ್ತೊಲೆಯಿಂದಮಂಬುರು
ಣ್ನಾಳದ ಜಂತೆಯಿಂ ಪೊಸತಳಿರ್ವಸೆಯಿಂ ಹಿಮವಾರಿಪೂರ್ಣಕುಂ
ಭಾಳಿಯಿನಚ್ಚ ಮಲ್ಲಿಗೆಯ ಕುಚ್ಚದೆ ಬಾಳದ ಪಂದಲಿಂ ಪ್ರಪಾ
ಶಾಲೆಗಳಧ್ವದೊಳ್ ಸ್ಮರವಿವಾಹಗೃಹಂಗಳೊಲಾ ವಿರಾಜಿಕುಂ ೨೬

ವ|| ಮತ್ತಮಲ್ಲಿ

ನೀರೆರೆವಳ ತೋಳ್ಗೊಡಲಿಂ
ಗೇರಿರೆ ಕುಡಿವರಿದು ದಿಟ್ಟ ಸರಿಸದ ಪೊಯ್ನೀ
ರ್ಧಾರೆ ಪೊರಸೂಸೆ ಪಾಂಥ
ರ್ನೀರೆಯರಂ ಬಾಂಗೆ ಬಾಯಬಿಟ್ಟುರೆ ನಗಿಪರ್ ೨೭

ಗೊಂಚಲುಗಳನ್ನು ಬಾಯೊಳಗೆ ಕಚ್ಚಿಕೊಂಡು ಹಾರಾಡುವ ಗಿಳಿಗಳ ಸಮೂಹವನ್ನು ಹಳ್ಳಿಯ ಹೆಂಗಸರು ಓಡಿಸುತ್ತಿರುತ್ತಾರೆ. ೨೩. ಹಕ್ಕಿಗಳನ್ನು ಓಡಿಸುವ ರೈತಹೆಂಗಸರ ಹೊಳೆಯುವ ತುಟಿಯನ್ನು ನೋಡಿ ಮಾಗಿದ ತೊಂಡೆಹಣ್ಣೆಂದು ಭ್ರಮಿಸಿ, ಗಿಳಿಗಳ ಬಳಗವು ಕಚ್ಚುವುದಕ್ಕಾಗಿ ಅವರ ಸುಂದರಮುಖಕ್ಕೆ ಎರಗುತ್ತದೆ. ೨೪. ಆ ಗಿಳಿಗಳನ್ನು ನೋಡಿ ನಗುವ ಹೆಂಗಸರ ಹಲ್ಲಿನ ಚೆಂದವನ್ನು ಕಂಡು 'ಮಾಗಿದ ದಾಳಿಂಬೆ ಬೀಜ' ಎಂದು ಭಾವಿಸಿ ಆ ಗಿಳಿಗಳು ಸುತ್ತಾಡಿ ಓಡಿಹೋಗುತ್ತವೆ. ೨೫. ಮತ್ತೆ ಅದಲ್ಲದೆ ಆ ದೇಶದಲ್ಲಿ ಹೊಸ ಹೂವುಗಳ ಮಕರಂದ, ಕಬ್ಬಿನಹಾಲು, ಎಳನೀರು ಇವುಗಳ ಕಾಲುವೆಯನ್ನು ಅಲ್ಲಿನ ದಾರಿಗರು ತೆಪ್ಪದ ಮೂಲಕ ದಾಟುತ್ತಾರೆ! ೨೬. ಆ ನಾಡಿನಲ್ಲಿ ಅರವಟ್ಟಿಗೆಗಳು ಮನ್ಮಥನ ಮದುವೆಯ ಮನೆಗಳ ಹಾಗೆ ಶೋಭಿಸುತ್ತವೆ. ಅವುಗಳ ಮುಂದೆ ಬಾಳೆಯ ಉರುಟಾದ ಕಂಬಗಳು, ಕಬ್ಬಿನ ತೊಲೆ, ತಾವರೆದಂಟಿನ ಜಂತೆ, ಹೊಸಚಿಗುರಿನ ಹಸೆ (ಚಾಪೆ), ತಣ್ಣೀರು ತುಂಬಿದ ಕೊಡಗಳು, ಮಲ್ಲಿಗೆಯ ಕುಚ್ಚು, ಲಾಮಂಚದ ಚಪ್ಪರ ಇವುಗಳು ಶೋಭಿಸುತ್ತಿವೆ. ವ|| ಮತ್ತೂ ಕೂಡ ಆ ಅರವಟ್ಟಿಗೆಯಲ್ಲಿ ೨೭. ಕೈಗೆ ನೀರು ಎರೆಯುವ ಹೆಂಗಸಿನ ತೋಳಿನ ಬುಡಕ್ಕೆ ನೀರು ಕುಡಿಯುವ ದಾರಿಗನ ದೃಷ್ಟಿಯು

ಕುಂದದೆ ನೀರೆರೆವಳ ಸು
ಯ್ಮಂದಸ್ಮಿತರೋಚಿ ಮುಸುಕಿ ಪರಿಮಳಿಸುತೆ ಬೆ
ಳ್ಪೊಂದಿರೆ ಕುಡಿನೀರ್ ತನುಗಿದು
ಚಂದನರಸಮೆಂದು ಪೂಸಬಗೆವರ್ ಪಾಂಥರ್ ೨೮

ವ॥ ಇಂತನವರತಮಶೇಷಸುಖಸಂಪತ್ಸಮಾಜದಿಂದಾ ದೇಶಂ ವಿರಾಜಿಸುತ್ತುಮಿರಲ್

ಅದರೊಳ್ ಮೈಮೆಯಿನೆಸೆವಾ
ತ್ರಿದಶ ತರಂಗಿಣಿಗಮಧಿಕಮೆನಿಸುವ ವರದಾ
ನದಿಮೂಲಮೊಪ್ಪುಗುಂ ತ
ನ್ನದಿಯುತ್ತರತಟದೊಳರ್ಧಯೋಜನದೆಡೆಯೊಳ್ ೨೯

ಆ ಕರ್ಣಾಟಕ ದೇಶದ
ಭೂಕಾಂತೆಯ ವಕ್ತ್ರಪದ್ಮಮೆನೆ ರಾಜಿಸುಗುಂ
ಶ್ರೀಕರಮೆನಿಸಿಯಜಸ್ರಂ
ನಾಕವನಿಳಿಕ್ಕೆದ ಕೆಳದಿಯೆಂದೆನಿಪ ಪುರಂ ೩೦

ಶ್ರೀಮತ್ಕೆಳದಿಯ ಪೊಳಲೊಳ್
ಹೈಮವತೀರಮಣನೆಸೆವ ಲಿಂಗಾಕೃತಿಯಿಂ
ರಾಮೇಶ್ವರಾಖ್ಯೆಯಂ ತಳೆ
ದಾ ಮಹಿಯೊಳ್ ಪುತ್ತದಲ್ಲಿ ನೆಲೆಸಿರುತಿರ್ದಂ ೩೧

ಮೇಲೇರಿದ್ದರಿಂದ, ಗಮನಿಸದೆ ಅವನ ಬೊಗಸೆಯ ನೀರು ಚೆಲ್ಲಿ ಹೋಗುತ್ತಿತ್ತು. ಹೀಗೆ ದಾರಿಗರು ಆಕಾಶವನ್ನು ನೋಡುತ್ತಾ ಸುಮ್ಮನೆ ಬಾಯ್ದೆರೆಯುತ್ತಿದ್ದರು. ಅವರನ್ನು ಕಂಡು ಹೆಂಗಸರು ನಗುತ್ತಿದ್ದರು. ೨೮. ನೀರು ಹೊಯ್ಯುವವಳ ಮುಗುಳುನಗೆಯ ಕಾಂತಿ ಬೆರೆತದ್ದರಿಂದ ಪರಿಮಳಿಸಿ, ಬೆಳ್ಳಗಾದ ಕುಡಿಯುವ ನೀರನ್ನು ಕಂಡು, ಇದು ಮೈಗೆ ಹಚ್ಚುವ ಶ್ರೀಗಂಧದ ಲೇಪವೆಂದು ದಾರಿಗರು ಹಚ್ಚಿಕೊಳ್ಳಲು ಬಯಸುತ್ತಿದ್ದರು. ವ॥ ಹೀಗೆ ಎಲ್ಲ ರೀತಿಯಿಂದಲೂ ಸುಖ, ಸಂಪತ್ತು, ಸಮೂಹಗಳಿಂದ ಆ ದೇಶವು ಯಾವಾಗಲೂ ಮೆರೆಯುತ್ತಿರುವಾಗ ೨೯. ಆ ನಾಡಿನಲ್ಲಿ ದೇವಗಂಗೆಗಿಂತಲೂ ಮಿಗಿಲಾದ ವರದಾನದಿಯ ಮೂಲಸ್ಥಾನವು ಶೋಭಿಸುತ್ತಿದೆ. ಆ ನದಿಯ ಉತ್ತರದಡದ ಅರ್ಧಯೋಜನದಲ್ಲಿ ೩೦. ಕರ್ಣಾಟಕ ದೇಶದ ಭೂಮಿ ಎಂಬ ಅಂಗನೆಯ ಮುಖಕಮಲವೆಂಬಂತೆ ಕೆಳದಿ ಎಂಬ ಪಟ್ಟಣವು ಸ್ವರ್ಗಕ್ಕೆ ಮಿಗಿಲಾಗಿ ಯಾವಾಗಲೂ ಸಂಪದ್ಭರಿತವಾಗಿ ಮೆರೆಯುತ್ತಿದೆ. ೩೧. ಕೆಳದಿಯ ಪಟ್ಟಣದಲ್ಲಿ ಪಾರ್ವತೀರಮಣನಾದ ಶಿವನು ಲಿಂಗಾಕೃತಿಯಿಂದ ರಾಮೇಶ್ವರ ಎಂಬ ಹೆಸರನ್ನು ತಳೆದು ಹುತ್ತದಲ್ಲಿ ವಾಸಿಸುತ್ತಿದ್ದನು.

ಆ ಪುರದ ಮುಂತಣೆಳೆಯ ಸ
ಮೀಪದೊಳೊತ್ತಾಗಿ ಚೆಲ್ವ ಪಳ್ಳಿಯ ಬಯಲೆಂ
ಬಾ ಪಳ್ಳಿ ಕೃಷಿಕಜನಸ
ದ್ವ್ಯಾಪಾರನಿಳಿಂಪವಲ್ಲಿಯಾರಾಜಿಸುಗುಂ ೩೨

ಮಿಸುಪಾ ಪಳ್ಳಿಯ ಬಯಲೆಂ
ದೆನಿಪೂರಿನ ಮೂಲಿ ಬಸವಪಂ ಕೃಷಿಕರ್ಮಾ
ಭ್ಯನುಪಗತಜೀವನಂ ತಾ
ನೆನಿಸಿ ವಿರಾಜಿಸುತುಮಿರ್ದನದರೊಳಜಸ್ರಂ ೩೩

ವ।। ಮತ್ತಮದಲ್ಲದಾ ಬಸವಪಂ ಪರಶಿವಮೂರ್ತಿಸ್ವರೂಪ ಬಸವೇಶ್ವರಾಂಶೀಭೂತನಪ್ಪ ಕಾರಣಪುರುಷನುಂ ಲಿಂಗಾಂಗಸಂಬಂಧಿ ಷಟ್ಸ್ಥಲಜ್ಞಾನಾನುಸಂಧಾನ ಮಹಾನುಭವಪ್ರಾಜ್ಞನುಂ, ನಿರುಪಮ ನಿರಾಭಾರಿ ವೀರಶೈವಸದಾಚಾರಾಚರಣಸಂಪನ್ನನುಂ, ಶ್ರೀಗುರು ಲಿಂಗಜಂಗಮ ಪದಾಂಬುಜ ಸೇವಾತತ್ಪರಾಮಲಚಿತ್ತನುಮೆನಿಸಿ ವಿರಾಜಿಸುತಿರ್ದನಂತುಮಲ್ಲದೆಯುಂ

ಹರಪದಪಯೋಜಭೃಂಗಂ
ಸುರುಚಿರ ಶಿವಶರಣಸಂಗಮುಪಗತಭಂಗಂ
ದುರಿತಧ್ವಾಂತಚಯಾಹ
ಸ್ಕರನೆಂದಿಳೆ ಪೊಗಳೆ ಬಸವಪಂ ರಾಜಿಸಿದಂ ೩೪

ಅನುಪಮ ತದ್ಬಸವಪನಂ
ಗನೆ ವಿಲಸಿತ ಬಸವಮಾಂಬೆ ವಿಶ್ರುತ ಸೀಮಂ
ತಿನಿಯರಧಿದೇವಿಯತಿ ಪಾ
ವನತರ ಸಚ್ಚರಿತೆಯೆನಿಸಿ ರಾರಾಜಿಸಿದಳ್ ೩೫

೩೨. ಆ ಪಟ್ಟಣದ ಮುಂದುಗಡೆ ಹತ್ತಿರದಲ್ಲಿಯೇ ಹಳ್ಳಿಬಯಲು ಎಂಬ ಹಳ್ಳಿ ಇದೆ. ಅಲ್ಲಿ ರೈತರ-ವ್ಯಾಪಾರಿಗಳ ಸಮೂಹ ಶೋಭಿಸುತ್ತದೆ. ೩೩. ಆ ಹಳ್ಳಿಯ ಬಯಲಿನಲ್ಲಿ ಮೂಲನಿವಾಸಿಯಾದ ಬಸವಪ್ಪನೆಂಬುವನು ಬೇಸಾಯವೇ ತನ್ನ ಜೀವನವೆಂದು ಭಾವಿಸಿ, ಯಾವಾಗಲೂ ಕೃಷಿತತ್ಪರನಾಗಿದ್ದನು. ಅಲ್ಲದೆ ಆ ಬಸವಪ್ಪನು ಪರಮಶಿವಮೂರ್ತಿ ಸ್ವರೂಪನಾದ ಬಸವೇಶ್ವರನ ಅಂಶದ ಕಾರಣಪುರುಷನೂ, ಷಟ್‌ಸ್ಥಲಜ್ಞಾನವುಳ್ಳ ಪ್ರಾಜ್ಞನೂ, ಅಸಮಾನನೂ, ನಿಸ್ಪೃಹನೂ ವೀರಶೈವ ಸದಾಚಾರದಿಂದ ಕೂಡಿದವನೂ ಗುರುಲಿಂಗಜಂಗಮರ ಪಾದಸೇವೆಯಲ್ಲಿಯೇ ನೆಟ್ಟಮನಸ್ಸುಳ್ಳವನೂ ಆಗಿ ಮೆರೆಯುತ್ತಿದ್ದನು. ೩೪. ಆ ಬಸವಪ್ಪನನ್ನು ಶಿವನ ಪಾದಕಮಲದ ದುಂಬಿ ಎಂದೂ, ಶಿವಶರಣರ ಜೊತೆಗಾರನೆಂದೂ, ಭಂಗರಹಿತನೆಂದೂ, ಪಾಪದ ಕತ್ತಲುಗಳನ್ನೋಡಿಸುವ ಸೂರ್ಯನೆಂದೂ ಲೋಕವು ಕೊಂಡಾಡುತ್ತಿತ್ತು. ೩೫. ಆ ಬಸವಪ್ಪನ ಹೆಂಡತಿಯಾದ ಬಸವಮಾಂಬೆಯು ಸ್ತ್ರೀಯರ ಅಧಿದೇವಿ; ಹಾಗೂ ಅತ್ಯಂತ ಪವಿತ್ರವಾದ ಒಳ್ಳೆಯ

ರತಿ ರೂಪಿನೊಳೊಪ್ಪುವರುಂ
ಧತಿ ಪತಿಭಕ್ತಿಯೊಳೆ ಜಾಣ್ಮೆಯೊಳ್ನೂತನ ಭಾ
ರತಿ ನಿರ್ಮಲಮತಿ ಶೋಭಾ
ವತಿಯೆಂದಿಳೆ ಪೊಗಳೆ ತದ್ಯುವತಿ ಕರಮೆಸೆದಳ್ ೩೬

ಆ ಪುಣ್ಯಸ್ತ್ರೀಯುದರ
ಶ್ರೀಪಾರಾವಾರದೊಳ್ಸುಧಾಕರನೆನೆ ಸ
ದ್ರೂಪಂ ನಿರುಪಮಸುಗುಣಕ
ಲಾಪಂ ಚೌಡಪನೆನಿಪ್ಪ ಸುತನುದಯಿಸಿದಂ ೩೭

ಇಂದುವಿನೊಡನುಜ್ಜ್ವಲಿಸುವ
ಮಂದಾರಂ ಜನಿಸಿದಂತೆ ತಚ್ಚೌಡಪ ಭೂ
ಚಂದಿರನೊಡನುರು ಭದ್ರಪ
ನೆಂದೆಂಬ ಕುಮಾರನೊಗೆದು ರಾರಾಜಿಸಿದಂ ೩೮

ಆ ಪರತರ ಬಸವಪಕುಲ
ದೀಪರ್ಭೂಮಹಿತ ಚೌಡಪಂ ಭದ್ರಪನೆಂ
ಬಾ ಪುಣ್ಯಪುರುಷರುಜ್ಜ್ವಲ
ರೂಪಾನ್ವಿತರೆನಿಸಿ ಮೆರೆದರಿನಶಶಿಗಳವೋಲ್ ೩೯

ಅವರೀಶನಾಜ್ಞೆಯಿಂ ಜನ
ನಿವಹವನುದ್ಧರಿಸೆ ಬುವಿಯೊಳೊಗೆದತಿಮಹಿಮಾ
ರ್ಣವರತಿ ಕಾರಣಪುರುಷ
ಶಿವಮತತತ್ತ್ವಜ್ಞರೆಂದು ಬಲ್ಲವರುಸಿರ್ವರ್ ೪೦

ನಡತೆಯುಳ್ಳವಳೂ ಆಗಿ ರಾರಾಜಿಸಿದ್ದಳು. ೩೬. ಅವಳು ರೂಪಿನಲ್ಲಿ ರತಿ, ಪತಿಭಕ್ತಿಯಲ್ಲಿ ಅರುಂಧತಿ, ಜಾಣತನದಲ್ಲಿ ಸರಸ್ವತಿ, ನಿರ್ಮಲವಾದ ಬುದ್ಧಿಯುಳ್ಳವಳು, ಶೋಭೆಯಿಂದ ಕೂಡಿದವಳು ಎಂದು ಜಗತ್ತು ಹೊಗಳುವಂತೆ ಮೆರೆಯುತ್ತಿದ್ದಳು. ೩೭. ಆ ಪುಣ್ಯಸ್ತ್ರೀಯ ಗರ್ಭಾಂಬುಧಿಯಲ್ಲಿ ಚಂದ್ರನೆಂಬಂತೆ ಒಳ್ಳೆಯ ರೂಪವುಳ್ಳವನೂ ಹಾಗೂ ಒಳ್ಳೆಯ ಗುಣವಂತನೂ ಆದ ಚೌಡಪ್ಪನೆಂಬ ಮಗನು ಹುಟ್ಟಿದನು. ೩೮. ಚಂದ್ರನ ಜೊತೆಯಲ್ಲಿ ಮಂದಾರವೃಕ್ಷ ಹುಟ್ಟಿದಂತೆ ಆ ಚೌಡಪ್ಪನ ಬಳಿಕ ಭದ್ರಪ್ಪನೆಂಬ ಮಗನು ಹುಟ್ಟಿದನು. ೩೯. ಆ ಬಸವಪ್ಪನ ಮನೆತನದ ಕುಲದೀಪಕರಾದ ಆ ಚೌಡಪ್ಪ ಭದ್ರಪ್ಪ ಎಂಬ ಪುಣ್ಯಪುರುಷರು ಸೂರ್ಯಚಂದ್ರರಂತೆ ಉಜ್ವಲರೂಪದಿಂದ ಕೂಡಿ ಮೆರೆಯುತ್ತಿದ್ದರು. ೪೦. ಅವರಿಬ್ಬರೂ ಶಿವನ ಆಜ್ಞೆಯಿಂದ ಜನಸಮೂಹವನ್ನು ಉದ್ಧರಿಸುವುದಕ್ಕಾಗಿ, ಭೂಮಿಯಲ್ಲಿ ಹುಟ್ಟಿದ ಮಹಾಮಹಿಮರು, ಕಾರಣಪುರುಷರು, ಶಿವಮತದ ತತ್ವವನ್ನು ಬಲ್ಲವರು ಎಂದು ಬಲ್ಲವರೆಲ್ಲಾ ಕೊಂಡಾಡುತ್ತಿದ್ದರು. ವ।। ಹೀಗೆ ಶೋಭಿಸುವ ಕುಮಾರರು ಹುಟ್ಟಿದ ಬಳಿಕ ಆ ಬಸವಪ್ಪನು ಭಾಗ್ಯಾಭಿವೃದ್ಧಿಯನ್ನು ಪಡೆದು ಸಂತೋಷಪಡುತ್ತಾ ಕುಮಾರರಿಗೆ ಯೌವನೋದಯವಾಗಲು ಸತ್ಕುಲದಲ್ಲಿ ಹುಟ್ಟಿದ ಕನ್ಯಾರತ್ನಗಳನ್ನು ಮದುವೆ

ವ।। ಇಂತೆಸೆವ ಕುಮಾರರೊಗೆದ ನಂತರಮಾ ಬಸವಪಂ ಭಾಗ್ಯಭಿವೃದ್ಧಿಯಂ ಪಡೆದು ಸಂಸತವಡುತ್ತೆ ಕುಮಾರರ್ಗೆ ಯೌವನೋದಯಮಾಗಲೊಡನೆ ಸತ್ಕುಲಸಂಭವೆಯರಪ್ಪ ಕನ್ಯಾರತ್ನಂಗಳಂ ವಿವಾಹಮಂ ರಚಿಸಿ ಕತಿಪಯ ದಿವಸಮಿರ್ದು ಶಿವಸಾಯುಜ್ಯವನೈದಲೊಡನೆ ತತ್ಪತ್ನಿಯಪ್ಪ ಬಸವಮಾಂಬಿಕೆಯಾ ಪುತ್ರರಿರ್ವರಂ ಪೋಷಿಸಲಿವರ್ಗಳ್ ದಿನದಿನದೊಳ್ ವರ್ಧಿಷ್ಣುಗಳಾಗಿ ಪಳ್ಳಿವಯಲ ಗ್ರಾಮದೊಳ್ ಸ್ವಪಿತ್ರಾರ್ಜಿತಕೃಷ್ಯಾರಂಭಾದಿ ವ್ಯಾಪಾರದ್ವಾರದಿಂ ಪರಮಾಭಿವೃದ್ಧಿಯಂ ಪಡೆದು ಪಟುತರ ಭುಜಬಲಶಾಲಿಗಳೆನಿಸಿ ವಿರಾಜಿಸುತಿರ್ದ ನಂತರದೊಳ್

ವರವೀರಶೈವಕುಲಶೇ
ಖರ ಬಸವಪುತ್ರ ಚೌಡಪಂ ಶ್ರೀರಾಮೇ
ಶ್ವರಕೃಪೆಯಿಂ ತತ್ಕೆಳದಿಯ
ಪುರವರ ಸಿಂಹಾಸನಕ್ಕಧೀಶ್ವರನಾದಂ ೨೧

ವ।। ಅದೆಂತೆಂದೊಡಿಂತು ವಿರಾಜಿಸುತ್ತುಮಿರ್ಪ ಭದ್ರಪಾಗ್ರಜನಪ್ಪ ಚೌಡಪನ ಸ್ವಪ್ನದೊಳ್ ಶ್ರೀಮತ್ಪರಮೇಶ್ವರಂ ಮನಂಗೊಳಿಪ್ಪ ವೃದ್ಧ ಜಂಗಮಸ್ವರೂಪದಿಂ ಪ್ರಸನ್ನನಾಗಿ ಕೆಳದಿಪುರವರದೆಡೆಯೊಳ್ ಸೀಗೆವಳ್ಳಿಯೆಂಬ ತಾಣದೊಳ್ ತರು ಗುಲ್ಮಲತಾಪ್ರತಾನಾವೃತಮಾದ ಸೀಗೆವೆಳೆಯ ಮಧ್ಯದೊಳ್ ರಾಮೇಶ್ವರನೆಂಬ ಮಹಾದಿವ್ಯಲಿಂಗಂ ನೆಲಸಿರ್ಪುದಾ ಲಿಂಗಂ ಬಹುಕಾಲಮಾರಭ್ಯ ವಲ್ಮೀಕಾಚ್ಛಾದಿತಮಾಗಿರ್ಪುದಲ್ಲಿ ತಲ್ಲಿಂಗಮಿರ್ಪುದರ್ಕೆ ಕುರುಹೇನೆಂದೊಡೆ ನಿನ್ನ ಮನೆಯೊಳೆಸೆವ ಕಪಿಳೆವಣ್ಣದ ಪಸು ಕರುವೆರಸಾ ತಾಣಮನೈದಿ ನಿಂದಾ ಪುತ್ತದ ಮೇಗಡೆಯೊಳ್ ಪ್ರತಿದಿನಂ ಪಾಲ್ಗರೆದು ಬರುತಿರ್ಪುದೆ ಕುರುಹಾ ಲಿಂಗಮಂ ಜನರ ಕಣ್ಮನಕ್ಕೆ ಗೋಚರಮಪ್ಪಂತು ನಿರ್ಮಿಸಿ ತದ್ರಾಮೇಶ್ವರಲಿಂಗಮಂ ಸದ್ಭಕ್ತಿಯಿಂದರ್ಚಿಸಲ್ ನಿನಗಖಂಡಪೃಥ್ವಿಪತಿತ್ವಂ ಕೈಸಾರ್ಪುದೆಂದುಸಿರ್ದಾ ಜಂಗಮಮೂರ್ತಿಯಂತರ್ಧಾನಮನೈದಲೆಳ್ಚರ್ತು ಪರಮಹರ್ಷಿತನಾಗಿ ನಿಜಮಾತೃವಪ್ಪ

ಮಾಡಿಸಿದನು. ಕೆಲವು ದಿನಗಳಲ್ಲಿ ಬಸವಪ್ಪನು ಶಿವಸಾಯುಜ್ಯವನ್ನು ಹೊಂದಿದನು. ಆಮೇಲೆ ಅವನ ಪತ್ನಿಯಾದ ಬಸವಮಾಂಬಿಕೆಯು ಆ ಇಬ್ಬರು ಮಕ್ಕಳನ್ನು ಕಾಪಾಡುತ್ತಿದ್ದಳು. ಆ ಇಬ್ಬರೂ ದಿನದಿನವೂ ಅಭಿವೃದ್ಧಿ ಹೊಂದುತ್ತಾ ಹಳ್ಳಿಬಯಲು ಗ್ರಾಮದಲ್ಲಿ ತಮ್ಮ ಪಿತ್ರಾರ್ಜಿತವಾದ ಕೃಷಿ ವ್ಯವಸಾಯ, ವ್ಯಾಪಾರಗಳಿಂದ ಹೆಚ್ಚು ಅಭಿವೃದ್ಧಿಯನ್ನು ಹೊಂದಿ ಹೆಚ್ಚಿನ ಭುಜಬಲ ಸಮರ್ಥರೆನಿಸಿ ಶೋಭಿಸುತ್ತಿದ್ದರು. ಆಮೇಲೆ ಆ ಉತ್ತಮವೀರಶೈವಕುಲಕ್ಕೆ ಅಲಂಕಾರಪ್ರಾಯನಾದ ಬಸವಪ್ಪನ ಮಗ ಚೌಡಪ್ಪನು ಶ್ರೀರಾಮೇಶ್ವರನ ದಯೆಯಿಂದ ಆ ಕೆಳದಿಯ ಪಟ್ಟಣದ ಸಿಂಹಾಸನಕ್ಕೆ ಒಡೆಯನಾದನು. ವ।। ಅದು ಹೇಗೆಂದರೆ-ಈ ರೀತಿ ಶೋಭಿಸುತ್ತಿರುವ ಭದ್ರಪ್ಪನ ಅಣ್ಣನಾದ ಚೌಡಪ್ಪನ ಕನಸಿನಲ್ಲಿ ಪರಮೇಶ್ವರನು ವೃದ್ಧ ಜಂಗಮನ ಮನೋಹರವಾದ ರೂಪದಿಂದ ಪ್ರಸನ್ನನಾಗಿ ಕೆಳದಿ ಪಟ್ಟಣದ ಬಳಿ ಸೀಗೆವಳ್ಳಿ ಎಂಬ ಸ್ಥಳದಲ್ಲಿ ಮರ, ಪೊದೆ, ಬಳ್ಳಿ ತುಂಬಿದ ಸೀಗೆಮೆಳೆಯ ಮಧ್ಯದಲ್ಲಿ ಶ್ರೀರಾಮೇಶ್ವರನೆಂಬ ಮಹಾದಿವ್ಯಲಿಂಗವು ನೆಲೆಸಿದೆ; ಆ ಲಿಂಗವು ಬಹಳ ಕಾಲದಿಂದಲೂ ಹುತ್ತದಿಂದ ಮುಚ್ಚಲ್ಪಟ್ಟಿದೆ; ಅಲ್ಲಿ ಆ ಲಿಂಗ ಇರುವುದಕ್ಕೆ ಗುರುತೇನು ಎಂದರೆ, 'ನಿನ್ನ ಮನೆಯಲ್ಲಿರುವ ಕಪಿಲೆಬಣ್ಣದ ಆಕಳು ಕರುಸಹಿತ ಆ ಸ್ಥಳಕ್ಕೆ ಹೋಗಿ ನಿಂತು ಹುತ್ತದ ಮೇಲೆ ಪ್ರತಿದಿನವೂ ಹಾಲು ಸುರಿಸಿ ಬರುತ್ತಿರುವುದೇ ಗುರುತು. ಆ ಲಿಂಗವನ್ನು ಜನರ ಕಣ್ಣಿಗೆ, ಮನಸ್ಸಿಗೆ ಕಾಣಿಸಿಕೊಳ್ಳುವ ಹಾಗೆ ಮಾಡಿ ಆ ಶ್ರೀರಾಮೇಶ್ವರ

**ಬಸವಾಂಬಿಕೆಯೊಳಿಂತು ಕಂಡ ಸ್ವಪ್ನವನುಸಿರಲದಂ ಕೇಳ್ದಿಂತು ಸ್ವಪ್ನದೊಳ್ ನಿರೂಪಿಸಿ ಪೋದ ಜಂಗಮಮೂರ್ತಿ ಸಾಕ್ಷಾತ್ಪರಮೇಶ್ವರನೆಂಬುದೆ ನಿಶ್ಚಯವಾ ರಾಮೇಶ್ವರಲಿಂಗಕ್ಕೆ ಭಕ್ತಿಯೊಳ್ ನಡೆಕೊಂಡೊಡೆ ಮುಂದೆ ನಿನಗೆ ಮಹಾಭಿವೃದ್ಧಿಯುಂಟದರ್ಕೆ ಸಂದೆಗಮಿಲ್ಲೆಂದುಸಿರಲಂತಾ ಮಾತಂ ಕೇಳ್ದು ಮರುದೆವಸಂ ಬೇಹಚರರಂ ಕಾಯ್ಬಿಕ್ಕಿ ನಿಜಮಂದಿರದೊಳಿರ್ಪ ಕಪಿಲೆವೆಣ್ಣದ ಪಸುವಾ ಪುತ್ತದೆಡೆಗೈದಿ ಸುರಭಿಯಂ ಕರೆದು ಬರ್ಪುದಂ ಗೋರಕ್ಷಕರ ಮುಖದಿಂದರಿದಲ್ಲಿಗೈದಿಯಾ ಪುತ್ತವನಗುಳಿಸಿ ನೋಡಲದರೊಳ್ ಕಂಗೊಳಿಸುತಿರ್ಪ ಮಂಗಲಮೂರ್ತಿಯಪ್ಪ ಶ್ರೀರಾಮೇಶ್ವರ ಲಿಂಗಮಿರಲ್ಕಂಡು ವಿಸ್ಮಿತನಾಗಿ ಕರಸರೋಜಮಂ ಮುಗಿದು ಭಯಭರಿತ ಭಕ್ತಿಯಿಂ ಪೊಡಮಟ್ಟು ನುತಿಸಿ ಬಳಿಕಾ ತರುಗುಲ್ಮಲತಾ ಸೀಕಾಕುಂಜಗಳಂ ಸವರ್ದಾ ತಾಣಮಂ ಮನೋಹರಮಪ್ಪಂತು ಸೈತುಗೊಳಿಸಿ ತತ್ಕಾಲೋಚಿತಮಾದ ತೃಣಕುಟಿಯಂ ನಿರ್ಮಿಸಿ ನಿತ್ಯಮಾ ಲಿಂಗಕ್ಕಂ ಧೂಪದೀಪ ನೈವೇದ್ಯಂ ನಡೆವಂತು ಕಟ್ಟಲೆಯಂ ರಚಿಸಿ ಪ್ರತಿದಿನಂಗಳೊಳ್ ತಾಂ ಪಳ್ಳಿ ವಯಲಿಂದೆಳ್ತಂದಾ ಲಿಂಗಮಂ ಭಜಿಸಿ ಪೋಪ ನಿಯಮಮಂ ಮಾಡಿಕೊಂಡಿಂತು ವರ್ತಿಸುತ್ತುಮಿರ್ದು ಕತಿಪಯ ದಿನಂಗಳ್ ಪೋಗಲೊಡನಾ ಚೌಡಪನೊಂದು ದಿನದೊಳೆಂದಿನಂತೆ ನಿಜಾಲಯದಿಂ ಪೊರಮಟ್ಟು ತಾಂ ಕೃಷ್ಯಾರಂಭಮಂ ರಚಿಯಿಪ ಶಾಲೀಕ್ಷೇತ್ರದೆಡೆಗೈದುತ್ತುಮಿರಲಾ ಪ್ರಸ್ತಾವದೊಳ್-**

ಲಿಂಗವನ್ನು ಸದ್ಭಕ್ತಿಯಿಂದ ಪೂಜಿಸಿದರೆ ನಿನಗೆ ಅಖಂಡ ಭೂಮಿಯ ಒಡೆತನವು ಕೈಸೇರುವುದು' ಎಂದು ಹೇಳಿ ಆ ಜಂಗಮಮೂರ್ತಿಯು ಅಂತರ್ಧಾನವಾಯಿತು. ಆಗ ಚೌಡಪ್ಪನು ಎಚ್ಚರಗೊಂಡು ಬಹಳ ಸಂತೋಷಗೊಂಡವನಾಗಿ ತನ್ನ ತಾಯಿಯಾದ ಬಸವಾಂಬಿಕೆಯೊಡನೆ ಹೀಗೆ ತನಗೆ ಕಂಡ ಕನಸಿನ ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿ ಬಸವಮಾಂಬಿಕೆಯು "ಕನಸಿನಲ್ಲಿ ನಿರೂಪಿಸಿ ಹೋದ ಜಂಗಮಮೂರ್ತಿಯು ಸಾಕ್ಷಾತ್ ಪರಮೇಶ್ವರನೆಂಬುದೇ ನಿಶ್ಚಯವು; ಆ ಶ್ರೀರಾಮೇಶ್ವರಲಿಂಗಕ್ಕೆ ಭಕ್ತಿಯಿಂದ ನಡೆದುಕೊಂಡಲ್ಲಿ ನಿನಗೆ ಮಹಾಭಿವೃದ್ಧಿಯುಂಟಾಗುವುದು; ಇದಕ್ಕೆ ಸಂದೇಹವೇ ಇಲ್ಲ" ಎಂದಳು. ಆ ಮಾತನ್ನು ಕೇಳಿ ಮರುದಿವಸ ಬೇಹುಗಾರರನ್ನು ಕಾವಲಿಟ್ಟು, ತನ್ನ ಮನೆಯಲ್ಲಿರುವ ಕಪಿಲೆಬಣ್ಣದ ಹಸುವು ಹುತ್ತವಿದ್ದಲ್ಲಿಗೆ ಹೋಗಿ ಹಾಲು ಸುರಿಸಿ ಬರುವುದನ್ನು ಗೋಪಾಲಕರ ಬಾಯಿಯಿಂದ ಕೇಳಿ ತಿಳಿದುಕೊಂಡನು. ಆಗ ಅಲ್ಲಿಗೆ ಹೋಗಿ ಆ ಹುತ್ತವನ್ನು ಅಗೆದು ನೋಡಿದಾಗ ಅದರಲ್ಲಿ ಕಂಗೊಳಿಸುತ್ತಿದ್ದ ಮಂಗಳಮೂರ್ತಿಯಾದ ಶ್ರೀರಾಮೇಶ್ವರ ಲಿಂಗವು ಇರುವುದನ್ನು ಕಂಡನು. ಆಶ್ಚರ್ಯಚಕಿತನಾದ ಚೌಡಪ್ಪನು ಎರಡು ಕೈಗಳನ್ನೂ ಮುಗಿದು ಭಯಭಕ್ತಿಗಳಿಂದ ಅದಕ್ಕೆ ನಮಸ್ಕರಿಸಿ ಸ್ತೋತ್ರ ಮಾಡಿದನು. ಬಳಿಕ ಆ ಮರ-ಪೊದೆ-ಬಳ್ಳಿಗಳ ಸೀಗೆಯಮಟ್ಟೆಗಳನ್ನು ಸವರಿ, ಆ ಸ್ಥಳವನ್ನು ಮನೋಹರವಾಗುವ ಹಾಗೆ ಚೊಕ್ಕಟಮಾಡಿ ಸರಿಪಡಿಸಿದನು. ಆ ಕಾಲಕ್ಕೆ ತಕ್ಕಂತೆ ಹುಲ್ಲಿನ ಗುಡಿಸಿಲೊಂದನ್ನು ನಿರ್ಮಿಸಿ, ನಿತ್ಯವೂ ಆ ಲಿಂಗಕ್ಕೆ ಧೂಪ, ದೀಪ, ನೈವೇದ್ಯ ನಡೆಯುವ ಹಾಗೆ ಕಟ್ಟಳೆಯನ್ನು ಮಾಡಿದನು. ಪ್ರತಿದಿವಸವೂ ಹಳ್ಳಿಬೈಲಿನಿಂದ ಬಂದು ಆ ಲಿಂಗವನ್ನು ಪೂಜಿಸಿ, ಭಜಿಸಿ ಹೋಗುವ ನಿಯಮವನ್ನು ಮಾಡಿಕೊಂಡನು. ಈ ರೀತಿ ಪಾಲಿಸುತ್ತಾ ಕೆಲವು ದಿನಗಳು ಕಳೆಯಲು, ಆ ಚೌಡಪ್ಪನು ಒಂದು ದಿನ ಎಂದಿನಂತೆ ತನ್ನ ಮನೆಯಿಂದ ಹೊರಟು ತಾನು ಬೇಸಾಯಮಾಡುವ ಭತ್ತದ ಹೊಲದ ಕಡೆಗೆ ಹೋಗುತ್ತಿದ್ದನು. ಆ ಕಾಲದಲ್ಲಿ

ಸರಟಂ ಚೌಡಪನೈದುತಿರ್ಪ ಪಥಕಂ ತಾನೈದಿ ಕಾಣ್ಬಂದದಿಂ
ಸಿರಮಂ ಪಾಯ್ಕಲಭೀಕ್ಷಿಸುತ್ತುಮದನೆಳ್ಚಟ್ಟಲ್ಕೆಲಕ್ಕೈದಿ ಮಾ
ಮರನಂ ಶೀಘ್ರದೊಳೇರ್ದುಮಲ್ಲಿ ಸಿರಮಂ ಪಾಯ್ಕುತ್ತಿರಲ್ ನೋಡುತ
ಚ್ಚರಿವಟ್ಟುಜ್ವಲಿಸುತ್ತುಮಿರ್ಪ ವರಶಾಲೀಕ್ಷೇತ್ರಮಂ ಪೊರ್ದಿದಂ ೪೨

ಬಳಿಕಾ ಚೌಡಪನೊಪ್ಪುವ
ಕಳಮಕ್ಷೇತ್ರವನಭೀಕ್ಷಿಸುತೆ ತತ್ಕೃತ್ಯಂ
ಗಳನಾರಯ್ದು ಬಳಲ್ದು
ಜ್ವಲಿಸುವ ಮಾಮರನ ತಣ್ಣೆಳಲನುರೆ ಸಾರ್ದಂ ೪೩

ಆ ಗರುವಂ ವಿಗತಶ್ರಮ
ನಾಗಿ ತದುರ್ವೀಜಮೂಲದೊಳ್ಸುಳಿವೆಲರ್ಗಂ
ಮೈಗೊಟ್ಟು ಗಾಢನಿದ್ರಾ
ಯೋಗದೆ ಮರೆದೊರಗಿರಲ್ತದಂಬಿಕೆಯಿತ್ತಂ ೪೪

ವರಸುತನುಣಬರ ತಳುವಿದ
ಪರಿಯೇಂ ಕಾರಣಮೊ ನೋಳ್ಪೆನೆನುತಾಲಯದಿಂ
ಪೊರಮಟ್ಟು ಗರ್ದೆಯಂ ಸಾ
ರ್ದರಸುತೆ ಮಾಮರನ ಮೂಲಮಂ ನೆರೆ ಸಾರ್ದಳ್ ೪೫

ಆ ಮಾಮರದಡಿಯೊಳ್ನಿ
ದ್ರಾಮುದ್ರಿತನೇತ್ರನಾಗಿ ಮಲಗಿಹ ಸುತನಂ
ಪ್ರೇಮದೊಳೀಕ್ಷಿಸುತಿರಲು
ದ್ದಾಮಾಹಿಯದೊಂದು ಚೌಡಪನ ಶಿರದೆಡೆಯೊಳ್ ೪೬

೪೨. ಒಂದು ಹಾವುರಾಣಿ (ಓತಿಕ್ಯಾತವು) ಚೌಡಪ್ಪನು ಹೋಗುತ್ತಿದ್ದ ದಾರಿಗೆ ಬಂದು, ಅವನು ಹೋಗುತ್ತಿದ್ದಂತೆಯೇ ತಲೆಯನ್ನು ನೆಲಕ್ಕೆ ಬಡಿಯಿತು. ಅದನ್ನು ಕಂಡ ಅವನು ಅದನ್ನು ಓಡಿಸಿದನು. ಆಗ ಅದು ಹತ್ತಿರದ ಮಾವಿನಮರವನ್ನು ಏರಿ ಅಲ್ಲಿ ತಲೆಯನ್ನು ಬಡಿದುಕೊಳ್ಳುತ್ತಿತ್ತು. ಇದನ್ನು ನೋಡಿದ ಚೌಡಪ್ಪನು ಆಶ್ಚರ್ಯಗೊಂಡನು. ೪೩. ಆಮೇಲೆ ಚೌಡಪ್ಪನು ಭತ್ತದ ಗದ್ದೆಯನ್ನು ನೋಡಿ ಅದರ ಕೆಲಸಗಳನ್ನು ಪರಿಶೀಲಿಸಿ, ಆಯಾಸಗೊಂಡು ಹತ್ತಿರದ ಮಾವಿನಮರದ ತಂಪಾದ ನೆರಳಿಗೆ ಹೋದನು. ೪೪. ಅಲ್ಲಿ ಆತನು ಆಯಾಸ ಕಳೆದುಕೊಳ್ಳಲು, ಆ ಮರದ ಬುಡದಲ್ಲಿ ಸುಳಿಯುವ ಗಾಳಿಗೆ ಮೈಕೊಟ್ಟು ಗಾಢ ನಿದ್ರೆಯಲ್ಲಿ ಮೈಮರೆತು ಮಲಗಿದ್ದಾಗ ಅವನ ತಾಯಿ ಅಲ್ಲಿಗೆ ಬಂದಳು. ೪೫. ಮಗನು ಊಟಕ್ಕೆ ಬಾರದೆ ತಡಮಾಡಿದ ಕಾರಣವೇನು ನೋಡಬೇಕೆಂದು ಅವಳು ಮನೆಯಿಂದ ಹೊರಟು, ಗದ್ದೆಗೆ ಬಂದು ಹುಡುಕುತ್ತಾ ಮಾವಿನಮರದ ಬುಡಕ್ಕೆ ಬಂದಳು. ೪೬. ಆ ಮಾವಿನಮರದ ಕೆಳಗೆ ನಿದ್ದೆಯಿಂದ ಕಣ್ಣುಮುಚ್ಚಿಕೊಂಡು ಮಲಗಿದ್ದ ಮಗನನ್ನು ನೋಡಿ ಪ್ರೀತಿಯಿಂದ ಅವಲೋಕಿಸುತ್ತಿರುವಾಗ ಭಯಂಕರವಾದ ಸರ್ಪವೊಂದು ಆ ಚೌಡಪ್ಪನ ತಲೆಯಮೇಲೆ

ಪೆಡೆಯಾಡುತ್ತಿರಲೀಕ್ಷಿಸಿ
ಕಡುಚೋದ್ಯಂಬಟ್ಟು ಮಗನನೆಳ್ಚಿಸೆ ಮುಳಿಸಿಂ
ಕಡಿದಪುದೆಂಬತಿಭಯದಿಂ
ಮಿಡುಕುತೆ ನಿಂದೆಮೆಯನಿಕ್ಕದೀಕ್ಷಿಸುತಿರ್ದಳ್ ೪೭

ವ|| ಇಂತು ನಿಂದು ನಿಟ್ಟಿಸುತಿರಲ್ ಚೌಡಪನ ಶಿರದ ಮೇಗಡೆಯೊಳ್ ನಲಿನಲಿದು ಪೆಡೆಯಾಡಿ ಕೆಲವುಂ ಪೊಳ್ತು ಪೋಗಲೊಡನಾ ಸರ್ಪಂ ಮೆಲ್ಲನಿಳಿದು ತಾನೇ ಪರಿದು ಪೋಗುತ್ತುಮಿರಲಾ ಬಸವಮಾಂಬಿಕೆಯೈತಂದು ಮರೆದೊರಗಿರ್ಪ ಸುತನನೆಳ್ಚರಿಸಿ ಕುಳ್ಳಿರಿಸಿ ತನ್ನಸ್ತಕದ ಮೇಗಡೆಯೊಳ್ ಸರ್ಪಂ ನಲಿನಲಿದು ಪೆಡೆಯಾಡಿದ ವೃತ್ತಾಂತಮನುಸಿರ್ದು ಪುಣ್ಯವಶದಿಂ ಬರ್ದುಕಿದೆ ಯೆಂದತಿವ್ಯಾಮೋಹದಿಂ ಮಗನಂ ಮುದ್ದಿಸಿ ಗಾಢಾಲಿಂಗನಂಗೈದೊಡನೆ ಪರಿದು ಪೋಪ ಪಾವಂ ತೋರಲಾಗಳಾ ಸರ್ಪಂ ತನ್ನ ಪೆಡೆಯನೆತ್ತಿಕೊಂಡಿವರಂ ತಿರಿತಿರಿಗಿ ನೋಡುತ್ತಂ ಮೆಲ್ಲಮೆಲ್ಲನೈದುತ್ತುಂ ಸನ್ನೆದೋರಿ ಕರೆದ ಭಾವಮಂ ತೋರುತ್ತುಂ ಪರಿಯುತ್ತಿರಲವರದರ ಪಿಂಗಡೆಯೊಳ್ಪಿಂಬಳಿವಿಡಿದೈದಿ ನೋಡುತ್ತುಮಿರಲಾ ಸರ್ಪಂ ನಿಕ್ಷೇಪಮಿರ್ದ ಶಾಲೀಕ್ಷೇತ್ರದೆಡೆಗಿಳಿದಲ್ಲಿ ನಿಲ್ತಿವರ್ಗಳಂ ನೋಡಿ ತನ್ನ ಪೆಡೆಯನೆತ್ತಿ ಪೆಡೆಯಗ್ರದಿಂದಾ ತಾಣಮಂ ಮುಟ್ಟಿ ಮುಟ್ಟಿ ತೋರಿಸಿಯದೃಶ್ಯಮಾಗಲಿವರಿದು ಕಾರಣ ಸರ್ಪಮಹುದೇನಾದೊಡಮೀತಾಣಮಂ ಕುರುಪಿಟ್ಟು ಮನೆಗೈದಿ ನಿಜಾನುಜನೊಡನೀ ವೃತ್ತಾಂತವನುಸಿರ್ದೊಡನಿರ್ವರ್ ಸಂತಸದಿಂ ಮಜ್ಜನ ಶಿವಾರ್ಚನ ಭೋಜನಾದಿಗಳಂ ರಚಿಸಿ ಬಳಿಕಂ ಪರಿಮಿತರಾದಾಪ್ತಜನರ್ವೆರಸು ಕಳಮಕ್ಷೇತ್ರಮಂ ಸಾರ್ದು ಕುರುಪಿಟ್ಟ ತಾಣದೆಡೆಗೈದಿ ಹಲಮಂ ಕಟ್ಟಿಸಿ ಪೂಡಿಸಲಾಗಳಾ ನೇಗಿಲಮೊನೆಗೆ ನಿಕ್ಷೇಪಕಟಾಹದ ಬಳೆಗಳ್ ಸಿಲುಂಕಿ ಘಣಘಣರೆಂಬ ದನಿಯಾಗಲಾಗಳಾ ಸ್ಥಳವನಗುಳಿಸಿ ನೋಡಲಲ್ಲಿ ಭೂರಿನಿಕ್ಷೇಪಕಟಾಹಂ ನಾಗರಮರಿಯೆಂಬ ಕತ್ತಿಸಹಿತಮಿರಲಾ ನಿಕ್ಷೇಪಮಂ ವಶಂಮಾಡಿ ಮರೆಯಾಗಿ ಬೈತಿರಿಸಿಕೊಂಡಾ

೪೭. ಹೆಡೆಯಾಡಿಸುತ್ತಿರುವುದನ್ನು ಕಂಡು ಬಸವಮಾಂಬೆಯು ಬಹಳ ಆಶ್ಚರ್ಯಪಟ್ಟಳು. ಮಗನನ್ನು ಎಬ್ಬಿಸಿದರೆ ಹಾವು ಸಿಟ್ಟಿನಿಂದ ಕಚ್ಚುವುದೋ ಏನೋ ಎಂಬ ಭಯದಿಂದ ಅಳುಕಿ ಎವೆಯಿಕ್ಕದೆ ನಿಂತು ನೋಡುತ್ತಿದ್ದಳು. ವ|| ಹೀಗೆ ಅವಳು ನಿಂತು ನೋಡುತ್ತಿರುವಾಗ, ಚೌಡಪ್ಪನ ತಲೆಯ ಮೇಲುಭಾಗದಲ್ಲಿ ಹಾವು ಕುಣಿ ಕುಣಿದು ಹೆಡೆಯಾಡಿಸಿ, ಸ್ವಲ್ಪ ಹೊತ್ತಿನ ಬಳಿಕ ಮೆಲ್ಲನೆ ತಾನೇ ಇಳಿದು ಹರಿದುಹೋಯಿತು. ಆ ಬಸವಮಾಂಬಿಕೆಯು ಥಟ್ಟನೆ ಬಂದು ಮೈಮರೆತು ಮಲಗಿದ್ದ ಮಗನನ್ನು ಎಚ್ಚರಿಸಿ ಕುಳ್ಳಿರಿಸಿದಳು. ಅವನ ತಲೆಯ ಮೇಲುಭಾಗದಲ್ಲಿ ಸರ್ಪವು ನಲಿಯುತ್ತಾ ಹೆಡೆಯಾಡಿಸಿದ ವೃತ್ತಾಂತವನ್ನು ಅವನಿಗೆ ಹೇಳಿದಳು; "ಪುಣ್ಯವಶದಿಂದ ನೀನು ಬದುಕಿದೆ" ಎಂದು ಹೆಚ್ಚಿನ ವ್ಯಾಮೋಹದಿಂದ ಮಗನನ್ನು ಮುದ್ದಿಸಿದಳು, ಬಿಗಿಯಾಗಿ ಅಪ್ಪಿಕೊಂಡಳು. ಹತ್ತಿರದಲ್ಲಿಯೇ ಹರಿದುಹೋಗುತ್ತಿದ್ದ ಹಾವನ್ನು ತೋರಿಸಿದಳು. ಆಗ ಆ ಸರ್ಪವು ತನ್ನ ಹೆಡೆಯನ್ನೆತ್ತಿಕೊಂಡು ಇವರನ್ನು ತಿರು ತಿರುಗಿ ನೋಡುತ್ತಾ, ಮೆಲ್ಲಮೆಲ್ಲನೆ ಹೋಗುತ್ತಾ, ಸನ್ನೆಮಾಡಿ ಕರೆದ ಭಾವವನ್ನು ತೋರಿಸಿ ಹರಿಯುತ್ತಿತ್ತು. ಅವರು ಅದನ್ನು ಹಿಂದಿನಿಂದಲೇ ಹಿಂಬಾಲಿಸಿದರು. ನೋಡುತ್ತಿದ್ದಂತೆಯೇ ಆ ಸರ್ಪವು ನಿಕ್ಷೇಪವಿದ್ದ ಬತ್ತದ ಗದ್ದೆಗೆ ಇಳಿದು, ಅಲ್ಲಿ ನಿಂತು, ಇವರನ್ನು ನೋಡಿ, ತನ್ನ ಹೆಡೆಯನೆತ್ತಿ ಹೆಡೆಯ ತುದಿಯಿಂದ ಆ ಸ್ಥಳವನ್ನು ಮುಟ್ಟಿ ಮುಟ್ಟಿ ತೋರಿಸಿ ಅದೃಶ್ಯವಾಯಿತು. ಇವರು ಇದು ಕಾರಣ ಸರ್ಪವಾಗಿರಬೇಕು;

ತಾಣದೊಳ್ ತತ್ಕಾಲೋಚಿತ ಮಾದಿ ಗೃಹಮಂ ನಿಮಿರ್ಚಿಸಿ ಕುಟುಂಬಸಹಿತಂ ತಾವಲ್ಲಿ ನಿಲ್ವಾವುದರಲ್ಲಿಯುಂ ಬಲಶಾಲಿಗಳೆನಿಸಿ ವರ್ತಿಸುತ್ತಮಿರುತಿರ್ದು ಕತಿಪಯದಿನಂಗಳ್ ಪೋಗಲೊಡನೆ

ಮೆರೆವಾ ಚೌಡಪಮನ್ನೆಯಂಗೆ ಶುಭಯುಕ್ಕೇಂದ್ರತ್ರಿಕೋಣಂಗಳಿಂ
ಪರಮೋಚ್ಚಸ್ಥಿತಸದ್ಗ್ರಹತ್ರಯಗಳಿಂ ಕ್ರೂರಾರಿದುಶ್ಚಿತ್ಕದಿಂ
ಬೆರೆದುತ್ಕೃಷ್ಟ ಸುಲಗ್ನದೊಳ್ಪ್ರಬಲಚಂದ್ರಾವಸ್ಥೆಯೊಳ್ಪುಟ್ಟಿದಂ
ಸ್ಫುರದತ್ಯುನ್ನತ ರಾಜಯೋಗದೊಳಿ ಲೋಕಾನಂದನಂ ನಂದನಂ ೪೮

ಆ ಸುತನೊಗೆದು ಮುಹೂರ್ತದ
ಭಾಸುರತರ ರಾಜಯೋಗಮುಖ ಫಲಗಳುಮಂ
ಜೋಸಿಗರ ಮುಖದೆ ಕೇಳ್ದು ಮ
ಹಾ ಸಂತೋಷಾಂಬುಧಿಯೊಳೋಲಾಡುತ್ತುಂ ೪೯

ಬಗೆಬಗೆಯ ದಾನಧರ್ಮಾ
ದಿಗಳಂ ವಿರಚಿಸಿ ಸದಾಶಿವಯ್ಯನೆನುತ್ತುಂ
ಸೊಗಯಿಸುಷಭಿಧಾನವನಿ
ಟ್ಟಗಣಿತ ಹರ್ಷದೊಳಿ ಚೌಡಪಂ ಪೋಷಿಸಿದಂ ೫೦

ಆದ್ದರಿಂದ ಏನೇ ಆದರೂ ಈ ಸ್ಥಳವನ್ನು ಪರೀಕ್ಷಿಸಿ ನೋಡಬೇಕು ಎಂದು ನಿಶ್ಚಯಿಸಿಕೊಂಡರು. ಆ ಸ್ಥಳವನ್ನು ಗುರುತಿಟ್ಟು ಮನೆಗೆ ಹೋಗಿ ತಮ್ಮನಿಗೆ ಈ ವೃತ್ತಾಂತವನ್ನು ತಿಳಿಸಿದರು. ಅವರಿಬ್ಬರೂ ಸಂತೋಷದಿಂದ ಸ್ನಾನ, ಶಿವಪೂಜೆ, ಭೋಜನ ಮುಂತಾದುವುಗಳನ್ನು ಮಾಡಿದರು. ಆ ಬಳಿಕ ಸಾಕಷ್ಟು ಆಪ್ತ ಜನರೊಂದಿಗೆ ಭತ್ತದ ಗದ್ದೆಗೆ ಬಂದು ಗುರುತಿಟ್ಟ ಸ್ಥಳಕ್ಕೆ ಹೋಗಿ, ನೇಗಿಲು ಕಟ್ಟಿ ಹೂಡಿಸಲು, ಆ ನೇಗಿಲ ಮೊನೆಗೆ ನಿಕ್ಷೇಪದ ಕೊಪ್ಪರಿಗೆಯ ಬಳೆಗಳು ಸಕ್ಕಿ ಘಣ ಘಣ ಎಂಬ ಶಬ್ದವಾಯಿತು. ಆಗ ಆ ಸ್ಥಳವನ್ನು ಅಗೆದು ನೋಡಿದರು. ಅಲ್ಲಿ ಹೇರಳವಾದ ನಿಕ್ಷೇಪದ ಕೊಪ್ಪರಿಗೆಯೂ 'ನಾಗರಮರಿ' ಎಂಬ ಕತ್ತಿಯೂ ಇತ್ತು. ಆ ನಿಕ್ಷೇಪವನ್ನು ಸ್ವಾಧೀನಪಡಿಸಿಕೊಂಡು, ಅಡಗಿಸಿ ಜೋಪಾನ ಮಾಡಿದರು. ಆ ಸ್ಥಳದಲ್ಲಿ ಆ ಕಾಲಕ್ಕೆ ಉಚಿತವಾದ ಮನೆಯನ್ನು ಕಟ್ಟಿಸಿ, ಕುಟುಂಬ ಸಹಿತ ನೆಲೆನಿಂತರು. ಪ್ರತಿಯೊಂದರಲ್ಲಿಯೂ ಬಲಶಾಲಿಗಳೆನಿಸಿ ಅನೇಕ ದಿನಗಳನ್ನು ಕಳೆದರು. ಹೀಗಿರಲು ಒಡನೆ ೪೮. ಆ ಚೌಡಪ್ಪನಿಗೆ ಶುಭಗ್ರಹ ಯುಕ್ತವಾದ ಕೇಂದ್ರ ತ್ರಿಕೋಣಗಳಿಂದಲೂ ಪರಮೋಚ್ಚಸ್ಥಾನದಲ್ಲಿರುವ ಒಳ್ಳೆಯ ಮೂರು ಗ್ರಹಗಳಿಂದಲೂ, ಕ್ರೂರಗ್ರಹಗಳ ಶತ್ರುಸ್ಥಾನಗಳಿಂದಲೂ ಕೂಡಿ ಉತ್ಕೃಷ್ಟ ಲಗ್ನದಲ್ಲಿ, ಪ್ರಬಲ ಚಂದ್ರಾವಸ್ಥೆಯಲ್ಲಿ, ಅತ್ಯುನ್ನತವಾದ ರಾಜಯೋಗದಲ್ಲಿ ಲೋಕಾನಂದಕಾರಕನಾದ ಮಗನು ಹುಟ್ಟಿದನು. ೪೯. ಆ ಮಗನು ಹುಟ್ಟಿದ ಮುಹೂರ್ತದ ರಾಜಯೋಗ ಮುಂತಾದ ಫಲಗಳನ್ನು ಜೋಯಿಸರಿಂದ ಕೇಳಿ ತಿಳಿದು ಚೌಡಪ್ಪನು ಸಂತೋಷ ಸಮುದ್ರದಲ್ಲಿ ಓಲಾಡಿದನು. ೫೦. ಬಗೆಬಗೆಯ ದಾನಧರ್ಮಾದಿಗಳನ್ನು ಮಾಡಿದನು. ಮಗನಿಗೆ ಸದಾಶಿವಯ್ಯನೆಂದು ಉತ್ತಮವಾದ ಹೆಸರನ್ನಿಟ್ಟು ಅಪಾರವಾದ ಸಂತೋಷದಿಂದ

ವ॥ ಇಂತು ಪೋಷಿಸುತ್ತುಮಿರಲಾ ಬಾಲಕಂ ಬಾಲೇಂದುವಿನಂತೆ ಪ್ರತಿದಿನಂಗಳೊಳ್ ಪರಮಾಭಿವೃದ್ಧಿಯಂ ಪಡೆದು ವಿರಾಜಿಸುತ್ತುಮಿರಲಾ ಸುತನಂ ನಿಟ್ಟಿಸಿ ನಲಿಯುತ್ತುಂ ಮತ್ತಮಾ ಕುವರಾರಂಗೆ ಯೌವನೋದಯಮಾಗಲೊಡನೆ ಸತ್ಕುಲಸಂಭವೆಯರಪ್ಪ ವೀರಮಾಂಬೆ ಭದ್ರಮಾಂಬೆಯೆಂಬಿರ್ವರ್ ಕನ್ಯಾರತ್ನಂಗಳನತಿವಿಭವದಿಂ ವಿವಾಹಮಂ ರಚಿಸಿ ಕೆಳದಿ ರಾಮೇಶ್ವರ ಗೃಹಮಂ ದಾರುಮಯವನಾಗಿಸಿ ಸದ್ಭಕ್ತಿಯಿಂದರ್ಚಿಸುತ್ತುಂ ತತ್ಕೃಪಾಕಟಾಕ್ಷಮೂಲದಿಂ ದಿನದಿನದೊಳ್ ಭಾಗ್ಯಾಭಿವೃದ್ಧಿಯಂ ಪಡೆದು ನಾಲ್ದೆಸೆಯೊಳ್ ಪರಮ ಪ್ರಖ್ಯಾತಿವೆತ್ತು ವರ್ತಿಸುತ್ತುಮಿರ್ದನಂತು ಮಲ್ಲದೆಯುಂ -

ಒತ್ತಿ ಪೊಡೆದೆಡವಲಂಗಳ
ಬಿತ್ತರಮಾದಿಳೆಗಳಂ ಪರಗ್ರಾಮಗಳಂ
ಗುತ್ತಿಗೆಯನೆಸಗಿ ಮಿಗೆ ದೆಸೆ
ವೆತ್ತಾತಂ ದಿನದಿನಗಳೊಳಭಿವರ್ಧಿಸಿದಂ ೫೧

ಚರರನನುಚರರನದಟರ
ನುರುತರ ಪರಿಜನರನಂಗರಕ್ಷಕ ಸಾಮಂ
ತರ ನೆರಹಿ ಭುಜಬಲಾಢ್ಯರೊ
ಳುರೆ ಬಲ್ಲಿದನೆನಿಸಿ ಚೌಡಪಂ ರೂಢಿಸಿದಂ ೫೨

ಗುರುಲಿಂಗಜಂಗಮಾರ್ಚನ
ನಿರತಂ ವರವೀರಶೈವಮಾರ್ಗಾನುಗ ಸ
ಚ್ಚರಿತನುರುದಾನಧರ್ಮಾ
ಚರಣೈಕಪ್ರಥಿತನೆನಿಸಿ ರಾರಾಜಿಸಿದಂ ೫೩

ಪೋಷಿಸಿದನು. ವ॥ ಹೀಗೆ ಆ ಹುಡುಗನು ಬಾಲಚಂದ್ರನಂತೆ ಪ್ರತಿ ದಿನ ಅಭಿವೃದ್ಧಿಯನ್ನು ಹೊಂದುತ್ತಾ ವಿರಾಜಿಸುತ್ತಿದ್ದನು. ಚೌಡಪ್ಪನು ಆ ಮಗನನ್ನು ನೋಡಿ ಸಂತೋಷಪಡುತ್ತಾ ಇದ್ದನು. ಆ ಮಗನಿಗೆ ಯೌವನವುಂಟಾದಾಗ ಒಳ್ಳೆಯ ವಂಶದಲ್ಲಿ ಹುಟ್ಟಿದ ವೀರಮಾಂಬೆ-ಭದ್ರಮಾಂಬೆ ಎಂಬ ಇಬ್ಬರು ಕನ್ಯಾರತ್ನಗಳನ್ನು ತಂದುಕೊಂಡು ಅತಿ ವೈಭವದಿಂದ ಮದುವೆ ಮಾಡಿಸಿದನು. ಕೆಳದಿ ಶ್ರೀ ರಾಮೇಶ್ವರ ದೇವರ ಮಂದಿರವನ್ನು ಮರ ಮುಟ್ಟುಗಳಿಂದ ಪೂರ್ಣಗೊಳಿಸಿದನು. ಸದ್ಭಕ್ತಿಯಿಂದ ಶ್ರೀರಾಮೇಶ್ವರನನ್ನು ಅರ್ಚಿಸುತ್ತಾ ಆತನ ಕೃಪಾಕಟಾಕ್ಷದಿಂದ ಪ್ರತಿದಿನವೂ ಭಾಗ್ಯಾಭಿವೃದ್ಧಿಯನ್ನು ಹೊಂದಿ ನಾಲ್ಕು ದಿಕ್ಕುಗಳಲ್ಲೂ ಹೆಚ್ಚು ಪ್ರಸಿದ್ಧಿಯನ್ನು ಪಡೆದನು. ಅಲ್ಲದೆ ೫೧. ಎಡಬಲದ ಭೂಮಿಗಳಿಗೆ ಮುನ್ನುಗ್ಗಿ, ಆಕ್ರಮಿಸಿ ಬೇರೆ ಗ್ರಾಮಗಳನ್ನು ಅಧೀನಗೊಳಿಸಿಕೊಂಡನು. ಹಾಗೂ ಹೆಚ್ಚಾಗಿ ಒಳ್ಳೆಯ ದೆಸೆಯನ್ನು ಪಡೆದು ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದಿದನು. ೫೨. ಆ ಚೌಡಪ್ಪನು ಚಾರಕರನ್ನೂ, ಸೇವಕರನ್ನೂ, ಪರಾಕ್ರಮಿಗಳನ್ನೂ, ಪರಿಜನರನ್ನೂ, ಅಂಗರಕ್ಷಕರನ್ನೂ ಮತ್ತು ಸಾಮಂತರನ್ನೂ ಸೇರಿಸಿಕೊಂಡು ಭುಜಬಲ ಸಮರ್ಥರಲ್ಲಿ ತಾನೇ ಬಲ್ಲಿದನೆನಿಸಿ ಅಧಿಕಾರವನ್ನು ರೂಢಿಸಿಕೊಂಡನು. ೫೩. ಆ ಚೌಡಪ್ಪನು ಗುರುಲಿಂಗಜಂಗಮರ ಅರ್ಚನೆಯಲ್ಲಿ ಆಸಕ್ತನಾಗಿದ್ದನು. ವೀರಶೈವ ಮಾರ್ಗಾನು ಯಾಯಿಯಾಗಿ ಸಚ್ಚರಿತ್ರನಾಗಿದ್ದನು. ದಾನಧರ್ಮಾಚರಣೆಯಿಂದ ಪ್ರಸಿದ್ಧನಾಗಿ

ವ|| ಇಂತು ಚೌಡಪಂ ರಾರಾಜಿಸುತಿರ್ದನೀ ಕಥಾಸಂದರ್ಭಕೋಸುಗಂ ವಿದ್ಯಾನಗರೀ ರತ್ನಸಿಂಹಾಸನಾಧೀಶ್ವರರಾದ ಹರಿಹರರಾಯ ಬುಕ್ಕರಾಯ ಮುಂತಾದ ರಾಯರ ವಂಶ ಪರಂಪರಾವಿವರಣಮಂ ಸಂಕ್ಷೇಪದಿಂ ಪೇಳ್ವೆನದೆಂತೆಂದೊಡೆ, ಶಿವಾಂಶೀಭೂತರೆನಿಸಿ ಕಾರಣಪುರುಷರಾಗಿ ಜನಿಸಿ ಬ್ರಹ್ಮಾಂಶೀಭೂತನಾದ ಮಂಡನಮಿಶ್ರನ ಕೂಡೆ ವಾದಮಂ ಮಾಡಿ ಜಯಿಸಿ ಅಮರುಕವೆಂಬ ಗ್ರಂಥಮಂ ಮಾಡಿ ಶಾರದಾಂಬೆಯಂ ಶೃಂಗಪುರದ ಪೀಠಕ್ಕೆ ತಂದು ನಿಲ್ಲಿಸಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಷಡ್ದರ್ಶನಸ್ಥಾಪನಾಚಾರ್ಯರಾದ ಜಗದ್ಗುರುಗಳೆಂದು ಪರಮ ಪ್ರಖ್ಯಾತಿಯಂ ಪಡೆದ ಶಂಕರಾಚಾರ್ಯರ್, ಪಾದಪದ್ಮಾಚಾರ್ಯರ್, ತೋಟಕಾಚಾರ್ಯರ್ ಹಸ್ತಾಮಲಕಾಚಾರ್ಯರ್, ಸುರೇಶ್ವರಾಚಾರ್ಯರ್ ಇಂತು ನಾಲ್ವರ್ ಶಿಷ್ಯರಂ ಮಾಡಿಕೊಂಡು ಪೂರ್ವಪಶ್ಚಿಮ ದಕ್ಷಿಣೋತ್ತರ ಸಮುದ್ರಾಂತಮಾಗಿ ಸ್ವಸಂಕೇತನಾಮದಲ್ಲಿ ಮಠಗಳಂ ಕಟ್ಟಿಸಿ ತತ್ತನ್ಮಠಂಗಳಲ್ಲಿ ಸ್ವಶಿಷ್ಯರಂ ನೆಲೆಗೊಳಿಸಿ ತಾಂ ವಿದ್ಯಾಶಂಕರನೆಂಬೊಬ್ಬ ಶಿಷ್ಯನಂ ಮಾಡಿಕೊಂಡಿರುತಿರ್ದು ಮುಕ್ತರಾಗಲಾಗಿಯಾ ಮೇಲೆಯುತ್ತರದಿಕ್ಕಿನ ಕೃಷ್ಣಾದೇವೀ ನದೀತೀರದಲ್ಲಿ ಗೃಹಸ್ಥಾಶ್ರಮದಲ್ಲಿರುತಿರ್ದ ಮಾಧವಭಟ್ಟನೆಂಬಾತಂ ದಕ್ಷಿಣದೇಶಕ್ಕೆ ಬಂದು ಕುಂತಳದೇಶದೊಳಗಣ ಪಂಪಾಕ್ಷೇತ್ರದಲ್ಲಿ ನಿಂದು ಭಾಗ್ಯಾಪೇಕ್ಷೆಯಾಗಿ ಶ್ರೀಚಕ್ರಯಂತ್ರ ಪುರಶ್ಚರಣಮಂ ಮಾಡುತ್ತುಮಿರಲಾಗಿ ಅಮ್ಮನವರು ಪ್ರಸನ್ನರಾಗಿ ನಿನಗಿಹಜನ್ಮದಲ್ಲಿ ಭಾಗ್ಯಪ್ರಾಪ್ತಿಯಿಲ್ಲಮುತ್ತರಜನ್ಮದಲ್ಲಿ ಕೊಟ್ಟೇನೆನಲಾಗಿಯಾಮಾತಂ ಮನದೆಕೊಂಡು ಆ ಮಾಧವಭಟ್ಟಂ

ರಾರಾಜಿಸಿದನು. ವ|| ಈ ರೀತಿ ಚೌಡಪ್ಪನು ರಾರಾಜಿಸುತ್ತಿದ್ದನು. ಈ ಕಥಾಸಂದರ್ಭಕ್ಕೆ ಅನುಗುಣವಾಗಿ ವಿದ್ಯಾನಗರದ (ವಿಜಯನಗರದ) ರತ್ನಸಿಂಹಾಸನಕ್ಕೆ ಒಡೆಯರಾದ ಹರಿಹರರಾಯ ಹಾಗೂ ಬುಕ್ಕರಾಯ ಮುಂತಾದ ರಾಯರ ವಂಶಪರಂಪರೆಯ ವಿವರಣೆಯನ್ನು ಸಂಕ್ಷಿಪ್ತವಾಗಿ ಹೇಳುವೆನು; ಅದು ಹೇಗೆಂದರೆ-ಶಿವಾಂಶೀಭೂತರೆನಿಸಿ, ಕಾರಣಪುರುಷರಾಗಿ ಶಂಕರಾಚಾರ್ಯರು ಜನಿಸಿದರು. ಇವರು ಬ್ರಹ್ಮನ ಅಂಶೀಭೂತನಾದ ಮಂಡನಮಿಶ್ರರೆಂಬವರೊಡನೆ ವಾದಮಾಡಿ ಜಯಿಸಿದರು. 'ಅಮರುಕ' ವೆಂಬ ಗ್ರಂಥವನ್ನು ರಚಿಸಿ ಶ್ರೀ ಶಾರದಾಂಬೆಯನ್ನು ಶೃಂಗಪುರದ (ಈಗಿನ ಶೃಂಗೇರಿ) ಪೀಠಕ್ಕೆ ತಂದು ಪ್ರತಿಷ್ಠಾಪಿಸಿದರು; ಶ್ರೀಮತ್ಪರಮಹಂಸ, ಪರಿವ್ರಾಜಕಾಚಾರ್ಯ, ಷಡ್ದರ್ಶನ ಸ್ಥಾಪನಾಚಾರ್ಯರೆಂದೂ ಜಗದ್ಗುರುಗಳೆಂದೂ ಪ್ರಖ್ಯಾತಿ ಹೊಂದಿದರು. ಇವರು ಪಾದಪದ್ಮಾಚಾರ್ಯರು, ತೋಟಕಾಚಾರ್ಯರು, ಹಸ್ತಾಮಲಕಾಚಾರ್ಯರು, ಹಾಗೂ ಸುರೇಶ್ವರಾಚಾರ್ಯರು ಎಂಬುದಾಗಿ ನಾಲ್ವರು ಶಿಷ್ಯರನ್ನು ನಿಯಮಿಸಿಕೊಂಡು ಪೂರ್ವ, ಪಶ್ಚಿಮ, ದಕ್ಷಿಣ ಮಹಾಗೂ ಉತ್ತರದಲ್ಲಿ ಸಮುದ್ರವೇ ಮೇರೆಯಾಗುಳ್ಳ ಪ್ರದೇಶದಲ್ಲಿ ತಮ್ಮ ಹೆಸರಿನ ಗುರುತಿನಲ್ಲಿ ಮಠಗಳನ್ನು ಕಟ್ಟಿಸಿದರು. ಆಯಾಯಾ ಮಠಗಳಲ್ಲಿ ತಮ್ಮ ಶಿಷ್ಯರನ್ನು ನಿಯಮಿಸಿ ತಾವು ವಿದ್ಯಾಶಂಕರರೆಂಬ ಒಬ್ಬ ಶಿಷ್ಯನನ್ನು ಮಾಡಿಕೊಂಡು ಇರುತ್ತಿರಲಾಗಿ ಹಲವು ಕಾಲಾನಂತರ ಮುಕ್ತರಾದರು. ಆಮೇಲೆ ಉತ್ತರ ದಿಕ್ಕಿನ ಕೃಷ್ಣಾನದೀ ತೀರದಲ್ಲಿ ಮಾಧವಭಟ್ಟರೆಂಬವರು ಗೃಹಸ್ಥಧರ್ಮವನ್ನು ಸ್ವೀಕರಿಸಿ ನೆಲೆಸಿದ್ದರು. ಇವರು ದಕ್ಷಿಣ ದೇಶಕ್ಕೆ ಬಂದು, ಕುಂತಳ ದೇಶದಲ್ಲಿರುವ ಪಂಪಾಕ್ಷೇತ್ರದಲ್ಲಿ ಭಾಗ್ಯವನ್ನು ಅಪೇಕ್ಷಿಸಿ ಶ್ರೀ ಚಕ್ರಯಂತ್ರ ಪುರಶ್ಚರಣೆಯನ್ನು ಜಪಿಸುತ್ತಾ ತಪಸ್ಸು ಮಾಡುತ್ತಿದ್ದರು. ಶ್ರೀ ದೇವಿಯು ಪ್ರಸನ್ನಳಾಗಿ "ನಿನಗೆ ಈ ಜನ್ಮದಲ್ಲಿ ಭಾಗ್ಯಪ್ರಾಪ್ತಿ ಇರುವುದಿಲ್ಲ; ಮುಂದಿನ ಜನ್ಮದಲ್ಲಿ ಕೊಡುತ್ತೇನೆ" ಎಂಬುದಾಗಿ ಅಪ್ಪಣೆಯಿತ್ತಳು. ಇದನ್ನ ಮನಸ್ಸಿಗೆ ತೆಗೆದುಕೊಂಡು ಆ

**ಶಂಕರಾಚಾರ್ಯರ ಶಿಷ್ಯರಾದ ವಿದ್ಯಾಶಂಕರರಿಂದೆ ಸಂನ್ಯಾಸಾಶ್ರಮುವನಂಗೀಕರಿಸಿ ವಿದ್ಯಾರಣ್ಯರೆಂದು ಪ್ರಸಿದ್ಧನಾಮಾಂಕಿತರಾಗಿರುತುಮಿರಲಾಗಿ, "ಈ ದೇಶಮಂ ಜೈನರ್ ಕಿರಾತರ್ ಮುಂತಾದವರ್ಕಳಾಕ್ರಮಿಸಿ ತಮ್ಮ ತಮ್ಮ ಇಚ್ಛಾನುಕೂಲಮಿರ್ದ ರೀತಿಯೊಳ್ ನಡೆಕೊಳ್ವರ್, ಈ ಮಂಡಲದೊಳೊಂದು ಪಟ್ಟಣಮಂ ನಿರ್ಮಾಣಂಗೈಸಿ ದುಷ್ಟನಿಗ್ರಹ ಶಿಷ್ಟಪರಿಪಾಲನವಂ ಮಾಡಿ ನಡಕೊಳ್ವಂತು ರಾಯಪಟ್ಟವಂ ಕಟ್ಟುವುದು" ಎಂದು ಅಮ್ಮನವರಿಂ ಸ್ವಪ್ನವಾಗಲಾಗಿ ಆ ಸ್ವಪ್ನಾರ್ಥವಂ ಮನದೊಳಿಟ್ಟು ಕತಿಪಯದಿವಸಂ ವರ್ತಿಸುತ್ತುಮಿರಲಾಗಿಯುತ್ತರದೇಶದಿಂದೆ ಸಹೋದರರಾದ ಹರಿಹರಬುಕ್ಕರೆಂಬ ಬಡಕ್ಷತ್ರಿಯರುಂ ಈ ದಕ್ಷಿಣರಾಜ್ಯಕೈತಂದು ಕುರುಬರಲ್ಲಿ ನಂಟತನವಂ ಮಾಡಿ ಹೆಣ್ಣು ತಂದು ಮದುವೆಯಾಗಿ ಸುಖವಾಸಿಗಳಾಗಿರುತ್ತುಮಿರಲಾಗಿ ಅವರೊಳ್ ಪಿರಿಯನಾದ ಹರಿಹರಗೆ ನೀನುಂ ಬುಕ್ಕನಂ ಸಹ ವಿದ್ಯಾರಣ್ಯರ ಬಳಿಗೆ ಹೋಗಿ ಆಶ್ರಯಿಸಲಾಗಿ ಮಹದೈಶ್ವರ್ಯಂ ಬಂದೀತೆಂದು ಸ್ವಪ್ನವಾಗಲಾಗಿ ಆವೇಲೆ ಆ ಹರಿಹರಬುಕ್ಕರ್ ಹಂಪೆಗೆ ಬಂದು ವಿದ್ಯಾರಣ್ಯರಂ ಕಂಡು ಸಂಧಿಸಿ ಸ್ವಪ್ನಾಭಿಪ್ರಾಯವನುಸಿರಲಾಗಿ ಆಗ ವಿದ್ಯಾರಣ್ಯರ್ ಹಂಪೆಯ ಸ್ಥಳದವರಂ ಕರೆಯಿಸಿ ವಿಚಾರವಂ ಮಾಡಲಾಗಿ ಅವರ್ಪೇಳಿದುದು : ಪೂರ್ವದೊಳ್ ಸೂರ್ಯವಂಶಜನಾದ ತ್ರಿಶಂಕು ಮಹಾರಾಯಂ ಪಂಪಾಕ್ಷೇತ್ರಕ್ಕೆ ಬಂದು ಈ ವಿರೂಪಾಕ್ಷಲಿಂಗಂ ಪ್ರಾದುರ್ಭವಲಿಂಗವೋ ಪ್ರತಿಷ್ಠಾಲಿಂಗವೋ ಯೆಂದು ಕೇಳಿದಲ್ಲಿ ಈ ಲಿಂಗಂ ಜ್ಯೋತಿರ್ಮಯವಾದ ಲಿಂಗಂ, ಈ ಲಿಂಗದ ಮಹಿಮೆಯಂ ಪೇಳ್ವುದಕ್ಕೆ ಬ್ರಹ್ಮದೇವರಿಗಾದರೂ ಅಸಾಧ್ಯಮೆಮ್ಮಪಾಡೇನೆನಲಾಗಿ ಆ ಮಾತಂ ಕೇಳ್ದು ಆ ತ್ರಿಶಂಕು ಮಹಾರಾಯಂ ಪ್ರತಿಷ್ಠಾಲಿಂಗವೋಯೆಂದು ಕೇಳ್ದ ದೋಷನಿವೃತ್ತಿಗೋಸುಗಂ ಕೃಷ್ಣವೇಣೀ**

ಮಾಧವಭಟ್ಟರು ಶಂಕರಾಚಾರ್ಯರ ಶಿಷ್ಯರಾದ ವಿದ್ಯಾಶಂಕರರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ವಿದ್ಯಾರಣ್ಯರೆಂಬುದಾಗಿ ಪ್ರಸಿದ್ಧರಾದರು. ಹೀಗಿರಲಾಗಿ ಒಂದು ದಿನ ಶ್ರೀದೇವಿಯು ಕನಸಿನಲ್ಲಿ ಕಾಣಿಸಿಕೊಂಡು "ಈ ದೇಶವನ್ನು ಜೈನರು, ಬೇಡರು ಮುಂತಾದವರುಗಳು ಆಕ್ರಮಿಸಿ, ತಮ್ಮ ಮನಸ್ಸಿಗೆ ಬಂದ ರೀತಿಯಲ್ಲಿ ವರ್ತಿಸುತ್ತಿದ್ದಾರೆ; ಈ ಮಂಡಲದಲ್ಲಿ ಒಂದು ಪಟ್ಟಣವನ್ನು ನಿರ್ಮಿಸಿ, ದುಷ್ಟನಿಗ್ರಹಶಿಷ್ಟಪರಿಪಾಲನೆ ಮಾಡುವಂತೆ ರಾಯರ ಪಟ್ಟವನ್ನು ಕಟ್ಟಬೇಕು" ಎಂಬುದಾಗಿ ಹೇಳಿದಳು. ಈ ಸ್ವಪ್ನದ ಅರ್ಥವನ್ನು ಮನಸ್ಸಿನಲ್ಲೇ ಇಟ್ಟುಕೊಂಡು ಕೆಲವು ದಿನಗಳನ್ನು ಕಳೆಯಲು, ಉತ್ತರದೇಶದಿಂದ ಬಡವರೂ ಹಾಗೂ ಕ್ಷತ್ರಿಯರೂ ಆದ ಹರಿಹರ ಬುಕ್ಕರೆಂಬ ಸಹೋದರರು ದಕ್ಷಿಣ ರಾಜ್ಯಕ್ಕೆ ಬಂದರು. ಇವರು ಕುರುಬರಲ್ಲಿ ಬಾಂಧವ್ಯ ಬೆಳೆಸಿ, ಹೆಣ್ಣು ತಂದುಕೊಂಡು ಮದುವೆಯಾಗಿ ಸುಖವಾಸಿಗಳಾಗಿರುತ್ತಿದ್ದರು. ಇವರಲ್ಲಿ ಹಿರಿಯವನಾದ ಹರಿಹರನಿಗೆ "ನೀನು ಹಾಗೂ ಬುಕ್ಕನೂ ಸಹ ವಿದ್ಯಾರಣ್ಯರ ಹತ್ತಿರ ಹೋಗಿ, ಅವರನ್ನು ಆಶ್ರಯಿಸಿದರೆ ನಿನಗೆ ಮಹತ್ತರವಾದ ಐಶ್ವರ್ಯ ಲಭಿಸುತ್ತದೆ" ಎಂಬುದಾಗಿ ಕನಸು ಕಂಡಿತು. ಆಮೇಲೆ ಹರಿಹರಬುಕ್ಕರು ಹಂಪೆಗೆ ಬಂದು ವಿದ್ಯಾರಣ್ಯರನ್ನು ಸಂಧಿಸಿ, ತಮಗೆ ಉಂಟಾದ ಕನಸಿನ ವೃತ್ತಾಂತವನ್ನು ನಿವೇದಿಸಿಕೊಳ್ಳಲಾಗಿ-ಆಗ ವಿದ್ಯಾರಣ್ಯರು ಹಂಪೆಯ ಸ್ಥಳದವರನ್ನು ಕರೆಯಿಸಿ ವಿಚಾರವನ್ನು ಮಾಡಲು ಅವರು ಹೇಳಿದ ಅಂಶವು ಹೀಗಿದೆ-ಪೂರ್ವದಲ್ಲಿ ಸೂರ್ಯವಂಶದವನಾದ ತ್ರಿಶಂಕು ಮಹಾರಾಯನು ಪಂಪಾಕ್ಷೇತ್ರಕ್ಕೆ ಬಂದು "ಈ ವಿರೂಪಾಕ್ಷ ಲಿಂಗವು ಉದ್ಭವಲಿಂಗವೋ ಅಥವಾ ಪ್ರತಿಷ್ಠಾಲಿಂಗವೋ" ಎಂದು ಕೇಳಿದನು. "ಈ ಲಿಂಗವು ಜ್ಯೋತಿರ್ಮಯವಾದುದು; ಇದರ ಮಹಿಮೆಯನ್ನು ವರ್ಣಿಸುವುದಕ್ಕೆ ಬ್ರಹ್ಮದೇವರಿಗೂ ಅಸಾಧ್ಯವಿರುವಾಗ ನಮ್ಮ ಪಾಡೇನು" ಎಂಬುದಾಗಿ ಸ್ಥಳದವರು

ನದೀತೀರಮಾರಭ್ಯ ಸೇತುಪರ್ಯಂತಂ ಮೂರುವರೆಕೋಟಿರಾಜ್ಯವನೀ ವಿರೂಪಾಕ್ಷದೇವರ್ಗೆ ಧಾರೆಯನೆರೆದನೆಂದು ಸ್ಥಳದವರ್ಪೇಳಲ್ ಆ ಮಾತಂ ಕೇಳ್ದಾ ವಿದ್ಯಾರಣ್ಯರ್ ಹರಿಹರಬುಕ್ಕರಂ ಕರೆದು ಈ ರಾಜ್ಯಕ್ಕೆಲ್ಲಂ ವಿರೂಪಾಕ್ಷಸ್ವಾಮಿಯೆ ಕರ್ತಂ, ನೀಂ ಆ ದೇವರ ಭಕ್ತರಾಗಿ ವರ್ತಿಸುತ್ತುಂ ಶ್ರೀ ವಿರೂಪಾಕ್ಷನೆಂದೊಪ್ಪವಂ ಹಾಕಿ ನಡೆಕೊಂಡು ಸದ್ಧರ್ಮದಿಂ ರಾಜ್ಯವನಾಳಿಕೊಂಡಿರ್ಪುದೆಂದು ಕಟ್ಟಳೆಯಂ ರಚಿಸಿ ಆ ಹರಿಹರಗೆ ಹರಿಹರರಾಯನೆಂದು ಪೆಸರಿಟ್ಟು ವಿದ್ಯಾನಗರಮೆಂಬ ಪಟ್ಟಣಮಂ ನಿರ್ಮಾಣಂ ಮಾಡಿಸುವ ಕಾಲದಲ್ಲಿಯಾ ಪಟ್ಟಣದ ಕೆಸರ್ಗಲ್ಲಮುಹೂರ್ತ ಕಾಲದಲ್ಲಿ ವಿಧಿವಶದಿಂದೊರ್ವ ದಾಸನೂದಿದ ಶಂಖಧ್ವನಿಯಿಂ ವಿದ್ಯಾರಣ್ಯರ ನಿಯಾಮಕಂಗೈದ ಲಗ್ನಂ ವ್ಯತ್ಯಾಸವಾಗಲಾಗಿ ಈ ಪಟ್ಟಣಂ ಕೆಲವು ವರ್ಷದಮೇಲೆ ತುರುಷ್ಕಾಧೀನವಾದೀತೆಂದು ವಿದ್ಯಾರಣ್ಯಾತ್ಮಕ ಕಾಲಜ್ಞಾನವೆಂದು ಕೆಲವು ಕಾಲಜ್ಞಾನಗ್ರಂಥಮಂ ಬರೆಸಿ, ಆ ವಿದ್ಯಾರಣ್ಯರ್ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೨೫೮ನೆಯ ಸಂವತ್ಸರದಲ್ಲಿ ಆ ವಿದ್ಯಾನಗರೀ ರತ್ನ ಸಿಂಹಾಸನದಲ್ಲಿ ಹರಿಹರರಾಯಂಗೆ ಪಟ್ಟಮಂ ಕಟ್ಟಿ ನಿಲಿಸಿದರ್ ; ಹೀಗಿರಲಾಗಿ ಕೆಲವು ದಿವಸದ ಮೇಲೆ ರೇವಣಸಿದ್ಧನೆಂಬೊಬ್ಬ ಜಂಗಮಸ್ವರೂಪಗಣಾಧೀಶ್ವರಂ ಒಂದು ದಿವ್ಯಲಿಂಗಮಂ ವಿದ್ಯಾರಣ್ಯರ ವಶಕ್ಕೆ ತಂದುಕೊಟ್ಟು ಈ ಲಿಂಗಂ ಚಂದ್ರಮೌಳೀಶ್ವರಂ ಈ ಲಿಂಗಮಂ ನಿತ್ಯಂ ಪೂಜೆ ಗೈವುದೆಂದುಸಿರ್ದಂತರ್ಧಾನನಾಗಿ ಪೋಗಲೊಡನಾ ವಿದ್ಯಾರಣ್ಯರ್ ಶೃಂಗಪುರಕ್ಕೈತಂದು ಶೃಂಗೇರಿ ಮೂಲಸಂಸ್ಥಾನದ ಮಠದಲ್ಲಿ ಆ ಚಂದ್ರಮೌಳೀಶ್ವರನ ಪೂಜೆಯಂ ಮಾಡಿಕೊಂಡಿರ್ದ್ದು ಶಿಷ್ಯಪರಂಪರೆಯಲ್ಲಿಯುಂ ನಡೆಕೊಂಡು ಬಾಹಂತು ಕಟ್ಟಲೆಯಂ ಮಾಡಿಸಿದರ್. ಶೃಂಗಪುರದ ಸಂಸ್ಥಾನದೊಳವರಂತು ವರ್ತಿಸುತ್ತುಮಿರಲಿತ್ತಂ ವಿದ್ಯಾನಗರಿಯುಂ ರಾಯಸಂಸ್ಥಾನವೆಂದು ಜಗತ್ಪ್ರಖ್ಯಾತವಾಯ್ತು. ಆ ರತ್ನಸಿಂಹಾಸನವನಾಳ್ದ ರಾಯರ ವಂಶಪರಂಪರಾವಿವರಣಂ –

ಉತ್ತರಿಸಿದರು ಮತ್ತು ಆ ಮಾತನ್ನು ಕೇಳಿದ ತ್ರಿಶಂಕು ಮಹಾರಾಯನು ತಾನು ಪ್ರತಿಷ್ಠಾಲಿಂಗವೋ ಎಂಬುದಾಗಿ ಕೇಳಿದ ದೋಷನಿವಾರಣೆಗಾಗಿ ಕೃಷ್ಣವೇಣೀ ನದೀ ತೀರದಿಂದ ಸೇತುಪರ್ಯಂತದವರೆಗೆ ಮೂರುವರೆ ಕೋಟಿ ರಾಜ್ಯವನ್ನು ಶ್ರೀ ವಿರೂಪಾಕ್ಷದೇವರಿಗ ಧಾರೆ ಎರೆದನು" ಎಂಬುದಾಗಿ ಸ್ಥಳದವರು ತಿರುಗಿ ಉತ್ತರವಿತ್ತರು. ಆ ಮಾತನ್ನು ಕೇಳಿದ ವಿದ್ಯಾರಣ್ಯರು ಹರಿಹರಬುಕ್ಕರನ್ನು ಕರೆದು "ಈ ರಾಜ್ಯಕ್ಕೆಲ್ಲ ಶ್ರೀ ವಿರೂಪಾಕ್ಷಸ್ವಾಮಿಯೇ ಕರ್ತನು. ನೀವು ಈ ದೇವರ ಭಕ್ತರಾಗಿ ಇರುತ್ತಾ 'ಶ್ರೀ ವಿರೂಪಾಕ್ಷ'ನೆಂಬುದಾಗಿ ಮುದ್ರೆಯನ್ನು ಹಾಕಿ ನಡೆದುಕೊಳ್ಳುತ್ತಾ ಸದ್ಧರ್ಮದಿಂದ ರಾಜ್ಯವನ್ನು ಪಾಲಿಸಿಕೊಂಡು ಬರಬೇಕೆಂದು ನಿಯಮಿಸಿದರು. ಆ ಹರಿಹರನಿಗೆ ಹರಿಹರ ರಾಯನೆಂದು ನಾಮಕರಣ ಮಾಡಿದರು. 'ವಿದ್ಯಾನಗರ' ಎಂಬ ಪಟ್ಟಣವನ್ನು ನಿರ್ಮಿಸಲು, ಪಟ್ಟಣದ ಅಡಿಗಲ್ಲು ಸ್ಥಾಪಿಸುವ ಮುಹೂರ್ತಕಾಲದಲ್ಲಿ, ವಿಧಿವಶದಿಂದ ಒಬ್ಬ ದಾಸನು ಶಂಖವನ್ನು ಊದಿದ್ದರಿಂದ ವಿದ್ಯಾರಣ್ಯರು ಗೊತ್ತು ಮಾಡಿದ್ದ ಸುಮುಹೂರ್ತ ಕಾಲವು ವ್ಯತ್ಯಾಸವಾಯಿತು. ಈ ಕಾರಣ "ಕೆಲವು ವರ್ಷಗಳ ಅನಂತರ ಈ ಪಟ್ಟಣವು ತುರುಕರ ಅಧೀನವಾಗುವುದೆಂದು" ತಿಳಿಸುವ ಕಾಲಜ್ಞಾನ ಗ್ರಂಥವನ್ನು ರಚಿಸಿದರು, ಸ್ವಸ್ತಿ ಶ್ರೀ ಶಾ. ಶ. ೧೨೫೮ರಲ್ಲಿ ಹರಿಹರರಾಯನಿಗೆ ವಿದ್ಯಾನಗರೀ ರತ್ನಸಿಂಹಾಸನದಲ್ಲಿ ಪಟ್ಟವನ್ನು ಕಟ್ಟಿಸಿ, ರಾಜ್ಯವನ್ನು ಸ್ಥಾಪಿಸಿದರು. ಹೀಗೆ ಇರುತ್ತಿರಲು ಗಣಾಧೀಶ್ವರನೂ, ಜಂಗಮ ಸ್ವರೂಪನೂ ಆದ ರೇವಣ್ಣಸಿದ್ಧನೆಂಬುವನು ಒಂದು ದಿವ್ಯಲಿಂಗವನ್ನು ವಿದ್ಯಾರಣ್ಯರ ವಶಕ್ಕೆ ತಂದುಕೊಟ್ಟು "ಇದು ಚಂದ್ರಮೌಳೀಶ್ವರ ಲಿಂಗವು; ಇದನ್ನು ನಿತ್ಯವೂ ಪೂಜೆ

ಶ್ಲೋ॥ ಹಬುಹೋವಿಬುದೇರಾವಿದೇವಿಮಾರಾವಿಸಂಸ್ಥಿತಾಃ ।
ತ್ರಯೋದಶ ಮಹೀಪಾಲಾ ರತ್ನಸಿಂಹಾಸನಾಧಿಪಾಃ ॥
ದ್ವಾತ್ರಿಂಶದುತ್ತರಾನೇತೇ ದ್ವಿಶತಾಬ್ದಾನ್ ಕ್ಷಿತೌಸ್ಥಿತಾಃ ॥

ವ॥ ತದನಂತರ -

ಶ್ಲೋ॥ ಪ್ರೌಢೋ ದ್ವಾದಶ ವರ್ಷಾಣಿ ದಶ ವೀರನೃಸಿಂಹರಾಟ್
ತತಸ್ಸಾಳ್ವನೃಸಿಂಹಾಖ್ಯೋ ದ್ವಾದಶ ತ್ರಿಸ್ತತೋಽಚ್ಯುತಃ ॥
ಚತ್ವಾರಿಂಶತ್ತತಃ ಕೃಷ್ಣಸ್ತತೋ ದ್ವೇ ಚ ಸದಾಶಿವಃ
ಚತುರ್ವಿಂಶತಿ ವರ್ಷಾಣಿ ರಾಮರಾಜೋ ಮಹೀಪತಿಃ
ಏತೇ ಸಪ್ತ ಮಹೀಪಾಲಾಃ ರತ್ನಸಿಂಹಾಸನೇಶ್ವರಾಃ ॥

ವ॥ ಈ ರಾಮರಾಯರ್ ರಾಜ್ಯವಾಳುತ್ತಿದ್ದ ಕಾಲದಲ್ಲಿ ಶಾಲಿವಾಹನ ಶಕವರ್ಷಂ ೧೪೮೭ನೆಯ ರಕ್ತಾಕ್ಷಿ ಸಂವತ್ಸರದ ಮಾಘ ಬಹುಳದಲ್ಲಿ ಈ ರಾಮರಾಯಂ ವಿಜಾಪುರಂ ಭಾಗಾನಗರಂ ಆಮದಾನಗರಂ ಈ ಮೂರು (ರಾಜ್ಯಗಳ್) ಪಾದುಶಾಹರೊಂದಾಗಿ ಮೋಸದ ಮೇಲೆ ಘಾತವಂ ಮಾಡಲಾಗಿ ವಿದ್ಯಾನಗರಿ ವಿಸ್ಖಲಿತವಾಗಿ ಹೋಯಿತು. ಆಮೇಲೆ ಸಂಕ್ಷೇಪದಲ್ಲಿ ಆಳಿದವರ ವಿವರಂ ಈ ರಾಮರಾಯರ ತರುವಾಯಂ ಅಲ್ಪಭೂಮಿ ಸ್ವಲ್ಪ ಗಜಾಶ್ವಪದಾತಿವೆರಸು ವೆಂಕಟಪತಿ ರಾಯಂ ವರ್ಷಂ ೩ ಶ್ರೀರಂಗರಾಯಂ ವರ್ಷಂ ೫ ಆಮೇಲೆ ಅಲ್ಲಿ ನಿಸ್ತರಿಸಲಾರದೆ ಆ ರಾಮರಾಯನ ಮಕ್ಕಳ್ ವೆಂಕಟಪತಿರಾಯಂ ಶ್ರೀರಂಗರಾಯಂ ಸಹ ಪೆನುಗೊಂಡೆಯಲ್ಲಿ ನಿಂದು ಆಳಿದುದು ಇದೆ ಶ್ರೀರಂಗರಾಯಂ ವರ್ಷಂ ೫ ವೆಂಕಟಪತಿರಾಯಂ ವರ್ಷಂ ೭ ರಾಮದೇವರಾಯಂ ವರ್ಷಂ ೬ ಮುದ್ದುವೆಂಕಟಪತಿರಾಯಂ ವರ್ಷಂ ೫ ಶ್ರೀರಂಗರಾಯಂ ವರ್ಷಂ ೨೭ ಈ ಪೀಳಿಗೆ ಇಲ್ಲಿಗೆ ಸಮಾಪ್ತಂ

ಆನೆಗೊಂದಿಯಲ್ಲಿ ನಿಂದು ಆಳಿದವರ್ ಕೃಷ್ಣರಾಯನ ಅಳಿಯ ರಾಮರಾಯನ ದಾಯಾದಿಗಳ್ ಮರಿತಿಮ್ಮರಾಯನ ಮಕ್ಕಳ್ ರಾಯಲ್ಲಯ್ಯರಾಯಂ ಈತನ ಮಕ್ಕಳ್ ಪೆದ್ದವೆಂಕಟಪತಿರಾಯಂ

ಮಾಡತಕ್ಕುದು" ಎಂಬುದಾಗಿ ಹೇಳಿ ಅಂತರ್ಧಾನನಾದನು. ಆಗ ವಿದ್ಯಾರಣ್ಯರು ಶೃಂಗಪುರಕ್ಕೆ ಬಂದು ಶೃಂಗೇರಿ ಮೂಲಸಂಸ್ಥಾನದ ಮಠದಲ್ಲಿ ಚಂದ್ರಮೌಳೀಶ್ವರನ ಪೂಜೆಯನ್ನು ಮಾಡಿಕೊಂಡಿದ್ದು, ಇದನ್ನು ಶಿಷ್ಯರ ಪರಂಪರೆಯಲ್ಲಿ ಮುಂದುವರಿದು ನಡೆದುಕೊಂಡು ಬರುವಂತೆ ಕಟ್ಟಳೆಯನ್ನು ಮಾಡಿಸಿದರು. ತಾವೂ ಶೃಂಗೇರಿಯಲ್ಲಿಯೇ ನೆಲೆಸಿದರು. ಇತ್ತ ವಿದ್ಯಾನಗರವು ರಾಯರ ಸಂಸ್ಥಾನವೆಂದು ಜಗತ್ತಿಗೆ ಪ್ರಖ್ಯಾತವಾಯಿತು. ಆ ರತ್ನ ಸಿಂಹಾಸನವನ್ನು ಆಳಿದ ರಾಯರ ವಂಶಪರಂಪರೆಯ ವಿವರಣೆ ಶ್ಲೋ॥ ಹಬುಹೋವಿಬುದೇರಾವಿದೇವಿಮಾರಾವಿ ಎಂಬ ಸಂಕೇತ ಅಥವಾ ಸಂಜ್ಞೆಯುಳ್ಳ ಹದಿಮೂರು ರಾಜರುಗಳು ರತ್ನಸಿಂಹಾಸನದ ಒಡೆಯರು. ೨೩೨ ವರ್ಷಗಳವರೆಗೆ ಇವರು ಭೂಮಿಯ ಆಡಳಿತವನ್ನು ನಡೆಸಿದರು. ವ॥ ಅನಂತರ, ಶ್ಲೋ॥ ಪ್ರೌಢರಾಯನು ೧೨ ವರ್ಷ, ವೀರ ನರಸಿಂಹರಾಯನು ೧೦ ವರ್ಷ, ಆಮೇಲೆ ಸಾಳುವನರಸಿಂಹ ನೆಂಬವನು ೧೨ ವರ್ಷ, ಆಮೇಲೆ ಅಚ್ಯುತನು ೩ ವರ್ಷ, ಕೃಷ್ಣನು ೪೦ ವರ್ಷ, ರಾಮರಾಜನು ೨೪ ವರ್ಷ-ಈ ಏಳು ಮಂದಿ ರಾಜರು ರತ್ನಸಿಂಹಾಸನಾಧೀಶ್ವರರು. ವ॥ ಈ ರಾಮರಾಯರು ರಾಜ್ಯವಾಳುತ್ತಿದ್ದ ಕಾಲದಲ್ಲಿ ಶಾ. ಶ. ವರ್ಷ ೧೪೮೭ನೆಯ ರಕ್ತಾಕ್ಷಿ ಸಂವತ್ಸರದ ಮಾಘ ಬಹುಳದಲ್ಲಿ, ಈ ರಾಮರಾಯರನ್ನು ಬಿಜಾಪುರ, ಭಾಗಾನಗರ

**ಚಿಕ್ಕವೆಂಕಟಪತಿರಾಯಂ ಇವರ ಮಗಂ ರಾಮಪ್ಪರಾಯಂ ಇದು ವಿದಾನಗರೀ ರತ್ನಸಿಂಹಾಸನಾಧೀಶ್ವರರಾದ ಹರಿಹರಬುಕ್ಕಾದಿರಾಯರ ವಂಶಪರಂಪರಾವಿವರಣಂ**

**ಇನ್ನು ಪ್ರಕೃತ ಕಥಾಸಂದರ್ಭಕ್ಕೆ ಸಂಗತಿಯೆಂತೆಂದೊಡೆ ಮುನ್ನೊರೆದ ಪಳ್ಳಿವಯಲ ಬಸವಪ್ಪನ ಪುತ್ರನಾದ ಚೌಡಪಂ ಮುನ್ನುಸಿರ್ದಂತು ಭುಜಬಲಪರಾಕ್ರಮದಿಂ ವರ್ತಿಸುತ್ತು ಮಿರಲಾ ಕಾಲದೊಳ್**

**ಕ|| ಇಂತೆಸೆವ ಚೌಡಪ್ಪನ ವೃ**
**ತ್ತಾಂತಂ ನಾಲ್ದೆಸೆಗೆ ಪರ್ಬೆ ವಿದ್ಯಾನಗರೀ**
**ಕಾಂತಾಚ್ಯುತರಾಯಂ ಗುಣ**
**ವಂತನ ಸೂಯಕರ ಮುಖದಿ ಕೇಳ್ದೀಕಥೆಯಂ ೫೪**

**ಪೊಡವಿಗಧೀಶರ್ ಪಿಸುಣರ**
**ನುಡಿಯಂ ಕೇಳ್ದರ್ಥದಾಸೆಯಿಂದುತ್ತಮರಂ**
**ಕಿಡಿಪುದಮಾರ್ಗಂ ಸಂತಸ**
**ವಡುವುದೆ ಸನ್ಮಾರ್ಗವೆಂದು ಬಗೆದಿಂತೆಂದಂ ೫೫**

ಮತ್ತು ಅಹಮದ್‌ನಗರದ ರಾಜ್ಯಗಳ ಬಾದಷಹರು ಒಟ್ಟುಗೂಡಿ ಮೋಸದಿಂದ ಹತ್ಯೆ ಮಾಡಿದ್ದರಿಂದ ವಿಜಯನಗರವು ತಪ್ಪಿಹೋಯಿತು (ಪತನಗೊಂಡಿತು). ಆಮೇಲೆ ಸಂಕ್ಷಿಪ್ತವಾಗಿ ಆಳಿದವರ ವಿವರ ಈ ರೀತಿ ಇದೆ. ಈ ರಾಮರಾಯರ ತರುವಾಯ ಅಲ್ಪವಾದ ಭೂಮಿ, ಆನೆ, ಕುದುರೆ ಮತ್ತು ಕಾಲಾಳುಗಳನ್ನು ಹೊಂದಿ ವೆಂಕಟಪತಿರಾಯನು ೩ ವರ್ಷ ಆಳಿದನು. ಶ್ರೀರಂಗರಾಯನು ೫ ವರ್ಷ, ಆಮೇಲೆ ಅಲ್ಲಿ ನಿಲ್ಲಲಾರದೆ ರಾಮರಾಯನು ಮಕ್ಕಳು ವೆಂಕಟಪತಿರಾಯ ಶ್ರೀರಂಗರಾಯ ಸಹ ಪೆನುಗೊಂಡೆಯಲ್ಲಿ ನಿಂತು ಆಳಿದರು, ಇದೇ ಶ್ರೀರಂಗರಾಯನಿಗೆ ೫ ವರ್ಷ, ವೆಂಕಟಪತಿರಾಯ ೭ ವರ್ಷ, ರಾಮದೇವರಾಯ ೬ ವರ್ಷ, ಮುದ್ದುವೆಂಕಟಪತಿರಾಯ ೫ ವರ್ಷ, ಶ್ರೀರಂಗರಾಯ ೨೭ ವರ್ಷ ಈ ಪೀಳಿಗೆ ಅಥವಾ ಪರಂಪರೆಯು ಇಲ್ಲಿಗೆ ಕೊನೆಗೊಂಡಿತು. ಆನೆಗೊಂದಿಯಲ್ಲಿ ನಿಂತು ಆಳಿದವರು ಕೃಷ್ಣರಾಯನ ಅಳಿಯನೂ, ರಾಮರಾಯನ ದಾಯಾದಿಗಳೂ ಆದ ಮರಿತಿಮ್ಮರಾಯನ ಮಕ್ಕಳು ರಾಯಲ್ಲಯ್ಯರಾಯ, ಈತನ ಮಕ್ಕಳು ಪೆದ್ದವೆಂಕಟಪತಿರಾಯ-ಚಿಕ್ಕವೆಂಕಟಪತಿರಾಯ, ಇವರ ಮಗ ರಾಮಪ್ಪರಾಯ ಹೀಗೆ ಇರುತ್ತದೆ. ಇದು ವಿಜಯನಗರದ ರತ್ನಸಿಂಹಾಸನಕ್ಕೆ ಒಡೆಯರಾದ ಹರಿಹರ ಬುಕ್ಕಾದಿರಾಯರುಗಳ ವಂಶಪರಂಪರೆಯ ವಿವರಣೆ-ಇನ್ನು ಪ್ರಕೃತ ಈ ಕಥಾ ಸಂದರ್ಭದಲ್ಲಿ ಸಂಗತಿ ಏನಾಯಿತೆಂದರೆ, ಮುಂಚೆ ಹೇಳಿದಂತೆ ಹಳ್ಳಿಬಯಲ ಬಸವಪ್ಪನ ಪುತ್ರನಾದ ಚೌಡಪ್ಪನು ಹಿಂದೆಯೇ ವಿವರಿಸಿದಂತೆ ಭುಜಬಲ ಪರಾಕ್ರಮದಿಂದ ವರ್ತಿಸುತ್ತಾ ಇರುವ ಕಾಲದಲ್ಲಿ ೫೪. ಹೀಗೆ ಮೆರೆಯುತ್ತಿದ್ದ ಚೌಡಪ್ಪನ ವೃತ್ತಾಂತವು ನಾಲ್ಕು ದಿಕ್ಕಿಗೆ ಹಬ್ಬಿದಾಗ ವಿದ್ಯಾನಗರದ ಒಡೆಯನೂ ಹಾಗೂ ಗುಣವಂತನೂ ಆದ ಅಚ್ಯುತರಾಯನು ಈ ಕಥೆಯನ್ನು ಅಸೂಯಾಪರರ ಬಾಯಿಯಿಂದ ಕೇಳಿದನು. ೫೫. ಭೂಮಿಗೆ ಒಡೆಯರಾದವರು ಚಾಡಿಕೋರರ ಮಾತನ್ನು ಕೇಳಿ ಹಣದಾಸೆಯಿಂದ ಉತ್ತಮರನ್ನು ಕೆಡಿಸುವುದು ಸರಿಯಲ್ಲ;

ವII ಎಮಗೆ ತುರುಷ್ಕರುಂ ಶಬರರುಂ ಬಲವದ್ದ್ವಿಷರೆಂದೆನಿಪ್ಪರೀ ಸಮಯದೊಳಿಂತು ವರ್ತಿಪ ಪರಾಕ್ರಮಶಾಲಿಗಳಪ್ಪ ಶರ್ವಗಂ ಮಮತೆಯ ಭಕ್ತರಪ್ಪ ದೆಸೆವಂತರೆನಿಪ್ಪರು ಭಾಗಧೇಯರಪ್ಪ ಮಲಿನವೃತ್ತರಪ್ಪಿವರನಾದರದಿಂ ಬಸಗೈದನಂತರಂ

ಕII ಇವರ್ಗಳ ಮುಖದಿಂ ಮಾರ್ಮಲೆ
ತವರ್ಗಳನಂಕದೊಳೆ ನಿಗ್ರಹಂಗೈಸಿ ಮಹೋ
ತ್ಸವದಿಂದೆಲ್ಲರ್ ಪೊಗಳ್ವಂ
ತವನೀಮಂಡಲವನಾಳ್ವುದಿಂತಿದು ಸುಮತಂ ೫೬

ವII ಇಂತೆಂದು ನಿಶ್ಚಯಂಗೈದನಂತರಂ ಸ್ವಸ್ತಿ ಶ್ರೀ ಸಮಸ್ತ ಭುವನಾಶ್ರಯ ಪೃಥ್ವೀವಲ್ಲಭ ಶ್ರೀಮನ್ಮಹಾರಾಜಾಧಿರಾಜ ಪರಮೇಶ್ವರಭಕ್ತ ಪರಮ ಭಟ್ಟಾರಕ ಸತ್ಯಾಶ್ರಯ ಪದವಾಕ್ಯ ಪ್ರಮಾಣ ಪಾರಾವಾರಪಾರೀಣ ಶ್ರೀಮನ್ಮಹಾಮಂಡಲೇಶ್ವರ ಪ್ರತ್ಯರ್ಥಿ ರಾಜವಿಭಾಡ ಶ್ರೀ ವಿರೂಪಾಕ್ಷ ಪಾದಪದ್ಮಾರಾಧಕ ಶ್ರೀ ವೀರಪ್ರತಾಪ ದಕ್ಷಿಣಸಮುದ್ರಾದಿ ನರ್ಮದಾನದ್ಯಂತ ಭೂಮಂಡಲೈಕಚ್ಛತ್ರಾಧಿಪ ಸಕಲವರ್ಣಾಶ್ರಮಾಚಾರಧರ್ಮ ಪ್ರತಿಪಾಲಕ ಶ್ರೀ ವಿದ್ಯಾನಗರರಾಜಧಾನೀರತ್ನಸಿಂಹಾಸನಾಧೀಶ್ವರನಪ್ಪ ಕೃಷ್ಣರಾಯಂ ನಿಜಾಪ್ತಸಚಿವ ನಿಯೋಗಿಗಳೊಡನೀ ವೃತ್ತಾಂತಮಂ ಬಿತ್ತರಿಸಿ ಮಂತ್ರಾಲೋಚನೆಯಂ ರಚಿಸಿ ಸ್ವಮನೋಭಿಪ್ರಾಯಮನುಸಿರ್ದು ರಾಯಸಮಂ ಬರೆಸಿಯುಡುಗೊರೆವೆರಸು ತದುಚಿತನಿಯೋಗಿ ಜನರಂ ಪಳ್ಳಿವಯಲ್ಗೆ ಕಳುಪಿ ತುರಗಾಂದೋಳಿಕಾರೋಹಣಂಗೈಸಿ ಬಸವಪಾತ್ಮಜನಂ ಕರೆಸಿಯುಲುಪೆ ಪಡಿ ಬಿಡಾರಂಗಳಂ ಕೊಡಿಸಿಯುತ್ಸವಂಬಡಿಸಿ ಅನಂತರವೊಂದು ಸಮಯದೊಳ್ ಪರಿಮಿತಜನರ್ವೆರಸೋಲಗವಿತ್ತು ಕುಳ್ಳಿರ್ದು ಚೌಡಪ ಭದ್ರಪರಂ ಸಮೀಪಕ್ಕೆ ಬರಿಸಿಯವರಿತ್ತು ಪಹಾರಾರ್ಥಂಗಳಂ ಕೈಕೊಂಡುಚಿತಾಸನದೊಳ್ ಕುಳ್ಳಿರಲ್ವೇಳ್ದು ಯೋಗಕ್ಷೇಮಂಗಳಂ ಬೆಸಗೊಂಡೊಡನೆ ನಸುನಗುತ್ತುಂ ನಿಜರಾಜ್ಯಭಾರವಿಚಾರ ರಾಜಸ ಪ್ರಕಟೀಕರಣಾರ್ಥಮಾ ಪ್ರಸ್ತಾವದೊಳ್

ಅದನ್ನು ಮೆಚ್ಚಿ ಸಂತೋಷಪಡುವುದು ಸನ್ಮಾರ್ಗ ಎಂದು ಅಚ್ಯುತರಾಯನು ಆಲೋಚಿಸಿ ಹೀಗೆಂದನು. ವII ನಮಗೆ ತುರುಕರು ಮತ್ತು ಬೇಡರು ದೊಡ್ಡ ಶತ್ರುಗಳಾಗಿದ್ದಾರೆ. ಈ ಸಮಯದಲ್ಲಿ ಪರಾಕ್ರಮಶಾಲಿಗಳಾದ, ಶಿವಭಕ್ತರಾದ, ಅದೃಷ್ಟವಂತರಾದ, ಭಾಗ್ಯಶಾಲಿ ಗಳೂ, ನಿರ್ಮಲಪವಿತ್ರರೂ ಆದವರನ್ನು ಪ್ರೀತಿ ಆದರದಿಂದ ವಶಮಾಡಿಕೊಳ್ಳಬೇಕು. ೫೬. ಪ್ರಬಲ ವಿರೋಧಿಗಳಾದ, ಸೊಕ್ಕಿದ ಆ ತುರುಕರನ್ನೂ ಬೇಡರನ್ನೂ ಇವರ ಮೂಲಕ ಯುದ್ಧದಲ್ಲಿ ನಾಶಮಾಡಿ ಎಲ್ಲರೂ ಹೊಗಳುವ ರೀತಿಯಲ್ಲಿ ಅತ್ಯಾನಂದದಿಂದ ಈ ಭೂಮಂಡಲವನ್ನು ಆಳುವುದು ಒಳ್ಳೆಯದು. ವII ಈ ರೀತಿಯಾಗಿ ನಿಶ್ಚಯವನ್ನು ಹೊಂದಿದ ನಂತರ ಸ್ವಸ್ತಿಶ್ರೀ[೧] ಸಮಸ್ತಭುವನಾಶ್ರಯ ಪೃಥ್ವೀವಲ್ಲಭನೂ, ಶ್ರೀಮನ್ಮಹಾ ರಾಜಾಧಿರಾಜ ರಾಜಪರಮೇಶ್ವರ ಭಕ್ತನೂ, ಪರಮಭಟ್ಟಾರಕನೂ, ಸತ್ಯಾಶ್ರಯನೂ, ಪದವಾಕ್ಯ ಪ್ರಮಾಣಪಾರಾವಾರ ಪಾರೀಣನೂ ಶ್ರೀಮನ್ಮಹಾಮಂಡಲೇಶ್ವರನೂ, ಪ್ರತ್ಯರ್ಥಿ ರಾಜವಿಭಾಡನೂ, ಶ್ರೀ ವಿರೂಪಾಕ್ಷ ಪಾದಪದ್ಮಾರಾಧಕನೂ, ಶ್ರೀವೀರಪ್ರತಾಪನೂ, ದಕ್ಷಿಣಸಮುದ್ರವೇ ಮೇರೆಯಾಗಿ ನರ್ಮದಾ ನದಿಯವರೆಗೂ ಭೂಮಂಡಲಕ್ಕೆ ಏಕಚಕ್ರಾಧಿಪನೂ, ಸಕಲ ವರ್ಣಾಶ್ರಮಗಳಿಗೂ ಹಾಗೂ ಧರ್ಮಗಳಿಗೂ ಪ್ರತಿಪಾಲಕನೂ,

೧ ಇವುಗಳೆಲ್ಲವೂ ವಿಜಯನಗರದ ಅರಸರ ಬಿರುದುಬಾವಲಿಗಳು.

ಕಂ॥ ವರಚೌಡಪ ಭದ್ರೇಂದ್ರರ
ಸಿರಮೊಗಮಂ ನೋಡಿ ಬಡವರಾಗಿಹ ನಿಮಗೀ
ಪರಿಯತಿಶಯಸೌಭಾಗ್ಯಂ
ದೊರಕಿದುದೆಂತೆಂದು ನೃಪವರಂ ಬೆಸಗೊಂಡಂ ೪೭

ಒದವಿದ ಬಹುವಿಧನಿಧಿ ಸಾ
ರ್ದುದು ಗಡ ನಿಮಗೆಂದು ಬಹುಮುಖಂಗಳೊಳೀಮಾ
ತುದಿಸಿಹುದಾ ವೃತ್ತಾಂತದ
ಹದನೇನುಸಿರೆಂದು ಕೃಷ್ಣರಾಯಂ ಕೇಳ್ದಂ ೪೮

ಭೂಪರ್ಗೆ ಸಲ್ವ ಬಹುನಿ
ಕ್ಷೇಪವನಧಿಕಾರಿಗಳ್ಗಮರುಪದೆ ಶೌರ್ಯ
ವ್ಯಾಪಾರದಿನದನೀಳ್ದತಿ
ಗೋಪನಮಪ್ಪಂತು ಬೈತುಕೊಂಡಿರಿ ಗಡ ದಲ್ ೪೯

ಇಂತಪ್ಪ ಕಜ್ಜಮಂ ಭೂ
ಕಾಂತರ ಭಯಮಿಲ್ಲದೆಸಗಿ ಸಾಧುಗಳೊಲ್ ನಿ
ಶ್ಚಿಂತೆಯೊಳೆ ಕೆಮ್ಮನಿರ್ಪಿರ
ದಂ ತಂದಿತ್ತುಳುಹಿಕೊಂಬುದೊಳ್ಳಿತು ಜಸಮಂ ೫೦

ವಿಜಯನಗರದ ರತ್ನಸಿಂಹಾಸನಕ್ಕೆ ಒಡೆಯನೂ ಆದ ಕೃಷ್ಣರಾಯನು ತನ್ನ ಆಪ್ತರಾದ ಮಂತ್ರಿ ಹಾಗೂ ನಿಯೋಗಿಗಳೊಡನೆ ಈ ವೃತ್ತಾಂತವನ್ನು ವಿವರಿಸಿದನು. ಮಂತ್ರಾಲೋಚನೆಯನ್ನು ಕೈಗೊಂಡು, ತನ್ನ ಮನೋಭಿಪ್ರಾಯಗಳನ್ನು ತಿಳಿಸುತ್ತಾ ರಾಯಸವನ್ನು ಬರೆಸಿ, ಉಡುಗೊರೆ ಸಹಿತ ಉಚಿತ ನಿಯೋಗಿಗಳನ್ನು ಹಳ್ಳಿಯ ಬಯಲಿಗೆ ಕಳುಹಿಸಿದನು; ಬಸಪ್ಪನ ಮಗನನ್ನು ಕರೆತರಲು ರಥ-ಕುದುರೆಗಳನ್ನು ಕಳುಹಿಸಿದನು. ಹೀಗೆ ಹೇಳಿ ಕಳುಹಿಸಿದ ಮೇರೆಗೆ ಚೌಡಪ್ಪನು ವಿಜಯನಗರದ ರಾಜಧಾನಿಗೆ ಬಂದನು. ರಾಯನು ಆತನಿಗೆ ಉಚಿತ ಬಿಡಾರಗಳನ್ನು ಏರ್ಪಡಿಸಿ ಸಂತೋಷಪಡಿಸಿದನು. ಅನಂತರದಲ್ಲಿ ಒಂದು ಸಮಯದಲ್ಲಿ ಪರಿಮಿತ ಜನರೊಡನೆ ಅರಮನೆಯಲ್ಲಿ ಚೌಡಪ್ಪ-ಭದ್ರಪ್ಪರನ್ನು ಸಮೀಪಕ್ಕೆ ಬರಮಾಡಿಕೊಂಡು, ಅವರು ಕೊಟ್ಟ ಕಾಣಿಕೆಗಳನ್ನು ಕೈಗೊಂಡು, ಅವರಿಗೆ ಉಚಿತವಾದ ಆಸನವಿತ್ತು ನಗುನಗುತ್ತಾ, ಯೋಗಕ್ಷೇಮಗಳನ್ನು ಕೇಳುತ್ತಾ, ತನ್ನ ರಾಜ್ಯಭಾರದ ವಿಚಾರಗಳನ್ನು ತಿಳಿಸುವುದಕ್ಕಾಗಿ ತನ್ನ ಮನೋಭಿಪ್ರಾಯವನ್ನು ಪ್ರಕಟಪಡಿಸುವ ಪ್ರಸ್ತಾಪದಲ್ಲಿ ೪೭. ಕೃಷ್ಣರಾಯನು ಚೌಡಪ್ಪ ಮತ್ತು ಭದ್ರಪ್ಪ ಇವರ ಮುಖವನ್ನು ನೋಡಿ "ಬಡವರಾಗಿದ್ದ ನಿಮಗೆ ಈ ರೀತಿ ಹೆಚ್ಚಿನ ಸೌಭಾಗ್ಯ ಹೇಗೆ ದೊರೆಯಿತು?" ಎಂದು ಪ್ರಶ್ನಿಸಿದನು. ೪೮. ನಿಮಗೆ ಅನೇಕ ವಿಧವಾದ ನಿಧಿ ನಿಕ್ಷೇಪಗಳು ಸಿಕ್ಕಿವೆ ಎಂಬುದಾಗಿ ಅನೇಕರ ಬಾಯಲ್ಲಿ ಈ ಮಾತು ಹುಟ್ಟಿವೆ. ಆ ವೃತ್ತಾಂತದ ನಿಜಾಂಶವೇನು? ೪೯. ಅರಸರಿಗೆ ಸಲ್ಲಬೇಕಾದ ನಿಕ್ಷೇಪವನ್ನು ಅಧಿಕಾರಿಗಳಿಗೂ ತಿಳಿಸದೆ ಬಲಾತ್ಕಾರದಿದ ತೆಗೆದುಕೊಂಡು ಅತ್ಯಂತ ಗುಟ್ಟಾಗಿ ಅಡಗಿಸಿಟ್ಟಿದ್ದೀರಲ್ಲವೇ? ೫೦. ಇಂತಹ ಕಾರ್ಯವನ್ನು ಅರಸರ ಭಯವಿಲ್ಲದೆ ಜೋಡಿ ಸಾಧುಗಳ ಹಾಗೆ ನಿಶ್ಚಿಂತರಾಗಿದ್ದುಕೊಂಡು ಸುಮ್ಮನಿದ್ದೀರಿ. ಅದನ್ನು ತಂದೊಪ್ಪಿಸಿ, ನಿಮ್ಮ

ವ।। ಇಂತೆಂದು ಬೆಸಗೊಂಡ ಕೃಷ್ಣರಾಯನ ವಾಕ್ಯಂಗಳಂ ಚೌಡಪಭದ್ರಪರ್ ಕೇಳ್ದು ತಾಂ ಪೂರ್ವದಾರಭ್ಯ ಕೃಷಿವ್ಯಾಪಾರೋಪಜೀವಿಗಳಾಗಿ ಬಡವರಾಗಿರ್ದುದನಂತರದೊಳ್ ಕಂಡ ಸ್ವಪ್ನಾಭಿಪ್ರಾಯಮಂ ಕಪಿಲಗೋಚರಿತ್ರಮಂ ತದನಂತರದೊಳ್ ಶ್ರೀಮತ್ಕೆಳದಿಪುರೀ ರಾಮೇಶ್ವರಲಿಂಗಂ ಪ್ರಸನ್ನಮಾದುದಂ ತತ್ಕೃಪಾಕಟಾಕ್ಷಮೂಲದಿಂದಿತ್ತಲ್ ತಾಂ ಬಲ್ಲಿದರಾದ ವೃತ್ತಾಂತಮೆಲ್ಲಮಂ ಬಿತ್ತರಿಸಲ್ ಕೇಳ್ದು ಚೋದ್ಯಂಬಟ್ಟವರ ಭದ್ರಾಕಾರ ಪ್ರಸನ್ನಮುಖಮಂಡಲ ತೇಜೋವಾಕ್ಪಟುತ್ವಂಗಳು ಮನೆರ್ದೆಗೊಂಡು ಸಂತಸಂದಳೆದಿವರ್ ಶಿವಾಂಶೀಭೂತರಪ್ಪ ಕಾರಣಪುರುಷರಹುದೆಂದು ನಿಶ್ಚಯಂಗೈದು ತನ್ನೊಳಿಂತೆಂದಂ

ಕಂ।। ಖಳರುಕ್ತಿಮೂಲದಿಂ ದೆಸೆ
ವಳರಹ ಧನಿಕರನಸೂಯೆಯಿಂ ನೋಯಿಸದು
ಜ್ವಳಘನಕಾರ್ಯಂಗಳನವ
ರ್ಗಳ ಮುಖದಿಂ ಕೊಂಡು ಪೊರೆವುದರಸರ್ಗುಚಿತಂ ೬೧

ವ।। ಇಂತೆಂದು ಬಗೆದಾ ಚೌಡಪಭದ್ರಪರಂ ಹತ್ತೆ ಕರೆದು ನೀಂ ಶಿವಾಂಶೀಭೂತರಪ್ಪ ಕಾರಣಪುರುಷರಹುದೆಮ್ಮನೀ ಸಮಯದೊಳವಿದ್ಧಕರ್ಣರುಂ ಶಬರರುಂ ಮತ್ತಂ ಕೆಲಂಬರ್ ತುಂಡುಮನ್ನೆಯರ್ಕಳುಂ ಕಂಡುನಡೆಯದೆ ಬಲವದ್ವಿರೋಧಿಗಳಾಗಿ ಕ್ಷುದ್ರೋಪದ್ರವಂಗಳನೆಸಗುತಿರ್ಪರ್ ಆವುದರಲ್ಲಿಯುಂ ನೀವೆಮ್ಮ ಕಜ್ಜಂಗಳಿಗನುಕೂಲಿಗಳಾಗಿ ಸಮೀಪದೊಳಿರಲ್ವೇಳ್ಕೆಂದೊಡವಡಿಸಿ ತುರಗಾಂದೋಳಿಕಾ ಛತ್ರಚಾಮರಾದಿವಿಭವಂಗಳುಮನುಚಿತಮಾದುಡುಗೊರೆ ತೊಡವು ತಾಂಬೂಲಂಗಳುಮನಿತ್ತು ಮನ್ನಿಸಿ ಕೆಲವಶ್ವಪದಾತಿಗಳಧೀನದೊಳಿರ್ದು ಸಂಗಡಮೆಡೆಯಾಡಲೆಂದು

ಕೀರ್ತಿಯನ್ನು ಉಳಿಸಿಕೊಳ್ಳುವುದು ಒಳ್ಳೆಯದು. ವ।। ಈ ರೀತಿಯಾಗಿ ಕೇಳಿದ ಕೃಷ್ಣರಾಯನ ಮಾತನ್ನು ಚೌಡಪ್ಪ ಮತ್ತು ಭದ್ರಪ್ಪರೀರ್ವರೂ ಕೇಳಿದರು. ತಾವು ಪೂರ್ವದಿಂದಲೂ ಕೃಷಿ ವ್ಯಾಪಾರಗಳಿಂದ ಜೀವನ ಮಾಡುವ ಬಡವರಾಗಿದ್ದೆವೆಂದೂ, ಅನಂತರದಲ್ಲಿ ತಮಗೆ ಕಂಡ ಕನಸು, ಶ್ರೀರಾಮೇಶ್ವರಲಿಂಗವು ಗೋಚರಿಸಿದ ರೀತಿ, ಗೋವಿನ ಚರಿತ್ರೆ ಮುಂತಾದ ವೃತ್ತಾಂತವೆಲ್ಲವನ್ನೂ ಸಾದ್ಯಂತವಾಗಿ ಬಿನ್ನೈಸಿಕೊಂಡರು. ಅದನ್ನು ಕೇಳಿದ ರಾಯನು ಆಶ್ಚರ್ಯಚಕಿತನಾದನು. ಅವರ ಭದ್ರವಾದ ಆಕಾರ, ಪ್ರಸನ್ನ ಮುಖಮಂಡಲ, ತೇಜಸ್ಸು ಹಾಗೂ ವಾಕ್ಚಾತುರ್ಯಗಳನ್ನು ನೋಡಿ ಸಂತೋಷಪಟ್ಟು, ಇವರು ಶಿವನ ಅಂಶಸಂಭೂತರು ಹಾಗೂ ಕಾರಣಪುರುಷರು ಆಗಿದ್ದಾರೆ ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ತನ್ನೊಳಗೆ ಹೀಗೆ ಯೋಚಿಸಿದನು. ೬೧. ಕೆಟ್ಟವರ ಮಾತನ್ನು ಕೇಳಿ ಭಾಗ್ಯಶಾಲಿಗಳಾದ ಧನಿಕರನ್ನು ಅಸೂಯೆಯಿಂದ ನೋಯಿಸದೆ, ಮಹಾಕಾರ್ಯಗಳನ್ನು ಅವರಿಂದ ಮಾಡಿಸಿ ಕಾಪಾಡುವುದು ಅರಸರಿಗೆ ಯೋಗ್ಯವಾದದ್ದು. ವ।। ಈ ರೀತಿಯಾಗಿ ನಿಶ್ಚಯಮಾಡಿಕೊಂಡು ಚೌಡಪ್ಪ ಮತ್ತು ಭದ್ರಪ್ಪರನ್ನು ಹತ್ತಿರ ಕರೆದು "ನೀವು ಶಿವನ ಅಂಶಸಂಭೂತರು ಹಾಗೂ ಕಾರಣ ಪುರುಷರಿದ್ದೀರಿ; ಹಲವು ತುಂಡು ಪಾಳೆಯಗಾರರು ಸರಿಯಾಗಿ ನಡೆದುಕೊಳ್ಳದೆ ನಮಗೆ ವಿರೋಧಿಗಳಾಗಿ ಕ್ಷುದ್ರವಾದ ತೊಂದರೆಗಳನ್ನು ಎಸಗುತ್ತಿದ್ದಾರೆ; ಈ ಕಾರಣ ನೀವು ತುರುಷ್ಕರನ್ನೂ ಬೇಡರನ್ನೂ ಹಾಗೂ ದುಷ್ಟ ಪಾಳೆಯಗಾರರನ್ನೂ ನಿಗ್ರಹಿಸಲು ನಮ್ಮ ಕಾರ್ಯಗಳಲ್ಲಿ ಸಹಾಯಕರಾಗಿ ಅನುವರ್ತಿ

ನಿಯಾಮಿಸಲಂತಾಗಲೆಂದೊಡಂಬಟ್ಟವರ್ಗಳ್ ರೂಢಿವೆತ್ತು ಕತಿಪಯದಿವಸಮಾ ರಾಯರ ಸಮೀಪದೊಳತಿಪ್ರೀತಿಪಾತ್ರರೆನಿಸಿ ವರ್ತಿಸುತ್ತುಮಿರಲಾ ಕಾಲದೊಳ್ ಮೂಡದಿಕ್ಕಿನೊಳ್ ಶಬರರುಂ ಮತ್ತಂ ಕೆಲಂಬರ್ ತುಂಡುಮನ್ನೆಯರುಮೊಂದಾಗಿ ಪುಂಡೆದ್ದು ದಾಳಿವರಿದಾರುಮಂ ಬಗೆಯದೆ ರಾಜ್ಯಮಂ ಬಾಧಿಸುತ್ತುಮಿರಲೀ ವೃತ್ತಾಂತಮಂ ಕೃಷ್ಣರಾಯಂ ಕೇಳ್ದು ಚೌಡಪ ಭದ್ರಪರೊಡನೆ ಸೈನ್ಯಮಂ ಕೂಡಿಸಿಕೊಟ್ಟವರ್ಗಳಂ ನಿಗ್ರಹಿಸಿಬರ್ಪುದೆಂದು ನಿಯಾಮಿಸಿ ತಾಂಬೂಲವಿತ್ತು ತೆರಳ್ಚಲೈದಿದುಭಯಸೈನ್ಯಕ್ಕಂ ಕೈಗಲಿದ ತುಮುಲಯುದ್ಧಂ ಪಣ್ಣಲಾಗಳಾ ರಾಯಸೈನ್ಯದಾಕೆವಾಳರ್ ನೊಂದು ನುಗ್ಗಾಗಿ ಮೊಗಮಿಕ್ಕಲಮ್ಮದೆ ಮುರಿದು ಪಿಂದೆಗೆಯುತ್ತುಮಿರಲ್ ಚೌಡಪನಭಿವೀಕ್ಷಿಸಿ ಧೈರ್ಯಗುಂದದೆ ಶ್ರೀಮದ್ರಾಮೇಶ್ವರನ ಪಾದಾರವಿಂದಮಂ ನೆನೆಯುತ್ತತಿಶೀಘ್ರದೊಳ್ ತುರಗಾರೂಢನಾಗಿ ಶತ್ರುಸೈನ್ಯಕ್ಕಿದಿರ್ಚಿನಿಂದು ವೀರರಸದಿಂ ಪೊರೆಯೇರುತ್ತುಮಿರಲಾ ಪ್ರಸ್ತಾವದೊಳ್

ಕಂ|| ಕುಂತವನಾಂತರಿಸಂತತಿ
ಯಂ ತಗುಳುತ್ತಾಂತ ಸುಭಟರಂ ತಿವಿತಿವಿದೋ
ರಂತಂತಕನಂ ತೋರಿಸು
ತಿಂತಾ ಚೌಡೇಂದ್ರನಂಕದೊಳ್ ಸೈವರಿದಂ ೬೨

ಅಸಮಬಲಂ ಭದ್ರಪನೊಂ
ದೆಸೆಯೊಳ್ ಕೂರಸಿಯನಾಂತು ಮುಸುಕಿದರಾತಿ
ಪ್ರಸರದ ಸುವಿಸರಮಂ ತೊಲ
ಗಿಸುತುಂ ರಣರಸವನಿಳೆಗೆ ಪಸರಿಸುತೆಸೆದಂ ೬೩

ಗಳಾಗಿರಬೇಕು” ಎಂಬುದಾಗಿ ರಾಯನು ಒಡಂಬಡಿಸಿದನು. ಆ ಸಹೋದರರೀರ್ವರಿಗೆ ಕುದುರೆ, ರಥ, ಛತ್ರ, ಚಾಮರ ಮೊದಲಾದುವುಗಳಿಂದ ಉಚಿತವಾದ ಉಡುಗೊರೆಗಳು, ಆಭರಣಗಳು ಹಾಗೂ ತಾಂಬೂಲಗಳನ್ನು ಕೊಟ್ಟು ಹಲವು ಕಾಲಗಳವರೆಗೆ ಕುದುರೆ ಕಾಲಾಳುಗಳನ್ನು ಅವರ ಅಧೀನಗೊಳಿಸಿ ನಿಯಮಿಸಿಕೊಂಡನು. ಈ ರೀತಿ ಈರ್ವರೂ ಅನೇಕ ದಿನಗಳವರೆಗೆ ರಾಯರ ಸಮೀಪದಲ್ಲಿದ್ದು ಪ್ರೀತಿಪಾತ್ರರೆನಿಸಿಕೊಂಡರು. ಈ ರೀತಿ ಇರಲು ಆ ಕಾಲದಲ್ಲಿ ಪೂರ್ವದಿಕ್ಕಿನಲ್ಲಿನ ಹಲವು ಬೇಡರು ಮತ್ತು ತುಂಡು ಅರಸರು ಯಾರನ್ನೂ ಲೆಕ್ಕಿಸದೆ ಒಟ್ಟಾಗಿ ಪುಂಡೆದ್ದು ಧಾಳಿ ಮಾಡುತ್ತಾ ರಾಜ್ಯದಲ್ಲಿ ಹಿಂಸೆ ಮಾಡತೊಡಗಿದರು. ಕೃಷ್ಣರಾಯನು ಈ ಸಮಾಚಾರವನ್ನು ಕಳಿ ಚೌಡಪ್ಪ ಮತ್ತು ಭದ್ರಪ್ಪರೊಡನೆ ಸೈನ್ಯವನ್ನು ಕೂಡಿಸಿಕೊಟ್ಟು, ಪುಂಡರಾದ ಅವರನ್ನು ನಿಗ್ರಹಿಸಿ ಬರಬೇಕೆಂದು ತಾಂಬೂಲವಿತ್ತು ಕಳುಹಿಸಿದನು. ಇದರಿಂದ ಉಭಯ ಸೇನಾಪಡೆಗಳಿಗೂ ಕೈ ಕೈ ಮಿಲಾಯಿಸಿ ಭಯಂಕರ ಯುದ್ಧವು ಮೊದಲಾಯಿತು. ರಾಯರ ಸೈನ್ಯದ ವೀರಭಟರು ನೊಂದು ಯುದ್ಧದಲ್ಲಿ ಗೆಲ್ಲಲಾರದೆ ಹಾಗೂ ಮುಖತೋರಿಸಲೂ ಆಗದೆ ಸೋತು ಹಿಮ್ಮೆಟ್ಟುತ್ತಿರುವುದನ್ನು ಗಮನಿಸಿದ ಚೌಡಪ್ಪನು ಧೈರ್ಯಗೆಡದೆ ಶ್ರೀರಾಮೇಶ್ವರನ ಪಾದಾರವಿಂದವನ್ನು ಸ್ಮರಿಸುತ್ತಾ ಅತಿ ಬೇಗನೆ ಕುದುರೆಯನ್ನೇರಿ ಶತ್ರುಗಳನ್ನು ಎದುರಿಸಿದನು. ಈ ರೀತಿ ಹೋರಾಡುತ್ತಾ ವೀರರಸದಿಂದ ಉಬ್ಬುತ್ತಿರಲು ಆ ಸಮಯದಲ್ಲಿ ೬೨. ಚೌಡಪ್ಪನು ಕುಂತವೆಂಬ ಆಯುಧವನ್ನು ಹಿಡಿದು ಶತ್ರುಸಮೂಹಗಳನ್ನು ಆಕ್ರಮಿಸಿ, ಯುದ್ಧ ಮಾಡಿದ ಭಟರನ್ನು ತಿವಿಯುತ್ತಾ ಅವರಿಗೆ ಯಮನನ್ನು ತೋರಿಸುತ್ತಾ ಹೋರಾಡಿದನು. ೬೩. ಅಸಮಾನ ಪರಾಕ್ರಮಿಯಾದ ಭದ್ರಪ್ಪನು ಹರಿತವಾದ ಕತ್ತಿಯನ್ನು

ಚಂ|| ಸುರಪತಿಯಂ ನರಳ್ಚಿ ಮಿಗೆ ಗೋಂಟುಗೊಳಿಪ್ಪುರು ಕಾಳಿಕೇಯ ಭೀ
ಕರ ಬಲಮಂ ನಿವಾತಕವಚರ್ಕಳನಂದು ಕಿರೀಟ ಗೆಲ್ದವೊಲ್
ತುರುಬಿದ ಭಿಲ್ಲರಂ ಸದೆದು ರಾಯರ ಕಜ್ಜವನೈದೆ ಮೀಂಟುಗ್ಗೈ
ದುರುತರಮಪ್ಪ ಬಾಹುಬಲಮಂ ಮೆರೆದಂ ಧುರಧೀರಚೌಡಪಂ ೬೪

ವ|| ಮತ್ತಮದಲ್ಲದಾ ಚೌಡಪಂ

ಕಂ|| ನೆರೆದಹಿತರ ನೆರವಿಗಳೊಳ್
ತುರಗವನೆಣ್ದೆಸೆಯೊಳ್ಳಿದೆ ದುವ್ವಾಳಿಸುತಂ
ಶರಕುಂತಖಡ್ಗದಂಡದೆ
ತರಿದಿರಿದರಿದರೆದು ಶಬರರಂ ಬರಿಕೈದಂ ೬೫

ಅರಿವೊಡಾ ರಾಯರಿಂ ಗೆಲ
ಲರಿದೆನಿಸಿರ್ಪರಿನಿಕಾಯಮಮಂ ಕೂರಸಿಯಿಂ
ದರಿದರಿದು ಚೌಡಪಂ ಜವ
ನರಿತದ ದೂತರ್ಕಳಿಂಗೆ ಕೈವರ್ತಿಸಿದಂ ೬೬

ವ|| ಇಂತಪ್ಪ ಚೌಡಪನದಟನಾಂಪೊಡಶಕ್ಯಮಾಗಿ

ಕಂ|| ಅತುಲಭುಜಬಲಪರಾಕ್ರಮ
ಯುತರರ್ಥವನಿತ್ತು ಕಂಡರರಿನೃಪವನಿತಾ
ತತಿವೈಧವ್ಯದಿ ದೀಕ್ಷೆಯ
ನಾಂತರು ತಚ್ಚೌಡಧೀರನಸಿಗಳ್ಕದರಾರ್ ೬೭

ವ|| ಮತ್ತಮದಲ್ಲದೆ

ತೆಗೆದುಕೊಂಡು, ಮುತ್ತಿಗೆ ಹಾಕಿದ ಶತ್ರುಸಮೂಹವನ್ನು ತೊಲಗಿಸುತ್ತಾ, ಯುದ್ಧದ ರಸವನ್ನು (ರಕ್ತವನ್ನು) ಭೂಮಿಯಲ್ಲಿ ಹರಡುತ್ತಾ ಒಂದು ಕಡೆಯಲ್ಲಿ ಮೆರೆದನು. ೬೪. ಇಂದ್ರನನ್ನು ಕಾಡಿ ತೊಂದರೆ ಕೊಡುತ್ತಿದ್ದ ರಾಕ್ಷಸಬಲವನ್ನು, ನಿವಾತ ಕವಚರೆಂಬ ರಾಕ್ಷಸರನ್ನು ಹಿಂದೆ ಅರ್ಜುನನು ಗೆದ್ದಹಾಗೆ ರಣವೀರನಾದ ಚೌಡಪ್ಪನು ಯುದ್ಧದಲ್ಲಿ ತಡೆದ ಭಿಲ್ಲರನ್ನು ನಾಶಮಾಡಿ ರಾಯರ ಕಾರ್ಯವನ್ನು ಚೆನ್ನಾಗಿ ನಿರ್ವಹಿಸಿ, ಹೆಚ್ಚಿನ ಬಾಹುಬಲವನ್ನು ಮೆರೆದನು. ವ|| ಮತ್ತೆ ಅದಲ್ಲದೆ ಆ ಚೌಡಪ್ಪನು ೬೫. ತುಂಬಿದ ಶತ್ರುಗಳ ಸಮೂಹದಲ್ಲಿ ಕುದುರೆಯನ್ನು ಎಂಟು ದಿಕ್ಕುಗಳಿಗೂ ಓಡಿಸುತ್ತಾ ಬಾಣ, ಕುಂತ, ಖಡ್ಗ ಮತ್ತು ದಂಡಗಳಿಂದ ಬೇಡರನ್ನು ತರಿದು, ಇರಿದು, ಅರಿದು, ಅರೆದು, ಬರಿದು ಮಾಡಿದನು. ೬೬. ರಾಯರಿಂದಲೂ ಗೆಲ್ಲುವುದಕ್ಕೆ ಸಾಧ್ಯವಿಲ್ಲದ ಶತ್ರು ಸಮೂಹವನ್ನು ಹರಿತವಾದ ಖಡ್ಗದಿಂದ ಕತ್ತರಿಸಿ ಚೌಡಪ್ಪನು ಅವರನ್ನು ಯಮದೂತರ ಕೈಗೆ ಒಪ್ಪಿಸಿದನು. ವ|| ಈ ರೀತಿಯ ಚೌಡಪ್ಪನ ಸಾಮರ್ಥ್ಯವನ್ನು ತಡೆದುಕೊಳ್ಳಲು ಶತ್ರುಗಳಿಗೆ ಸಾಧ್ಯವಾಗಲಿಲ್ಲ. ೬೭. ಅತ್ಯಂತ ಬಲಶಾಲಿಗಳಾದವರು ಕಾಣಿಕೆಗಳನ್ನು ತಂದೊಪ್ಪಿಸಿದರು. ಶತ್ರುರಾಜರುಗಳ ಸ್ತ್ರೀಯರುಗಳು ವೈಧವ್ಯದೀಕ್ಷೆಯನ್ನು ತಾಳಿದರು. ಆ ಚೌಡಪ್ಪನ ಖಡ್ಗಕ್ಕೆ ಅಳುಕದವರು ಯಾರಿದ್ದಾರೆ?

ಕಂ॥ ಕಡುಹಿಂ ರಾಯರನೆಣಿಸದೆ
ನಡೆವದಟರ್ಕಳನೆ ಪಿಡಿದು ನಿಗಳವನಡಿಯೊಳ್
ತೊಡರಿಸಿ ಕೆಲಬರಂ ಹೆಡ
ಗುಡಿಗೊಳಗಾಗಿಸಿ ಮರಳ್ದನಾ ಚೌಡೇಂದ್ರಂ ೬೮

ಇಂತಾ ಚೌಡಪನಹಿತಕ್ಕೆ
ತಾಂತಂ ಕರಮೆಸೆವ ಭದ್ರಪಾನುಜಸಹಿತಂ
ಸಂತಸದೆ ಮರಳ್ದು ಸೇನಾ
ಸಂತತಿವೆರಸೈದಿ ರಾಯರಂ ಮಿಗೆ ಕಂಡಂ ೬೯

ವ॥ ಇಂತು ಕೃಷ್ಣರಾಯನಂ ಕಂಡು ನಿಗಳ ಹೆಡೆಗುಡಿಗಳಿಂಗೊಳಗಾಗಿಸಿ ತಂದ ಪ್ರತ್ಯರ್ಥಿಮನ್ನೆಯರಂ ತತ್ಪಾದಾರವಿಂದದೊಳ್ ಕೆಡಹಿಸಿ ಸಂಧಾನಮುಖದಿಂದೊಡನೈದಿದ ಕೆಲಂಬರ್ ತುಂಡುಮನ್ನೆಯರ್ಕಳಂ ಕಾಣಿಸಿ ಮತ್ತಂ ಕೆಲಂಬರಗಿದಿತ್ತರ್ಥಾಭರಣವಸ್ತ್ರ ವಸ್ತು ವಾಹನಚಯಂಗಳುಮಂ ಮುಂಗಡೆಯೊಳಿರಿಸಿ ಸಂದರ್ಶನಂಗೈಯಲ್ ತತ್ಕೃಷ್ಣರಾಯನಭಿವೀಕ್ಷಿಸುತ್ತತ್ಯಂತ ಪ್ರಮುದಿತಮಾನಸನಾಗಿ ಚೌಡಪಭದ್ರಪರನಾಲಿಂಗನಂಗೈದು ಮನ್ನಿಸಿ ಹತ್ತೆ ಕುಳ್ಳಿರಿಸಿಕೊಂಡು ಸಂಗ್ರಾಮವೃತ್ತಾಂತಮಂ ಮರಳ್ದು ಮರಳ್ದು ಕೇಳ್ದು ಪೊಂಪುಳಿಯು ಪಟುತರ ಪರಾಕ್ರಮಶಾಲಿಗಳಪ್ಪಿವರನಿನ್ನುಂ ಪೆರ್ಚಿಸಿ ತುರುಷ್ಕರ್ಗಲಗಣಸಾಗಿ ನಿಲಿಸಲ್ವೇಳ್ಕೆಂದು ಮನದಂದು ತದುಚಿತಮಾದ ತೊಡವುಡುಗೊರೆ ತಾಂಬೂಲಂಗಳುಮನಿತ್ತಾದರಿಸಿ ಚಾಮೀಕರ ಲಾಂಛನ ಲಾಂಛಿತಮಾದ ನೆಗಳ್ದಾಯಿಗಳಿಂ ವಿರಾಜಿಸುತ್ತಿರ್ಪ ಪೊಸಪಲ್ಲಕ್ಕಿಯಿಕ್ಕಿ ನಿಜನಿವಾಸಕ್ಕೆ ಕಳುಪಿ ಬಳಿಕ್ಕಂದಿನ ದಿನದೊಳತಿಪ್ರೀತಿಯಿಂ

ಅಲ್ಲದೆ. ೬೮. ರಾಯರನ್ನು ಗಣ್ಯಮಾಡದೆ ಪರಾಕ್ರಮದಿಂದಲೇ ವರ್ತಿಸುವ ಸಮರ್ಥರನ್ನು ಹಿಡಿದು, ಕಾಲುಗಳಿಗೆ ಬೇಡಿಯನ್ನು ಹಾಕಿ, ಕೆಲವರನ್ನು ಹೆಡೆಮುರಿ ಕಟ್ಟಿಸಿ, ಚೌಡಪ್ಪನು ಹಿಂತಿರುಗಿದನು. ೬೯. ಹೀಗೆ ಶತ್ರುಗಳಿಗೆ ಯಮನೆನಿಸಿದ ಚೌಡಪ್ಪನು ತಮ್ಮನಾದ ಭದ್ರಪ್ಪನೊಂದಿಗೆ ಸಂತೋಷದಿಂದ ಹಿಂತಿರುಗಿದನು. ತನ್ನ ಸೇನಾ ಸಮೂಹದೊಂದಿಗೆ ಹೋಗಿ ಕೃಷ್ಣರಾಯರನ್ನು ಕಂಡನು. ವ॥ ಈ ರೀತಿಯಾಗಿ ಕೃಷ್ಣರಾಯರನ್ನು ಕಂಡು ಬೇಡಿ ಮತ್ತು ಹೆಡೆಮುರಿಗಳಿಂದ ಬಂಧಿಸಿದ ಶತ್ರುಸಾಮಂತರುಗಳನ್ನು ರಾಯರ ಪಾದಾರವಿಂದಗಳಲ್ಲಿ ಕೆಡವಿಸಿದನು. ಸಂಧಾನಮುಖದಿಂದ ಬಂದ ಕೆಲವರು ತುಂಡು ಅರಸರನ್ನು ಎದುರಿಗೆ ನಿಲ್ಲಿಸಿದನು. ಮತ್ತೆ ಕೆಲವರು ಒಪ್ಪಿಸಿದ ಹಣ, ಆಭರಣ, ವಸ್ತ್ರ, ವಾಹನ ಮುಂತಾದ ಅಮೂಲ್ಯ ವಸ್ತುಗಳನ್ನು ರಾಯರ ಮುಂದುಗಡೆ ಇಡಿಸಿ ಸಂದರ್ಶಿಸಲು, ಆ ಕೃಷ್ಣರಾಯನು ಇದನ್ನು ಕಂಡು ಬಹು ಸಂತೋಷಪಟ್ಟನು. ಆ ಸಂಭ್ರಮದಲ್ಲಿ ಚೌಡಪ್ಪ-ಭದ್ರಪ್ಪರನ್ನು ಆಲಿಂಗನ ಮಾಡಿಕೊಂಡು, ಹತ್ತಿರ ಕುಳ್ಳಿರಿಸಿ, ರಣರಂಗದ ವೃತ್ತಾಂತವನ್ನು ತಿರುಗಿ-ತಿರುಗಿ ಕೇಳುತ್ತಾ ಇವರ ಹೆಚ್ಚಿನ ಪರಾಕ್ರಮಕ್ಕೆ ಮಾರುಹೋದನು. ಇನ್ನು ಮುಂದೆ ತುರುಕರಿಗೆ ಪ್ರತಿಭಟರಾಗಿ ಇವರನ್ನು ನಿಲ್ಲಿಸಬೇಕೆಂದು ಮನದಲ್ಲಿ ನಿಶ್ಚಯಿಸಿಕೊಂಡನು. ಉಚಿತವಾದ ಉಡುಗೊರೆ, ಆಭರಣಗಳು ಹಾಗೂ ತಾಂಬೂಲಗಳನ್ನು ಚೌಡಪ್ಪನಿಗೆ ಕೊಟ್ಟು ಆದರಿಸಿ, ಚಿನ್ನದ ಲಾಂಛನ ಹೊಂದಿ, ಪ್ರಸಿದ್ಧವಾಗಿ ಶೋಭಿಸುತ್ತಿದ್ದ ಹೊಸ ಪಲ್ಲಕ್ಕಿಯೊಂದನ್ನು ನೀಡಿ ಅವರನ್ನು ರಾಯನು ನಿಜನಿವಾಸಕ್ಕೆ

ನಡೆದುಕೊಳುತ್ತಮಿರಲತ್ತಮುತ್ತರದಿಕ್ಕಿನೊಳಿರ್ಪ ವಿದ್ಧರ್ಕರ್ಣರ್ ದಾಳಿವರಿಯಲ್ವೇಳ್ಕೆಂದು ದುರ್ಮಂತ್ರಾಲೋಚನೆಯಂ ರಚಿಸುತಿರ್ದಪರೆಂಬ ವರ್ತಮಾನಮಂ ಬೇಹಚರರ ಮುಖದಿಂ ಕೇಳ್ದು ತುರುಷ್ಕರ್ಗಾಸ್ಪದಮಾಗದಂತು ಚೌಡಪ ಭದ್ರಪರಂ ಗಡಿಮುಖದೊಳ್ ನಿಲಿಸಿದೊಡೆಮ್ಮ ಕಜ್ಜಂ ಮುಂದೆ ಶೇಖರಮಪ್ಪುದೆಂದು ನಿಶ್ಚಯಿಸಿ ತತ್ಕಾಲೋಚಿತಮಾಗಿ ಪರಿಮಿತಾಪ್ತಮಂತ್ರಿ ನಿಯೋಗಿಜನರ್ವೆರಸೊಡ್ಡೋಲಗಂಗೊಟ್ಟು ಚೌಡಪಭದ್ರಪರಂ ಬರಿಸಿ ಹತ್ತೆಕರೆದು ಸಮೀಪದೊಳ್ ಕುಳ್ಳಿರಿಸಿಕೊಂಡಾ ಕೃಷ್ಣರಾಯಂ ಮಂದಸ್ಮಿತವದನಾರವಿಂದನಾಗುತ್ತುಮಾ ಚೌಡಪಭದ್ರಪರೊಡನಿಂತೆಂದಂ

ಕಂ॥ ಅರಿಚಯಮೆಡೆಯಾಡದವೊಲ್
ಕರಮೊಪ್ಪುವ ಚಂದ್ರಗುತ್ತಿ ಕೆಳದಿಯ ಮುಖದೊಳ್
ಹೊರಪಾಳ್ಯವಾಗಿ ವರ್ತಿಪ
ಸುರುಚಿರ ಪರಮಾಧಿಕಾರಮಂ ನಿಮಗೀವೆಂ ೨೦

ಹೆಮ್ಮೆಯೊಳೀಯಧಿಕಾರದ
ಬಿಮ್ಮಳಿಯದ ತೆರದೆ ರೂಢಿವೆತ್ತಿಳೆಗೆ ಕರಂ
ದಿಮ್ಮಿದರಾಗಿ ದಿಟಂ ನೀ
ವೆಮ್ಮವರೆಂದೆನಿಸಿ ವರ್ತಿಸುತ್ತಿರ್ಪವೊಲುಂ ೨೧

ಕೆಳದಿಯಿಕ್ಕೇರಿ ಪೆರ್ಬಯ
ಲೆಲಗಳಲೆ ....... ಯೊಪ್ಪುವ ಮೋದೂ
ರ್ಕಲಿಸೆ ಲಾತವಡಿಯೆಂಬೀ
ವಿಲಸನ್ಮಾಗಣೆಗಳೆಂಟುಮಂ ನಿಮಗೀವೆಂ ೨೨

ಕಳುಹಿಸಿದನು. ಈ ರೀತಿ ಅಂದಿನ ದಿನಗಳಲ್ಲಿ ಪ್ರೀತಿಯಿಂದ ಕಾಲಯಾಪನೆ ಮಾಡುತ್ತಿರುವಾಗ, ಉತ್ತರದಲ್ಲಿದ್ದ ತುರುಷ್ಕರು ದುರ್ಮಂತ್ರಾಲೋಚನೆ ಮಾಡಿ ದಾಳಿ ಮಾಡಲು ಹವಣಿಸಿದರು. ಈ ವರ್ತಮಾನವನ್ನು ಬೇಹುಗಾರರಿಂದ ತಿಳಿದ ಚಕ್ರವರ್ತಿಯು ತುರುಕರಿಗೆ ರಾಜ್ಯಕ್ಕೆ ಬರಲು ಆಸ್ಪದವೀಯದಂತೆ ಚೌಡಪ್ಪ-ಭದ್ರಪ್ಪರನ್ನು ಗಡಿಯಲ್ಲಿ ನಿಲ್ಲಿಸಿದನು. ಹಾಗೂ ಮುಂದೆ ಈ ಕಾರ್ಯವು ಮಹತ್ವವಾದುದು ಎಂಬುದಾಗಿ ನಿಶ್ಚಯಿಸಿ, ಆ ಕಾಲಕ್ಕೆ ಉಚಿತವಾದ ಹಾಗೂ ಮಿತವಾದ ಮಂತ್ರಿ-ನಿಯೋಗಿಗಳೊಡನೆ ಒಡ್ಡೋಲಗವನ್ನು ಏರ್ಪಡಿಸಿದನು. ಅಲ್ಲಿ ಚೌಡಪ್ಪ-ಭದ್ರಪ್ಪರನ್ನು ಬರಮಾಡಿಕೊಂಡು ಹತ್ತಿರ ಕರೆದು ಸಮೀಪದಲ್ಲಿ ಕುಳ್ಳಿರಿಸಿಕೊಂಡು ಕೃಷ್ಣರಾಯನು ಮುಗುಳ್ನಗೆಯನ್ನು ಬೀರುತ್ತ ಚೌಡಪ್ಪ-ಭದ್ರಪ್ಪರೊಡನೆ ಈ ರೀತಿ ಹೇಳಿದನು: ೨೦. ಶತ್ರುಗಳು ಓಡಾಡದ ಹಾಗೆ ಚಂದ್ರಗುತ್ತಿ, ಕೆಳದಿಯ ಪ್ರದೇಶಗಳಲ್ಲಿ ಹೊರಪಾಳಯವಾಗಿ ವರ್ತಿಸತಕ್ಕ ಪರಮಾಧಿಕಾರವನ್ನು ನಿಮಗೆ ನೀಡುವೆನು. ೨೧. ಈ ಅಧಿಕಾರದ ಗೌರವವು ಇಳಿಯದ ಹಾಗೆ ಹೆಮ್ಮೆಯಿಂದ ವ್ಯವಹರಿಸುತ್ತಾ ಭೂಮಿಗೇ ಬಲಶಾಲಿಗಳಾಗಿ ಇರುವ ನೀವು ನಮ್ಮವರಾಗಿ ವರ್ತಿಸುತ್ತಿರಬೇಕು. ೨೨. ಕೆಳದಿ, ಇಕ್ಕೇರಿ, ಪೆರ್ಬಯಲು (ಹೆಬ್ಬೈಲು), ಯಲಗಳಲೆ, ಮೋದೂರು, ಕಲಿಸೆ ಮತ್ತು ಲಾತವಡಿ ಎಂಬ ಎಂಟು ಮಾಗಣೆಗಳನ್ನು

ಮಿಸುಪೆಂಟುಮಾಗಣೆಗಳುಮ
ನನುನಯದಿಂ ನಿಮ್ಮ ವಂಶಪಾರಂಪರೆಯಿಂ
ದನುಭವಿಪುದೆಂದು ವರ ಶಾ
ಸನಮಂ ತತ್ಕೃಷ್ಣರಾಯನುರೆ ಬರೆಸಿತ್ತಂ ೭೩

ಈಯೆಂಟು ಮಾಗಣೆಗಳಿಗೆ
ರಾಯರ್ ನೀವೆನಿಸಿ ಸುಖದೊಳಾಚಂದ್ರಾರ್ಕಂ
ಸ್ಥಾಯಿಗಳಾಗಿರ್ದೆಮಗೆ ಸ
ಹಾಯಿಗಳೆಂದೆನಿಸಿ ಬಾಳ್ವುದತಿಮುದದಿಂದಂ ೭೪

ಎಂದುರುಮದೇಭ ಘೋಟಕ
ವೃಂದ ಪದಾತಿಪ್ರತಾನಮಂ ನೃಪವರನೊ
ಲ್ದಂದು ಕೈಗೊಳಿಸಿ ಪೊಸಪೊ
ನ್ನಂದಣಮಂ ವಿಲಸದಾತಪತ್ರವನಿತ್ತಂ ೭೫

ಅರಿದಲೆ ಸುಶಂಖಚಕ್ರಂ
ಕರಮೊಪ್ಪುವ ಕನಕಚೌರಿ ಸೀಗುರಿ ಶೋಭಾ
ಕರವಿಲಸದುಭಯಚಮರಂ
ಸರನೇಜಮೆನಿಪ್ಪ ಬಿರುದುಗಳೊನೊಸೆದಿತ್ತಂ ॥ ೭೬

ವ॥ ಇಂತಪ್ಪ ರಾಜಲಾಂಛನೋಪಯುಕ್ತಮಾದ ಬಿರುದುಗಳುಮನಿತ್ತು ಮನ್ನಿಸಿ ತದಾರಭ್ಯ ಕೆಳದಿ ಮೂಲಸಂಸ್ಥಾನದ ಮನ್ನೆಯ ಚೌಡಪ್ಪ ನಾಯಕನೆಂದು ಕರೆವುದೆಂದು ನಿಯಾಮಿಸಿ ಪ್ರಖ್ಯಾತಮಪ್ಪಂತು ನಾಲ್ಗಡೆಯೊಳಿರ್ಪ ಮನ್ನೆಯರ್ಗಂ ರಾಯಸಮಂ ಬರೆಸಿ ಸಂಗಡಮುಚಿತಮಪ್ಪ ಗುರಿಮಾನಿಸರಂ ಪ್ರಯಾಣವನೊಡರ್ಚಿಸಿ ನೀವುಂ ನಿಮ್ಮ ಮೂಲಸಂಸ್ಥಾನಮಂ ಸಾರ್ದೆಂಟು

ನಿಮಗೆ ಕೊಡುವೆನು. ೭೩. ಈ ಎಂಟು ಮಾಗಣೆಗಳನ್ನು ನಿಮ್ಮ ವಂಶಪಾರಂಪರ್ಯದಿಂದ ಸಂತೋಷದಿಂದ ಅನುಭವಿಸಬೇಕು ಎಂಬುದಾಗಿ ನಿರೂಪಿಸಿ ಆ ಕೃಷ್ಣರಾಯನು ಶಾಸನವನ್ನು ಬರೆಯಿಸಿಕೊಟ್ಟನು. ೭೪. ಈ ಎಂಟು ಮಾಗಣೆಗಳಿಗೆ ನೀವೇ ಅರಸರಾಗಿ ಸೂರ್ಯಚಂದ್ರರಿರುವವರೆಗೂ ಸುಖದಲ್ಲಿ ಇದ್ದು, ನಮಗೆ ಸಹಾಯಕರಾಗಿ ಅತಿ ಸಂತೋಷದಿಂದ ಬಾಳಬೇಕು. ೭೫. ಹೀಗೆಂದು ಆನೆ ಕುದುರೆ ಕಾಲಾಳುಗಳ ಸಮೂಹವನ್ನು ರಾಜನು ಕೊಟ್ಟು, ಹೊಸ ಬಂಗಾರದ ದಂಡಿಕೆ (ಪಾಲಕ್ಕಿ ಅಥವಾ ಡೋಲು) ಬಿಳಿಯ ಕೊಡೆಗಳನ್ನು ಪ್ರೀತಿಯಿಂದ ನೀಡಿದನು. ೭೬. ಅರಿದಲೆ, ಶಂಖ, ಚಕ್ರ, ಭಂಗಾರದ ಚೌರಿ, ಸೀಗುರಿ, ಎರಡು ಚಾಮರ ಮತ್ತು ಸರನೇಜ ಎಂಬ ಬಿರುದುಗಳನ್ನೂ ಇತ್ತನು. ವ॥ ಈ ರೀತಿಯ ರಾಜಲಾಂಛನದಿಂದ ಉಪಯುಕ್ತವಾದ ಬಿರುದುಗಳನ್ನು ರಾಯನು ಇತ್ತು ಗೌರವಿಸಿದನು. ಅನಂತರದಲ್ಲಿ "ಕೆಳದಿ ಮೂಲಸಂಸ್ಥಾನದ ಮನ್ನೆಯ ಚೌಡಪ್ಪ ನಾಯಕ" ಎಂಬುದಾಗಿ ಕರೆಯತಕ್ಕುದೆಂದು ನಿಯಮಿಸಿ, ನಾಲ್ಕು ದಿಕ್ಕಿನಲ್ಲಿರುವ ರಾಜರಿಗೆ ರಾಯಸವನ್ನು ಬರೆಸಿದನು. ಈ ರೀತಿ ರಾಯಸವನ್ನು ಬರೆಸಿ ಗೌಡನ ಸಂಗಡ ಆಳುಗಳನ್ನು ಪ್ರಯಾಣ ಮಾಡಲು ಕಳುಹಿಸಿ, "ಇನ್ನು ನೀವು ಊರಿಗೆ ತೆರಳಿ ಪ್ರಜೆ ಪರಿವಾರಗಳಿಗೆ

**ಮಾಗಣೆಯ ಪ್ರಜೆ ಪರಿವಾರಮಂ ಕಾಣಿಸಿಕೊಂಡು ರಾಜಮುದ್ರಾಧಿಕಾರದ ಬಿಣ್ಪುಗುಂದದದಂತಾಣೆ ಘೋಷಣೆಯಂಕೆಯ್ಯುಂಕೆ ನಾಣ್ಯ ರಾಯಸ ಮುಂತಾದುವಂ ನಡೆಸಿಕೊಂಡೆಮ ಗುಂಟಾದೆಮ್ಮ ಕಾರ್ಯಂಗಳೆಲ್ಲಂ ನಿಮ್ಮ ಕಾರ್ಯಂಗಳೆ ಸರಿಯೆಂದು ಬಗೆದೀ ಪ್ರಕಾರದೊಳ್ ನಿರ್ಭೇದಮಾಗಿ ವರ್ತಿಸುತ್ತುಂ ಸುಖಮಿರ್ಪುದೆಂದೊರೆದವರಿರ್ವರ್ಗಮುಚಿತಮಪ್ಪ ದಿವ್ಯತರ ನವರತ್ನಖಚಿತ ಸ್ವರ್ಣಾಭರಣಾಂಬರತಾಂಬೂಲಂಗಳನಿತ್ತಾದರಿಸಿ ತೆರಳ್ಚಲತ್ಯಂತಹರ್ಷಿತರಾಗಿ ತೆರಳ್ದೈತಂದು ಕೆಳದಿ ಪುರವರಮಂ ಸಾರ್ದೊಡನೆ ತತ್ಕಾಲೋಚಿತಮಾದರಮನೆಯಂ ನಿರ್ಮಾಣಂಗೈಸಿ ಕುಟುಂಬ ಸಹಿತಮಲ್ಲಿರ್ದಾಪುರದ ತೆಂಕಮುಖದೊಳ್ ಹೊಡೆಯಂ ಬಲಿಯಿಸಿ ಕಾಯ್ಪು ಕಟ್ಟಲೆಗಳಂ ರಚಿಯಿಸಿ ಶಕವರ್ಷಂ ೧೪೨೨ನೆಯ ಸಿದ್ಧಾರ್ಥಿ ಸಂವತ್ಸರದ ಮಾಘಶುದ್ಧ ೫ಯಲ್ಲಿಂ ಈ ಚೌಡಪ್ಪ ನಾಯಕರ್ಗಾ ಕೆಳದಿಪುರದರಮನೆಯೊಳ್ ರಾಜಪಟ್ಟಮಾಗಲೊಡನೆ ಕೆಳದಿ ಇಕ್ಕೇರಿ ಮೊದಲಾದಷ್ಟಮಾಗಣೆಗಳ ಪ್ರಜೆ ಪರಿವಾರ ನೆರೆಸಾಮಂತರಿಂ ಕಾಣ್ಕೆಗೊಂಡು ಸಂದರ್ಶನಂಗಳನಿತ್ತವರ್ಗಳಂ ಬೀಳ್ಕೊಟ್ಟು ನಂತರಂ ನಾಲ್ಗಡೆಯ ಮನ್ನೆಯರ್ಗಂ ರಾಯಸಮಂ ಬರೆಸಿ ತದುಚಿತಮಾದುಡುಗೊರೆಗಳಂ ಕಳುಹಿ ರಾಜ್ಯಭಾರವಿಚಾರತತ್ಪರನಾಗಿ ವರ್ತಿಸುತ್ತುಮಿರ್ದು ತತ್ಪುರೀರಾಮೇಶ್ವರದೇವರ ಗರ್ಭಗೃಹಮಂ ಶಿಲಾಮಯವನಾಗಿಸಿ ತತ್ಪೂಜಾರ್ಥಂ ಪಳ್ಳಿವಯಲ ಗ್ರಾಮಮುಮಂ ಮತ್ತಂ ಕೆಲವು ಮೀಂಟಾದ ಗ್ರಾಮಂಗಳುಮಂ ಶಿವಾರ್ಪಣಂಗೈದು ಲೋಪಮಾಗದಂತು ತತ್ಪೂಜಾದಿ ವಿಭವಂಗಳಂ ನಡೆಯಿಸುತ್ತುಂ ಗುರುಲಿಂಗಜಂಗಮಾರ್ಚನತತ್ಪರನೆನಿಸಿ ಬಹುವಿಧ ದಾನಧರ್ಮಂಗಳಂ ರಚಿಸುತ್ತುಮೆಡೆಯೆಡೆಗೆ**

ಕಾಣಿಸಿಕೊಂಡು ರಾಜಮುದ್ರೆ, ಆಜ್ಞೆ, ಘೋಷಣೆ, ನಾಣ್ಯ ಚಲಾವಣೆ ಮುಂತಾದ ಅಧಿಕಾರಗಳನ್ನು ಹೊಂದಿ, ನಮ್ಮ ಕಾರ್ಯಗಳೆಲ್ಲವೂ ನಿಮ್ಮ ಕಾರ್ಯವೆಂದು ಪರಿಗಣಿಸಿ ಯಾವ ರೀತಿಯ ಭೇದವೂ ಬಾರದ ಹಾಗೆ ರಾಜ್ಯಭಾರವನ್ನು ನಡೆಸಿಕೊಂಡು ಬರಬೇಕು ಎಂಬುದಾಗಿ ರಾಯನು ಹೇಳಿ ಗೌಡನನ್ನು ಬೀಳ್ಕೊಟ್ಟನು. ಹಾಗೂ ಚೌಡಪ್ಪನಿಗೆ ಉಚಿತವಾದ ದಿವ್ಯತರ ನವರತ್ನ ಖಚಿತ ಭಂಗಾರದ ಆಭರಣಗಳು, ತಾಂಬೂಲಗಳು ಮುಂತಾದವನ್ನು ಸಂಗಡ ಬಳುವಳಿಯಾಗಿ ಕಳುಹಿಸಿಕೊಟ್ಟನು. ಈ ರೀತಿ ಹಿಂತಿರುಗಿದ ಚೌಡಪ್ಪನೂ ಭದ್ರಪ್ಪನೂ ಪರಮ ಸಂತೋಷಗೊಂಡು ಕೆಳದಿಪುರವನ್ನು ಪ್ರವೇಶಿಸಿದರು. ಅನಂತರದಲ್ಲಿ ಅಲ್ಲಿ ಕೋಟೆಯೊಂದನ್ನು ಕಟ್ಟಿ, ಅರಮನೆಯನ್ನು ನಿರ್ಮಿಸಿದರು. ರಕ್ಷಣೆಗೆ ಕಾವಲುಗಳನ್ನು ಏರ್ಪಡಿಸಿದರು. ಈರ್ವರೂ ಕುಟುಂಬಸಹಿತವಾಗಿ ಹೊಸದಾಗಿ ನಿರ್ಮಿಸಿದ ಅರಮನೆಗೆ ಗೃಹಪ್ರವೇಶ ಮಾಡಿದರು. ಈ ರೀತಿ ಶಾಲಿವಾಹನ ಶಕ ವರುಷ ೧೪೨೨ನೆಯ ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ೫ರಲ್ಲಿ ಈ ಚೌಡಪ್ಪನಾಯಕನಿಗೆ ಕೆಳದಿಪುರದ ಅರಮನೆಯಲ್ಲಿ ರಾಜಪಟ್ಟವಾಯಿತು. ಪಟ್ಟವಾದ ಕೂಡಲೇ ನಾಯಕನು ಕೆಳದಿ, ಇಕ್ಕೇರಿ ಮೊದಲಾದ ಎಂಟು ಮಾಗಣೆಗಳ ಪ್ರಜೆಪರಿವಾರ ಹಾಗೂ ನೆರೆ ಸಾಮಂತರಿಂದ ಕಾಣಿಕೆಗಳನ್ನು ಪಡೆದನು. ಆಮೇಲೆ ಸಕಲರಿಗೂ ಸಂದರ್ಶನವಿತ್ತನಂತರ ನಾಲ್ಕುಕಡೆಯ ರಾಜರಿಗೂ ರಾಯಸವನ್ನು ಬರೆಸಿ ಉಚಿತ ಉಡುಗೊರೆಗಳನ್ನಿತ್ತು ಕಳುಹಿಸಿ ಬೀಳ್ಕೊಟ್ಟನು. ಹೀಗೆ ರಾಜ್ಯಭಾರವನ್ನು ನಿರ್ವಹಿಸುತ್ತಾ ಇದ್ದು ತನ್ನ ಕಾಲದಲ್ಲಿ ಶ್ರೀರಾಮೇಶ್ವರ ದೇವರ ಗರ್ಭಗೃಹವನ್ನು ಕಲ್ಲಿನಿಂದ ಕಟ್ಟಿಸಿದನು. ದೇವರ ಸೇವೆಯ ಹಾಗೂ ಪೂಜೆಯ ಬಗ್ಗೆ ಹಳ್ಳಿಬಯಲು ಗ್ರಾಮವನ್ನು ಮತ್ತು ಉತ್ತಮವಾದ ಇತರ ಪ್ರದೇಶಗಳನ್ನು ಶಿವಾರ್ಪಣವಾಗಿ ಧಾರೆ ಎರೆದನು. ದೇವರ ಪೂಜೆಯು ಯಾವ ರೀತಿಯಲ್ಲಿಯೂ

ರಾಯಸಮುಖದಿಂದೊದವಿದ ರಾಯರ ಜಯಕಜ್ಜಂಗಳನಾಗಿಸುತ್ತುಂ ದೆಸೆದೆಸೆಯೊಳತಿ ಪ್ರಖ್ಯಾತಿಯಂ ಪಡೆದು ಕೆಳದಿ ಇಕ್ಕೇರಿ ಚಂದ್ರಗುತ್ತಿ ಮುಂತಾದ ಮುಖಂಗಳೊಳ್ ವೈಹಾಳಿಗಳಂ ರಚಿಸುತ್ತತ್ಯಂತ ವಿಭವೋಪೇತನಾಗಿ ವರ್ತಿಸುತ್ತಿಂತು ಕತಿಪಯ ದಿವಸಂಗಳ್ ಪೋಗಲೊಂದವಸರದೊಳ್

ಕಂ|| ಸುತಸಹಿತಂ ಚೌಡಪಭೂ
ಪತಿ ತಾನಿಕ್ಕೇರಿಗೈದಿರಲ್ ಮೊಲಮೊಂದು
ನ್ನತಮಾದ ಶುನಕನಂ ತ
ತ್ಕ್ಷಿತಿಯೊಳ್ ಬೆಂಬತ್ತಿ ಪರಿಯುತಿರಲೀಕ್ಷಿಸುತುಂ ೭೭

ಕಂ|| ಇದು ತಾಂ ಪುಂಭೂಮಿಯೆನಿ
ಪ್ಪುದನರಿದೊಡನಲ್ಲಿ ಕೋಂಟೆಯಂ ಬಲಿದು ಬಳಿ
ಕ್ಕದರೊಳರಮನೆಯನಿಂದ್ರನ
ಸದನಕ್ಕಧಿಕಮೆನೆ ರಚನೆಗೈಸಿದನನುವಿಂ ೭೮

ವ|| ಇಂತರಮನೆಯಂ ರಚನೆಗೈಸಿ ತದುಪಯುಕ್ತಮಾದ ಬೊಕ್ಕಸ ಭಂಡಾರ ಲಾಯ ಗಜಾಶ್ವಶಾಲೆಯುಗ್ರಾಣ ಪಣತ ಮುಂತಾದ ಮಹಲ್ಗಳಂ ನಿರ್ಮಾಣಂಗೈಸಿ ಪುರ ಪೇಟೆ ತಳವಾರಗಟ್ಟೆ ಮುಂತಾದುವಂ ರಚನೆಗೈಸಿ ಪೊರಗುಕ್ಕುಡಮನೊಡ್ಡುಮಂ ಬಲಿಯಿಸಿ ತತ್ತದುಚಿತಸ್ಥಾನಂಗಳೊಳ್ ಶಸ್ತ್ರಾಸ್ತ್ರ ಪಾಣಿಗಳ ಕಾಯ್ಪು ಕಟ್ಟಲೆಗಳಂ ಪರುಠವಿಸಿ ನಿಜಾನುಜ ಭದ್ರಪ ನಾಯಕಸುತ ಸದಾಶಿವನಾಯಕ ಸ್ವಕುಟುಂಬಸಹಿತಂ ಸುಮುಹೂರ್ತದೊಳ್ ಕೆಳದಿಯರಮನೆಯಿಂ ತೆರಳ್ದತ್ಯಂತ ಸಂಭ್ರಮದಿಂ ಪ್ರಜೋತ್ಪತ್ತಿ ಸಂವತ್ಸರದ ಮಾಘ ಶುದ್ಧ ೫ ಯಲ್ಲಿಯಿಕ್ಕೇರಿಯರಮನೆಯಂ ಪೊಕ್ಕು

ಲೋಪವಾಗದಂತೆ ಏರ್ಪಡಿಸಿದನು. ಗುರುಲಿಂಗ ಜಂಗಮರಲ್ಲಿ ಪೂಜ್ಯಭಾವನೆಯನ್ನು ಹೊಂದಿ ಬಹು ವಿಧವಾದ ದಾನಧರ್ಮಗಳನ್ನು ಕೈಗೊಳ್ಳುತ್ತಾ, ವಿಜಯನಗರದ ರಾಯರ ಕಾರ್ಯವನ್ನು ಶ್ರದ್ಧೆಯಿಂದ ನಿರ್ವಹಿಸುತ್ತಾ ಪ್ರಖ್ಯಾತಿಯನ್ನು ಪಡೆದನು. ಕೆಳದಿ, ಇಕ್ಕೇರಿ ಹಾಗೂ ಚಂದ್ರಗುತ್ತಿ ಮುಂತಾದ ಕಡೆಗಳಲ್ಲಿ ಮೆರವಣಿಗೆ-ಉತ್ಸವಗಳನ್ನು ರಚಿಸುತ್ತಾ ಅತ್ಯಂತ ವೈಭವದಿಂದ ಬಾಳುತ್ತಿದ್ದನು. ಈ ರೀತಿ ಹಲವು ದಿವಸಗಳು ಕಳೆದ ನಂತರ ಒಮ್ಮೆ- ೭೭. ಚೌಡಪ್ಪರಾಜನು ಮಗನೊಡನೆ ಇಕ್ಕೇರಿಗೆ ಹೋಗಿದ್ದನು. ಅಲ್ಲಿ ಒಂದು ಮೊಲವು ಒಂದು ದೊಡ್ಡ ನಾಯಿಯನ್ನು ಆ ಸ್ಥಳದಲ್ಲಿ ಬೆನ್ನಟ್ಟಿಸಿಕೊಂಡು ಹೋಗುತ್ತಿದ್ದುದನ್ನು ಕಂಡನು. ೭೮. ಇದು ಗಂಡುಭೂಮಿಯಾಗಿರುವುದನ್ನು ತಿಳಿದು, ಕೂಡಲೇ ಅಲ್ಲಿ ಕೋಟೆಯನ್ನು ಕಟ್ಟಿಸಿ, ಅದರೊಳಗೆ ಇಂದ್ರನ ಅರಮನೆಗೂ ಮಿಗಿಲಾದ ಅರಮನೆಯನ್ನು ನಿರ್ಮಿಸಿದನು. ವ|| ಈ ರೀತಿಯ ಅರಮನೆಯನ್ನು ರಚನೆ ಮಾಡಿಸಿ, ಇದಕ್ಕೆ ಬೇಕಾಗುವ ಬೊಕ್ಕಸ, ಭಂಡಾರ, ಪೌಳಿ, ಆನೆ ಹಾಗೂ ಕುದುರೆಯ ಲಾಯಗಳು, ಉಗ್ರಾಣ, ಪಣತ ಮುಂತಾದುವುಗಳನ್ನು ನಿರ್ಮಿಸಿದನು. ಪಟ್ಟಣಕ್ಕೆ ಬೇಕಾಗುವ ಪುರ, ಪೇಟೆ, ತಳವಾರ ಕಟ್ಟೆ, ಸುಂಕದ ಕಟ್ಟೆ, ಸೇನಾರಕ್ಷಣೆ-ಮುಂತಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡನು. ಶಾಸ್ತ್ರಾಸ್ತ್ರಗಳನ್ನು ಸಂರಕ್ಷಿಸಲು ಏರ್ಪಡಿಸಿದನು. ತನ್ನ ತಮ್ಮ ಭದ್ರಪ್ಪನಾಯಕ ಹಾಗೂ ಮಗ ಸದಾಶಿವನಾಯಕ ಮತ್ತು ತನ್ನ ಕುಟುಂಬ ಸಹಿತನಾಗಿ ಒಂದು ಸುಮುಹೂರ್ತದಲ್ಲಿ ಕೆಳದಿಯ ಅರಮನೆಯಿಂದ ಹೊರಟು, ಪ್ರಜೋತ್ಪತ್ತಿ ಸಂವತ್ಸರದ ಮಾಘ ಶುದ್ಧ ೫ರಲ್ಲಿ

ಭದ್ರಸಿಂಹಾಸನಾರೂಢನಾಗಿ ರಾಜಮುದ್ರಾಧಿಕಾರದ ಧರ್ಮಕ್ಕೂಣೆಯಮೊಂದದಂತು ಪ್ರಜೆಪರಿವಾರಂಗಳನೋವುತ್ತಾವುದರಲ್ಲಿಯುಂ ತಾಂ ಜಾಗ್ರುತ್ತುರುಷನೆಂದೆನಿಸಿ ನಾಲ್ದೆಸೆಯ ಮನ್ನೆಯರ್ಕಳೊಳ್ ಕೆಳದಿಯ ಚೌಡಪ್ಪನಾಯಕನೆಂದು ಪರಮ ಪ್ರಸಿದ್ಧಿಯಂ ಪಡೆದಿಂತು ವರ್ತಿಸುತ್ತುಂ

ಕಂ॥ ರಾಯರ್ ಬೆಸಸಿದ ಕಾರ್ಯನಿ
ಕಾಯವನಾಗಿಸುತೆ ಚೌಡನೃಪನವನಿಪಧೌ
ರೇಯನೆಂದೆನಿಸಿ ರಾಜ್ಯ
ಶ್ರೀಯಂ ಸದ್ಧರ್ಮದಿಂದೆ ಪರಿಪಾಲಿಸಿದಂ ೭೯

ವ॥ ಇಂತಾ ಕೆಳದಿಯ ಚೌಡಪನಾಯಕಂ ತನಗೆ ರಾಜಪಟ್ಟಮಾದ ಶಕವರ್ಷ ೧೪೨೨ನೆಯ ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ೩ ಯಾರಭ್ಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೨ ನೆಯ ನೆಲೆಗೆ ವರ್ಷಂ ೧೩ ತಿಂಗಳು ೬ ಪರ್ಯಂತಂ ಸದ್ಧರ್ಮದಿಂ ರಾಜ್ಯ ಪರಿಪಾಲನಂಗೈದಂ

ಸಂಭ್ರಮದಿಂದ ಇಕ್ಕೇರಿಯ ಅರಮನೆಗೆ ಪ್ರವೇಶಮಾಡಿದನು. ಅಲ್ಲಿಯೇ ನೆಲೆಯಾಗಿ ನಿಂತು ಧರ್ಮಕ್ಕೆ ಯಾವ ವಿಧವಾದ ಲೋಪವೂ ಬಾರದಂತೆ ರಾಜಮುದ್ರಾಧಿಕಾರದ ಕಾರ್ಯವನ್ನೆಸಗುತ್ತಾ, ಪ್ರಜೆ ಪರಿವಾರದವರನ್ನು ಕಾಪಾಡುವುದರಲ್ಲಿ ಸದಾ ಎಚ್ಚರವಿರುವ ಪುರುಷನೆನಿಸಿಕೊಂಡು ಬಾಳಿದನು. ಹೀಗೆ ನಾಲ್ಕು ದಿಕ್ಕಿನಲ್ಲಿಯೂ ಇರುವ ಸಾಮಂತರಲ್ಲಿ ಕೆಳದಿಯ ಚೌಡಪ್ಪನಾಯಕನು ಅಗ್ರಗಣ್ಯನೆಂದು ಪ್ರಸಿದ್ಧಿಯನ್ನು ಪಡೆದು ವರ್ತಿಸುತ್ತಿದ್ದನು. ೭೯. ರಾಯರು ಹೇಳಿದ ಕಾರ್ಯಗಳೆಲ್ಲವನ್ನೂ ಮಾಡುತ್ತಾ ಚೌಡಪ್ಪನಾಯಕನು ಅರಸರ ಮುಖಂಡನೆನಿಸಿ ರಾಜ್ಯಲಕ್ಷ್ಮಿಯನ್ನು ಧರ್ಮದಿಂದ ಪರಿಪಾಲಿಸಿದನು. ವ॥ ಈ ರೀತಿಯಲ್ಲಿ ಆ ಚೌಡಪ್ಪನಾಯಕನು ತನಗೆ ರಾಜ್ಯಪಟ್ಟವಾದ ಶಕ ವರ್ಷ ೧೪೨೨ನೆಯ ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ೩ ರಿಂದ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೨ರವರೆಗೆ ಸಲ್ಲುವ ಹದಿಮೂರು ವರ್ಷ ಮತ್ತು ಆರು ತಿಂಗಳುಗಳವರೆಗೂ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿದನು.

# ದ್ವಿತೀಯಾಶ್ವಾಸಂ

ವ॥ ಆ ಚೌಡಪ್ಪ ನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೩೬ನೆಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ಯಲ್ಲಿ ಕೆಳದಿ ಚೌಡಪ್ಪನಾಯಕರ ಕುಮಾರರಾದ ಸದಾಶಿವರಾಯನಾಯಕರಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜಪಟ್ಟಂ –

ಕಂ॥ ವರಚೌಡಪನೃಪತಿಯನಂ
ತರದೊಳ್ ತನುಜನಹ ಸದಾಶಿವಧರಣೀ
ಶ್ವರನರಿಕುಲಮದ ತಿಮಿರೋ
ತ್ಕರ ದಿನಕರನಾಳ್ದನೊಪ್ಪುವವನೀತಳಮಂ ೧

ಉ॥ ಆ ನರನಾಥಪುಂಗವನರಾತಿಮದೇಭವಿದಾರಣೋಗ್ರಪಂ
ಚಾನನನಾನತಾಮರಮಹೀಜನಶೇಷಕಲಾಪ್ರವೀಣನೀ
ಶಾನಕೃಪಾಕಟಾಕ್ಷಪರಿಲಬ್ಧ ಮಹೋನ್ನತಭೂರಿವೈಭವಂ
ತಾನೆಸೆದಂ ಮಹಾಧಿಕಸದಾಶಿವನಾಯಕನುಗ್ರಸಾಯಕಂ ೨

ವ॥ ಇಂತು ವಿರಾಜಿಸುತ್ತುಮಿರಲ್ ಕತಿಪಯದಿನಂಗಳ್ ಪೋಗಲೊಡನೆ

ಉ॥ ಶಂಕರಪಾದಪದ್ಮಮದಭೃಂಗ ಸದಾಶಿವರಾಯನಾಯಕಂ
ಗಂ ಕಡುಚೆಲ್ವ ಪುತ್ರನೊಗೆದಂ ಸದಶೇಷಸುಖಪ್ರದಾಯಕಂ
ಅಂಕದೊಳೈದೆ ಮಾರ್ಮಲೆವರಾತಿಗಳುರ್ವ ನಿವಾರಿಪುಜ್ಜ್ವಲ
ತ್ಸಂಕಣನಾಯಕಂ ಶುಭವಿಧಾಯಕನಾತ್ತಜಯೋಗ್ರಸಾಯಕಂ ೩

ವ॥ ಆ ಚೌಡಪ್ಪನಾಯಕನ ನಂತರ ಶಾ.ಶ. ೧೪೩೬ (ಕ್ರಿ.ಶ. ೧೫೧೪)ನೇ ಶ್ರೀಮತ್ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ರಂದು ಕೆಳದಿಯ ಚೌಡಪ್ಪನಾಯಕನ ಕುಮಾರನಾದ ಸದಾಶಿವರಾಯನಾಯಕನಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜ್ಯದ ಪಟ್ಟಾಭಿಷೇಕವಾಯಿತು. ೧. ಚೌಡಪ್ಪನಾಯಕನ ಬಳಿಕ ಅವನ ಮಗನಾದ ಸದಾಶಿವನಾಯಕನು ಶತ್ರುಸಮೂಹದ ಸೊಕ್ಕು ಅಥವಾ ಗರ್ವವೆಂಬ ಕತ್ತಲೆಗೆ ಸೂರ್ಯ ನಂತೆ ಮೆರೆಯುವವನಾಗಿ ರಾಜ್ಯವಾಳಿದನು. ೨. ಆ ರಾಜಶ್ರೇಷ್ಠನು ಶತ್ರುಗಳೆಂಬ ಮದ್ದಾನೆಗಳನ್ನು ಸೀಳಬಲ್ಲ ಸಿಂಹ; ನಂಬಿದವರಿಗೆ ಕಲ್ಪವೃಕ್ಷ ; ಎಲ್ಲಾ ಕಲೆಗಳಲ್ಲೂ ಪ್ರವೀಣನು; ಶಿವನ ಕೃಪಾಕಟಾಕ್ಷದಿಂದ ಹೆಚ್ಚು ವೈಭವಗಳನ್ನು ಹೊಂದಿದವನು; ಉಗ್ರವಾದ ಬಾಣಗಳನ್ನು ಹೊಂದಿದ ಸದಾಶಿವನಾಯಕನು ಎಲ್ಲರಿಗಿಂತ ಮಿಗಿಲು. ವ॥ ಈ ರೀತಿ ರಾರಾಜಿಸುತ್ತಾ ಇರಲು ಕೆಲವು ದಿನಗಳು ಕಳೆಯಲು ೩. ಶಿವನ ಪಾದಕಮಲಗಳಲ್ಲಿ ದುಂಬಿಯಂತಿರುವ ಸದಾಶಿವರಾಯನಾಯಕನಿಗೆ ಸುಂದರನಾದ ಮತ್ತು ಸಜ್ಜನರಿಗೆ ಸುಖದಾಯಕನಾದ ಮಗನು ಹುಟ್ಟಿದನು. ಆತನು ಯುದ್ಧದಲ್ಲಿ ಸೊಕ್ಕಿದ ಶತ್ರುಗಳ ಗರ್ವವನ್ನು ಹೋಗಲಾಡಿಸ ಬಲ್ಲವನು. ಶುಭವನ್ನು ಉಂಟುಮಾಡತಕ್ಕಂಥವನು, ಕಠೋರವಾದ ಬಾಣಗಳನ್ನು ಹೊಂದಿದ ಆತನೇ

ಕಂ॥ ಮಗುಳಾ ಸದಾಶಿವೇಂದ್ರಂ
ಗೊಗೆದಂ ಸತ್ಪುತ್ರನೊರ್ವನನುಪಮರೂಪಂ
ಮಿಗೆ ಸತ್ಕೀರ್ತಿಕಲಾಪಂ
ಜಗತೀಸುಮಚಾಪ ಚಿಕ್ಕಸಂಕಣಭೂಪಂ ೪

ವ॥ ಇಂತೊಗೆದು ವಿರಾಜಿಸುತಿರ್ಪ ಸತ್ಪುತ್ರರಿರ್ವರ್ಗಂ ನವಯೌವನೋದಯ ಮಾಗಲೊಡನೋರೊರ್ವರ್ಗಿರಿರ್ವರ್ ಕನ್ಯಾರತ್ನಂಗಳನತ್ಯಂತವಿಭವದಿಂ ವಿವಾಹಮಂ ರಚಿಸಿ ತತ್ಸುತರ್ಕಳ್ವೆರಸತಿ ಸಂಭ್ರಮಸುಖಸಂಕಥಾವಿನೋದದಿಂ ರಾಜ್ಯಂಗೈಯುತ್ತುಮಿರಲಾ ಪ್ರಸ್ತಾವದೊಳ್

ಚಂ॥ ಮಿಸುಗುವರಾತಿಜಾಲವದಟಿಂ ಮಿಗೆ ಮಗ್ಗಿಸೆ ಕೃಷ್ಣರಾಯರೀ
ದೆಸೆಗೆ ಚಮೂಸಮೂಹವೆರಸೈದಿರೆ ಚೌಡಪಸೂನುವೈದಿ ಸಂ
ಧಿಸೆ ಮಿಗೆ ಮನ್ನಿಸುತ್ತೆಮಗೆ ಮಾರ್ಮಲೆತಿರ್ಪಹಿತಾವನೀಶ್ವರ
ಪ್ರಸರದ ಗರ್ವಮಂ ತವಿಸಿ ನೀಂ ಬಹುದೆಂದು ತೆರಳ್ಚಲೊಲ್ಮೆಯಿಂ ೫

ವ॥ ಇಂತೆಂದು ನಿಯಾಮಿಸಿಯುಚಿತಮಾದುಡುಗೊರೆಯನಿತ್ತು ನಾಂ ಬರ್ಪನಿತರೊಳ್ ನೀಂ ಮುಂತೈದಿ ಕಲ್ಯಾಣ ಕಲುಬುರಗಿ ಕೋಂಟೆಗಳಂ ಕೊಂಬುದೆಂದೊರೆದು ಕೂಡೆ ಕೆಲವಶ್ವಗಜಪದಾತಿಗಳಂ ಕೂಡಿಸಿ ಬೀಳ್ಕೊಡಲೊಡನೆ ಸೈನ್ಯಸಮೇತಂ ತೆರಳ್ದು ದಾಳಿವರಿಯಲೀ ವಾರ್ತೆಯಂ ಕೇಳ್ದು ತಾವ್ರುತುಂಡಾಗ್ರೇಸರನಪ್ಪ ಆಮುದಾನಗರದ ಭೈರೀ ನಿಜಾಮ

ಸಂಕಣನಾಯಕನು. ೪. ಆಮೇಲೆ ಸದಾಶಿವರಾಯನಾಯಕನಿಗೆ ಚಿಕ್ಕಸಂಕಣ್ಣನೆಂಬ ಇನ್ನೊಬ್ಬ ಸತ್ಪುತ್ರನು ಹುಟ್ಟಿದನು. ಅವನ ರೂಪ ಅಸಮಾನವಾದದ್ದು; ಲೋಕಕ್ಕೆ ಮನ್ಮಥನಂತಹವನು; ಸತ್ಕೀರ್ತಿಶಾಲಿಯು. ವ॥ ಈ ರೀತಿ ಪ್ರಕಾಶಿಸುತ್ತಿದ್ದ ಈ ಇಬ್ಬರು ಸತ್ಪುತ್ರರಿಗೆ ಹೊಸ ಪ್ರಾಯ ಪ್ರಾರಂಭವಾದ ಕೂಡಲೇ ಒಬ್ಬೊಬ್ಬರಿಗೆ ಇಬ್ಬರಂತೆ ಕನ್ಯಾರತ್ನಗಳನ್ನು ತಂದುಕೊಂಡು ಅತ್ಯಂತ ವೈಭವದಿಂದ ಮದುವೆಮಾಡಿ, ಆ ಪುತ್ರರೊಡನೆ ಕೂಡಿ ಅತಿ ಸಂಭ್ರಮದಿಂದ ಸುಖ ಸಂಕಥಾ ವಿನೋದದಿಂದ ರಾಜ್ಯವನ್ನು ಪರಿಪಾಲಿಸುತ್ತಿರಲು ಆ ಸಮಯದಲ್ಲಿ ೫. ವಿಜಯನಗರದ ಕೃಷ್ಣರಾಯರು ಶತ್ರುಗಳ ಅಬ್ಬರವನ್ನು ಅಡಗಿಸಲು ಸೈನ್ಯದೊಂದಿಗೆ ಈ ದಿಕ್ಕಿಗೆ ಬಂದಾಗ ಚೌಡಪ್ಪನ ಮಗನು ಹೋಗಿ ಸಂಧಿಸಿದನು. ಆಗ ಕೃಷ್ಣರಾಯನು ನಮಗೆ ವಿರೋಧಿಗಳಾದ ಅರಸರ ಗರ್ವವನ್ನು ನೀನು ಮುರಿದು ಬರಬೇಕೆಂದು ಪ್ರೀತಿಯಿಂದ ಕಳುಹಿಸಿಕೊಟ್ಟನು. ವ॥ ಈ ರೀತಿಯಾಗಿ ನಿಯಮಿಸಿ ಉಚಿತವಾದ ಉಡುಗೊರೆಗಳನ್ನು ಕೊಟ್ಟು, "ನಾನು ಬರುವಷ್ಟರೊಳಗೆ ನೀನು ಮುಂದೆ ಹೋಗಿ ಕಲ್ಯಾಣ-ಕಲ್ಬುರ್ಗಿ ಕೋಟೆಗಳನ್ನು ಸಾಧಿಸಿಕೊಂಡು ಬರಬೇಕು" ಎಂದು ಹೇಳಿ, ಅವನ ಜೊತೆಗೆ ಹಲವು ಕುದುರೆ, ಆನೆ ಮತ್ತು ಕಾಲಾಳುಗಳನ್ನು ಕೂಡಿಸಿ ಕಳುಹಿಸಿ ಕೃಷ್ಣರಾಯನು ಬೀಳ್ಕೊಟ್ಟನು. ಹೀಗೆ ಸೈನ್ಯಸಹಿತ ಹೊರಟು ದಾಳಿ ಮಾಡಲಾಗಿ, ಈ ಸಮಾಚಾರವನ್ನು ಕೇಳಿದ ಯವನಾಗ್ರೇಸರನು ಅಹಮ್ಮದ್ ನಗರದ ಭೈರೀ ನಿಜಾಂ ಪಾತುಶಾಹನ ಅಪ್ಪಣೆ (ಅನುಮತಿ)ಯಿಂದ ಫೇರೋಜಖಾನ, ತಾಲೀತಖಾನ, ಸಂಜರ್‌ಖಾನ, ಶಾಹೇಖಾನ, ಮುನಿಲ ಖಾನ, ದಸ್ತುರಖಾನ, ವಜ್ರಖಾನ, ರಾವುತಖಾನ

# ದ್ವಿತೀಯಾಶ್ವಾಸಂ

ವ॥ ಆ ಚೌಡಪ್ಪ ನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೩೬ನೆಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ಯಲ್ಲಿ ಕೆಳದಿ ಚೌಡಪ್ಪನಾಯಕರ ಕುಮಾರರಾದ ಸದಾಶಿವರಾಯನಾಯಕರಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜಪಟ್ಟಂ -

ಕಂ॥ ವರಚೌಡಪನೃಪತಿಯನಂ
ತರದೊಳ್ ತನುಜನಹ ಸದಾಶಿವಧರಣೀ
ಶ್ವರನರಿಕುಲಮದ ತಿಮಿರೋ
ತ್ಕರ ದಿನಕರನಾಳ್ದನೊಪ್ಪುವವನೀತಳಮಂ ೧

ಉ॥ ಆ ನರನಾಥಪುಂಗವನರಾತಿಮದೇಭವಿದಾರಣೋಗ್ರಪಂ
ಚಾನನನಾನತಾಮರಮಹೀಜನಶೇಷಕಲಾಪ್ರವೀಣನೀ
ಶಾನಕೃಪಾಕಟಾಕ್ಷಪರಿಲಬ್ಧ ಮಹೋನ್ನತಭೂರಿವೈಭವಂ
ತಾನೆಸೆದಂ ಮಹಾಧಿಕಸದಾಶಿವನಾಯಕನುಗ್ರಸಾಯಕಂ ೨

ವ॥ ಇಂತು ವಿರಾಜಿಸುತ್ತುಮಿರಲ್ ಕತಿಪಯದಿನಂಗಳ್ ಪೋಗಲೊಡನೆ

ಉ॥ ಶಂಕರಪಾದಪದ್ಮಮದಭೃಂಗ ಸದಾಶಿವರಾಯನಾಯಕಂ
ಗಂ ಕಡುಚೆಲ್ವ ಪುತ್ರನೊಗೆದಂ ಸದಶೇಷಸುಖಪ್ರದಾಯಕಂ
ಅಂಕದೊಳ್ಕೆದೆ ಮಾರ್ಮಲೆವರಾತಿಗಳುರ್ವ ನಿವಾರಿಪುಜ್ಜ್ವಲ
ತ್ಸಂಕಣನಾಯಕಂ ಶುಭವಿಧಾಯಕನಾತ್ತಜಯೋಗ್ರಸಾಯಕಂ ೩

ವ॥ ಆ ಚೌಡಪ್ಪನಾಯಕನ ನಂತರ ಶಾ.ಶ. ೧೪೩೬ (ಕ್ರಿ.ಶ. ೧೫೧೪)ನೇ ಶ್ರೀಮತ್ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ರಂದು ಕೆಳದಿಯ ಚೌಡಪ್ಪನಾಯಕನ ಕುಮಾರನಾದ ಸದಾಶಿವರಾಯನಾಯಕನಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜ್ಯದ ಪಟ್ಟಾಭಿಷೇಕವಾಯಿತು. ೧. ಚೌಡಪ್ಪನಾಯಕನ ಬಳಿಕ ಅವನ ಮಗನಾದ ಸದಾಶಿವನಾಯಕನು ಶತ್ರುಸಮೂಹದ ಸೊಕ್ಕು ಅಥವಾ ಗರ್ವವೆಂಬ ಕತ್ತಲೆಗೆ ಸೂರ್ಯನಂತೆ ಮೆರೆಯುವವನಾಗಿ ರಾಜ್ಯವಾಳಿದನು. ೨. ಆ ರಾಜಶ್ರೇಷ್ಠನು ಶತ್ರುಗಳೆಂಬ ಮದ್ದಾನೆಗಳನ್ನು ಸೀಳಬಲ್ಲ ಸಿಂಹ; ನಂಬಿದವರಿಗೆ ಕಲ್ಪವೃಕ್ಷ ; ಎಲ್ಲಾ ಕಲೆಗಳಲ್ಲೂ ಪ್ರವೀಣನು; ಶಿವನ ಕೃಪಾಕಟಾಕ್ಷದಿಂದ ಹೆಚ್ಚು ವೈಭವಗಳನ್ನು ಹೊಂದಿದವನು; ಉಗ್ರವಾದ ಬಾಣಗಳನ್ನು ಹೊಂದಿದ ಸದಾಶಿವನಾಯಕನು ಎಲ್ಲರಿಗಿಂತ ಮಿಗಿಲು. ವ॥ ಈ ರೀತಿ ರಾರಾಜಿಸುತ್ತಾ ಇರಲು ಕೆಲವು ದಿನಗಳು ಕಳೆಯಲು ೩. ಶಿವನ ಪಾದಕಮಲಗಳಲ್ಲಿ ದುಂಬಿಯಂತಿರುವ ಸದಾಶಿವರಾಯನಾಯಕನಿಗೆ ಸುಂದರನಾದ ಮತ್ತು ಸಜ್ಜನರಿಗೆ ಸುಖದಾಯಕನಾದ ಮಗನು ಹುಟ್ಟಿದನು. ಆತನು ಯುದ್ಧದಲ್ಲಿ ಸೊಕ್ಕಿದ ಶತ್ರುಗಳ ಗರ್ವವನ್ನು ಹೋಗಲಾಡಿಸ ಬಲ್ಲವನು. ಶುಭವನ್ನು ಉಂಟುಮಾಡತಕ್ಕಂಥವನು, ಕಠೋರವಾದ ಬಾಣಗಳನ್ನು ಹೊಂದಿದ್ದ ಆತನೇ

ಕಂ|| ತಾಲಿತಖಾನನ ಸಮರದ
ಲೀಲೆಯನುರೆ ನಿಲಿಸಿ ಕುಂತದಿಂ ದಸ್ತುರನಂ
ಕೀಲಿಸಿ ಫೇರೋಜನ ಕ
ಣ್ಣಾಲಿಗೆ ನೀರ್ವರಿಸಿ ಕೆಡಪಿದಂ ಶಾತೆಯನಂ ೭

ಔಂಕಿದ ಸಂಜನಖಾನನ
ಬಿಂಕವನುರೆಮುರಿದು ವಜ್ರಖಾನನನಾದಂ
ತೇಂಕಿಸಿ ರಾವುತಖಾನನ
ನಂಕದೆ ಗೆಲ್ದೆಸೆವ ಮುನಿಲಖಾನನ ಮುರಿದಂ ೮

ಮುರಿದ ವಜೀರರನೀಕ್ಷಿಸು
ತುರುತರಕೋಪದೊಳಿದಿರ್ಚಿ ಸೈನ್ಯಸಮೇತಂ
ತರುಬಿ ಮಾರ್ಮಲೆತು ಕೈಗೆ
ಯ್ಯುರುಬುವ ಕಲಿ ಬೊಕ್ಕಸಿಂಗನಂ ನೋಯಿಸಿದಂ ೯

ಮಿಕ್ಕುರುಬುವ ಭಟರಂ ಖ
ಡ್ಗಕ್ಕಾಹುತಿಯಿತ್ತು ಕುಂತದಿಂ ಕೆಲಕೆಲರಂ
ಸೆಕ್ಕಿ ಶರಹತಿಯಿನನಿಬರ
ಡೊಕ್ಕೆಗಳಂ ಡೋರುಗಳೆದನಾ ನೃಪತಿಲಕಂ ೧೦

ವ|| ಇಂತೀ ಪ್ರಕಾರದೊಳ್ ಮಹಾಯುದ್ಧಮಂ ರಚಿಸಿ

ಕಂ|| ವರಜಂಬುಖಂಡಿಯೆಡೆಯೊಳ್
ತರುಬಿದ ತೌರುಷ್ಕಪತಿಯ ಖಾನರನೆಲ್ಲಂ
ಕುರಿದರಿದು ಬೊಕ್ಕಸಿಂಗನ
ಸೆರೆವಿಡಿದೆಳ್ತಂದು ರಾಯರಿಂಗೊಪ್ಪಿಸಿದಂ ೧೧

ಸ್ಥಿರವಾಗಿ ನಿಂತು ಮಹಾಯುದ್ಧವನ್ನು ಹೂಡಿ ೭. ಅವನು ತಾಲಿತಖಾನನ ರಣಲೀಲೆಯನ್ನು ನಿಲ್ಲಿಸಿದನು. ದಸ್ತುರಖಾನನನ್ನು ಕುಂತದಿಂದ ಇರಿದನು. ಫೇರೋಜಖಾನನ ಕಣ್ಣಿನಲ್ಲಿ ನೀರು ಬರಿಸಿದನು. ಶಾತೇಯಖಾನನನ್ನು ಬೀಳಿಸಿದನು. ೮. ಒತ್ತಿಬಂದ ಸಂಜನಖಾನನ ಬಿಂಕವನ್ನು ಮುರಿದನು. ವಜ್ರಖಾನನನ್ನು ಹಣ್ಣುಹಣ್ಣು ಮಾಡಿದನು. ರಾವುತ ಖಾನನನ್ನು ಗೆದ್ದು ಮುನಿಲಖಾನನನ್ನು ಸೋಲಿಸಿದನು. ೯. ಸೋತ ಮಂತ್ರಿಗಳನ್ನು ಕಂಡು ಕೋಪಗೊಂಡು ಸೊಕ್ಕಿನಿಂದ ಸೈನ್ಯ ಸಮೇತನಾಗಿ ಹೋರಾಡಲು ಬಂದ ಪರಾಕ್ರಮಶಾಲಿಯಾದ ಬೊಕ್ಕಸಿಂಗನನ್ನು ತಡೆದು ನಿಲ್ಲಿಸಿದನು. ೧೦. ಮುನ್ನುಗ್ಗಿ ಬರುವ ಸೈನಿಕರನ್ನು ಖಡ್ಗಕ್ಕೆ ಬಲಿಕೊಟ್ಟನು. ಕುಂತದಿಂದ ಕೆಲವರನ್ನು ಚುಚ್ಚಿದನು; ಬಾಣ ಪ್ರಹಾರಗಳಿಂದ ಅನೇಕರ ದೇಹಗಳನ್ನು ಕೊರೆದನು. ವ|| ಇಂತಹ ರೀತಿಯಲ್ಲಿ ಘೋರವಾದ ಯುದ್ಧವನ್ನು ಉಂಟುಮಾಡಿ ೧೧. ಜಂಬುಖಂಡಿ ಪ್ರದೇಶದಲ್ಲಿ ಅಡ್ಡಗಟ್ಟಿದ ತುರುಕ ಧಾಳಿಕಾರನ ಎಲ್ಲ ಖಾನರನ್ನೂ ಕೊಚ್ಚಿಹಾಕಿ ಬೊಕ್ಕಸಿಂಗನನ್ನು ಸೆರೆಹಿಡಿದು

ವ|| ಇಂತೆಸೆವ ಪರಾಕ್ರಮಶಾಲಿಯಪ್ಪ ಬೊಕ್ಕಸಿಂಗನಂ ಕೈಸೆರೆವಿಡಿದೊಪ್ಪಿಸಿ ರಾಯಂ ಪರಮಸಂತೋಷಂಬಡಿಸಿ ಬಹುಳಸನ್ಮಾನವನಾಂತು ಮನ್ನೆಯರ್ಕಳೊಳ್ ಪರಮ ಪ್ರಸಿದ್ಧಿಯಂ ಪಡೆದನಂತುಮಲ್ಲದೆಯುಂ

ಕಂ|| ಆ ತರುವಾಯಿಯೊಳಂ ಪ್ರೊ
ಕ್ಕಾತಂ ರಾಯರ್ಗೆ ಮಲೆತ ಕಲ್ಯಾಣದ ವಿ
ಖ್ಯಾತ ಸುದುರ್ಗವರಾತಿ
ವ್ರಾತವನುರೆ ಪೊಯ್ದು ಲಗ್ಗೆಯೊಳ್ ಸಾಧಿಸಿದಂ ೧೨

ಮೆರೆವಾ ದುರ್ಗವನಾ ನೃಪ
ನುರೆ ಕೊಂಡಿಮ್ಮಡಿಸದಾಶಿವೇಂದ್ರನೆನಿಪ್ಪೀ
ಬಿರುದಿನಭಿಧಾನಮಂ ಮಿ
ಕ್ಕರಸರ್ ತಲೆದೂಗೆ ರಾಯರಿಂ ಪಡೆದೆಸೆದಂ ೧೩

ವ|| ಮತ್ತಮಾ ಕಲ್ಯಾಣದುರ್ಗಮಂ ಕೊಂಡು ಬರ್ಪವಸರದೊಳ್ ಕಲುಬುರಗಿಯವರ್ ಮಾರ್ಮಲೆತಿರಲ್ ಕೃಷ್ಣರಾಯರಲ್ಲಿ ನಿಂತು ತಮ್ಮ ಕರಕಮಲದೊಳ್ ಪಿಡಿದಿರ್ಪ ಜಮವಾಡವನ್ನ ಕೋಂಟೆಗಂ ಪರಿದು ತಮ್ಮ ಸಮೀಪದೊಳಿರ್ಪ ಮನ್ನೆಯರ್ಕಳಂ ಕರೆದೀ ಕೋಂಟೆಯಂ ತೆಗೆದುಕೊಂಬುದೆಂದು ನಿಯಾಮಿಸಲವರ್ಗಳಿದೆಮಗಶಕ್ಯಮಾದ ಕಜ್ಜಮೆಂದು ಮುಂಪೋಗಲಾಮ್ಮ ದಾಲೋಚಿಸುತ್ತಮಿರಲಾ ಪ್ರಸ್ತಾವದೊಳ್

ರಾಯರಿಗೆ ಒಪ್ಪಿಸಿದನು. ವ|| ಈ ರೀತಿ ಮೆರೆದ ಪರಾಕ್ರಮಶಾಲಿಯಾದ ಬೊಕ್ಕಸಿಂಗನನ್ನು ರಾಯರ ಸಮಕ್ಷಮದಲ್ಲಿ ಸೆರೆಹಿಡಿದು ಒಪ್ಪಿಸಿ, ಅವರನ್ನು ಬಹುವಾಗಿ ಸಂತೋಷಪಡಿಸಿ, ಹೆಚ್ಚಿನ ಸನ್ಮಾನವನ್ನು ಪಡೆದು ಮಾನ್ಯರಾದ ಸಾಮಂತರಲ್ಲಿ ಹೆಚ್ಚಿನ ಕೀರ್ತಿಯನ್ನು ಹೊಂದಿದನು, ಮಾತ್ರವಲ್ಲದೆ, ೧೨. ಆಮೇಲೆ ರಾಯರಿಗೆ ತಿರುಗಿಬಿದ್ದ ಶತ್ರುಸಮೂಹ ವನ್ನು ಹೊಡೆದುರುಳಿಸಿ, ಕಲ್ಯಾಣದ ದುರ್ಗವನ್ನು ಲಗ್ಗೆಹೊಡೆದು ವಶಪಡಿಸಿಕೊಂಡನು. ೧೩. ಹೀಗೆ ಆ ಸದಾಶಿವನಾಯಕನು ಕಲ್ಯಾಣ ದುರ್ಗವನ್ನು ಸಾಧಿಸಿದ್ದರಿಂದ "ಸದಾಶಿವೇಂದ್ರ" ಎಂಬ ಬಿರುದಿನ ಹೆಸರನ್ನು ರಾಯರಿಂದ ಪಡೆದು ಉಳಿದ ರಾಜರು ತಲೆದೂಗುವಂತೆ ಮೆರೆದನು. ವ|| ಮತ್ತೆ ಆ ಕಲ್ಯಾಣದುರ್ಗವನ್ನು ಸ್ವಾಧೀನಮಾಡಿ ಕೊಂಡು ಬರುವ ಅವಸರದಲ್ಲಿ ಕಲುಬುರ್ಗಿಯ ಪಾಳೆಯಗಾರರು ಸೊಕ್ಕಿನಿಂದ ಇದ್ದು ಪೀಡಿಸಲು ಕೃಷ್ಣರಾಯರು ಅಲ್ಲಿ ನಿಂತು ತಮ್ಮ ಕೈಯ ಹಿಡಿತದಲ್ಲಿ ಇದ್ದ ಜಮವಾಡವ ಕೋಟೆಯನ್ನು ಸಾಧಿಸಿ, ತಮ್ಮ ಹತ್ತಿರದಲ್ಲಿದ್ದ ಸಾಮಂತರನ್ನು ಕರೆದು ಈ ರೀತಿ ನಿಯಮಿಸಿದರು: 'ನೀವು ಕಲುಬುರ್ಗಿಯ ಕೋಟೆಯನ್ನು ಕೈವಶಮಾಡಿ ಕೊಳ್ಳ ಬೇಕು.' ಆದರೆ ಆ ಸಾಮಂತರು ಇದು ತಮಗೆ ಸಾಧ್ಯವಲ್ಲದ ಕಾರ್ಯವೆಂದು ಮುಂದೆ ಹೋಗಲಾರದೆ ಆಲೋಚನೆ ಮಾಡುತ್ತಿರಲು, ಆ ಸಂದರ್ಭದಲ್ಲಿ

ಕಂ॥ ಭೀಕರರಿಪುಸೇನಾ
ನೀಕವನಸಿಯರೆಯುತಧಿಕಶೌರ್ಯದೊಳೊಳಬಿ
ಳ್ದಾ ಕಲುಬುರುಗಿಯ ದುರ್ಗವ
ನೇಕಮುಹೂರ್ತದೊಳೆ ತನ್ನೃಪಂ ಸಾಧಿಸಿದಂ ೧೪

ಕಲುಬುರುಗಿಯ ದುರ್ಗವನಿಂ
ತಳವಿಯೊಳಂ ಕೊಂಡು ರಾಯರಂ ಮೆಚ್ಚಿಸಿಯ
ಗ್ಗಳನೆನಿಸಿ ಕೋಂಟೆ ಕೋಲಾ
ಹಲನೆನಿಪೀ ಬಿರುದನಾಂತು ರಾರಾಜಿಸಿದಂ ೧೫

ವ॥ ಇಂತು ಕಲುಬುರುಗಿಯ ದುರ್ಗಮಂ ಧೂಳಿಗೋಂಟೆಯಂ ಕೊಂಡನಂತರಂ

ಚಂ॥ ಕಡುಗಲಿ ಕೃಷ್ಣರಾಯರುರೆ ಜಾಲೆಯ ಪಾಳೆಡೆಗೈದೆ ಬಂದು ಮೆ
ಲ್ಲಡಿಗಳನೈದೆ ಸಂಧಿಸದಹಂಕೃತಿಯಿಂ ಕರಮಂದಿದಿರ್ಚಿ ನಿಂ
ದೆಡವ ಮುರಾರಿಯೆಂಬದಟರಂ ಮುರಿದೇರ್ದವರಿರ್ಪ ಕೋಂಟೆಗೊಂ
ಡೆಡವಮುರಾರಿಯೆಂಬ ಬಿರುದಂ ಪಡೆದೊಪ್ಪಿದನಾ ನರಾಧಿಪಂ ೧೬

ವ॥ ಮತ್ತಮಲ್ಲದಾ ಕೃಷ್ಣರಾಯಂ ಸದಾಶಿವನಾಯಕನಂ ಕರೆದು ತನಗೆ ಮಾರ್ಮಲೆ ತಿರ್ಪ ಬರೀದ ಪಾತುಶಾಹನ ಮದೋದ್ರೇಕಮಂ ಮಗ್ಗಿಸಿ ಬರ್ಪುದೆಂದು ನಿಯಮಿಸಿ ಕಳುಪಲ್ ದಾಳಿವರಿಯುತ್ತೈತರ್ಪ ವಾರ್ತೆಯಂ ಬರೀದಪಾತುಶಾಹಂ ಕೇಳ್ದತ್ಯಂತ ಕೋಪಾಟೋಪದಿಂದ ತ್ಯದ್ಭುತಪರಾಕ್ರಮಶಾಲಿಗಳಪ್ಪ ವಜೀರರ್ಕಳ್ವೆರಸಪರಿಮಿತಹಸ್ತ್ಯಶ್ವಪದಾತಿಸಮೂಹಸಮೇತನಾಗಿ ತೆರಳ್ದೈತಂದು ರಣಕ್ಕಿದಿರ್ಚಿ ನಿಲಲುಭಯಸೈನ್ಯಕ್ಕಂ ಕೈಗಲಸಿ ಮಹಾದ್ಭುತಮಾದ ತುಮುಲಯುದ್ಧಂ ಪಣ್ಣಲಾ ಪ್ರಸ್ತಾವದೊಳ್

೧೪. ಆ ಸದಾಶಿವನಾಯಕನು ಭಯಂಕರವಾದ ಶತ್ರು ಸೇನಾಸಮೂಹವನ್ನು ನುಗ್ಗು ನುರಿ ಮಾಡುತ್ತ ಹೆಚ್ಚು ಪರಾಕ್ರಮದಿಂದ ಒಳನುಗ್ಗಿ ಒಂದು ಮುಹೂರ್ತದಲ್ಲಿಯೇ ಕಲ್ಬುರ್ಗಿ ಕೋಟೆಯನ್ನು ಸಾಧಿಸಿದನು. ೧೫. ಕಲ್ಬುರ್ಗಿಯ ಕೋಟೆಯನ್ನು ಪರಾಕ್ರಮದಿಂದ ಗೆದ್ದು ರಾಯರನ್ನು ಮೆಚ್ಚಿಸಿದ ಸದಾಶಿವನಾಯಕನು "ಕೋಟೆ ಕೋಲಾಹಲ" ಎಂಬ ಬಿರುದನ್ನು ಪಡೆದು ಮೆರೆದನು. ವ॥ ಈ ರೀತಿ ಕಲ್ಬುರ್ಗಿಯ ದುರ್ಗವನ್ನು ಧೂಳೀಪಟ ಮಾಡಿ ಕೈವಶ ಮಾಡಿಕೊಂಡ ನಂತರದಲ್ಲಿ ೧೬. ಕಡುಗಲಿಯಾದ ಕೃಷ್ಣರಾಯನು 'ಜಾಲೆಯಪಾಳೆ' ಎಂಬಲ್ಲಿಗೆ ಬಂದಾಗ ಆತನ ಕಾಲಬುಡಕ್ಕೆ ಬಾರದೆ ಅಹಂಕಾರದಿಂದ ಎದುರಿಸಿ ನಿಂತ ಎಡವ, ಮುರಾರಿ ಎಂಬ ಪರಾಕ್ರಮಿಗಳನ್ನು ಸೋಲಿಸಿ ಅವರಿದ್ದ ಕೋಟೆಯನ್ನು ವಶಪಡಿಸಿ 'ಎಡವ ಮುರಾರಿ' ಎಂಬ ಬಿರುದನ್ನು ಪಡೆದನು. ವ॥ ಮತ್ತು ಅದಲ್ಲದೆ ಕೃಷ್ಣರಾಯನು ಸದಾಶಿವನಾಯಕನನ್ನು ಕರೆದು ತನಗೆ ಸೊಕ್ಕಿನಿಂದ ಎದುರಾದ ಬರೀದ ಪಾತುಶಾಹನ ಅಹಂಕಾರವನ್ನು ತಗ್ಗಿಸಿ ಬರಬೇಕು ಎಂಬುದಾಗಿ ನಿಯಮಿಸಿ ಕಳುಹಿಸಿದನು. ಸದಾಶಿವನಾಯಕನು ಆ ಪ್ರಕಾರ ದಾಳಿಮಾಡುತ್ತಾ ಬರುವ ಸಮಾಚಾರವನ್ನು ಬರೀದ ಪಾತುಶಾಹನು ಕೇಳಿ, ಅತ್ಯಂತ ಕೋಪಾಟೋಪದಿಂದ ಅದ್ಭುತ ಪರಾಕ್ರಮಶಾಲಿ ಗಳಾದ ಮಂತ್ರಿಗಳೊಂದಿಗೆ ಲೆಖ್ಖವಿಲ್ಲದಷ್ಟು ಆನೆ, ಕುದುರೆ, ಕಾಲಾಳುಗಳೊಂದಿಗೆ ಸೇನೆಯನ್ನು ಕಳುಹಿಸಲು, ಉಭಯ ಸೇನೆಯೂ ಯುದ್ಧಕ್ಕೆ ಎದುರಾಯಿತು. ಈ ರೀತಿ

ಕಂ॥ ದಂತದ ಸೂನಗೆ ಸೊಂಡಿಲೊ
ಳಾಂತಸಿ ಮೈಗಮರ್ದಜಿಲೆಯ ಬಕತರ ಚೂಡಾ
ಲಂ ತೊಳಪಾನೆಯನೇರ್ದಿದಿ
ರಾಂತಂ ಧುರಕಾ ಬರೀದ ಯವನಾಧೀಶಂ ೧೭

ವ॥ ಮತ್ತಮಾ ವೇಳೆಯೊಳ್

ಕಂ॥ ಭರಿಕೈಗಳೊಳಾಂತಸಿ ಬಕ
ತರ ದಂತಂಗಳೊಳಮರ್ದ ಸೂನಗೆಯೆಸೆಯಲ್
ಕರಪದಮೊಗೆದೆಡೆಯಾಡುವ
ಗಿರಿಕುಲಮೆನೆ ಕವಿದುವಾನೆವಿಂಡೆಣ್ದೆಸೆಯೊಳ್ ೧೮

ಉ॥ ಕುಂತಚಲನ್ಮಹಾಸಿವರಕಾರ್ಮುಕಸಾಯಕವೃಂದಮಂ ದಲಂ
ದಾಂತು ಕರಂಗಳೊಳ್ ಲಸದಯೋಮಯಚಾರುತನುತ್ರಮೊಪ್ಪೆ ಕ
ಲ್ಪಾಂತಸಮುತ್ಥ ಮೇಘಚಯದಂತಿರೆ ರಾವುತರಾಜಿಯಶ್ವಜಾ
ಲಂ ತವೆ ಸುತ್ತಲುಂ ಕವಿದುವಾ ಲಯವಾರ್ಧಿಯ ವೀಚಿಯಂದದಿಂ ೧೯

ಕಂ॥ ಪೊಸಮುಸೆವೆತ್ತ ಸರಳ್ ಝಳ
ಪಿಸುವಸಿ ಗಲ್ಲಿಸುವ ಕುಂತಮುಗಿದೊರೆಯಿಂ ಚೂ
ರಿಸುವ ಕಠಾರಿಕುಲಂ ಕರ
ಮೆಸೆಯಲ್ ಮುಸುಕಿದುದು ಪತ್ತಿಚಯಮೆಣ್ದೆಸೆಯೊಳ್ ೨೦

ಆ ಸದಾಶಿವ ನರೇಂದ್ರನ
ಸಾಸವನೇನೆಂಬೆನಿಂತು ಮುಸುಕಿದ ರಿಪುಸೇ
ನಾಸಮುದಯಮೆಂಬಟವೀ
ದೇಶವನುರೆ ಸವರತೊಡಗಿದಂ ಖತಿಯಿಂದಂ ೨೧

ಅದ್ಭುತವಾದ ಹಾಗೂ ಭಯಂಕರವಾದ ಯುದ್ಧವು ನಡೆಯುತ್ತಿದ್ದ ಆ ಸಂದರ್ಭದಲ್ಲಿ ೧೭. ಯವನಾಧೀಶನಾದ ಬರೀದ ಪಾತುಶಾಹನು ಮದ್ದಾನೆಯ ಮೇಲೆ ಏರಿ ಯುದ್ಧಕ್ಕೆ ಬಂದನು. ಆನೆಯ ದಂತದಲ್ಲಿ ಸೂನಗೆಯೆಂಬ ಆಯುಧವಿತ್ತು. ಸೊಂಡಿಲಲ್ಲಿ ಕತ್ತಿ ಇತ್ತು. ಆನೆಗೆ ಕವಚವನ್ನು ತೊಡಿಸಲಾಗಿತ್ತು. ವ॥ ಮತ್ತೆ ಆ ವೇಳೆಯಲ್ಲಿ ೧೮. ಸೊಂಡಿಲುಗಳಿಂದ ಕತ್ತಿಯನ್ನು ಹಿಡಿದು, ಕವಚವನ್ನು ಧರಿಸಿ, ದಂತಗಳಲ್ಲಿ ಸೂನಗೆಯೆಂಬ ಆಯುಧಗಳಿಂದ ಯುಕ್ತವಾಗಿ ಓಡಾಡುವ ಆನೆಗಳ ಹಿಂಡು ಕೈಕಾಲುಗಳನ್ನು ಪಡೆದ ಪರ್ವತಗಳಂತೆ ಎಂಟು ದಿಕ್ಕಿನಲ್ಲಿಯೂ ಮುತ್ತಿದವು. ೧೯. ಕುಂತ, ಖಡ್ಗ, ಬಿಲ್ಲು ಬಾಣಗಳ ಸಮೂಹವನ್ನು ಕೈಗಳಲ್ಲಿ ಧರಿಸಿ ಉಕ್ಕಿನ ಕವಚ ತೊಟ್ಟಿರುವ ರಾಹುತರ ಸಮೂಹ, ಪ್ರಳಯಕಾಲದಲ್ಲಿ ಎದ್ದ ಮೋಡಗಳ ಸಾಲಿನ ಹಾಗೆ ಕಾಣಿಸಲು ಕುದುರೆಗಳ ಹಿಂಡು ಪ್ರಳಯಕಾಲದ ಸಮುದ್ರದ ಅಲೆಯ ಹಾಗೆ ಮುತ್ತಿಗೆ ಹಾಕಿತು. ೨೦. ಹೊಸದಾಗಿ ಮಸೆದ ಹರಿತವಾದ ಬಾಣಗಳು, ಝಳಪಿಸುವ ಖಡ್ಗ, ಚುಚ್ಚುವ ಕುಂತ, ಒರೆಯಿಂದ ಹೊರ ಬಂದ ಕಠಾರಿಗಳು, ಕಂಗೊಳಿಸುತ್ತಿದ್ದಂತೆ ಪದಾತಿಗಳ ಸಮೂಹ ಎಂಟು ದಿಕ್ಕುಗಳಲ್ಲಿಯೂ ಆಕ್ರಮಿಸಿತು. ೨೧. ಆ ಸದಾಶಿವನಾಯಕನ ಸಾಹಸವನ್ನು ಏನೆನ್ನಲಿ? ಈ ರೀತಿ ಮುತ್ತಿದ ಶತ್ರುಸೇನಾಸಮೂಹವೆಂಬ ಅರಣ್ಯಪ್ರದೇಶವನ್ನು ಅವನು ಸಿಟ್ಟಿನಿಂದ ಸವರ ತೊಡಗಿದನು.

ಕುರಿವಿಂಡಿನ ಮಧ್ಯದೆ ಪೊ
ಕ್ಕುರುಬುವ ಪೆರ್ಬುಲಿಯೊಲಾ ಸದಾಶಿವರಾಯಂ
ಶರ ಕುಂತ ಖಡ್ಗಹತಿಯಿಂ
ತರುಬಿದ ತೌರುಷ್ಕಸೈನ್ಯಮಂ ಬರಿಕೈದಂ

ವ॥ ಇಂತೊಳಪೊಕ್ಕು ಕೈಗೆಯ್ವ ಸದಾಶಿವರಾಯನದಟನಾಂಪೊಡಶಕ್ಯಮಾಗಿ ನಿತ್ತರಿಸಲಮ್ಮದೆ

ಕಂ॥ ನೊಂದು ನುಗ್ಗಾಗಿ ಭಂಗಕೆ
ಬಂದುರೆ ಕೈಗಳನಿಕ್ಕಿ ಕೈಮುಗಿದು ಪೊಗ
ರ್ಗುಂದಿ ಪಾಡಳಿದು ಮಡಮುರಿ
ದಂದಿರದೆಣ್ದೆಸೆಗೆ ಪರಿದುದರಿಬಲದದಟರ್ ೨೩

ಚ॥ ಮುರಿವಡೆದಾತ್ಮಸೈನ್ಯವನಭೀಕ್ಷಿಸಿ ಪಲ್ಮೊರೆದಾ ಬರೀದನ
ತ್ಯುರುತರಕೋಪದಿಂದುಳಿದಿಭಾಶ್ವಪದಾತಿಸಮೇತನಾಗಿ ಸಂ
ಗರದೊಳಿದಿರ್ಚಿ ನಿಂದುರೆ ಸದಾಶಿವರಾಯನ ಸಂಮುಖಕ್ಕೆ ಭಾ
ಸುರ ಮದದಂತಿಯಂ ಭರದೆ ನೂಂಕುತೆ ತುಳ್ಕಿದನಂಬಿನಬ್ಧಿಯಂ ೨೪

ಕಂ॥ ಮದದಂತಿಯೆಂಬ ಬೆಟ್ಟದ
ತುದಿಯೊಳಗಿರ್ದಾ ಬರೀದನೆನಿಸುವ ವಿಲಯಾಂ
ಬುದಮಂಬಿನ ಮಳೆಯಂ ಕರೆ
ದುದು ಧರೆಯೊಳ್ ಶೋಣಿತಾಂಬು ನೆರೆ ಪರಿವಿನೆಗಂ ೨೫

೨೨. ಕುರಿಗಳ ಹಿಂಡಿನ ಮಧ್ಯದಲ್ಲಿ ನುಗ್ಗಿ ಆಕ್ರಮಿಸುವ ಹೆಬ್ಬುಲಿಯ ಹಾಗೆ ಸದಾಶಿವರಾಯನು (ಸದಾಶಿವನಾಯಕನು) ಬಾಣ, ಕುಂತ ಹಾಗೂ ಖಡ್ಗಗಳ ಹೊಡೆತಗಳಿಂದ ಅಡ್ಡಗಟ್ಟಿದ ತುರುಕರ ಸೈನ್ಯವನ್ನು ಬರಿದುಮಾಡಿದನು. ವ॥ ಈ ರೀತಿ ಶತ್ರುಸೇನಾಸಮೂಹದೊಳಗೆ ನುಗ್ಗಿ ಕೈಮಾಡುವ ಸದಾಶಿವರಾಯನ ಪರಾಕ್ರಮವನ್ನು ತಾಳಿಕೊಳ್ಳಲು ನಿಲ್ಲಲಾರದೆ ೨೩. ಶತ್ರುಸೈನ್ಯದ ಸೈನಿಕರು ನೊಂದು, ನುಗ್ಗುನುರಿಯಾಗಿ, ಭಂಗಪಟ್ಟು, ಆಯುಧಗಳನ್ನು ಕೆಳಕ್ಕೆ ಹಾಕಿ ಕೈಮುಗಿದು, ಕಾಂತಿಗುಂದಿ, ಅವಸ್ಥೆ ಕೆಟ್ಟು, ಹಿಂಜರಿದು ಎಂಟು ದಿಕ್ಕಿಗೆ ಓಡಿಹೋದರು. ೨೪. ಬರೀದ ಪಾತುಶಾಹನು ಹಿಂದೆ ಸರಿದ ತನ್ನ ಸೈನ್ಯವನ್ನು ನೋಡಿ, ಹಲ್ಲುಕಡಿದು ಕೋಪದಿಂದ ಉಳಿದ ಆನೆ, ಕುದುರೆ, ಕಾಲಾಳಗಳೊಂದಿಗೆ ಯುದ್ಧದಲ್ಲಿ ಎದುರಾಗಿ ನಿಂತು ಸದಾಶಿವರಾಯನ ಎದುರಿಗೆ ತನ್ನ ಮದ್ದಾನೆಯನ್ನು ನೂಕುತ್ತಾ ಬಾಣಗಳ ಸಮುದ್ರವನ್ನು ಉಕ್ಕಿಸಿದನು. ೨೫. ಮದ್ದಾನೆಯೆಂಬ ಬೆಟ್ಟದ ತುದಿಯಲ್ಲಿರುವ ಬರೀದಖಾನನೆಂಬ ಪ್ರಳಯಮೇಘವು ಭೂಮಿಯಲ್ಲಿ ರಕ್ತದ ಪ್ರವಾಹಗಳು ಹರಿಯುವಂತೆ ಬಾಣಗಳ ಮಳೆಯನ್ನು ಸುರಿಸಿತು.

ಇಸುವಂಬಿನುರುಬೆಯಂ ಸೈ
ರಿಸುತಶ್ವವನೈದೆ ಮೀಂಟಿ ಕೂರಸಿಯಿಂ ಚೂ
ರಿಸುತೊಳಪೊಕ್ಕುರುಬುವ ಯವ
ನಸಮೂಹಾಧೀಶನುರುಬೆಗಂದಿದಿರಾಂತಂ ೨೬

ವ॥ ಇಂತಾ ಬರೀದಪಾತುಶಾಹಂಗಿದಿರ್ಚಿ ನಿಂದಿರ್ವಕ್ಕಂಗಳೊಳುರುಬಿ ತರುಬಿ ಮುಸುಂಕಿ ಕೈಗೆಯ್ವದಟರ್ಕಳನಾತ್ಮಕರಾಸಿಕುಂತಯಮದಂಷ್ಟ್ರಾನಿಶಾತ ಸಾಯಕಮುಖ ವಿಘಾತಿಯಿಂ ಪಿಂದೆಗೆಸಿ ಬರೀದಪಾತುಶಾಹನಡರ್ದ ಮದೇಭದ ಸಮ್ಮುಖಕ್ಕಂ ತದೂರ್ಧ್ವಮುಖಕ್ಕಂ ತಾನೇರ್ದಶ್ವವನಡಿಗಡಿಗೆ ಮೇಲ್ವಾಯ್ಸಿ ತನ್ಮಹಾಗಜದಂಗೋಪಾಂಗಂಗಳೊಳ್ ತೊಡರ್ಚಿದ ಮಿಳಿ ಪೊರಜೆ ಜೊತ್ತಗಂಗಳುಮಂ ನಿಲುನಿಲುಂಕಿ ಪೊಯ್ಪೊಯ್ದು ಕತ್ತರಿಸಿ ರೆಂಚೆಯಂ ಸಡಿಲ್ಚಿಸಿ ಪಾಕರಮಂ ಪತನಂಗೈಸಿ ತತ್ಕುಂಜರವನಾತ್ಮವಶಂಗೈವನಿತರೊಳ್ ಬರೀದಪಾತುಶಾಹಂ ಸಾಧನಚಮತ್ಕೃತಿಯಿಂ ಸಮೀಪದೊಳಿರ್ಪ ಮಗುಳೊಂದಾನೆಯಂ ಬೆಂಗೆವಾಯ್ದು ಹರಿಹಂಚಾದ ಸೈನ್ಯವನೊಂದುಗೂಡಿಸಿ ಹುರಿಗಟ್ಟಿಸಿ ಮಗುಳ್ದು ಕೋಪಾಟೋಪದಿಂ ಮಾರ್ಮಲೆತು ರಣರಂಗಕ್ಕಿದಿರ್ಚಿ ನಿಂದು ಕೈಗೆಯ್ಯುತ್ತುಮಿರಲಾ ಪ್ರಸ್ತಾವದೊಳ್

ಉತ್ಸವ॥ ಭಾಸುರೇಭವಾಜಿವಾಹಿನೀಸಮೇತನಾಗಿ ತಾಂ
ಸಾಸದಿಂದಿದಿರ್ಚಿದಾ ಬರೀದಪಾತುಶಾಹನಂ
ಗಾಸಿಮಾಡಿ ಗೆಲ್ದು ಯುದ್ಧರಂಗದೊಳ್ ತುರುಷ್ಕ ಸೇ
ನಾಸಮುದ್ರಮಂ ಕಳಂಕಿದಂ ಸದಾಶಿವೋರ್ವಿಪಂ ೨೭

೨೬. ಸದಾಶಿವನಾಯಕನು ಬಾಣಗಳ ಆಕ್ರಮಣವನ್ನು ಸಹಿಸುತ್ತಾ ಕುದುರೆಯನ್ನು ಮುನ್ನಡೆಸಿ, ಹರಿತವಾದ ಕತ್ತಿಯಿಂದ ಕತ್ತರಿಸುತ್ತಾ ಒಳಹೊಕ್ಕು, ಹೋರಾಡುವ ಯವನಾಧೀಶ್ವರನ ಆಟೋಪವನ್ನು ಎದುರಿಸಿದನು. ವ॥ ಈ ರೀತಿ ಬರೀದ ಪಾತುಶಾಹನನ್ನು ಎದುರಿಸಿ ನಿಂತು, ಎರಡೂ ಪಕ್ಕಗಳಲ್ಲಿಯೂ ಆಕ್ರಮಿಸಿದನು, ಹೋರಾಡುವ ಕಲಿಗಳನ್ನು ತನ್ನ ಕೈಯಲ್ಲಿರುವ ಕುಂತ, ಯಮದಂಷ್ಟ್ರ ಮತ್ತು ಹರಿತವಾದ ಬಾಣಗಳ ಏಟಿನಿಂದ ಹಿಂದಕ್ಕಟ್ಟಿದನು, ಬರೀದ ಪಾತುಶಾಹನು ಏರಿದ್ದ ಮದ್ದಾನೆಯ ಎದುರಿಗೂ ಅದರ ಮೇಲ್ಮುಖಕ್ಕೂ, ತಾನು ಕುಳಿತಿದ್ದ ಕುದುರೆಯನ್ನು ಮತ್ತೆಮತ್ತೆ ಮೇಲೆ ಬೀಳಿಸಿದನು. ಆ ದೊಡ್ಡ ಆನೆಯ ಅಂಗಾಂಗಗಳಲ್ಲಿ ಸಿಕ್ಕಿದ್ದ ಸರಪಣಿ, ಪೊರಜೆ[೧], ಜೊತ್ತಗಗಳನ್ನು ಹೊಡೆದು, ಕತ್ತರಿಸಿ, ಜೂಲುಗಳನ್ನು ಸಡಿಲಿಸಿ, ಪ್ರಾಕರವನ್ನು ಬೀಳಿಸಿದನು. ಈ ರೀತಿ ಆ ಆನೆಯನ್ನು ತನ್ನ ಕೈವಶಮಾಡಿಕೊಳ್ಳುವಷ್ಟರಲ್ಲಿ ಬರೀದ ಪಾತುಶಾಹನು ಸಾಧನ ಚಮತ್ಕಾರಗಳಿಂದ ಹತ್ತಿರದಲ್ಲಿದ್ದ ಇನ್ನೊಂದು ಆನೆಯ ಬೆನ್ನಿನ ಮೇಲೆ ಏರಿ ಹರಿಹಂಚಾದ ಸೈನ್ಯವನ್ನು ಒಂದುಗೂಡಿಸಿ ಹುರಿದುಂಬಿಸಿದನು. ಮತ್ತೆ ಕೋಪಾಟೋಪದಿಂದ ಕೊಬ್ಬಿ ಯುದ್ಧಕ್ಕೆ ಎದುರಾಗಿ ನಿಂತು ಕಾದಾಡುತ್ತಿದ್ದ ಸಂದರ್ಭದಲ್ಲಿ
೨೭. ಆನೆ, ಕುದುರೆಗಳ ಸೈನ್ಯದೊಂದಿಗೆ ಸಾಹಸದಿಂದ ಎದುರಾದ ಬರೀದ ಪಾತುಶಾಹನನ್ನು ಸದಾಶಿವನಾಯಕನು ಗಾಯಗೊಳಿಸಿ, ಗೆದ್ದು ಯುದ್ಧರಂಗದಲ್ಲಿ ತುರುಕರ

೧. ಪೊರಜೆ, ಜೊತ್ತಗ = ಹಗ್ಗ, ಹುರಿ.

ವ॥ ಅದೆಂತೆಂದೊಡೆ

ಚಂ॥ ಕೆಲಬರನುಗ್ರಕುಂತಹತಿಯಿಂ ಕೆಲರಂ ನಿಜಖಡ್ಗಧಾರೆಯಿಂ
ಕೆಲಬರನೊಳ್ಕಠಾರಿಯುರುತೀವ್ರಮುಖಾಭಿವಿಘಾತಿಯಿಂ ಕರಂ
ಕೆಲಬರನಾ ಶಿಳೀಮುಖಸಮೂಹ ಮಹಾದ್ಭುತವೃಷ್ಟಿಪಾತದಿಂ
ಕೆಲಬರುಮಂ ನಿಜಾಶ್ವಖುರಘಾತಿಗಳಿಂ ಪುಡಿಗೈದನಾ ನೃಪಂ ೨೮

ಕಂ॥ ಅರಿದಿರಿದು ಕೊರೆದು ತತ್ತರ
ದರಿದಿರದಸಿಯರೆದು ಪೊಯ್ದು ಸದೆಬಡಿದುರೆ ನಿ
ಟ್ಟೊರಸಿ ಸದಾಶಿವನೃಪನೀ
ಪರಿಯಿಂದೆ ಬರೀದಸೈನ್ಯಮಂ ಬರಿಕೈದಂ ೨೯

ವ॥ ಇಂತು ಕೈಗೆಯ್ವ ಸದಾಶಿವನಾಯಕನ ಘಾರಾಘಾರಿಗಿದಿರ್ಚಿ ನಿಲಲಾಂಪೊಡಶಕ್ಯಮಾಗಿ ಪಟುತರಪರಾಕ್ರಮಶಾಲಿಗಳ್ ಪಲಾಯನಂಬಡೆದು

ಕಂ॥ ನುತಪುಂಡರೀಕಮಧ್ಯ
ಸ್ಥಿತರಾದರ್ ಬೊಮ್ಮನಂತೆ ಹರಿಯಂತೆ ಸಮು
ನ್ನತಭುವನಾಶ್ರಯರಾದರ್
ಶಿತಿಗಳನೆನೆ ನಾಗಕಟಕಭೂಷಿತರಾದರ್ ೩೦

ವನರುಹವೈರಿಯ ವರನಂ
ದನನೆಂಬಂತಿರೆ ಕುಜಾಗ್ರವರ್ತಿಗಳಾದರ್
ಮಿನುಪುಪರಾಗಾಂತದ ಶಶಿ
ದಿನಪರವೊಲ್ ಮುಕ್ತಮಂಡಲಾಗ್ರಗಳಾದರ್ ೩೧

ಸೇನಾಸಮುದ್ರವನ್ನು ತಳಮಳಗೊಳಿಸಿದನು. ವ॥ ಅದು ಯಾವ ರೀತಿಯಲ್ಲಿ ಎಂದರೆ ೨೮. ಕೆಲವರನ್ನು ಉಗ್ರವಾದ ಕುಂತದ ಏಟಿನಿಂದಲೂ, ಕೆಲವರನ್ನು ಖಡ್ಗಧಾರೆಯಿಂದಲೂ, ಕೆಲವರನ್ನು ಕಠಾರಿಯ ಏಟಿನಿಂದಲೂ, ಕೆಲವರನ್ನು ಬಾಣಗಳ ಸುರಿಮಳೆಯಿಂದಲೂ, ಕೆಲವರನ್ನು ತನ್ನ ಕುದುರೆಗಳ ಗೊರಸಿನ ತುಳಿತಗಳಿಂದಲೂ ಆ ರಾಜನು ಹುಡಿ ಮಾಡಿದನು. ೨೯. ಆ ಸದಾಶಿವರಾಯನಾಯಕನು ಬರೀದನ ಸೈನ್ಯವನ್ನು ಅರಿದು, ಇರಿದು, ಕೊರೆದು, ತರಿದು, ನುಗ್ಗು ನುರಿ ಮಾಡಿ ಹೊಡೆದು, ಸದೆಬಡಿದು, ಚನ್ನಾಗಿ ಸವರಿ ಬರಿದು ಮಾಡಿದನು. ವ॥ ಈ ರೀತಿ ಕೈಮಾಡುವ ಸದಾಶಿವನಾಯಕನ ಹೋರಾಟವನ್ನು ಎದುರಿಸಿ ನಿಲ್ಲಲು, ಸಾಧ್ಯವಿಲ್ಲದೆ ಹೆಚ್ಚಿನ ಪರಾಕ್ರಮಶಾಲಿಗಳೆಲ್ಲರೂ ಪಲಾಯನ ಮಾಡಲಾಗಿ ೩೦. ಬ್ರಹ್ಮನಂತೆ ಪುಂಡಲೀಕ (ಕಮಲ ಮತ್ತು ಹುಲಿ) ಮಧ್ಯದಲ್ಲಿ ನಿಂತರು; ಹರಿಯಂತೆ ಉನ್ನತ ಭುವನಾಶ್ರಯರಾದರು; (ಊರ್ಧ್ವಲೋಕಗಳಿಗೆ ಆಶ್ರಯ; ಎತ್ತರದ ಸ್ಥಳವನ್ನು ಆಶ್ರಯಿಸಿದರು) ಶಿವನಂತೆ ನಾಗಕಟಕಭೂಷಿತರಾದರು. (ಸರ್ಪಗಳ ಬಳೆ; ಸರ್ಪಗಳಿರುವ ಪರ್ವತಪ್ರಾಂತವಾಸಿಗಳಾದರು- ಭೂ-ಉಷಿತ) ತಾತ್ಪರ್ಯ:- ಶತ್ರುಗಳು ಸೋತು ಕಾಡು-ಬೆಟ್ಟಗಳನ್ನು ಸೇರಿದರು. ೩೧. ಚಂದ್ರಪುತ್ರನಾದ ಬುಧನಂತೆ ಕುಜಾಗ್ರವರ್ತಿಗಳಾದರು; (ಕುಜಗ್ರಹದ ಮುಂದಿರುವ ಮತ್ತು ಮರದ ತುದಿಯನ್ನು ಏರಿದ),

ಖಂಡ ಕರುಳೆಲು ತೊವಲ್ ನರ
ತುಂಡಿಗೆ ಮಿದುಲಡಗು ತೊರಳೆ ನೆಣ ವಸೆ ನೆತ್ತ
ರ್ಗೊಂಡ ಕಾಳಿಜಿಗಳಿಂ ಜವ
ನುಂಡೊಗಡಿಸಿದಿಳೆಯ ಪೋಲ್ತುದಾ ರಣದ ಕಳಂ ೩೨

ಪರಿಕಿಪೊಡಂದು ರಣಂ ಜವ
ಹುರಮೆನೆ ರಣಭೂಮಿ ನರಕಬಂಧಮಯಂ ಸಾ
ಗರಮೆನೆ ಕೀಲಾಲಮಯಂ
ವರಜಂಬೂದ್ವೀಪದಂತೆ ನವಖಂಡಮಯಂ ೩೩

ಪೊತ್ತಂತಕನಾಳ್ಗಳ್ ಬೇ
ಸತ್ತುದು ವರಚಿತ್ರಗುಪ್ತರಿಂ ಗಣಿಸಲ್ಕಾ
ದತ್ತಸದಳಮಾ ರಣದೊಳ್
ಸತ್ತವದಿರನಿನಿಬರೆಂದು ಲೆಕ್ಕಿಪನಾವಂ ೩೪

ವ|| ಇಂತು ಪಣ್ಣಿದ ಯುದ್ಧರಂಗದೊಳ್ ಬರೀದಪಾತುಶಾಹಸೈನ್ಯಮಂ ಮುರಿದು ತದೀಯ ಹಸ್ತ್ಯಶ್ವಸಮೂಹಂಗಳುಮನುದಗ್ರಪರಾಕ್ರಮಶಾಲಿಗಳಪ್ಪ ಕೆಲಬರ್ ವಜೀರರ್ಕಳುಮನವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ ಮತ್ತಂ ಮ್ಲೇಂಛಲಿಪಿಲಾಂಛನಲಾಂಛಿತಮಾದ ಕಾಂಚನಮುದ್ರಾಂಗುಲೀಯಕ ಕಚ್ಚಳಿಸಹಿತಮಡರ್ದಾನೆವೆರಸಾ ಬರೀದಪಾತುಶಾಹನುಮಂ ಕೈಸೆರೆತಂದು

ಗ್ರಹಣಮೋಕ್ಷ ಹೊಂದಿದ ಚಂದ್ರ ಸೂರ್ಯರ ಹಾಗೆ ಮುಕ್ತಮಂಡಲಾಗ್ರರಾದರು (ಶುದ್ಧಮಂಡಲವುಳ್ಳವರು; ಕತ್ತಿಯನ್ನು ಬಿಸುಟವರು, ಮಂಡಲಾಗ್ರ = ಕತ್ತಿ) ತಾತ್ಪರ್ಯ:- ಶತ್ರುಗಳು ಕತ್ತಿಗಳನ್ನೆಸೆದು ಮರಹತ್ತಿಕೊಂಡರು. ೩೨. ಆ ರಣರಂಗವು ಮಾಂಸಖಂಡ, ಕರುಳು, ಎಲುಬು, ಚರ್ಮ, ನರ, ಮುಖ, ಮಿದುಳು, ಮಾಂಸ, ಗುಲ್ಮ, ನೆಣ, ವಸೆ, ಹಾಗೂ ನೆತ್ತರಿನಿಂದ ಕೂಡಿದ ಹೃದಯಗಳಿಂದ ತುಂಬಿ ಯಮನು ಉಂಡು ಕಾರಿದ ನೆಲದ ಹಾಗೆ ಕಾಣುತ್ತಿತ್ತು. ೩೩. ರಣರಂಗವನ್ನು ಪರೀಕ್ಷಿಸಿದರೆ ಅದು ಯಮಲೋಕದ ಹಾಗೆ ನರಕಬಂಧಮಯವಾಗಿತ್ತು, (ನರಕ ಮತ್ತು ಮನುಷ್ಯದೇಹ), ಸಾಗರವೆಂಬಂತೆ ಕೀಲಾಲಮಯವಾಗಿತ್ತು, (ನೀರು ಮತ್ತು ರಕ್ತ), ಜಂಬೂದ್ವೀಪದ ಹಾಗೆ ನವಖಂಡಗಳಿಂದ ಕೂಡಿತ್ತು, (ನವಖಂಡ = ಒಂಬತ್ತು ಖಂಡಗಳು; ಹೊಸದಾಗಿ ಕತ್ತರಿಸಿದ ಮಾಂಸ) ೩೪. ಸತ್ತವರನ್ನು ಹೊತ್ತು ಯಮದೂತರು ಸೋತುಹೋದರು; ಚಿತ್ರಗುಪ್ತರಿಂದ ಲೆಖ್ಖಮಾಡಲು ಸಾಧ್ಯವಾಗಲಿಲ್ಲ; ಅಂದ ಮೇಲೆ ಆ ಯುದ್ಧದಲ್ಲಿ ಸತ್ತವರು ಇಷ್ಟು ಮಂದಿ ಎಂದು ಯಾರು ಲೆಖ್ಖಮಾಡಬಲ್ಲರು? ವ|| ಈ ರೀತಿ ಬರೀದ ಪಾತುಶಾಹನ ಸೈನ್ಯವನ್ನು ಯುದ್ಧರಂಗದಲ್ಲಿ ಮುರಿದು, ಅವನ ಆನೆ, ಕುದುರೆ, ಕಾಲಾಳುಗಳು ಮತ್ತು ಹೆಚ್ಚಿನ ಪರಾಕ್ರಮಶಾಲಿಗಳಾದ ಕೆಲವರು ಮಂತ್ರಿ ಹಾಗೂ ಸೇನಾಧಿಪತಿಗಳ ಡಾಲು, ಡಮಾಮಿ, ಸತ್ತಿಗೆ, ಕೆಂಪುನಿಶಾನಿ ಹಾಗೂ ಅರಬ್ಬೀಲಿಪಿಯಿಂದ ಗುರುತಿಸಲ್ಪಟ್ಟ ಭಂಗಾರದ ಮುದ್ರೆಯುಂಗುರ, ಕವಚ, ಹತ್ತಿದ ಆನೆ ಸಹಿತ ಕೂಡಿ ಬರೀದ ಪಾತುಶಾಹನನ್ನು ಕೈಸೆರೆ

ರಾಯಗೊಪ್ಪಿಸಲ್ ಕೃಷ್ಣರಾಯನಭಿವೀಕ್ಷಿಸಿ ಮಹಾಹರ್ಷಿತನಾಗಿ ರತ್ನಾಭರಣ ತಾಂಬೂಲಗಳನಿತ್ತಾದರಿಸಿ ತತ್ಸದಾಶಿವನಾಯಕಂಗಮರಿದಲೆ ಮೇಘಡಂಬರ ದಿವಾಪ್ರದೀಪ ಮುಂತಾದ ಬಿರುದುಗಳನ್ನಿತ್ತು ಬರೀದ ಪಾತುಶಾಹನ ಮುದ್ರಾಂಗುಲೀಯಕವಂ ಸದಾಶಿವನಾಯಕನ ಕಿರುವೆರಲಿಂಗಿಕ್ಕಿ ಸದರ್ಬೊಕ್ಕಸೀಸಂ ಬಿಟ್ಟು ತದಾರಭ್ಯಂ ಬರೀದಸಪ್ತಾಂಗಹರಣ ಸದಾಶಿವರಾಯನಾಯಕನೆಂಬ ಬಿಂಕದ ಬಿರುದಿನಭಿಧಾನವನಿತ್ತು ಪಿರಿದು ಮನ್ನಿಸಲ್ ಮನ್ನಣೆಯನಾಂತು ಸಂತಸಂದಳೆದು ತತ್ಸಮೀಪದೊಳತಿಪ್ರೀತಿಪಾತ್ರನೆನಿಸಿ ವರ್ತಿಸುತ್ತುಮಿರ್ದನಂತುಮಲ್ಲದೆಯುಂ

ಕಂ॥ ಆ ರಾಯರನೆಣಿಸದಹಂ
ಕಾರದೆ ವಿಜಯಾಪುರಾಧಿಪನ ಬಲದಿಂ ಕೈ
ದೋರಿದ ಶಾತೆಯನೆಂಬ ವ
ಜೀರನನಂಕದೊಳೆ ಮುರಿದನಾ ನೃಪತಿಲಕಂ ೩೫

ವ॥ ಮತ್ತಮದಲ್ಲದೊಂದವಸರದೊಳ್

ಕಂ॥ ಮಿಗೆ ಗರ್ವೋದ್ರೇಕದೆ ಸಂ
ಯುಗದೊಳ್ ರಾಯರ್ಗಿದಿರ್ಚಿ ಕೈಗೆಯ್ದಮದಾ
ನಗರದ ನಿಜಾಮಶಾಹನ
ಮೊಗಮಿಕ್ಕದ ತೆರದೆ ಧುರದೆ ಮುರಿದೋಡಿಸಿದಂ ೩೬

ವ॥ ಇಂತಮರ್ದ ರಣಾಂಕದೊಳಮದಾನಗರದ ನಿಜಾಮಶಾಹನ ಮದೋದ್ರೇಕಮಂ ಮುರಿದು ಪಲಾಯನಂಗೊಳಿಸಲ್ ಕೃಷ್ಣರಾಯಂ ಪ್ರಮುದಿತಮಾನಸನಾಗಿ ಸದಾಶಿವರಾಯ

ಹಿಡಿದು ರಾಯರಿಗೊಪ್ಪಿಸಿದನು. ಕೃಷ್ಣರಾಯನು ಇದನ್ನು ಅವಲೋಕಿಸಿ ಮಹಾ ಸಂತೋಷಭರಿತನಾದನು. ಸದಾಶಿವನಾಯಕನಿಗೆ ರತ್ನ, ಆಭರಣ, ತಾಂಬೂಲಗಳನ್ನು ನೀಡಿ ಆತನಿಗೆ 'ಅರಿದಲೆ ಮೇಘಡಂಬರ ದಿವಾಪ್ರದೀಪ' ಮುಂತಾದ ಬಿರುದುಗಳನ್ನು ಇತ್ತು ಬರೀದ ಪಾತುಶಾಹನ ಮುದ್ರೆಯುಂಗುರವನ್ನು ಸದಾಶಿವನಾಯಕನ ಕಿರುಬೆರಳಿಗೆ ಇಟ್ಟನು. ಬೊಕ್ಕಸಿಂಗನನ್ನು ಬಿಟ್ಟು ಅಂದಿನಿಂದ 'ಬರೀದ ಸಪ್ತಾಂಗಹರಣ ಸದಾಶಿವರಾಯನಾಯಕ' ಎಂಬ ಹೆಮ್ಮೆಯ ಬಿರುದಿನ ನಾಮಕರಣವನ್ನಿಟ್ಟು ಹೆಚ್ಚಾಗಿ ಮನ್ನಿಸಿದನು. ಈ ಸನ್ಮಾನ ಹಾಗೂ ಮನ್ನಣೆಯನ್ನು ಅತಿ ಸಂತೋಷದಿಂದ ಸದಾಶಿವನಾಯಕನು ಪರಿಗ್ರಹಿಸಿ ಆ ರಾಯನ ಸಮೀಪದಲ್ಲಿ ಆತನ ಪ್ರೀತಿಪಾತ್ರನೆನಿಸಿ ಕೊಂಡು ವರ್ತಿಸುತ್ತಿದ್ದನು. ಅಲ್ಲದೆ- ೩೫. ಆ ರಾಯರನ್ನು ಗಣ್ಯಮಾಡದೆ ಅಹಂಕಾರದಿಂದ ಕೂಡಿ, ವಿಜಯಾಪುರದ ಅರಸನ ಬಲದಿಂದ ಹೋರಾಡಿದ ಶಾತೇಯಖಾನನೆಂಬ ಮಂತ್ರಿಯನ್ನು ಸದಾಶಿವನಾಯಕನು ಯುದ್ಧದಲ್ಲಿ ಸೋಲಿಸಿದನು. ವ॥ ಮತ್ತೆ ಇದಲ್ಲದೆ ಅಷ್ಟರಲ್ಲಿಯೇ-೩೬. ಅಹಮದಾನಗರದ ನಿಜಾಮಶಾಹನು ಗರ್ವೋದ್ರೇಕದಿಂದ ರಾಯನನ್ನು ಎದುರಿಸಿ ಯುದ್ಧ ಮಾಡಿದಾಗ, ಸದಾಶಿವನಾಯಕನು, ಅವನು ಮುಖ ತೋರಿಸದ ಹಾಗೆ ಯುದ್ಧದಲ್ಲಿ ಸೋಲಿಸಿ ಓಡಿಸಿದನು. ವ॥ ಈ ರೀತಿ ಉಂಟಾದ ಹಾಗೂ ಸೊಕ್ಕಿನಿಂದ ಮೆರೆದ ಅಹಮದಾನಗರದ ನಿಜಾಮಶಾಹನ ಅಹಂಕಾರವನ್ನು ಯುದ್ಧರಂಗದಲ್ಲಿ ಮುರಿದು ಸದಾಶಿವನಾಯಕನು ಅವನನ್ನು ಪಲಾಯನಗೊಳಿಸಿದನು.

ನಾಯಕಂಗೇಕಾಂಗವೀರನೆಂಬ ಬಂಕದ ಬಿರುದಿನಭಿಧಾನವನಿತ್ತು ಮತ್ತಂ ಜಿಂಜಿಯ ಕೃಷ್ಣಪ್ಪನಾಯಕಂಗೆ ಬಲವಂತನೆಂಬ ಬಿರುದಿನಭಿಧಾನಮಿರಲ್ ಬಿಡಿಸಿ ತತ್ಸದಾಶಿವರಾಯನಾಯಕಂಗಂ ಬಲವಂತನೆಂಬ ಬಿರುದಿನಭಿಧಾನಮುಮನನರ್ಘ್ಯರತ್ನಾಭರಣ ದಿವ್ಯಾಂಬರಂ ಮೊದಲಾದುದುಗೊರೆ ವೀಳ್ಯಂಗಳುಮನಿತ್ತು ಮನ್ನಿಸಿ ಜಯೋತ್ಸವದೊಳ್ ಸಕಲ ಸೈನ್ಯಂವೆರಸು ನಿಜಪುರಪ್ರವೇಶಂಗೈದು ರತ್ನಸಿಂಹಾಸನಾರೂಢನಾಗಿ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈಯುತ್ತುಮಿರಲ್ ತತ್ಸಮೀಪದೊಳ್ ಪರಮವಿಖ್ಯಾತಿವಡೆದು ವರ್ತಿಸುತ್ತುಮಿರ್ದದೊಂದವಸರದೊಳ್

ಕಂ|| ಲೂಟಿವರಿದಾಂತ ರಿಪುಸೇ
ನಾಟವಿಯಂ ನಿಜಕರಾಸಿಯಿಂ ತರಿದು ಕರಂ
ಮೀಟಾದ ಚಂದ್ರಗುತ್ತಿಯ
ಕೋಟೆಯನಾ ನೃಪತಿ ಲಗ್ಗೆಯೊಳ್ ಸಾಧಿಸಿದಂ ೩೭

ಚಂ|| ಬಗೆಯದೆ ರಾಯರಟ್ಟಿದ ನಿರೂಪವನದ್ಭುತಸೈನ್ಯಗೂಡಿ ಸಂ
ಯುಗದೊಳಿದಿರ್ಚಿ ನಿಂದೆಸೆವ ಗುತ್ತಿಯ ಸಾಳುವನಾಯಕೇಂದ್ರನಂ
ಜಗುಳಿಸಿ ಯುದ್ಧದೊಳ್ ಪಿಡಿದು ರಾಯರಿಗೊಪ್ಪಿಸಿ ಮನ್ನೆಯರ್ಕಳೊಳ್
ಮಿಗಿಲೆನೆ ಸಾಸಮಂ ಮೆರೆದನೈದೆ ಸದಾಶಿವರಾಯನಾಯಕಂ ೩೮

ವ|| ಮತ್ತಮದಲ್ಲದೊಂದವಸರದೊಳಾ ಸದಾಶಿವರಾಯನಾಯಕಂ

ಕಂ|| ಧರೆಗಧಿಕನೆನಿಪ ಬಂಕಾ
ಪುರದುರುಮಾದಣವೊಡೆಯರುಮಂ ಶಿಕ್ಷಿಸಿ ರಾ
ಯರಿನಷ್ಟಾದಶಕಂಪಣ
ವೆರೆದಾಗರದವನಿಯ ವರಮಂ ನೆರೆ ಪಡೆದಂ ೩೯

ಕೃಷ್ಣರಾಯನು ಸಂತೋಷಭರಿತನಾಗಿ ಸದಾಶಿವರಾಯನಾಯಕನಿಗೆ 'ಏಕಾಂಗವೀರ'ನೆಂಬ ಹೆಮ್ಮೆಯ ಬಿರುದನ್ನಿತ್ತನು; ಜಿಂಜಿಯ ಸಾಮಂತ ಕೃಷ್ಣಪ್ಪನಾಯಕನಿಗೆ 'ಬಲವಂತ'ನೆಂಬ ಬಿರುದಿನ ನಾಮಕರಣವಿರಲು, ಅದನ್ನು ಬಿಡಿಸಿ ಆ ಸದಾಶಿವನಾಯಕನಿಗೆ 'ಬಲವಂತ'ನೆಂಬ ನಾಮಕರಣವಿತ್ತು ಮನೋಹರವಾದ ರತ್ನಾಭರಣಗಳು, ದಿವ್ಯವಾದ ಉಡುಗೊರೆಗಳು, ವೀಳ್ಯಗಳು ಮುಂತಾದುವುಗಳನ್ನು ಕೊಟ್ಟು ಸನ್ಮಾನಿಸಿದನು. ಕೃಷ್ಣರಾಯನು ಈ ರೀತಿ ಸಕಲ ಸೈನ್ಯಗಳಿಂದ ಕೂಡಿದ ವಿಜಯೋತ್ಸವದೊಡನೆ ತನ್ನ ಪಟ್ಟಣವನ್ನು ಪ್ರವೇಶಿಸಿ, ರತ್ನಸಿಂಹಾಸನಾರೂಢನಾಗಿ ಸದ್ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿದ್ದನು. ಆತನ ಸಮೀಪದಲ್ಲಿ ಸದಾಶಿವರಾಯನು ಈ ರೀತಿ ಪ್ರಖ್ಯಾತಿಹೊಂದಿ ಇರುತ್ತಿರಲು ಒಂದು ಕಾಲದಲ್ಲಿ-೩೭. ಲೂಟಿ ಮಾಡುತ್ತಾ ಯುದ್ಧಕ್ಕೆ ಬಂದ ಶತ್ರುಸೈನ್ಯವೆಂಬ ಅರಣ್ಯವನ್ನು ತನ್ನ ಕೈಯಲ್ಲಿರುವ ಖಡ್ಗದಿಂದ ಕಡಿದು (ಸವರಿ), ಚಂದ್ರಗುತ್ತಿಯ ಕೋಟೆಯನ್ನು ಅವನು ವಶಪಡಿಸಿ ಕೊಂಡನು. ೩೮. ರಾಯರ ನಿರೂಪವನ್ನು ಲೆಕ್ಕಿಸದೆ ದೊಡ್ಡ ಸೈನ್ಯದೊಂದಿಗೆ ಯುದ್ಧದಲ್ಲಿ ಎದುರಾದ ಗುತ್ತಿಯ ಸಾಳ್ವನಾಯಕನನ್ನು ಸದಾಶಿವನಾಯಕನು ಯುದ್ಧದಲ್ಲಿ ಸೋಲಿಸಿ, ಅವನನ್ನು ಸೆರೆಹಿಡಿದನು. ಆತನನ್ನು ರಾಯರಿಗೊಪ್ಪಿಸಿ ಉಳಿದ ಸಾಮಂತರಿಗಿಂತ ಮಿಗಿಲಾದ ಸಾಹಸವನ್ನು ತೋರಿಸಿದನು. ವ|| ಇದಲ್ಲದೆ ಮಗುದೊಂದು ಅವಸರದ ಕಾಲದಲ್ಲಿ ಸದಾಶಿವರಾಯನಾಯಕನು ೩೯. ಭೂಮಿಯಲ್ಲಿಯೇ ಅಧಿಕ ಬಲಶಾಲಿ

ವ|| ಮತ್ತಮದಲ್ಲದಾ ಸದಾಶಿವರಾಯನಾಯಕಂ ರಾಯರನುಮತಿಯಿಂ ಬಂಕಾಪುರದ ಮಾದಣ ಒಡೆಯರ ಮುಖದಿಂ ಮದಗದ ಕೆಲಸಮಂ ಸಂಪೂರ್ಣಮನಾಗಿಸಿ ತನ್ಮಹಾತಟಾಕದೆಡೆಯೊಳ್ ಶೃಂಗಪುರದಿಂ ತೆರಳ್ಚಿಸಿ ತಂದು ರಾಯರ್ಗಂ ತತ್ಸ್ವಾಮಿಗಳ್ಗಂ ಭೇಟಿಯಂ ಮಾಡಿಸಿ ತದುಭಯಮುಖದಿಂದಧಿಕಸನ್ಮಾನಂಬೆತ್ತನಂತುಮಲ್ಲದೆಯುಂ

ಕಂ|| ಮತ್ತಮಾ ರಾಯರಿಂಗಂ
ತೆತ್ತಿಗನೆಂದೆನಿಸಿ ನಡೆಯದುರೆ ಮಾರ್ಮಲೆತಾ
ಮತ್ತಿಯ ತಿಮ್ಮಾಖ್ಯೆಯ ದು
ರ್ವೃತ್ತನ ನಿಗ್ರಹಿಸಿ ರಾಯರಂ ಮೆಚ್ಚಿಸಿದಂ ೪೦

ವ|| ಮತ್ತಮದಲ್ಲದೊಂದವಸರದೊಳಾ ಸದಾಶಿವರಾಯನಾಯಕಂ ಕೃಷ್ಣರಾಯರಿಂ ಬೆಸಂಬಡೆದು ಘಟ್ಟವನಿಳಿದು ಪರಶುರಾಮಕ್ಷೇತ್ರಮಂ ಸಾರ್ದು

ಕಂ|| ತುಳುವರಾಜರ್ಕಳೆಲ್ಲಂ
ಮಲೆತಿರೆ ನಿಗ್ರಹಿಸಿ ಮೆರೆವ ಕಾಸರಗೋಡೊಳ್
ತೊಲಗಿದ ಕಂಬವನಾ ನೃಪ
ತಿಲಕಂ ತಾ ನಿಲಿಸಿ ಮೆರೆದನತಿಸಾಹಸಮಂ ೪೧

ವ|| ಇಂತು ಮಲೆತಿರ್ಪ ತುಳುವಮನ್ನೆಯರ ಮದಮಂ ಮುರಿದು ಸ್ವಾಧೀನಗೆಯ್ದು ಕರಮಂ ಕೊಂಡು ಹಣಮಣಿಹಮಂ ತೆತ್ತು ನಡೆವಂತು ಕಟ್ಟಳೆಯಂ ರಚಿಸಿ ಮರಳ್ದ್ಯೆ ತಂದು

ಎನಿಸಿದ ಬಂಕಾಪುರದ ಮಾದಣ್ಣ ಒಡೆಯರನ್ನು ಶಿಕ್ಷಿಸಿ, ರಾಯರಿಂದ ಹದಿನೆಂಟು ಮಾಗಣೆಗಳುಳ್ಳ ಅಗರದ ಭೂಮಿಯನ್ನು ಬಹುಮಾನವನ್ನಾಗಿ ಪಡೆದನು. ವ|| ಮತ್ತು ಆ ರೀತಿಯಲ್ಲದೆ ಸದಾಶಿವರಾಯನಾಯಕನು ರಾಯರ ಅನುಮತಿಯಿಂದ ಬಂಕಾಪುರದ ಮಾದಣ್ಣ ಒಡೆಯರ ಮುಖಾಂತರ ಮದಗದ ಕೆಲಸವನ್ನು ಸಂಪೂರ್ಣಗೊಳಿಸಿದನು. ಆ ಕೆರೆಯ ಸಮೀಪದಲ್ಲಿಯೇ ಶೃಂಗಪುರದ (ಶೃಂಗೇರಿಯ) ಸ್ವಾಮಿಗಳನ್ನು ಬರಮಾಡಿಕೊಂಡು, ಉಳಿಸಿ, ರಾಯರಿಗೆ ಹಾಗೂ ಆ ಸ್ವಾಮಿಗಳಿಗೆ ಭೇಟಿಯನ್ನು ಏರ್ಪಡಿಸಿ, ಆ ಉಭಯತರ ಸಮ್ಮುಖಗಳಿಂದಲೂ ಹೆಚ್ಚಿನ ಮಾನ್ಯತೆಯನ್ನು ಗಳಿಸಿದನು. ಅಲ್ಲದೆ ೪೦. ಆಮೇಲೆ ಆ ರಾಯರಿಗೆ ಆಶ್ರಿತನಾಗಿ ನಡೆಯದೆ ಸೊಕ್ಕಿ ಕಾದಾಡಿದ ಮತ್ತಿಯ ತಿಮ್ಮನೆಂಬ ದುಷ್ಟನನ್ನು ಕೊಂದು ರಾಯರನ್ನು ಸಂತೋಷಪಡಿಸಿದನು. ವ|| ಮತ್ತೂ ಅಲ್ಲದೆ ಅಷ್ಟರಲ್ಲಿಯೇ ಸದಾಶಿವರಾಯನಾಯಕನು ಕೃಷ್ಣರಾಯರಿಂದ ಅಪ್ಪಣೆ ಪಡೆದು ಘಟ್ಟಪ್ರದೇಶವನ್ನು ಕುರಿತು ತೆರಳಿ ದಕ್ಷಿಣ ಕನ್ನಡಕ್ಕೆ ಹೋದನು. ೪೧. ಕೊಬ್ಬಿದ ತುಳುವರಾಜರೆಲ್ಲರನ್ನು ಕೂಡ ನಿಗ್ರಹಿಸಿ ಸದಾಶಿವನಾಯಕನು ಕಾಸರಗೋಡಿನಲ್ಲಿ ಒಂದು ಸ್ಥಿರವಾದ ಸ್ತಂಭವನ್ನು ನಿಲ್ಲಿಸಿ ಹೆಚ್ಚಿನ ಸಾಹಸವನ್ನು ಮೆರೆದನು. ವ|| ಈ ರೀತಿ ಸೊಕ್ಕಿನಿಂದ ಕೂಡಿದ್ದ ತುಳುವ ಸಾಮಂತರ ಅಹಂಕಾರವನ್ನು ಮುರಿದು ಅವರ ಪ್ರಾಂತ್ಯಗಳನ್ನು ಸ್ವಾಧೀನಪಡಿಸಿಕೊಂಡನು. ಕಪ್ಪ-ಕಾಣಿಕೆಗಳನ್ನು ಹಾಗೂ ಆಭರಣಗಳನ್ನು ಕಾಲಕಾಲಕ್ಕೆ ಸಲ್ಲಿಸುವಂತೆ ಕಟ್ಟಳೆ ಮಾಡಿದನು. ಹಿಂದಿರುಗಿ ಬಂದು ರಾಯರಿಂದ ಉಚಿತವಾದ ಉಡುಗೊರೆ ಮುಂತಾದ

# ತೃತೀಯಾಶ್ವಾಸಂ

ವII ಸದಾಶಿವರಾಯನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೪೭೦ನೆಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ ಯಲ್ಲಿ ಸದಾಶಿವನಾಯಕರ ಜ್ಯೇಷ್ಠಕುಮಾರರಾದ ದೊಡ್ಡ ಸಂಕಣ್ಣನಾಯಕರಿಗೆ ಇಕ್ಕೇರಿಯರಮನೆಯಲ್ಲಿ ರಾಜಪಟ್ಟಂ

ಕಂII ಆ ಸದಾಶಿವನರೇಂದ್ರಾ
ಗ್ರೇಸರನಾನಂತರಮಾತನಾತ್ಮಜನೆನಿಪಾ
ಶ್ರೀ ಸಂಕಣನೃಪನರಿಗಜ
ಕೇಸರಿ ಸದ್ಧರ್ಮದಿಂದಮಿಳೆಯಂ ಪೊರೆದಂ ೧

ಜಂಬೂರ ವಿರುಪಪಣವೊಡೆಯ
ರೆಂಬವನುಪಟಳವನೆಸಗೆ ಸಂಕಣನೃಪನಾ
ಜಂಬೂರಂ ಕೊಂಡುರೆ ಕ
ಣ್ಗೆಂಬಾದುಡುಗುಣಿಯ ಕೋಂಟೆಯಂ ವಶಗೈದಂ ೨

ವII ಇಂತು ಜಂಬೂರು ವಿರುಪಣವೊಡೆಯರಂ ಮುರಿಯಾಲಾತಂ ವಿದ್ಯಾನಗರಿಗೈದಿ ರಾಯರ್ಗೆ ದೂರಲಾ ವರ್ತಮಾನವಂ ಕೇಳ್ದು ಕರೆಯಲಟ್ಟಲ್ ತಾಂ ಬರ್ಪನ್ನೆಗಂ ಸದ್ಧರ್ಮದಿಂ ರಾಜ್ಯವಿಚಾರಂಗೈಯ್ವುದೆಂದು ತನ್ನನುಜ ಚಿಕ್ಕ ಸಂಕಣನಾಯಕಂಗೆ ನಿಯಾಮಿಸಿ ಕುಟುಂಬ ಸಹಿತಮಾ ದೊಡ್ಡ ಸಂಕಣನಾಯಕಂ ತೆರಳ್ದು ವಿದ್ಯಾನಗರಿಗೈದಿ ರಾಮರಾಯರಂ ಸಂಧಿಸಲ್ ಜಂಬೂರುಡುಗುಣಿಗಳನಾ ವಿರುಪಣವೊಡೆಯರಿಂಗಿತ್ತು ನೀಂ ಹುಜೂರೊಳಿರ್ಪುದೆಂದು

ವII ಆ ಸದಾಶಿವರಾಯನಾಯಕರ ನಂತರ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೭೦ನೆಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ರಲ್ಲಿ ಈತನ ಜೇಷ್ಠ ಮಗನಾದ ದೊಡ್ಡ ಸಂಕಣ್ಣನಾಯಕರಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜಪಟ್ಟವಾಯಿತು. ೧. ಆ ಸದಾಶಿವನಾಯಕನ ಬಳಿಕ ಆತನ ಮಗನಾದ, ಶತ್ರುಗಳೆಂಬ ಆನೆಗಳಿಗೆ ಸಿಂಹದಂತೆ ಇರುವ, ಸಂಕಣ್ಣನಾಯಕನು ಸದ್ಧರ್ಮದಿಂದ ಭೂಮಿಯನ್ನು ಪರಿಪಾಲಿಸಿದನು. ೨. ಜಂಬೂರಿನ ವಿರುಪಣ್ಣ ಒಡೆಯರ್ ಎಂಬುವನು ಉಪಟಳವನ್ನು ಕೊಟ್ಟಾಗ, ಸಂಕಣ್ಣನಾಯಕನು ಜಂಬೂರನ್ನು ಸ್ವಾಧೀನಪಡಿಸಿ ಸುಂದರವಾದ ಉಡುಗಣಿಯ ಕೋಟೆಯನ್ನು ವಶಪಡಿಸಿಕೊಂಡನು. ವII ಈ ರೀತಿ ಜಂಬೂರು ವಿರುಪಣ್ಣ ಒಡೆಯರನ್ನು ಸೋಲಿಸಲು, ಆತನು ವಿಜಯನಗರಕ್ಕೆ ಹೋಗಿ ರಾಯರಿಗೆ ದೂರಿತ್ತನು. ರಾಯನು ಈ ವರ್ತಮಾನವನ್ನು ಕೇಳಿ ನಾಯಕನಿಗೆ ಹೇಳಿಕಳುಹಿಸಲಾಗಿ, ದೊಡ್ಡ ಸಂಕಣ್ಣನಾಯಕನು ತನ್ನ ತಮ್ಮ ಚಿಕ್ಕ ಸಂಕಣ್ಣನಾಯಕನಿಗೆ ರಾಜ್ಯಾಧಿಕಾರವನ್ನು ಸದ್ಧರ್ಮದಿಂದ ತಾನು ಬರುವವರೆಗೂ ನಿರ್ವಹಿಸತಕ್ಕುದೆಂದು ನಿಯಮಿಸಿದನು. ಅನಂತರ ದೊಡ್ಡ ಸಂಕಣ್ಣನಾಯಕನು ಕುಟುಂಬಸಹಿತ ವಿಜಯನಗರಕ್ಕೆ ತೆರಳಿ ರಾಮರಾಯನನ್ನು ಸಂಧಿಸಲು, ರಾಯನು ಜಂಬೂರು ಮತ್ತು ಉಡುಗಣೆಗಳನ್ನು ವಿರುಪಣ್ಣ ಒಡೆಯರಿಗೆ ಬಿಟ್ಟುಕೊಟ್ಟು, ನಾಯಕನಿಗೆ ನೀನು ಹಲವು ಕಾಲ ರಾಜಸನ್ನಿಧಿಯಲ್ಲಿಯೇ ಇರತಕ್ಕುದೆಂದು

ವ|| ಮತ್ತಮದಲ್ಲದಾ ಸದಾಶಿವರಾಯನಾಯಕನಾರಗದ ಕುಶಾವತೀನಗರದ ನದೀತೀರದೊಳ್ ಸದಾಶಿವಪುರವೆಂಬಗ್ರಹಾರಮಂ ಕಟ್ಟಿಸಿ ಭೂಸುರರ್ಗಮತ್ಯುತ್ತಮ ನಿವೇಶನವೃತ್ತಿಕ್ಷೇತ್ರಂಗಳಂ ಕಲ್ಪಿಸಿ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಮತ್ತಂ ತದಗ್ರಹಾರದೊಳ್ ಸ್ವನಾಮಾಂಕಿತಮಾದ ಶಿವಲಿಂಗವನಾಗಮೋಕ್ತ ವಿಧಾನದಿಂ ಪ್ರತಿಷ್ಠೆಯಂ ವಿರಚಿಸಿ ದೇವಾಲಯಮಮಂ ನಿರ್ಮಾಣಂಗೈಸಿ ತಲ್ಲಿಂಗಪೂಜಾರ್ಥಮತಿಮನೋಹರಮಾದ ಭೂಸ್ವಾಸ್ಥೆಯಂ ಧಾರೆಯನೆರೆದು ಶಾಶ್ವತಮಾದ ಸುಕೃತ ಧರ್ಮ ಕೀರ್ತಿಗಳುಮಮಂ ಸಂಪಾದಿಸಿದನಂತುಮಲ್ಲದೆಯುಂ

ಕಂ|| ಭೀಮಂ ಸಂಗರದೊಳ್ ಸು
ತ್ರಾಮಂ ಭೋಗದೊಳ್ ಶಾಂತಿಗುಣದೊಳ್ ಸೋಮಂ
ರಾಮಂ ನನ್ನಿಯೊಳೆಂದೀ
ಭೂಮಿಜನಂ ಪೊಗಳೆ ಬಾಳ್ದನಾ ನರನಾಥಂ ೪೭

ವ|| ಮತ್ತಮದಲ್ಲದೆ

ಕಂ|| ಅಪರಿಮಿತಗುಣಗಣಾಲಯ
ನುಪಮಾತೀತಪ್ರತಾಪನೆಂದೆನಿಸಿ ಧರಾ
ಧಿಪರತ್ನನಾ ಸದಾಶಿವ
ನೃಪನತಿಸದ್ಧರ್ಮದಿಂದಮಿಳೆಯಂ ಪೊರೆದಂ ೪೮

ವ|| ಈ ಸದಾಶಿವನಾಯಕರ್ ತಮಗೆ ರಾಜ್ಯಪಟ್ಟವಾದ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ಆರಭ್ಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೪ ನೆಲೆಗೆ ವರ್ಷಂ ೩೧ ತಿಂಗಳ್ ೯ರ ಪರ್ಯಂತಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದರ್.

ದಾನಧರ್ಮಗಳನ್ನು ಮಾಡಿದನು. ವ|| ಮತ್ತೂ ಅಲ್ಲದೆ ಆ ಸದಾಶಿವರಾಯನಾಯಕನು ಆರಗದಲ್ಲಿರುವ ಕುಶಾವತಿನಗರದ ನದೀತೀರದಲ್ಲಿ ಸದಾಶಿವಪುರವೆಂಬ ಅಗ್ರಹಾರವೊಂದನ್ನು ನಿರ್ಮಿಸಿದನು. ಇಲ್ಲಿ ಅತ್ಯುತ್ತಮ ನಿವೇಶನಗಳು, ಉದ್ಯೋಗ ಮತ್ತು ಕ್ಷೇತ್ರಗಳನ್ನು ಕಲ್ಪಿಸಿ ಶಿವಾರ್ಪಿತವೆಂದು ಬ್ರಾಹ್ಮಣರಿಗೆ ಧಾರೆಯೆರೆದನು. ಹೀಗೆ ಶಾಶ್ವತವಾಗಿರಲು ಶಾಸನವನ್ನು ಬರೆಸಿ, ಆ ಅಗ್ರಹಾರದಲ್ಲಿ ತನ್ನ ಹೆಸರಿನಲ್ಲಿ ಶಿವಲಿಂಗವೊಂದನ್ನು ಆಗಮೋಕ್ತ ವಿಧಾನದಿಂದ ಪ್ರತಿಷ್ಠೆಯನ್ನು ಮಾಡಿಸಿ, ದೇವಾಲಯವನ್ನು ಕಟ್ಟಿಸಿದನು. ಈ ದೇವನ ಪೂಜೆಗೋಸ್ಕರವಾಗಿ ಅತಿ ಮನೋಹರವಾದ ಭೂಮಿಗಳನ್ನು ಮತ್ತು ಸಂಸ್ಥೆಗಳನ್ನು ಧಾರೆಯನ್ನೆರೆದನು. ಹೀಗೆ ಶಾಶ್ವತವಾದ ಪುಣ್ಯಹೊಂದಲು ಧರ್ಮಕಾರ್ಯಗಳನ್ನು ಕೈಗೊಂಡು ಕೀರ್ತಿಯನ್ನು ಸಂಪಾದಿಸಿದನು. ಹೀಗಲ್ಲದೆ, ೪೭. ಆ ಸದಾಶಿವನಾಯಕನು ಯುದ್ಧದಲ್ಲಿ ಭೀಮನು; ಭೋಗದಲ್ಲಿ ಇಂದ್ರನು; ಶಾಂತಿಯಲ್ಲಿ ಸೋಮನು (ಚಂದ್ರ); ಸತ್ಯದಲ್ಲಿ ರಾಮನು-ಎಂಬುದಾಗಿ ಭೂಮಿಯ ಜನರು ಹೊಗಳುವಂತೆ ಬಾಳಿದನು. ವ|| ಮತ್ತು ೪೮. ಅಪಾರವಾದ ಗುಣಗಳ ಸಮೂಹಕ್ಕೆ ನೆಲೆಯಾಗಿ ಅಸಮಾನ ಪ್ರತಾಪನೆನಿಸಿ ರಾಜರಲ್ಲಿ ರತ್ನದಂತಿದ್ದ ಸದಾಶಿವನಾಯಕನು ಅತ್ಯಂತ ಸದ್ಧರ್ಮದಿಂದ ಭೂಮಿಯನ್ನು ಕಾಪಾಡಿದನು. ವ|| ಈ ಸದಾಶಿವನಾಯಕರು ತಮಗೆ ರಾಜ್ಯಪಟ್ಟವಾದ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ರಿಂದ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೪ರವರೆಗೆ ಸಲ್ಲುವ ೩೧ ವರ್ಷ, ೯ ತಿಂಗಳವರೆಗೂ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದರು.

59

# ತೃತೀಯಾಶ್ವಾಸಂ

ವ|| ಸದಾಶಿವರಾಯನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೪೬೬ನೆಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ ಯಲ್ಲಿ ಸದಾಶಿವನಾಯಕರ ಜ್ಯೇಷ್ಠಕುಮಾರರಾದ ದೊಡ್ಡ ಸಂಕಣ್ಣನಾಯಕರಿಗೆ ಇಕ್ಕೇರಿಯರಮನೆಯಲ್ಲಿ ರಾಜಪಟ್ಟಂ

ಕಂ|| ಆ ಸದಾಶಿವನರೇಂದ್ರಾ
ಗ್ರೇಸರನಾನಂತರಮಾತನಾತ್ಮಜನೆನಿಪಾ
ಶ್ರೀ ಸಂಕಣನೃಪನರಿಗಜ
ಕೇಸರಿ ಸದ್ಧರ್ಮದಿಂದಮಿಳೆಯಂ ಪೊರೆದಂ ೧

ಜಂಬೂರ ವಿರುಪಪಣವೊಡೆಯ
ರೆಂಬವನುಪಟಳವನೆಸಗೆ ಸಂಕಣನೃಪನಾ
ಜಂಬೂರಂ ಕೊಂಡುರೆ ಕ
ಣ್ಗೆಂಬಾದುಡುಗುಣಿಯ ಕೋಂಟೆಯಂ ವಶಗೈದಂ ೨

ವ|| ಇಂತು ಜಂಬೂರು ವಿರುಪಣವೊಡೆಯರಂ ಮುರಿಯಾಲಾತಂ ವಿದ್ಯಾನಗರಿಗೈದಿ ರಾಯರ್ಗೆ ದೂರಲಾ ವರ್ತಮಾನವಂ ಕೇಳ್ದು ಕರೆಯಲಟ್ಟಲ್ ತಾಂ ಬರ್ಪನ್ನೆಗಂ ಸದ್ಧರ್ಮದಿಂ ರಾಜ್ಯವಿಚಾರಂಗೈಯ್ವುದೆಂದು ತನ್ನನುಜ ಚಿಕ್ಕ ಸಂಕಣನಾಯಕಂಗೆ ನಿಯಾಮಿಸಿ ಕುಟುಂಬ ಸಹಿತಮಾ ದೊಡ್ಡ ಸಂಕಣನಾಯಕಂ ತೆರಳ್ದು ವಿದ್ಯಾನಗರಿಗೈದಿ ರಾಮರಾಯರಂ ಸಂಧಿಸಲ್ ಜಂಬೂರುಡುಗುಣಿಗಳನಾ ವಿರುಪಣವೊಡೆಯರಿಂಗಿತ್ತು ನೀಂ ಹುಜೂರೊಳಿರ್ಪುದೆಂದು

ವ|| ಆ ಸದಾಶಿವರಾಯನಾಯಕರ ನಂತರ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೬೬ನೆಯ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ರಲ್ಲಿ ಈತನ ಜೇಷ್ಠ ಮಗನಾದ ದೊಡ್ಡ ಸಂಕಣ್ಣನಾಯಕರಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜಪಟ್ಟವಾಯಿತು. ೧. ಆ ಸದಾಶಿವನಾಯಕನ ಬಳಿಕ ಆತನ ಮಗನಾದ, ಶತ್ರುಗಳೆಂಬ ಆನೆಗಳಿಗೆ ಸಿಂಹದಂತೆ ಇರುವ, ಸಂಕಣ್ಣನಾಯಕನು ಸದ್ಧರ್ಮದಿಂದ ಭೂಮಿಯನ್ನು ಪರಿಪಾಲಿಸಿದನು. ೨. ಜಂಬೂರಿನ ವಿರುಪಣ್ಣ ಒಡೆಯರ್ ಎಂಬುವನು ಉಪಟಳವನ್ನು ಕೊಟ್ಟಾಗ, ಸಂಕಣ್ಣನಾಯಕನು ಜಂಬೂರನ್ನು ಸ್ವಾಧೀನಪಡಿಸಿ ಸುಂದರವಾದ ಉಡುಗಣಿಯ ಕೋಟೆಯನ್ನು ವಶಪಡಿಸಿಕೊಂಡನು. ವ|| ಈ ರೀತಿ ಜಂಬೂರು ವಿರುಪಣ್ಣ ಒಡೆಯರನ್ನು ಸೋಲಿಸಲು, ಆತನು ವಿಜಯನಗರಕ್ಕೆ ಹೋಗಿ ರಾಯರಿಗೆ ದೂರಿತ್ತನು. ರಾಯನು ಈ ವರ್ತಮಾನವನ್ನು ಕೇಳಿ ನಾಯಕನಿಗೆ ಹೇಳಿಕಳುಹಿಸಲಾಗಿ, ದೊಡ್ಡ ಸಂಕಣ್ಣನಾಯಕನು ತನ್ನ ತಮ್ಮ ಚಿಕ್ಕ ಸಂಕಣ್ಣನಾಯಕನಿಗೆ ರಾಜ್ಯಾಧಿಕಾರವನ್ನು ಸದ್ಧರ್ಮದಿಂದ ತಾನು ಬರುವವರೆಗೂ ನಿರ್ವಹಿಸತಕ್ಕುದೆಂದು ನಿಯಮಿಸಿದನು. ಅನಂತರ ದೊಡ್ಡ ಸಂಕಣ್ಣನಾಯಕನು ಕುಟುಂಬಸಹಿತ ವಿಜಯನಗರಕ್ಕೆ ತೆರಳಿ ರಾಮರಾಯನನ್ನು ಸಂಧಿಸಲು, ರಾಯನು ಜಂಬೂರು ಮತ್ತು ಉಡುಗಣೆಗಳನ್ನು ವಿರುಪಣ್ಣ ಒಡೆಯರಿಗೆ ಬಿಟ್ಟುಕೊಟ್ಟು, ನಾಯಕನಿಗೆ ನೀನು ಹಲವು ಕಾಲ ರಾಜಸನ್ನಿಧಿಯಲ್ಲಿಯೇ ಇರತಕ್ಕುದೆಂದು

ನಿಯಾಮಿಸಲಿಂತು ರಾಯರ ಸಮೀಪದೊಳ್ ತದ್ರಾಜಕಾರ್ಯಾನುಕೂಲಿಯಾಗಿ ಕತಿಪಯವತ್ಸರಂ ವರ್ತಿಸುತ್ತುಮಿರಲಾ ಪ್ರಸ್ತಾಪದೊಳ್

ಕಂ॥ ಮೆರೆವಾ ಸಂಕಣಭೂಮೀ
ಶ್ವರಗಿರ್ವರ್ ಪುತ್ರರೊಗೆದರವರೊಳ್ ಪಿರಿಯಂ
ಧುರಧೀರರಾಮರಾಜಂ
ಕಿರಿಯಂ ವೆಂಕಟನೃಪಾಲನರಿಕುಲಕಾಲಂ ೩

ವ॥ ಇಂತೊಗೆದ ಸತ್ಪುತ್ರರಿರ್ವರ್‌ದಿನದಿನಂಗಳೊಳಭಿವರ್ಧಿಸಿ ಮನೋಹರಾಕಾರಯುಕ್ತರಾಗಿ ಭೂಮಂಡಲಕ್ಕವತರಿಸಿದ ರವಿಚಂದ್ರರೆಂಬಿನಂ ವಿರಾಜಿಸುತ್ತುಂ ಬಾಲಲೀಲೆಯಂ ನಟಿಸುತ್ತುಮಿರಲಾ ಪುತ್ರರಿರ್ವರಂ ರಾಯರ್ಗೆ ಕಾಣಿಸಲವರ್ಗಳ ರೂಪರೇಖಾ ವಿಶೇಷಂಗಳಂ ನಿಟ್ಟಿಸಿ ಮುಂತೀ ಬಾಲಕರ್ ಮಹಾವರ್ಧಿಷ್ಣುಗಳಪ್ಪರೆಂದತ್ಯಂತಹರ್ಷಿತನಾಗಿ ಪಿಂತೆಮ್ಮ ಸಂಸ್ಥಾನದ, ರಾಜಕಾರ್ಯಂಗಳೊಳತಿ ಸಾಹಸಂಗೈದು ಜಯಕಜ್ಜಂಗಳನಾಗಿಸಿದ ಸದಾಶಿವರಾಯನಾಯಕನ ಮೊಮ್ಮಂದಿರೆಂಬ ವಾತ್ಸಲ್ಯದಿಂದಾ ಕುಮಾರರ್ಗೆ ಪಾಲ್ಬೆಣ್ಣೆಯುಂಬಳಿಗೆಂದು ನಿಯಾಮಿಸಿ

ಕಂ॥ ಮಾಸೂರಂ ಮಲ್ಲೂರಂ
ಭಾಸುರಮೆನಿಸಿರ್ಪ ಪೊಳೆಯಪೊನ್ನೂರಂ ಭೂ
ವಾಸವ ಸಂಕಣಭೂಪಂ
ಗಾ ಸಮಯದೊಳಿತ್ತು ಪೆರ್ಮೆಯಿಂ ಮನ್ನಿಸಿದಂ ೪

ಮತ್ತಮಾ ಬಾಲರಿಂಗ
ತ್ಯುತ್ತಮಹಯ ದಿವ್ಯಭೂಷಣಾಂಬರಗಳನೊ
ಲ್ದಿತ್ತಣುಗರನೀಕ್ಷಿಸಿ ಪೊರೆ
ಯುತ್ತಿಹುದೆಂದೊರೆದು ಕೂರ್ಮೆಯಿಂ ಬೀಳ್ಕೊಟ್ಟಂ ೫

ಕಟ್ಟುಪಾಡುಮಾಡಿದನು. ಈ ರೀತಿಯಲ್ಲಿ ರಾಯರ ಸಮೀಪದಲ್ಲಿ ರಾಜಕಾರ್ಯದಲ್ಲಿ ಪ್ರವೃತ್ತನಾಗಿ ಅನೇಕ ಸಂವತ್ಸರಗಳವರೆಗೂ ಇರಲು ಆ ಸಂದರ್ಭದಲ್ಲಿ ೩. ಆ ಸಂಕಣ್ಣನಾಯಕನಿಗೆ ಇಬ್ಬರು ಗಂಡುಮಕ್ಕಳು ಜನಿಸಿದರು. ಅವರಲ್ಲಿ ಹಿರಿಯವನು ರಣಧೀರನಾದ ರಾಮರಾಜನು; ಕಿರಿಯವನು ಶತ್ರುವಂಶಕ್ಕೆ ಯಮನಂತಿರುವ ವೆಂಕಟಪ್ಪನಾಯಕ. ವ॥ ಈ ರೀತಿ ಶೋಭಿಸುವ ಇಬ್ಬರು ಸತ್ಪುತ್ರರು ದಿನದಿನಕ್ಕೂ ಪ್ರವರ್ಧಮಾನರಾಗಿ ಬೆಳೆಯುತ್ತಾ, ಸುಂದರ ಆಕಾರಗಳಿಂದ ಕೂಡಿ, ಸೂರ್ಯಚಂದ್ರರು ಈ ಭೂಮಿಗೆ ಅವತರಿಸಿದ ರೀತಿಯಲ್ಲಿ ಪ್ರಕಾಶಿಸಿದರು. ಬಾಲಲೀಲೆಗಳಿಂದ ಕೂಡಿದ ಈ ರೀತಿಯ ಮಕ್ಕಳಿಬ್ಬರನ್ನೂ ನಾಯಕನು ರಾಯರಿಗೆ ತೋರಿಸಲು ಅವರುಗಳ ರೂಪರೇಖೆಗಳನ್ನು ಅವಲೋಕಿಸಲಾಗಿ, ಮುಂದೆ ಈ ಬಾಲಕರು ಅಭಿವೃದ್ಧಿ ಹೊಂದುವರೆಂದು ರಾಯನು ಅತ್ಯಂತ ಸಂತೋಷಪಟ್ಟನು. ಹಿಂದೆ ಈ ಸಾಮ್ರಾಜ್ಯದ ರಾಜಕಾರ್ಯಗಳಲ್ಲಿ ಪರಾಕ್ರಮದಿಂದ ವಿಜಯಗಳನ್ನು ತಂದುಕೊಟ್ಟ ಸದಾಶಿವನಾಯಕನ ಮೊಮ್ಮಕ್ಕಳೆಂಬ ವಾತ್ಸಲ್ಯದಿಂದ ಕುಮಾರರಿಗೆ ಹಾಲುಬೆಣ್ಣೆಗಾಗಿ ಉಂಬಳಿಯನ್ನಿತ್ತನು. ೪. ಮಾಸೂರು, ಮಲ್ಲೂರು ಮತ್ತು ಹೊಳೆಹೊನ್ನೂರುಗಳನ್ನು ಭೂಮಿಯ ಇಂದ್ರನೆನಿಸಿದ ಸಂಕಣ್ಣನಾಯಕನಿಗೆ ಆ ಕಾಲದಲ್ಲಿ ಕೊಟ್ಟು ಹಿರಿಮೆಯಿಂದ ಮನ್ನಿಸಿದನು. ೫. ಆಮೇಲೆ ಆ ಹುಡುಗರಿಗೆ

ವ|| ಇಂತು ರಾಜಯೋಗ್ಯಮಾದುಡುಗೊರೆಗಳನಿತ್ತು ಬೀಳ್ಕೊಡಲ್ ಸಂಕಣನಾಯಕಂ ಸಂತಸಂದಳೆದು ನಿಜವಾಸಮಂ ಸಾರ್ದು ಸುಖಮಿರುತ್ತುಮಿರಲೊಂದವಸರದೊಳ್ ರಾಮರಾಯರೋಲಗದೊಳ್ ಕುಳ್ಳಿರ್ದೆಲ್ಲಾ ದುರ್ಗಂಗಳೆಮ್ಮಧೀನಮಾದುವವಿದ್ಧಕರ್ಣ[1]ರಾಳುತ್ತಿರ್ಪ ಗೋವೆಯ ಗಡಮೊಂದೇನಾಣೊಡಂ ಸಾಧ್ಯಮಾದುದಿಲ್ಲೆಂತಾದೊಡಮಾ ಗಡಮಂ ಸಾಧ್ಯಂಗೈಯಲ್ವೇಳ್ಕೆಂದು ನಿಜನಿಯೋಗಿಜನರೊಳಾಳೋಚಿಸಿ ಪಿಂತೆಮ್ಮ ಸಂಸ್ಥಾನಕ್ಕೊದವಿದ ರಾಜಕಾರ್ಯಂಗಳೊಳತಿಸಾಹಸಂಗೆಯ್ದು ಜಯಕಜ್ಜಂಗಳನಾಗಿಸಿ ಪರಮ ಪ್ರಖ್ಯಾತಿಯಂ ಪಡೆದ ಸದಾಶಿವನಾಯಕನಾತ್ಮಜನಪ್ಪ ಸಂಕಣನಾಯಕನ್ನೆತಂದಿರ್ಪನೀತನ ಮುಖದಿಂದಾದೊಡಮಾ ಕಾರ್ಯಮಂ ಸಾಧಿಸಲ್ವೇಳ್ಕೆಂದು ಮನಂದಂದು ನಿಜಾನುಜನಪ್ಪ ವಿಠ್ಠಲರಾಯನನಾ ರಣಮುಖದ ಕಾರ್ಯಕ್ಕೆ ಪ್ರಮಾಣವನೊಡರ್ಚಿಸಿ ಸಂಕಣನಾಯಕನಂ ಕರೆಸಿ ಸ್ವಮನೋಭಿಪ್ರಾಯಮನುಸಿರ್ದು ಬೇಗದಿಂ ನಡೆದೆಮ್ಮ ಕಜ್ಜಮಂ ಶೇಖರಂಗೆಯ್ವುದೆಂದೊರೆದು ಸೇನಾಸಮೂಹಮಂ ಕೈವರ್ತಿಸಿ ಬೀಳ್ಕೊಡಲೊಡನಾ ಪ್ರಸ್ತಾವದೊಳ್

ಕಂ|| ಶ್ರೀ ವಿಠ್ಠಲರಾಯರ ಕೂ
ಡಾ ವಿಭುವರನೈದಿ ದಾಳಿವರಿದಂಬುಧಿಮ
ಧ್ಯಾವಷ್ಟಂಭನಮೆನಿಸಿದ
ಗೋವೆಯ ಗಡವಂ ಸಮೀಕದೊಳ್ ಸಾಧಿಸಿದಂ ೬

ಅತ್ಯುತ್ತಮವಾದ ಕುದುರೆಗಳನ್ನು, ದಿವ್ಯವಾದ ಉಡುಗೆ-ತೊಡುಗೆಗಳನ್ನು ಕೊಟ್ಟು ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ತಿಳಿಸಿ ಪ್ರೀತಿಯಿಂದ ಬೀಳ್ಕೊಟ್ಟನು. ವ|| ಈ ರೀತಿ ರಾಜಯೋಗ್ಯವಾದ ಉಡುಗೊರೆಗಳನ್ನಿತ್ತು ಬೀಳ್ಕೊಡಲು, ಸಂಕಣ್ಣನಾಯಕನು ಸಂತೋಷದಿಂದ ತನ್ನ ನಿಜಾವಾಸಕ್ಕೆ ತೆರಳಿ ಸುಖದಿಂದಿದ್ದನು. ಒಂದಾನೊಂದು ಅವಸರದ ಸಮಯದಲ್ಲಿ ರಾಮರಾಯನು ಓಲಗದಲ್ಲಿ ಕುಳಿತಿದ್ದನು. ಆತನು ಪ್ರಾಸಂಗಿಕವಾಗಿ "ಎಲ್ಲಾ ಕೋಟೆಗಳೂ ನಮ್ಮ ಅಧೀನವಾಗಿವೆ; ಆದರೆ ಪೋರ್ಚುಗೀಸರಾಳುತ್ತಿದ್ದ ಗೋವೆಯ ಕೋಟೆಯೊಂದು ಮಾತ್ರ ಈವರೆಗೂ ಸಾಧ್ಯವಾಗಲಿಲ್ಲ; ಈ ಕಾರಣ ಇದನ್ನು ಸಾಧಿಸಿಕೊಂಡು ಬರಲೇಬೇಕು" ಎಂದು ತನ್ನ ಆಪ್ತ ನಿಯೋಗಿಗಳಲ್ಲಿ ಆಲೋಚನೆ ಮಾಡಿಕೊಂಡು, ಹಿಂದೆ ಈ ಸಂಸ್ಥಾನಕ್ಕೆ ಉಂಟಾಗಿದ್ದ ರಾಜಕಾರ್ಯಗಳಲ್ಲಿ ಅತಿ ಪರಾಕ್ರಮದಿಂದ ಮೆರೆದು, ಜಯವನ್ನು ತಂದು ಪರಮಕೀರ್ತಿಯನ್ನು ಪಡೆದ, ಸದಾಶಿವನಾಯಕನ ಮಗನಾದ ಸಂಕಣ್ಣನಾಯಕನ ಮೂಲಕ ಈ ಕಾರ್ಯವನ್ನು ಸಾಧಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿದನು. ತನ್ನ ತಮ್ಮನಾದ ವಿಠ್ಠಲರಾಯನನ್ನು ಯುದ್ಧರಂಗಕ್ಕೆ ಕಳಿಸಿ, ಸಂಕಣ್ಣನಾಯಕನಿಗೆ ತನ್ನ ಮನೋಭಿಪ್ರಾಯ ವನ್ನು ತಿಳಿಸಿದನು. ನಮ್ಮ ಈ ಕಾರ್ಯವನ್ನು ಸಾಧಿಸಬೇಕೆಂದೂ ಬೇಗನೆ ಪ್ರಯಾಣ ಮಾಡಬೇಕೆಂದೂ ಅವನಿಗೆ ಹೇಳಿ ಉಚಿತ ಸೇನೆಯೊಡನೆ ಅವನನ್ನು ಬೀಳ್ಕೊಟ್ಟನು. ಆ ಸಂದರ್ಭದಲ್ಲಿ-೬. ವಿಠ್ಠಲರಾಯರ ಜೊತೆಗೆ ರಾಜನಾದ ಸಂಕಣ್ಣನಾಯಕನು ಹೋಗಿ ಧಾಳಿಮಾಡಿ, ಸಮುದ್ರ ಮಧ್ಯದಲ್ಲಿ ಮೆರೆಯುತ್ತಿರುವ ಗೋವೆಯ ಕೋಟೆಯನ್ನು ಯುದ್ಧದಲ್ಲಿ ಸಾಧಿಸಿದನು.

---

೧. ಅವಿದ್ಧಕರ್ಣ-ಕಿವಿಯನ್ನು ಚುಚ್ಚಿಸಿಕೊಳ್ಳದವರು; ಪೋರ್ಚುಗೀಸರು.

ವ|| ಇಂತು ಗೋವೆಯ ಗಡಮಂ ಕೊಂಡು ಮರಳ್ದೊಡನಾ ಸಂಕಣನಾಯಕಂ ರಾಯರಂ ಕಾಣಲತ್ಯಂತಪ್ರಮುದಿತಮಾನಸರಾಗಿ ಮಾಳೇನಹಳ್ಳಿ ಹೋಬಳಿಯುಮನುಚಿತಮಾಗಿತ್ತ ನರ್ಘ್ಯರತ್ನಾಭರಣಾಂಬರತಾಂಬೂಲಮಂ ಭುಜಕೀರ್ತಿ ಮುಂತಾದ ಬಿರುದುಗಳುಮಂ ತತ್ಪುತ್ರರ್ಗುಚಿತಮಾದುಡುಗೊರೆವೀಳ್ಯಂಗಳುಮನಿತ್ತಾದರಿಸಿ ಬೀಳ್ಕೊಡಲಪ್ಪಣೆಗೊಂಡತ್ಯಂತ ಹರ್ಷದಿ ಸ್ವಕುಟುಂಬ ಸಹಿತಂ ವಿದ್ಯಾನಗರಿಯಿಂ ತೆರಳ್ದೈತಂದಿಕ್ಕೇರಿಪುರವರಮಂ ಸಾರ್ದನಂತರಂ ಸ್ವಪುತ್ರರಪ್ಪ ರಾಮರಾಜನಾಯಕ ವೆಂಕಟಪ್ಪನಾಯಕರ್ಗಮತ್ಯಂತ ಮನೋಹರಾಕಾರಯುಕ್ತರಾದ ಕನ್ಯಾರತ್ನಂಗಳಂ ಪರಮ ಸಂಭ್ರಮದಿಂ ವಿವಾಹಮಂ ರಚಿಸಿ ಸುಖಸಂಕಥಾವಿನೋದದಿಂ ರಾಜ್ಯಮನಾಳುತ್ತಿರ್ದು ವಿದ್ವನ್ಮುಖದಿಂ ಸಮಸ್ತಶಾಸ್ತ್ರಂಗಳನಾರೈದು ತಿಳಿದು ಭುವನಕೋಶಾದಿ ವಿವರಣಂಗಳಂ ಕೇಳ್ದು ದೇಶಾಟನಂ ಮಾಡಲ್ವೇಳ್ಕೆಂದು ಮನಂದಂದು ನಿಜರಾಜ್ಯಭಾರಮಂ ತನ್ನನುಜನಹ ಚಿಕ್ಕಸಂಕಣ ನಾಯಕಂಗೆ ಕೈವರ್ತಿಸಿ ಸ್ವಪುತ್ರರನಾತನ ಸಮೀಪದೊಳಿರಿಸಿ ಸಂಗಡಂ ನಾಲ್ವರೂಳಿಗದವರ್ವೆರಸು

ಕಂ|| ಭಸಿತರುದ್ರಾಕ್ಷಮಾಲಾ
ಪ್ರಸರಂಗಳನಾಂತು ಕಾವಿಕಾಷಾಯಾಂಬರ
ಮೆಸೆಯಲ್ ನಾಗರಮರಿಯೆಂ
ಬಸಿಯಂ ಕೊಂಡಧಿಕಹರುಷದಿಂ ಪೊರಮಟ್ಟಂ ೭

ವ|| ಇಂತತೀತ ಜಂಗಮವೇಷಮಂ ತಾಳ್ದು ಪೊರಮಟ್ಟು ತೆಂಕಲಭಿಮುಖನಾಗಿ ನಡೆಯುತ್ತುಂ ಸ್ವದೇಶಮಂ ಕಳೆದು ಗ್ರಾಮೈಕರಾತ್ರಿ ನಿವಾಸಿಯಾಗಿರುತ್ತುಂ ತತ್ತದ್ದೇಶಂಗಳೊಳುಳ್ಳ

ವ|| ಈ ರೀತಿಯಾಗಿ ಗೋವೆಯ ಕೋಟೆಯನ್ನು ವಶಕ್ಕೆ ತೆಗೆದುಕೊಂಡು ಸಂಕಣ್ಣನಾಯಕನು ರಾಯರನ್ನು ಕಾಣಲು ಮರಳಿದನು. ರಾಮರಾಯನು ಅತ್ಯಂತ ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಮಾಳೇನಹಳ್ಳಿ ಹೋಬಳಿಯನ್ನು ಬಹುಮಾನವಾಗಿ ಕೊಟ್ಟು, ಅನರ್ಘ್ಯ ರತ್ನಾಭರಣ, ಬಟ್ಟೆಗಳು, ತಾಂಬೂಲಗಳನ್ನೂ ಹಾಗೂ ಭುಜಕೀರ್ತಿ ಮುಂತಾದ ಬಿರುದುಗಳನ್ನು ಕೊಟ್ಟು ಅವನ ಮಕ್ಕಳಿಗೆ ಉಡುಗೊರೆ-ವೀಳ್ಯಗಳನ್ನಿತ್ತು ಆದರಿಸಿ ಬೀಳ್ಕೊಟ್ಟನು. ಈ ರೀತಿ ನಾಯಕನು ರಾಯರಿಂದ ಅಪ್ಪಣೆಯನ್ನು ಪಡೆದುಕೊಂಡು ತನ್ನ ಕುಟುಂಬಸಹಿತನಾಗಿ ವಿಜಯನಗರದಿಂದ ಹೊರಟು ತನ್ನ ರಾಜಧಾನಿ ಇಕ್ಕೇರಿಪುರಕ್ಕೆ ಬಂದನು. ಹಲವು ಕಾಲಾನಂತರ ತನ್ನ ಪುತ್ರರಾದ ರಾಮರಾಜನಾಯಕ, ವೆಂಕಟಪ್ಪನಾಯಕರಿಗೆ ಅತ್ಯಂತ ಸುಂದರರೂಪಿನ ಕನ್ಯೆಯರನ್ನು ಗೊತ್ತುಮಾಡಿ ವೈಭವದಿಂದ ವಿವಾಹವನ್ನು ನಡೆಸಿದನು. ಈ ರೀತಿ ಸುಖದಿಂದ ರಾಜ್ಯವನ್ನಾಳುತ್ತಿದ್ದು, ವಿದ್ವಾಂಸರುಗಳಿಂದ ಸಮಸ್ತ ಶಾಸ್ತ್ರಗಳನ್ನು ಕೇಳಿ ತಿಳಿದುಕೊಂಡು ಮನನಮಾಡಿಕೊಳ್ಳುತ್ತಾ, ಪ್ರಪಂಚದ ಎಲ್ಲ ವಿವರಣಗಳನ್ನು ವ್ಯಾಸಂಗಮಾಡುತ್ತಿದ್ದನು. ಈ ರೀತಿ ಇರುವ ನಾಯಕನಿಗೆ ದೇಶಾಟನೆ ಮಾಡಬೇಕೆಂದು ಮನಸ್ಸಾಯಿತು. ಆತನು ರಾಜ್ಯಭಾರವೆಲ್ಲವನ್ನೂ ತನ್ನ ತಮ್ಮ ಚಿಕ್ಕ ಸಂಕಣ್ಣನಾಯಕನಿಗೆ ವಹಿಸಿ, ತನ್ನ ಮಕ್ಕಳನ್ನು ಆತನ ಸಮೀಪದಲ್ಲಿರಿಸಿ, ಸಂಗಡ ನಾಲ್ಕು ಜನ ಊಳಿಗದವರೊಡನೆ ಕೂಡಿಕೊಂಡು-೭. ಭಸ್ಮ, ರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು, ಕಾವಿಬಟ್ಟೆಯನ್ನುಟ್ಟು, ನಾಗರಮರಿ ಎಂಬ ಖಡ್ಗವನ್ನು ತೆಗೆದುಕೊಂಡು ಬಹು ಸಂತೋಷದಿಂದ ಹೊರಟನು. ವ|| ಈ ರೀತಿ ಲೋಕಾತೀತವಾದ ಜಂಗಮವೇಷವನ್ನು ತಾಳಿ ದಕ್ಷಿಣಾಭಿಮುಖನಾಗಿ ಹೊರಟು ನಡೆಯುತ್ತಾ, ಸ್ವದೇಶದಿಂದ

ಪುಣ್ಯಕ್ಷೇತ್ರ ತೀರ್ಥಲಿಂಗದೇವತಾವಿಶೇಷಭೇದಾದಿಗಳುಮಂ ತತ್ತದ್ವಿಷಯಜನಂಗಳ ನಡೆ ನುಡಿಯುಡುಗೆ ತೊಡುಗೆ ಮುಂತಾದ ನಾನಾವಿಧ ವಿಚಿತ್ರತರ ರಚನಾಪ್ರೌಢಿಗಳನಾಲೋಕನಂಗೆಯುತ್ತುಂ ತೆರಳ್ದು

ಕಂ॥ ಮೆರೆವ ಶಿವಗಂಗೆಯಂ ತ
ನ್ನರಪತಿ ನಿಟ್ಟಿಸಂತೆ ಕಂಚಿಯಂ ಪೊರ್ದಿ ಚಿದಂ
ಬರಮಂ ಶ್ರೀಮುಷ್ಣವನುಳಿ
ದುರುತರಗೌರೀಮಯೂರಮಂ ನೆರೆ ಸಾರ್ದಂ ೮

ಅಮಲಿನ ಮಧ್ಯಾರ್ಜುನ ಸ
ತ್ಕಮಲಾಲಯ ಕುಂಭಕೋಣೆ ವರಪಂಚನದಂ
ಕ್ರಮದೆ ಮನ್ನಾರ ಪುರುಷೋ
ತ್ತಮ ನವಪಾಷಾಣಮೆಂಬಿವಂ ಮಿಗೆ ಸಾರ್ದಂ ೯

ಬೇತಾಳಪಟ್ಟಣವನಾ
ಭೂತಲಪತಿ ಪೊರ್ದಿ ಸಾರ್ದು ರಾಮೇಶ್ವರಮಂ
ಸೇತು ಮಹೋದಧಿ ಸುಕೃತ
ದ್ಯೋತನ ರತ್ನಾಕರಂಗಳಂ ನಿಟ್ಟಿಸಿದಂ ೧೦

ವ॥ ಇಂತು ಸೇತುದರ್ಶನಂಗೈದನಂತರಮಾ ಸಂಕಣನಾಯಕಂ ರಾಮೇಶ್ವರದಿಂ ತೆರಳ್ದುತ್ತರದಿಶಾಭಿಮುಖನಾಗೈದುತ್ತುಂ

ಕಂ॥ ಬಗೆಬಗೆಯ ದೇಶಕೋಶಾ
ದಿಗಳಂ ನಿಟ್ಟಿಸುತೆ ವಿಜಯಪುರಮಂ ಭಾಗಾ
ನಗರಮುಮಂ ಕಳಿದಮದಾ
ನಗರವನುಳಿದೆಸೆವ ಡಿಳ್ಳಿಯಂ ನೆರೆ ಪೊಕ್ಕಂ ೧೧

ಪ್ರಯಾಣ ಮಾಡಿ, ಗ್ರಾಮದಲ್ಲಿ ಒಂದು ರಾತ್ರಿ ತಂಗುತ್ತಾ, ಆಯಾ ದೇಶಗಳಲ್ಲಿ ಇರುವ ಪುಣ್ಯಕ್ಷೇತ್ರಗಳು, ತೀರ್ಥಗಳು, ಪ್ರಖ್ಯಾತವಾಗಿರುವ ಶಿವಲಿಂಗ ದೇವರುಗಳ ಸಾನ್ನಿಧ್ಯದಲ್ಲಿ ಸೇವೆಯನ್ನು ಸಲ್ಲಿಸಿ, ಆಯಾ ಪ್ರಾಂತಗಳ ಜನಗಳ ನಡೆ-ನುಡಿ, ಉಡುಗೆ-ತೊಡುಗೆ ಮುಂತಾದ ನಾನಾ ವಿಧವಾದ ವಿಚಿತ್ರ ರೀತಿಗಳ ರಚನಾಪ್ರೌಢಿಮೆಗಳನ್ನೂ ಅವಲೋಕಿಸುತ್ತಾ ತೆರಳಿದನು. ೮. ಆ ರಾಜನು ಮೆರೆಯುತ್ತಿರುವ ಶಿವಗಂಗೆಯನ್ನು ನೋಡಿ ಕಂಚಿಯನ್ನು ಸೇರಿ, ಚಿದಂಬರವನ್ನೂ ಶ್ರೀಮುಷ್ಣವನ್ನೂ ದಾಟಿ ಶ್ರೇಷ್ಠವಾದ ಗೌರೀ ಮಯೂರವನ್ನು ಸೇರಿದನು. ೯. ಪವಿತ್ರವಾದ ಮಧ್ಯಾರ್ಜುನ, ಕಮಲಾಲಯ, ಕುಂಭಕೋಣೆ, ಪಂಚನದ, ಮನ್ನಾರ, ಪುರುಷೋತ್ತಮ, ನವಪಾಷಾಣ (ಪುದುಗಲ್) ಎಂಬ ಸ್ಥಳಗಳಿಗೆ ಹೋದನು. ೧೦. ಆ ರಾಜನು ಬೇತಾಳಪಟ್ಟಣಕ್ಕೆ ಹೋಗಿ ರಾಮೇಶ್ವರವನ್ನೂ, ಅಲ್ಲಿ ಸೇತುಬಂಧನವನ್ನೂ, ಪುಣ್ಯಗೋಚರವಾದ ಸಮುದ್ರಗಳನ್ನೂ ನೋಡಿದನು. ವ॥ ಈ ರೀತಿ ಆ ಸಂಕಣ್ಣನಾಯಕನು ಸೇತುದರ್ಶನವನ್ನು ಕೈಗೊಂಡನಂತರ ರಾಮೇಶ್ವರದಿಂದ ತೆರಳಿ ಉತ್ತರದಿಕ್ಕಿಗೆ ಅಭಿಮುಖನಾಗಿ ಪ್ರಯಾಣ ಮಾಡಿದನು. ೧೧. ವಿವಿಧ ರೀತಿಗಳ ದೇಶ-ಕೋಶಾದಿಗಳನ್ನು ನೋಡುತ್ತಾ ವಿಜಯಪುರವನ್ನೂ (ವಿಜಯವಾಡ), ಭಾಗಾನಗರ (ಗೋಲಕೊಂಡ)ವನ್ನೂ ದಾಟಿ ಅಹಮ್ಮದಾನಗರವನ್ನು ನೋಡಿದ ಮೇಲೆ ದಿಳ್ಳಿಯನ್ನು

ಪರಿಶೋಭಿಸುವಾ ಪೊಳಲ್ಗೈ
ಸಿರಿಯಂ ನೆರೆನೋಡಿ ನೋಡಿ ಸಂತಸವಡುತುಂ
ಕರಮೆಸೆವಾ ಡಿಳ್ಳೀಶ್ವರ
ನುರುರಾಜದ್ವಾರನಿಕಟಮಮಂ ಮಿಗೆ ಸಾರ್ದಂ ೧೨

ಎಸೆವಾ ಪೆರ್ವಾಗಿಲ ಮುಂ
ದೆಸೆಯೊಳ್ ನಿಜಬಿರುದುವೆರಸು ಕಟ್ಟಿಹ ಕಡುಕೂ
ರಸಿಯಂ ತನ್ನೃಪವರನೀ
ಕ್ಷಿಸಿ ಶಿರವಂ ತೂಗಿ ತೂಗಿ ಸೈವೆರಗಾದಂ ೧೩

ವ|| ಇಂತಾ ರಾಜದ್ವಾರದೊಳ್ ಬಿರುದುವೆರಸು ಕಟ್ಟಿರ್ದ ಕೂರಸಿಯಂ ಸಂಕಣ ನಾಯಕನಭಿವೀಕ್ಷಿಸಿ ಬೆರಗಾಗುತ್ತುಂ ದ್ವಾರಪಾಲಕರಂ ಕರೆದಿಂತು ರಾಜದ್ವಾರದೊಳ್ ಬಿರುದು ವೆರಸು ಖಡ್ಗಮಂ ಕಟ್ಟಿರ್ಪ ಕಾರಣಮೇನೆಂದು ಬೆಸಗೊಳಲವರ್ಕಳಿಂತೆಂದರ್

ಉ|| ಅಂಕುಶಖಾನನೆಂಬತಿ ಪರಾಕ್ರಮಶಾಲಿ ವಜೀರವರ್ಯನಾ
ರುಂ ಕರವೊಂಟಿಗಳ್ತಿಯ ಸಮೀಕದೊಳೆನ್ನೊಳಿದಿರ್ಚಿ ನಿಲ್ವರಿ
ಲ್ಲಂಕದೊಳಾಂತು ನಿಲ್ವದಟನುಳ್ಳೊಡೆ ಬಾಳನಿದಂ ಕಳಲ್ಚಲೆಂ
ದಂಕಿತಗೈದು ಕಟ್ಟಿಹನೆನಲ್ ನುಡಿದಂ ನಗುತಾ ನರಾಧಿಪಂ ೧೪

ಕಂ|| ಅಂತಪ್ಪಧಿಕಪರಾಕ್ರಮ
ವಂತನೆ ನುಡಿದಾ ವಜೀರನೆನಲಹುದೀ ಭೂ
ಕಾಂತನಿಳೆಯೊಳಗವನ ಬಿರು
ದಂ ತಡೆವದಟರ್ಕಳಿಲ್ಲವೆಂದವರುಸಿರ್ದರ್ ೧೫

ಪ್ರವೇಶಿಸಿದನು. ೧೨. ಆ ಪಟ್ಟಣದ ಸೊಬಗನ್ನೂ, ಸಂಪತ್ತನ್ನೂ ನೋಡಿ ಸಂತೋಷ ಪಡುತ್ತಾ ದಿಲ್ಲೀಶ್ವರನ ರಾಜದ್ವಾರದ ಸಮೀಪಕ್ಕೆ ಬಂದನು. ೧೩. ಆ ರಾಜದ್ವಾರದ ಮುಂದೆ ಬಿರುದುಸಹಿತವಾಗಿ ಕಟ್ಟಿದ ಹರಿತವಾದ ಖಡ್ಗವನ್ನು ನೋಡಿ ತಲೆದೂಗಿ ಆಶ್ಚರ್ಯಚಕಿತನಾದನು. ವ|| ಈ ರೀತಿ ಮಹಾದ್ವಾರದಲ್ಲಿ ಬಿರುದುಸಹಿತ ಕಟ್ಟಿದ್ದ ಕತ್ತಿಯನ್ನು ಸಂಕಣ್ಣ ನಾಯಕನು ನೋಡುತ್ತಾ ಆಶ್ಚರ್ಯಚಕಿತನಾಗಿ, ದ್ವಾರಪಾಲಕರನ್ನು ಕರೆದು, ಈ ರೀತಿ ರಾಜದ್ವಾರದಲ್ಲಿ ಬಿರುದಿನಿಂದ ಕೂಡಿದ ಖಡ್ಗವನ್ನು ಕಟ್ಟಿದ ಕಾರಣವೇನೆಂದು ವಿಚಾರಿಸಲು ಅವರು ಈ ರೀತಿ ಹೇಳಿದರು: ೧೪. ಅಂಕುಶಖಾನನೆಂಬ ಪರಾಕ್ರಮಶಾಲಿಯಾದ ಒಬ್ಬ ಮಂತ್ರಿಶ್ರೇಷ್ಠನಿದ್ದಾನೆ. ಅವನು "ಒಂಟಿಗತ್ತಿಯ ಕಾಳಗದಲ್ಲಿ ತನ್ನನ್ನು ಎದುರಿಸಿ ನಿಲ್ಲತಕ್ಕವರು ಯಾರೂ ಇಲ್ಲ; ನನ್ನ ಮೇಲೆ ಯುದ್ಧಕ್ಕೆ ನಿಲ್ಲುವ ಸಮರ್ಥನಿದ್ದರೆ ಈ ಖಡ್ಗವನ್ನು ಬಿಚ್ಚಲಿ" ಎಂದು ಸೂಚಿಸಿ ಇದನ್ನು ಕಟ್ಟಿದ್ದಾನೆ ಎಂದು ಹೇಳಲು, ಆ ರಾಜನು ನಗುತ್ತಾ ಹೇಳಿದನು. ೧೫. ಆ ಮಂತ್ರಿಯು ಅಂತಹ ಅಧಿಕ ಪರಾಕ್ರಮಶಾಲಿಯೋ? ಎಂದು ಕೇಳಿದನು. ಅವರೆಲ್ಲರೂ "ಅಹುದು, ಈ ರಾಜನ ರಾಜ್ಯದಲ್ಲಿ ಅವನ ಬಿರುದನ್ನು ಪಡೆಯತಕ್ಕ ವೀರರು ಯಾರೂ ಇಲ್ಲ" ಎಂದು ಹೇಳಿದರು.

ಭೂಕಾಂತಂ ದ್ವಾರದೆ ಬಿಗಿ
ದೀ ಕಳ್ತಿಯನೀಳ್ದು ತದ್ವಜೀರನ ದರ್ಪೋ
ದ್ರೇಕವನಂಕದೆ ಮಗ್ಗಿಪ
ಭೀಕರಭಟರಿಲ್ಲವೆಂದು ಚಿಂತಿಸುತಿರ್ಪಂ ೧೬

ವ॥ ಇಂತೆಂದುಸಿರ್ದ ಪಡಿವಳರುಕ್ತಿಯನಾ ಸಂಕಣನಾಯಕಂ ಕೇಳ್ದವನತ್ಯಂತ ಪರಾಕ್ರಮಶಾಲಿಯಾದೊಡೆನ್ನೊಳ್ ಕಾಳಗಕ್ಕಿದಿರ್ಚಿ ನಿಲಲೆಂದುಸಿರ್ದೊಡನಿರ್ಪೂಳಿಗದವರ್ಕಳಿಂದಾ ಕಳ್ತಿಯಂ ಕಳಲ್ಚಿಸಿ ತೆಗೆಸಲನಿತರೊಳೀ ವೃತ್ತಾಂತಮಂ ಪಡಿಯರರ ಮುಖದಿಂ ಪಾತುಶಾಹಂ ಕೇಳ್ದು ಬೆರಗುವೆತ್ತು ಸಂಕಣನಾಯಕನಂ ಸಮೀಪಕ್ಕೆ ಬರಿಸಿ ನೀನಾರ್ ನೀನಿರ್ಪ ದೇಶ ಮಾವುದೆತ್ತಣಿಂದೆಳ್ತಂದೆಯೆಂದು ಬೆಸಗೊಳಲತಿಥಿಗಳಾಗಿ ಗ್ರಾಮೈಕರಾತ್ರಿ ಸಂಚಾರ ಶೀಲರಾಗಿರ್ಪೆಮಗೆಲ್ಲ ದೇಶಂಗಳೆಮ್ಮ ದೇಶಂಗಳಾಗಿರ್ಪುವೆನಲಂತಾದೊಡೊಂಟಿಗಳ್ತಿಯ ಕಾಳಗದೊಳವಂಗಿದಿರ್ಚಿ ನಿಲಲಾಪೆಯೆಂದು ಬೆಸಗೊಳಲ್ ಬಹೂಕ್ತಿಗಳಿಂದೇನಾ ವಜೀರನಂ ಬರಿಸಲ್ ಯುದ್ಧರಂಗದೊಳ್ ಕಾಣಲಹುದೆನಲೀ ಮಾತಂ ಪಾತುಶಾಹಂ ಕೇಳ್ದಾ ಸಂಕಣನಾಯಕನ ಮುಖಮಂಡಲ ತೇಜೋವಾಕ್ಪಟುತ್ವಂಗಳಂ ಬಲ್ಲುಮನೆರ್ದೆಗೊಂಡಿವಂ ಸಾಧಾರಣಪುರುಷನಲ್ತೆನ್ನ ರಾಜದ್ವಾರದೊಳ್ ಕಟ್ಟಿರ್ದ ಬಿರುದಿನ ಜಂಜಡವನೀತನ ಮುಖದಿಂದಾದೊಡಂ ಕಳೆದಪೆನೆಂದು ನಿಶ್ಚಯಂಗೈದು ಸಮಸ್ತಮಂತ್ರಿ ಮನ್ನೆಯಮಂಡಲಿಕನಿಯೋಗಿ ಸಾಮಾಜಿಕ ವಜೀರ ಮುಂತಾದವರುಮಂ ಮತ್ತಂ

೧೬. "ಮತ್ತು ಅರಸನು (ಬಾದಷಹ) ಕೂಡ ಬಾಗಿಲಲ್ಲಿ ಬಿಗಿದಿರುವ ಈ ಕತ್ತಿಯನ್ನು ಎಳೆದು, ಆ ಮಂತ್ರಿಯ ದರ್ಪವನ್ನು ಯುದ್ಧದಲ್ಲಿ ತಗ್ಗಿಸಬಲ್ಲ ಭಯಂಕರ ಭಟರು ಯಾರೂ ಇಲ್ಲವೆಂದು ಚಿಂತಿಸುತ್ತಿದ್ದಾನೆ" ಎಂದರು. ವ॥ ಈ ರೀತಿಯಾಗಿ ಹೇಳಿದ ದ್ವಾರಪಾಲಕರ ಮಾತನ್ನು ಸಂಕಣ್ಣನಾಯಕನು ಕೇಳಿ," "ಅವನು ಅತ್ಯಂತ ಪರಾಕ್ರಮಶಾಲಿಯಾಗಿದ್ದರೆ ನನ್ನಲ್ಲಿ ಹೋರಾಟಕ್ಕೆ ಎದುರಾಗಿ ನಿಲ್ಲಲಿ" ಎಂದು ಹೇಳಿ ಊಳಿಗದವರಿಂದ ಆ ಕತ್ತಿಯನ್ನು ಕಳಚಿಸಿ ತೆಗೆಸಿದನು. ಅಷ್ಟರಲ್ಲೇ ಈ ವಾರ್ತೆಯನ್ನು ದ್ವಾರಪಾಲಕರಿಂದ ಕೇಳಿ ಆಶ್ಚರ್ಯಪಟ್ಟ ಬಾದಷಹನು ಸಂಕಣ್ಣನಾಯಕನನ್ನು ಸಮೀಪಕ್ಕೆ ಬರಮಾಡಿಕೊಂಡು, ಅವನನ್ನು ಕುರಿತು "ನೀವು ಯಾರು? ನೀವು ಇರುವ ದೇಶ ಯಾವುದು? ಎಲ್ಲಿಂದ ಬಂದಿರಿ?" ಎಂಬುದಾಗಿ ಕೇಳಿದನು. ಸಂಕಣ್ಣನಾಯಕನು ಉತ್ತರವೀಯುತ್ತಾ "ಅತಿಥಿಗಳಾಗಿ ಗ್ರಾಮದಲ್ಲಿ ಒಂದು ರಾತ್ರಿಯಿದ್ದು, ಸದಾ ಸಂಚಾರಶೀಲರಾಗಿರುವ ನಮಗೆ ದೇಶಗಳೆಲ್ಲವೂ ನಮ್ಮವೇ ಆಗಿವೆ" ಎಂದು ಹೇಳಿದನು. ಬಾದಷಹನು ಅವನನ್ನು ಕುರಿತು "ಒಂಟಿಗತ್ತಿಯ ಕಾಳಗದಲ್ಲಿ ಅವನ ಎದುರಾಗಿ ನಿಲ್ಲಲು ಸಾಧ್ಯವೇ?" ಎಂದು ಕೇಳಲು "ಬಹಳ ಮಾತುಗಳಿಂದೇನು? ಆ ಮಂತ್ರಿಯನ್ನು ಕರೆಸು; ಯುದ್ಧರಂಗದಲ್ಲಿ ಇದನ್ನು ಕಾಣಬಹುದು" ಎಂದ ನುಡಿಯನ್ನು ಬಾದಷಹನು ಕೇಳಿ ಆ ಸಂಕಣ್ಣನಾಯಕನ ಮುಖದಲ್ಲಿರುವ ತೇಜಸ್ಸು, ವಾಕ್ಪಟುತ್ವಗಳನ್ನು ಕಂಡು ಈತನು ಸಾಧಾರಣಪುರುಷನಂತಲ್ಲ ಎಂಬುದಾಗಿ ಮನದಲ್ಲಿ ಯೋಚಿಸಿ ರಾಜದ್ವಾರದಲ್ಲಿ ಕಟ್ಟಿದ್ದ ಬಿರುದಿನ ಪರಿತಾಪವನ್ನು ಈತನ ಮುಖದಿಂದಲೇ ಕಳೆದು ಕೊಳ್ಳುವೆನೆಂದು ನಿಶ್ಚಯಿಸಿಕೊಂಡನು. ಸಮಸ್ತ ಮಂತ್ರಿಗಳು ಸಾಮಂತರು, ಮಾಂಡಲಿಕರು, ನಿಯೋಗಿಗಳು, ನಾಗರಿಕರು, ನಾನಾ ವಿಧವಾದ ಯುದ್ಧಕೌಶಲ್ಯದಲ್ಲಿ ನಿಪುಣರಾದವರು,

ನಾನಾಯುಧಯುದ್ಧಕೌಶಲವಿಶಾರದರಪ್ಪ ಪಟುಭಟರ್ಕಳುಮಂ ಬಿರುದಿನ ಮಾಸಾಳ್ಗಳುಮಂ ಮತ್ತಂ ತನ್ನ ಪೊಳಲೊಳಿರ್ಪ ಸಕಲ ಕಲಾಪ್ರವೀಣರುಮನಾಬಾಲವೃದ್ಧರ್ ಮುಂತಾದ ನೋಟಕರ್ಕಳುಮಂ ಶೀಘ್ರದೊಳೈತರ್ಪುದೆಂದು ನಿಯಾಮಿಸಿ ಬಳಿಕ್ಕೀ ವೃತ್ತಾಂತಮಂ ತಿಳಿಪಿ ಕಾಳಗಕ್ಕಂಕುಶಖಾನನಂ ಕರೆತರ್ಪುದೆಂದೂಳಿಗದವರ್ಗುಸಿರ್ದು ಸಂಕಣನಾಯಕಂಗಂ ಶಾಲಿ ತುಂಡುಲ ಶರ್ಕರಾಢಕ ಚಣಕ ಗೋಧೂಮ ಗುಡಘೃತಕುಂಭ ರಂಭಾಫಲ ತಾಂಬೂಲಾದ್ಯಶೇಷ ಸೋಪಸ್ಕರಯುಕ್ತ ಮಾದುಲುಪೆಯಂ ಕೊಡಿಸಲವನೆಮಗೇಕೆಂದೆನುತೇನುಮಂ ಕೈಕೊಳದೈದಿ ಮಜ್ಜನಶಿವಾರ್ಚನ ಭೋಜನಾದಿಗಳಂ ನಿಮಿರ್ಚಿ ಬರ್ಪನಿತರೊಳ್ ಪಾತುಶಾಹಂ ತಾನೊಳಪೊಕ್ಕು ಭೋಜನಂಗೈದು ಹಜಾರಕ್ಕೈದಿ ಸಭೆಯಂ ನೆರಹಿಸಿ ಸದರೊಳ್ ಕುಳ್ಳಿರ್ಪನಿತರೊಳಂಕುಶಖಾನನೀ ವೃತ್ತಾಂತಮಂ ಕೇಳ್ದು ಭೋಜನಾದಿಗಳಂ ರಚಿಸಿ ವಸ್ತ್ರಾಭರಣಾಲಂಕೃತನಾಗಿ ಯುದ್ಧಾಸಿಯುಂ ಕೊಂಡು ಭೊಂಕನೇಳ್ತಂದು ಪಾತುಶಾಹನಂ ಕಂಡಾಂ ರಾಜದ್ವಾರದೊಳ್ ಕಟ್ಟಿರ್ದ ಬಿರುದಿನ ಕೂರಸಿಯಂ ಬಿಚ್ಚಿ ತೆಗೆದವನಾವನೆಂದತ್ಯಂತ ಕೋಪದಿಂ ಗಜರಿ ಗರ್ಜಿಸಲಾಗಳಾ ಪಾತುಶಾಹಂ ಸಂಕಣನಾಯಕನಂ ಸಮೀಪಕ್ಕೆ ಬರಿಸಿ ತೋರಿ ನಿನ್ನ ಕೂರಸಿಯಂ ಕೊಡಿಸಿದಪೆನಿನ್ನಾದೊಡಂ ಗರ್ವೋದ್ರೇಕಮಂ ಮಾಣ್ದು ಮನೆಗೈದುವುದೆಂದೊಡವಡಿಸಲಾ ಮಾತಂ ಬಗೆಗೊಳದೆ ಯುದ್ಧಮುಖದೊಳೇನಾದೊಡದಂ ಕಾಣ್ಬೆನೆನಲಾಗಳಾ ಪಾತುಶಾಹಂ ಸಭಾಸಮ್ಮತಿಯಿಂದಿರ್ವರ್ಗಂ ಯುದ್ಧವನೊಡರ್ಚುವುದೆಂದು ತಾಂಬೂಲವನಿತ್ತಪ್ಪಣೆಗೊಡಲೊಡನವರಿರ್ವರಳವಿಯೊಳಿದಿರಾಂತು ನಿಲಲಾ ಕಾಲದೊಳ್

ಪರಾಕ್ರಮಶಾಲಿಗಳು, ಬಿರುದಿನ ವೀರರು ಮತ್ತು ತನ್ನ ಪಟ್ಟಣದಲ್ಲಿದ್ದ ಸಕಲಕಲಾ ಪ್ರವೀಣರು ಹಾಗೂ ಆಬಾಲವೃದ್ಧರನ್ನು ಈ ಕಾಳಗವನ್ನು ನೋಡಲು ಸೇರಿಸತಕ್ಕುದೆಂದು ಈ ವೃತ್ತಾಂತವನ್ನು ದೂತರ ಮೂಲಕ ಪ್ರಚುರಪಡಿಸಿದನು. ಅನಂತರ ಅಂಕುಶಖಾನನನ್ನು ಕಾಳಗಕ್ಕೆ ಕರೆಯತಕ್ಕುದೆಂದು ಊಳಿಗದವರಿಗೆ ಕಟ್ಟಪ್ಪಣೆಮಾಡಿ, ಸಂಕಣ್ಣನಾಯಕನಿಗೆ ಅಕ್ಕಿ, ತೊಗರಿ, ಕಡಲೆ, ಗೋಧಿ, ಬೆಲ್ಲ, ತುಪ್ಪ, ಬಾಳೇಹಣ್ಣು ಮುಂತಾದ ಸಾಮಗ್ರಿಗಳಿಂದ ಕೂಡಿದ ಪಡಿಯನ್ನು ಕೊಡಿಸಲು, ಅವನು ನಮಗೆ ಇದು ಯಾತಕ್ಕೆ ಎಂದು ಏನನ್ನೂ ತೆಗೆದುಕೊಳ್ಳದೆ, ಮಜ್ಜನ, ಶಿವಪೂಜೆ, ಊಟವನ್ನು ಮುಗಿಸಿಕೊಂಡು ಬಂದನು. ಅಷ್ಟರಲ್ಲಿ ಬಾದಷಹನು ತಾನು ಒಳಗೆ ಹೋಗಿ ಊಟಮಾಡಿಕೊಂಡು ಹಜಾರಕ್ಕೆ ಬಂದು ಸಭೆಯನ್ನು ಸೇರಿಸಿ ಆಸನದಲ್ಲಿ ಕುಳಿತನು. ಅಂಕುಶಖಾನನು ಈ ವಾರ್ತೆಯನ್ನು ಕೇಳಿ ಭೋಜನಾದಿಗಳನ್ನು ಕೈಗೊಂಡು, ವಸ್ತ್ರಾಭರಣಗಳಿಂದ ಅಲಂಕೃತನಾಗಿ ಯುದ್ಧದ ಕತ್ತಿಯನ್ನು ತೆಗೆದುಕೊಂಡು ಕೂಡಲೇ ಬಂದು ಬಾದಷಹನನ್ನು ಕಂಡನು. ರಾಜದ್ವಾರದಲ್ಲಿ ಕಟ್ಟಿದ್ದ ಬಿರುದಿನ ಕತ್ತಿಯನ್ನು ಬಿಚ್ಚಿ ತೆಗೆದವನು ಯಾರು ಎಂಬುದಾಗಿ ಅತ್ಯಂತ ಕೋಪದಿಂದ ಗರ್ಜಿಸಲು, ಆಗ ಆ ಬಾದಷಹನು ಸಂಕಣ್ಣನಾಯಕನನ್ನು ಸಮೀಪಕ್ಕೆ ಬರಮಾಡಿ ಮಾಡಿಕೊಂಡು ತೋರಿಸಿ, (ವಜೀರನನ್ನು ಕುರಿತು) "ನಿನ್ನ ಕತ್ತಿಯನ್ನು ನಿನಗೆ ಕೊಡಿಸುವೆನು; ಇನ್ನಾದರೂ ಅಹಂಕಾರವನ್ನು ಬಿಟ್ಟು ಮನೆಗೆ ಹೋಗು* ಎಂಬುದಾಗಿ ನಾನಾ ವಿಧದಲ್ಲಿ ಹೇಳಿದನು. ಆ ಮಾತನ್ನು ಕಿವಿಗೆ ಹಾಕಿಕೊಳ್ಳದೆ ವಜೀರನು "ಯುದ್ಧ ಮುಖದಿಂದಲೇ

---

* ಈ ಮಾತನ್ನು ಬಾದಶಹನು ವಜೀರನಿಗೆ ಹೇಳಿದನೋ ಸಂಕಣ್ಣನಾಯಕನಿಗೋ ಎಂಬುದು ಸ್ಪಷ್ಟವಿಲ್ಲ-ಅಧ್ಯಕ್ಷ.

ಸಂಕಣನಾಯಕನ ಕರಕಮಲದೊಳ್ ಖಡ್ಗಮಿಲ್ಲದಿರ್ಪುದುಂ ಪಾತುಶಾಹಂ ಕಂಡೊಂದು ಮೀಂಟಾದ ಖಡ್ಗಮಂ ತರಿಸಿಕೊಡಲಾ ಪ್ರಸ್ತಾವದೊಳ್

ಕಂ॥ ಒಸೆದ ಡಿಲ್ಲೀಶ್ವರನಿ
ತ್ತಸಿಯಂ ಕೊಂಡಾ ಸದಾಶಿವೇಂದ್ರಸುತಂ ಚೂ
ರಿಸೆ ಭಿನ್ನಿಸಲದು ಮಗುಳೊಂ
ದಸಿಯಂ ಕುಡೆ ಝಳಪಿಸಿಲ್ಕದಿಕ್ಕಡಿದೋರಲ್ ೧೭

ಇಂತೀ ಪರಿಯಿಂ ಬಲ್ಪದ
ನಾಂತುರೆ ಮೀಂಟಾದ ಬಾಳ್ಗಳೀರಾರುಡಿಯ
ಲ್ಕಂತದನಭಿವೀಕ್ಷಿಸಿ ಶಿರ
ಮಂ ತವೆ ತೂಗುತ್ತೆ ಬೆಕ್ಕಸಂ ಬೆರಗಾದಂ ೧೮

ಪಟ್ಟದ ಕೂರಸಿಯನಿದಂ
ಕೊಟ್ಟಪೆನೆಂದಾ ತುರುಷ್ಕಪತಿ ಕಯ್ಯಿಕ್ಕಲ್
ನಿಟ್ಟಿಸಿ ನಸುನಗುತೀಯಸಿ
ಬೆಟ್ಟಿತ್ತಳವಡದೆನುತ್ತದಂ ಮಾಣಿಸಿದಂ ೧೯

ವ॥ ಇಂತು ಪಾತುಶಾಹಂ ಪಟ್ಟದ ಕೂರಸಿಯನೀಯಲೀ ಖಡ್ಗಮಂ ಭಿನ್ನಂಗೆಯ್ವುದುಚಿತ ಮಲ್ತೆಂದು ಮಾಣ್ದು ನಿಜಕಟಿಪ್ರದೇಶದೊಳ್ ಬದ್ಧಂಗೆಯ್ದು ದಟ್ಟಿಯೊಳ್ ಸುತ್ತಿರ್ದ ನಾಗರಮರಿಯೆಂಬ ಕೂರಸಿಯಂ ಕೊಂಡು ಪಿಡಿಗೋಲ್ಗೊಳಿಸಿ ಘಳಿಪಿಸುತ್ತಂಕುಶಖಾನಂಗಿದಿರ್ಚಿ ನಿಲಲಾ ಪ್ರಸ್ತಾವದೊಳ್

ಏನಾದರೂ ಆಗಲಿ ಅದನ್ನು ಕಾಣುವೆನು" ಎಂಬುದಾಗಿ ಹೇಳಲು ಬಾದಷಹನು ಸಭೆಯ ಸಮ್ಮತಿಯಿಂದ ಈರ್ವರಿಗೂ ಯುದ್ಧವನ್ನು ಮಾಡುವುದೆಂದು ವೀಳ್ಯವಿತ್ತು ಅಪ್ಪಣೆ ಮಾಡಿದನು. ಒಡನೆ ಅವರಿಬ್ಬರೂ ಪರಾಕ್ರಮದಿಂದ ಎದುರಾಗಿ ನಿಲ್ಲಲು, ಆ ಕಾಲದಲ್ಲಿ ಸಂಕಣ್ಣನಾಯಕನ ಕೈಯಲ್ಲಿ ಕತ್ತಿಯಿಲ್ಲದಿರುವುದನ್ನು ಬಾದಷಹನು ಈಕ್ಷಿಸಿ, ಒಂದು ಹರಿತವಾದ ಕತ್ತಿಯನ್ನು ತರಿಸಿಕೊಟ್ಟನು. ಆ ಸಂದರ್ಭದಲ್ಲಿ-೧೭. ಆ ಡಿಲ್ಲೀಶ್ವರನು ಪ್ರೀತಿಯಿಂದ ಕೊಟ್ಟ ಆ ಖಡ್ಗವನ್ನು ತೆಗೆದುಕೊಂಡ ಸಂಕಣ್ಣನಾಯಕನು ಝಳಪಿಸಿದ ತಕ್ಷಣ ಅದು ತುಂಡಾಯಿತು. ಮತ್ತೊಂದು ಕತ್ತಿಯನ್ನು ಕೊಟ್ಟಾಗ ಝಳಪಿಸುವಷ್ಟರಲ್ಲೇ ಅದೂ ಎರಡು ತುಂಡಾಯಿತು. ೧೮. ಈ ರೀತಿಯಿಂದ ಗಟ್ಟಿಮುಟ್ಟಾದ ಹನ್ನೆರಡು ಖಡ್ಗಗಳನ್ನು ಮುರಿಯುಲು ಬಾದಷಹನು ಅದನ್ನು ನೋಡಿ ತಲೆದೂಗುತ್ತಾ ದಿಗ್ಭ್ರಮೆಗೊಂಡನು. ೧೯. ಬಾದಷಹನು ತನ್ನ ಪಟ್ಟದ ಕತ್ತಿಯನ್ನೇ ಕೊಡುವೆನೆಂದು ಅದಕ್ಕೆ ಕೈಹಾಕಿದಾಗ, ಸಂಕಣ್ಣನಾಯಕನು ನೋಡಿ ನಸುನಗುತ್ತಾ "ಈ ಖಡ್ಗ ಬಹಳ ದೊಡ್ಡದು; ಹೊಂದಿಕೆಯಾಗುವುದಿಲ್ಲ" ಎಂಬುದಾಗಿ ಅದನ್ನು ತಡೆದನು. ವ॥ ಈ ರೀತಿ ಬಾದಷಹನು ಪಟ್ಟದ ಕತ್ತಿಯನ್ನು ನೀಡಲು, ಈ ಕತ್ತಿಯನ್ನು ತುಂಡು ಮಾಡುವುದು ಉಚಿತವಲ್ಲವೆಂದು ತಡೆದು ತನ್ನ ಕಟಿಪ್ರದೇಶದಲ್ಲಿ ಕಟ್ಟಿ ಬಟ್ಟೆಯಲ್ಲಿ ಸುತ್ತಿದ್ದ ನಾಗರಮರಿ ಎಂಬ ಕತ್ತಿಯನ್ನು ಹೊರದೆಗೆದು ಹಿಡಿದುಕೊಂಡು ಝಳಪಿಸುತ್ತಾ ಅಂಕುಶಖಾನನ ಎದುರಿಗೆ

ಕಂ॥ ಸಂಕಣನೃಪನನಭೀಕ್ಷಿಸು
ತಂಕುಶಖಾನಂ ಕೆರಳ್ದು ಹೂಣಿಸಿ ಬೆರಲಿಂ
ದಂ ಕುಡಿಮೀಸೆ ತಿದ್ದು
ತ್ತಂಕಕ್ಕಿದಿರಾಂತು ಖಡ್ಗಮಂ ಝಳಪಿಸಿದಂ ೨೦

ಇದಿರಾಂತಂಕುಶಖಾನನ
ಹದನಂ ನಿಟ್ಟಿಸಿಕರಾಸಿಯಂ ಝಳಪಿಸುತುಂ
ತುದಿಮೀಸೆಯ ನೇವರಿಸು
ತ್ತಿದಿರ್ಚಿದಂ ಸಂಕಣೇಂದ್ರನವನಿಪಚಂದ್ರಂ ೨೧

ಓರೋರ್ವರನೀಕ್ಷಿಸಿ ಖತಿ
ಬಾರದೆ ಗಂಟಿಕ್ಕೆ ಪುರ್ಬುಗಳ್ ಕಂಗಳ್ ಕೆಂ
ಪೇರೆ ಕುಡಿಮೀಸೆ ನರ್ತಿಸೆ
ಚಾರಿಸುತುದ್ವೃತ್ತಕರಾಸಿಯಂ ವಿಹರಿಸಿದರ್ ೨೨

ಮಸೆಗಂಡೆಕ್ಕಲಗಳೊ ಮಿಗೆ
ಪಸಿದಹಿಗಳೊ ಕಾಯ್ದು ಸಿಂಗವರಿಗಳೊ ಕರೆದೆ
ಬ್ಬಿಸಿದಾ ಪೆರ್ಬುಲಿಗಳೊ ಎನೆ
ಮಸಗಿ ಪೊಣರ್ಕೆಯೊಳೆ ಕಾದಿದರ್ ಕಡುಹಿಂದಂ ೨೩

ಘುಡುಘುಡುಸಿ ಸಿಡಿಲ್ಗಳ ಬರ
ಸಿಡಿಲಿದಿರಾಂತುರೆ ಪಳಂಚುವಂತಿರೆ ಕೋಪಂ
ಕಿಡಿಯಿಡೆ ಘಲ್ಲಿಸುತಸಿಗಳ
ನಡಿಮಿಡುಕದೆ ನಿಲ್ದು ಕಾದಿದರ್ ಭಟರಿರ್ವರ್ ೨೪

ನಿಲ್ಲಲು ಆ ಸಂದರ್ಭದಲ್ಲಿ- ೨೦. ಸಂಕಣ್ಣನಾಯಕನನ್ನು ನೋಡಿದ ಅಂಕುಶಖಾನನು ಕೆರಳಿ, ಹೂಂಕರಿಸಿ, ಬೆರಳಿನಿಂದ ಕುಡಿಮೀಸೆಯನ್ನು ತಿದ್ದುತ್ತಾ ಯುದ್ಧಕ್ಕೆ ಎದುರಾಗಿ ಕತ್ತಿಯನ್ನು ಝಳಪಿಸಿದನು. ೨೧. ಎದುರಾದ ಅಂಕುಶಖಾನನ ರೀತಿಯನ್ನು ನೋಡಿ ಕೈಯಲ್ಲಿ ಖಡ್ಗವನ್ನು ಝಳಪಿಸುತ್ತಾ ರಾಜರಲ್ಲಿ ಚಂದ್ರನಂತಿರುವ ಸಂಕಣ್ಣನಾಯಕನು ಎದುರಾದನು. ೨೨. ಒಬ್ಬರನ್ನೊಬ್ಬರು ನೋಡುತ್ತಾ ಅತಿಯಾದ ಸಿಟ್ಟಿನಿಂದ ಹುಬ್ಬುಗಳು ಗಂಟಿಕ್ಕಲು, ಕಣ್ಣುಗಳು ಕೆಂಪಾಗಲು, ಕುಡಿಮೀಸೆ ಕುಣಿಯಲು ಎತ್ತಿದ ಖಡ್ಗವನ್ನು ಬೀಸುತ್ತಾ ಅವರು ಹೋರಾಡಿದರು. ೨೩. ಹೋರಾಡುವ ಹಂದಿಗಳೋ, ಹಸಿದ ಹಾವುಗಳೋ, ಸಿಟ್ಟಾದ ಸಿಂಹದ ಮರಿಗಳೋ, ಕರೆದು ಎಬ್ಬಿಸಿದ ಹೆಬ್ಬುಲಿಗಳೋ ಎನ್ನುವಂತೆ ಇಬ್ಬರೂ ವೀರಾವೇಶದಿಂದ ಕಾದಾಡಿದರು. ೨೪. ಸಿಡಿಲನ್ನು ಸಿಡಿಲು ತಾಕಿದಂತೆ ಕೋಪವು ಕಿಡಿಕಾರಲು ಖಡ್ಗಗಳನ್ನು ಝಳಪಿಸುತ್ತಾ ಹೆಜ್ಜೆ ಸರಿಸದೆ ನಿಂತು ಇಬ್ಬರೂ ವೀರರು ಕಾದಾಡಿದರು. ೨೫. ಖಣಿಲ್ ಖಟಿಲ್ ಎಂದು ಖಡ್ಗಖಡ್ಗಕ್ಕೆ ತಾಗಿದಾಗ ಕೆಂಪಾದ

ಖಣಿಖಟಿಲೆಂದಸಿಯಸಿಯಣ
ದಣದೊರಸೊರಸಿಂದಮೊಗೆಯೆ ಕೇಸುರಿ ಭುಗಿಲೆಂ
ದಣಿಯರಮೊಪ್ಪುವ ನಾನಾ
ಭಣಿತೆ ಬೆಡಂಗಾಗೆ ಕಾದಿದರ್ ಖತಿಯಿಂದಂ ೨೫

ಪೊಗರುಗುವಸಿಯ ಝಳಪದಿನುರೆ
ಝಗಝಗಿಸುತ್ತುಣ್ಮೆ ವಿಸ್ಫುಲಿಂಗಪ್ರಚಯಂ
ಬಗೆಬಗೆಯ ಹೊಗತೆ ಮಿಗತೆಯ
ಬಗೆಬಗೆ ಚೆಲ್ವಾಗದೊದಗಿದರ್ ಕೌಶಲದಿಂ ೨೬

ಹೊಂಚಿ ಹುರಿಕಟಿಸಿ ಹೊಕ್ಕು ಪ
ಳಂಚುವ ತದ್ಭಟರ ಬಗೆಯನದನೇನೆಂಬೆಂ
ಚಂಚಲಿಪ ಕಾರ್ಮುಗಿಲ ಕುಡಿ
ಮಿಂಚೆನೆ ತೊಳತೊಳಗಿ ಬೆಳಗಿದವು ಕೂರಸಿಗಳ್ ೨೭

ಮ|| ಝಳಪಂ ಚೂರಣಮಾಂಕೆಯೊಡ್ಡಣೆ ತಿರುಂಪೇರ್ವಾರೆವೊಯ್ಲಡ್ಡವೊ
ಯ್ಲೆಳತಂ ಕಂಡಣೆ ಮೀಂಟು ಚಾಲನಮುದಗ್ರೋದ್ಧಾರಣಂ ಚಾರುವೊ
ಯ್ಲಿಳಿತಂ ಸಿಕ್ಕು ಸವರ್ಕೆಯೆಂಬ ಬಹುಬಿನ್ನಾಣಂಗಳಿಂ ಕೂರ್ತುಕೈ
ಚಳಕಂ ಕೈಮಿಗೆ ಯುದ್ಧರಂಗದೊಳವರ್ ಕೈಗೆಯ್ದರೇಂ ವಣ್ಣಿಪೆಂ ೨೮

ಕಂ|| ದಂಡೆ ಮುರುಹೊದವು ಪೈಸರ
ಮಂಡಲ ಸಮಚಾಲಿ ಲಾಗು ಲಂಘನವಮರ್ದೊ
ಳ್ಕಂಡಿಯಭಿಮುಖವೆನಿಪ ಸಮ
ದಂಡಿಯೊಡಂಬಡೆ ಪಳಂಚಿದರ್ ಖತಿಯಿಂದಂ ೨೯

ಉರಿಹುಟ್ಟಿ ಭುಗ್ಗೆನ್ನಲು ಇಬ್ಬರೂ ಎಡೆಬಿಡದೆ ಸೊಗಸಾದ ಅನೇಕ ಕ್ರಮಗಳಿಂದ ಹಾಗೂ ಸಿಟ್ಟಿನಿಂದ ಕಾದಾಡಿದರು. ೨೬. ಕಿಡಿಕಾರುವ ಕತ್ತಿಯ ಝಳಪಿಸುವಿಕೆಯಿಂದ ಕಿಡಿಗಳ ರಾಶಿಯು ಉಂಟಾಗಲು ತರತರಹ ಪ್ರವೇಶ ನಿರ್ಗಮನಗಳ ರೀತಿ ಚಂದವಾಗುವಂತೆ ಜಾಣತನದಿಂದ ಹೋರಾಡಿದರು. ೨೭. ಹೊಂಚಿ, ಮುನ್ನುಗ್ಗಿ ತಿಕ್ಕಾಡುವ ಆ ಭಟರ ರೀತಿಯನ್ನು ಏನೆನ್ನಲಿ? ಕಾರ್ಮುಗಿಲ ಕುಡಿಮಿಂಚು ಎನ್ನುವ ರೀತಿಯಲ್ಲಿ ಅವರ ಖಡ್ಗಗಳು ಮಿನುಗಿದುವು. ೨೮. ಝಳಪ, ಚೂರಣ, ಆಂಕೆ, ಒಡ್ಡಣೆ, ಏರ್ವಾರೆ, ವೊಯ್ಲು, ಕಂಡಣೆ, ಸಿಕ್ಕು, ಸವರ್ಕೆ-ಮುಂತಾದ ಯುದ್ಧದ ಪಟ್ಟುಗಳಿಂದ ಅವರು ಹೋರಾಡಿದರು. ಅದನ್ನು ಏನೆಂದು ಬಣ್ಣಿಸಲಿ? ೨೯. ದಂಡೆ, ಮುರುಹೊದವು, ಪೈಸರ, ಮಂಡಲ, ಸಮಚಾಲಿ, ಲಾಗು, ಲಂಘನ, ಒಳ್ಕಂಡಿ, ಅಭಿಮುಖ ಎಂಬ ವಿವಿಧ ಯುದ್ಧಭಂಗಿಗಳನ್ನು ಕೈಗೊಂಡು ಖಾಡಾಖಾಡಿಯಾಗಿ ಹೋರಾಡಿದರು. ೩೦. ಅವಕಾಶನೋಡಿ ಒಳ್ಳೆಯ ರೀತಿಯಿಂದ ಮುನ್ನುಗ್ಗುವ, ಹಿಂದಕ್ಕೆ ಬರುವ,

ಉ|| ಪಾಡರಿದೊಪ್ಪದಿಂ ಪೊಗುವ ಪಿಂಗುವ ಪಿಂದೆಗೆವಾಂಪ ನಿಲ್ವ ಕೈ
ಮಾಡುವ ಪೊಯ್ಲ ಗಳಿಂ ಕಳೆವ ಕಾಯ್ವ ತೆರಳ್ವ ಸಡಿಲ್ವ ಪಚ್ಚೆಗೊಂ
ಡೀಡಿರಿದೊತ್ತುತೊತ್ತರಿಪ ಪೊಂಗುವ ಸಾರ್ವ ಮರಳ್ವ ಬಾಳ್ಗೆ ಬಾ
ಳ್ಗೊಡುವ ತೇಲ್ವ ಬಿನ್ನಣಗಳೊಪ್ಪೆ ಪಳಂಚಿದರಾಜಿರಂಗದೊಳ್ ೩೦

ಕಂ|| ತಟ್ಟುವ ತಡೆವಣೆವಸಿಯಂ
ಮುಟ್ಟುವ ಮಸೆಗೆಯ್ವ ತಾಳ್ವ ತವಕಿಪ ಬಲ್ಪಂ
ಮೆಟ್ಟುವ ಬಹುವಿಧಭಣಿತೆಯ
ಪಟ್ಟುಗಳೋರಣಿಸೆ ಪಳಚಿದರ್ ಬಿನ್ನಣದಿಂ ೩೧

ತಾಗುವ ತೆವರ್ವ ತೂಳ್ವ ವಿ
ಭಾಗಿಪ ಕೆಲಸಾರ್ವ ನಿಮಿರ್ವ ಕೂಡುವ ಸಡಿಲ್ವಿಂ
ಬಾಗುವ ಕೈಗೆಯ್ದಣಿಯಿಂ
ಬೀಗುವ ಬಗೆಯೊಪ್ಪೆ ಕಾದಿದರ್ ಕೌಶಲದಿಂ ೩೨

ಸೂಡರಿದೀ ಪರಿಯೊಳ್ ಕೈ
ಮಾಡುವ ಬಿನ್ನಣದ ಬಗೆಯನೀಕ್ಷಿಸಿ ನಲಿದಂ
ದಾ ಡಿಲ್ಲೀಶನ ಸಭೆ ಕೊಂ
ಡಾಡಲ್ ಕೈಗೆಯ್ದರಾಜಿರಂಗದೊಳಿರ್ವರ್ ೩೩

ವ|| ಇಂತೊಂದು ಜಾವಂಬರಂ ಪೋರ್ದು ಬಗೆಹರಿಯದಿರ್ಪುದಂ ಕಂಡ ಕುಶ ಖಾನಂ ಸಂಕಣನಾಯಕನಂ ಕರೆದಾವಿರ್ವರುಮನ್ಯೋನ್ಯಾವಯುವಂಗಳೊಳ್ ಕೂರ್ತುಸಿರ್ದ ತಾಣಂಗಳಂ ಮುಟ್ಟ ಕೈಗೆಯ್ದು ಮಸೆಕಾಣ್ಬಂತು ಯುದ್ಧಮಂ ರಚಿಸಲ್ವೇಳ್ಕೆಂದು ನುಡಿಯಲ್

ಕಾದಾಡುವ, ನಿಲ್ಲುವ, ಕೈಮಾಡುವ, ಏಟುಗಳನ್ನು ತಪ್ಪಿಸುವ, ರಕ್ಷಿಸುವ, ತರಿಯುವ, ಸಡಿಲಿಸುವ, ಹೆಜ್ಜೆಯಿಡುತ್ತಾ ಒತ್ತಿ ಹೋಗಲಾಡಿಸುವ, ಹೋಗುವ, ಬರುವ, ಕತ್ತಿಗೆ ಕತ್ತಿಯನ್ನೊಡ್ಡುವ, ತೇಲಾಡುವ, ಪ್ರೌಢಿಮೆಯನ್ನು ತೋರುತ್ತಾ ಅವರು ಯುದ್ಧರಂಗದಲ್ಲಿ ಹೋರಾಡಿದರು. ೩೧. ತಟ್ಟುವ, ತಡೆಯುವ ಖಡ್ಗವನ್ನು ಮುಟ್ಟುವ, ಹರಿತಗೊಳಿಸುವ, ತಾಳುವ, ಪರಿಶೀಲಿಸುವ, ಪರಾಕ್ರಮದಿಂದ ಹಿಂಜರಿವ ಅನೇಕ ಕ್ರಮದ ಪಟ್ಟುಗಳನ್ನು ಕ್ರಮವಾಗಿ ತೋರಿಸುತ್ತಾ ಹೋರಾಡಿದರು. ೩೨. ತಾಗುವ, ತರಿಯುವ, ನುಗ್ಗುವ, ಬೇರ್ಪಡುವ, ಪಕ್ಕಕ್ಕೆ ಸರಿಯುವ, ಮುಚ್ಚುವ, ಕೂಡುವ, ಸಡಿಲುವ, ಎಡೆಯಾಗುವ, ಕೈಮಾಡಿ ಹಿಗ್ಗುವ ರೀತಿಯಲ್ಲಿ ಚಮತ್ಕಾರದಿಂದ ಕೂಡಿರುವಂತೆ ಸೆಣಸಿದರು. ೩೩. ಈ ರೀತಿ ಅವಕಾಶ ತಿಳಿದು ಕೈಮಾಡುವ ಜಾಣತನದ ರೀತಿಯನ್ನು ನೋಡಿ, ಆ ಡಿಲ್ಲೀಶ್ವರನ ಸಭೆಯು ಸಂತೋಷಪಟ್ಟು ಹೊಗಳುತ್ತಿರಲು ಇಬ್ಬರೂ ಯುದ್ಧರಂಗದಲ್ಲಿ ಹೋರಾಡಿದರು. ವ|| ಈ ರೀತಿಯಾಗಿ ಒಂದು ಜಾವದವರೆಗೆ ಹೋರಾಡಿದರೂ ಬಗೆಹರಿಯದೇ ಇರುವುದನ್ನು ಕಂಡ ಅಂಕುಶಖಾನನು ಸಂಕಣ್ಣನಾಯಕನನ್ನು ಉದ್ದೇಶಿಸಿ ನೀವಿಬ್ಬರೂ ಪರಸ್ಪರ ಅವಯವಗಳಲ್ಲಿ ಉದ್ದೇಶಿಸಿ ಹೇಳಿದ ಹಾಗೂ ಹೇಳಿದಲ್ಲಿಗೆ ಹೊಡೆಯುವಂತೆ,

ಸಂಕಣನಾಯಕನಂತಾಗಲೆನಲೊಡನಂಕುಶಖಾನನತ್ಯಂತಾಟೋಪದಿಂ ತಾಂ ಕೂರ್ತು ನುಡಿದವಯವ ಸ್ಥಾನಂಗಳೊಳ್ ಮಸೆಗಾಣಿಸಿದಪೆನೆಂದು ಬಹುವಿಧಕೌಶಲಯುದ್ಧಚಮತ್ಕೃತಿಯಿಂ ಕೈಗೈಯಲ್ ಸಂಕಣನಾಯಕನಂಗದೊಳ್ ಮಸೆದೋರದಂತಾ ಪೊಯ್ಲ್ಗಳಂ ಕಾಯ್ದವನ ಕೈಚಳಕಮಂ ನಿಲಿಸಿ ಯುದ್ಧರಂಗದೊಳ್ ತತ್ಪ್ರತಿಭಟನ ಕೈವಾಡಕ್ಕಿಂದಮೈವಡಿ ಚಮತ್ಕೃತಿದೋರಿ ಬಳಿಕ್ಕವನಂಗ ಪ್ರದೇಶದೊಳ್ ಕೂರ್ತೆಡೆಗಳಂ ಲಘು ಸಂಧಾನದಿಂ ನಿಜ ಕರಾಸಿಯಗ್ರದಿಂ ಮುಟ್ಟಿ ಮುಟ್ಟಿ ತೋರಿ ನಾನಿನ್ನೆವರಂ ಕೈಗಾಯ್ದು ಯುದ್ಧಮಂ ರಚಿಸಿದೆನಿನ್ನೆಚ್ಚರಿನೊಳ್ ಕಾದುವುದೆಂದವನು ಪಚಾರಿಸುತುಂ ಕೈಗೈಯುತ್ತುಮಿರಲಾ ಪ್ರಸ್ತಾವದೊಳ್

ಕಂ॥ ಪೂತು ಮಝು ಖಡ್ಗಯುದ್ಧದ
ಧಾತುರೆ ಚಲ್ವಾದುದೆಂದು ಚೌಡಪನೃಪಸಂ
ಜಾತನಂ ಪೊಗಳುತ್ತತಿ
ಖಾತಿಯೊಳೊಳಪೊಕ್ಕು ಪೊಯ್ದನಂಕುಶಖಾನಂ ೩೪

ಲಾಗಿಸುತಾಪೊಯ್ಲಿಂಗೊಳ
ಗಾಗದೆ ಕೆಲಸಿಡಿದು ಕೂಡೆ ಸಂಕಣಭೂಪಂ
ಜಾಗು ಭಳಿಭಳಿರೆ ಮಗುಳನು
ವಾಗೆನುತೊಳಪೊಕ್ಕು ಪೊಯ್ದನಾ ಪ್ರತಿಭಟನಂ ೩೫

ಪ್ರೌಢನಹ ಖಡ್ಗಯುದ್ಧದ
ಮೋಡಿಯೊಳೆಂದೆನುತಲಸಿಯಿನಣೆದಾ ಪೊಯ್ಲಂ
ನೋಡಿನ್ನೆಸೆವೀ ಪೊಸ ಕೈ
ವಾಡವನೆನುತಾರ್ದು ಪೊಯ್ದನಾ ನೃಪವರನಂ ೩೬

ಕೈಕೈ ಮಿಲಾಯಿಸಿ ಯುದ್ಧವನ್ನು ಕೈಗೊಳ್ಳತಕ್ಕದ್ದೆಂದು ನುಡಿದನು. ಹಾಗೆಯೇ ಆಗಲೆಂದು ನಾಯಕನು ಒಪ್ಪಿದನು. ಖಾನನು ಅತ್ಯಂತ ಆಟಾಟೋಪದಿಂದ ಹೇಳಿದ ಅವಯವ ಸ್ಥಾನಗಳಲ್ಲಿ ಎಲ್ಲಿ ಹೇಳಿದರೆ ಅಲ್ಲಿ ಗಾಯ ಮಾಡುವೆನೆಂದು, ನಾನಾ ವಿಧವಾಗಿ ಕುಶಲ ಹಾಗೂ ಚಮತ್ಕಾರಗಳಿಂದ ಯುದ್ಧ ಮಾಡಲು, ಸಂಕಣ್ಣನಾಯಕನು ತನ್ನ ಅಂಗದಲ್ಲಿ ಗಾಯವಾಗದಂತೆ ಏಟುಗಳನ್ನು ತಪ್ಪಿಸಿಕೊಂಡನು. ಅಲ್ಲದೆ ಅವನ ಕೈಚಳಕವನ್ನು ನಿಲ್ಲಿಸಿ ಯುದ್ಧರಂಗದಲ್ಲಿ ಪ್ರತಿಭಟನಾರ್ಥವಾಗಿ, ಅವನ ಕೈವಾಡಕ್ಕಿಂತ ಐದು ಪಟ್ಟು ಚಮತ್ಕಾರವನ್ನು ತೋರಿಸಿ, ಬಳಿಕ ಅವನ ಅಂಗಪ್ರದೇಶದಲ್ಲಿ, ಉದ್ದೇಶಿಸಿದ ಎಡೆಗಳನ್ನು ಹಸ್ತಲಾಘವದಿಂದ ತನ್ನ ಕತ್ತಿಯ ತುದಿಯಿಂದ ಮುಟ್ಟಿ ಮುಟ್ಟಿ ತೋರಿಸುತ್ತಾ ನಾನು ಇಷ್ಟರ ತನಕ ಕೈಹಿಡಿದು ಪೆಟ್ಟಾಗದಂತೆ ಯುದ್ಧವನ್ನು ಮಾಡಿದ್ದೇನೆ; ಇನ್ನು ಮುಂದೆ ಎಚ್ಚರದಿಂದ ಕಾದು ಎಂಬುದಾಗಿ ಅವನಿಗೆ ಹೇಳಿ ಯುದ್ಧ ಮಾಡುತ್ತಿರುವ ಸಂದರ್ಭದಲ್ಲಿ ೩೪. ಪೂತು, ಮಝು (ಶಾಬಾಸ್), ಖಡ್ಗಯುದ್ಧದ ಕ್ರಮ ಬಹಳ ಚಂದವಾಯ್ತೆಂದು ಚೌಡಪ್ಪನ ಮೊಮ್ಮಗನನ್ನು ಹೊಗಳುತ್ತಾ ಅಂಕುಶಖಾನನು ಅತ್ಯಂತ ಕೋಪದಿಂದ ಒಳನುಗ್ಗಿ ಹೊಡೆದನು. ೩೫. ಸಂಕಣ್ಣನಾಯಕನು ಮೇಲೆ ಜಿಗಿದು ಆ ಏಟುಗಳಿಗೆ ಒಳಗಾಗದೆ ಪಕ್ಕಕ್ಕೆ ಹಾರಿ 'ಭಳಿ-ಭಳಿರೆ ಮತ್ತೆ ಸಿದ್ಧನಾಗು' ಎಂದು ಎದುರಾಳಿಯನ್ನು ಹೊಡೆದನು. ೩೬. ಅಂಕುಶಖಾನನು "ನೀನು ಖಡ್ಗಯುದ್ಧದ

ತಪ್ಪಲ್ಲಸಿಯುದ್ಧದೊಳಿಂ
ತಪ್ಪದಟನ ಕಂಡುದಿಲ್ಲವೆಂದಾ ಪೊಯ್ಲಂ
ತಪ್ಪಿಸಿ ಕೆಲಸಿಡಿದೀ ಪೊ
ಯ್ಲೊಪ್ಪವ ನೋಡೆಂದು ಪೊಯ್ದನಾ ಪ್ರತಿಭಟನಂ ೩೭

ಅಣಮಾ ಪೊಯ್ಲಂ ಖಡ್ಗದಿ
ನಣೆದಂಕುಶಖಾನನಾರ್ದು ತನ್ನೃಪಚೂಡಾ
ಮಣಿಯಂ ಪೊಗಳೀ ಹೊಯ್ಲಿನ
ಭಣಿತೆಯ ನೋಡೆಂದು ಪೊಯ಼್ಲವಂ ಲಾಗಿಸಿದಂ ೩೮

ಒಡನಾ ಪೊಯ್ಲಂ ಖಡ್ಗದೆ
ತಡೆದು ಮಗುಳ್ದೊದಗುವನಿತರೊಳ್ ಕೂರಸಿಯಿಂ
ನಡುವಂ ಖಂಡಿಸೆ ಕಣ್ಣೆವೆ
ಮಿಡುಕದೆ ಬಾಳ್ವೆರಸು ಬರೆದ ಬೊಂಬೆಯಲೆಸೆದಂ ೩೯

ಮಿಗೆ ನಿಲ್ತಂಕುಶಖಾನನ
ಬಗೆಯಂ ನಿಟ್ಟಿಸಿ ತುರುಷ್ಕಪತಿ ಪೊಣರ್ದುರೆ ಕಾ
ಳಗದೊಳ್ ಬಳಲ್ದನೆಂದೇ
ಬಗೆದೊಡನಾ ಸಂಕಣೇಂದ್ರನಂ ನಿಟ್ಟಿಸಿದಂ ೪೦

ವII ಇಂತಾ ಪಾತುಶಾಹಂ ಸಂಕಣನಾಯಕನಂ ನಿಟ್ಟಿಸಿ ಯುದ್ಧಮಂ ಮಾಣ್ದು ಮೈಮರೆದೇಕೆ ನಿಂದಿರ್ದಪೆಯೆಂದು ಬೆಸಗೊಳಲಾನಿನ್ನಾರೊಳ್ ಕಾದುವೆನೆಂದು ಪೇಳಲ್ ಪ್ರತಿಭಟಂ ನಿನ್ನ

ಚಮತ್ಕಾರದಲ್ಲಿ ಪ್ರೌಢನಾಗಿದ್ದೀಯೆ; ಈ ಕತ್ತಿಯ ಏಟನ್ನು ನೋಟು; ಈ ಹೊಸ ಕೈವಾಡವನ್ನು ಪರಿಶೀಲಿಸು" ಎಂದು ಸಂಕಣ್ಣನಾಯಕನನ್ನು ಬಲವಾಗಿ ಹೊಡೆದನು. ೩೭. ಈತನ ರೀತಿ ತಪ್ಪಲ್ಲ, ಖಡ್ಗಯುದ್ಧದಲ್ಲಿ ಇಂತಹ ವೀರನನ್ನು ಕಂಡದ್ದೇ ಇಲ್ಲ ಎಂದು ಸಂಕಣ್ಣನಾಯಕನು ಅಂಕುಶಖಾನನ ಏಟನ್ನು ತಪ್ಪಿಸಿ, ಪಕ್ಕಕ್ಕೆ ಹಾರಿ, "ಈ ಏಟಿನ ರುಚಿಯನ್ನು ನೋಡು" ಎಂದು ಎದುರಾಳಿಯನ್ನು ಹೊಡೆದನು. ೩೮. ಅಂಕುಶಖಾನನು ಆ ಏಟನ್ನು ಕತ್ತಿಯಿಂದ ತಡೆದು ಆ ರಾಜನನ್ನು (ಸಂಕಣ್ಣ ನಾಯಕನನ್ನು) ಹೊಗಳಿ "ಈ ಏಟಿನ ಸವಿಯನ್ನು ನೋಡು" ಎಂದು ಹೊಡೆದನು. ೩೯. ಸಂಕಣ್ಣನಾಯಕನು ಕೂಡಲೇ ಆ ಏಟನ್ನು ಕತ್ತಿಯಿಂದ ತಡೆದು ಮತ್ತೆ ಆತನು ಹೊಡೆಯುವಷ್ಟರಲ್ಲಿ ತನ್ನ ಹರಿತವಾದ ಕತ್ತಿಯಿಂದ ಅಂಕುಶಖಾನನ ನಡುವನ್ನು ಕತ್ತರಿಸಿದನು. ಆಗ ಖಾನನು ಕಣ್ಣೆವೆ ಅಲುಗಾಡಿಸದೆ ಕತ್ತಿ ಹಿಡಿದು ನಿಂತ ಹಾಗೆ ಬರೆದಿರುವ ಬೊಂಬೆಯಂತೆ ಕಾಣಿಸಿದನು. ೪೦. ಸುಮ್ಮನೆ ನಿಂತ ಅಂಕುಶಖಾನನ ರೀತಿಯನ್ನು ನೋಡಿದ ಬಾದಷಹನು 'ಈತನು ಹೋರಾಡಿ ಯುದ್ಧದಲ್ಲಿ ಬಳಲಿದ್ದಾನೆ!' ಎಂದು ಯೋಚಿಸಿ, ಆ ಸಂಕಣ್ಣನಾಯಕನನ್ನು ನೋಡಿದನು. ಈ ರೀತಿಯಾಗಿ ಬಾದಷಹನು ಸಂಕಣ್ಣನಾಯಕನನ್ನು ಕುರಿತು "ಯುದ್ಧವನ್ನು ಕೈಗೊಳ್ಳಲು ಮೈಮರೆತು ಏಕೆ ನಿಂತಿರುವೆ?" ಎಂದು ಪ್ರಶ್ನೆ ಮಾಡಲು, ಅದಕ್ಕೆ ನಾಯಕನು "ನಾನು

ನಿಟ್ಟದಿರೊಳಣಿಮಣಿಯಂ ಸಾಧಿಸಿಸುತ್ತುಂ ನಿಂದಿರ್ಪಂ ನೀಂ ಕೈಗೆಯ್ಯದಿಂತು ಸುಮ್ಮನೇಕೆ ನಿಂದಿರ್ದಪೆ ಯುದ್ಧಮಂ ಬಗೆಹರಿಪುದೆಂದುಸಿರಲಾ ಮಾತಂ ಸಂಕಣನಾಯಕಂ ಕೇಳ್ದು ನಸುನಗುತ್ತಂ ಪೆಣನ ಕೂಡೆತ್ತಣ ಕಾಳಗಮೆಂದುಸಿರಲಿದೆತ್ತಣ ಮಾತು ಸಜೀವನಾಗಿ ಯುದ್ಧಕ್ಕೆ ನಿಂತಿರ್ದವನಂ ಪೆಣನೆಂದುಸಿರಲಹುದೇ ಎನಲಂತಾದೊಡವಂ ಮೃತಿವೆತ್ತುದಹುದೊ ಅಲ್ಲವ್ರೊಯೆಂಬುದಂ ಚೆನ್ನಾಗಿ ನಿಟ್ಟಿಪುದೆಂದು ತಾಂ ಕೈಯೊಳ್ ಪಿಡಿದಿರ್ದಸಿಯಗ್ರವನವನೆರ್ದೆದಾಣಕ್ಕೆ ಮುಟ್ಟಿಸಲಾಗಳ್ ಕಟಿಯಿಂದಂ ಮೇಗಣ ತುಂಡು ಖಂಡಿಸಿದ ದಿಂಡಿನಂತೆ ನೆಲಕ್ಕುರುಳಲಾಗಿ ಬಳಿಕ್ಕದನಾ ಡಿಳ್ಳೀಶ್ವರನುಂ ತತ್ಸಭೆ ಸಹಿತಂ ಸರ್ವರುಂ ಕಂಡತ್ಯಂತ ಚೋದ್ಯವಡಲೊಡನೆ ಡಿಳ್ಳೀಶ್ವರಂ ಸಂಕಣನಾಯಕನೊಡನಿರ್ಪೂಳಿಗದವರಂ ಸಮೀಪಕ್ಕೆ ಬರಿಸಿ ಕೊಂಡೀತನಾರೆಂಬುದಂ ನಿಶ್ಚಯಮಾಗಿ ಪೇಳ್ವುದೆಂದೊಡವಡಿಸಲಾಗಳವರೀತನ ವೃತ್ತಾಂತಮೆಲ್ಲಮಂ ಬಿತ್ತರಿಸಿ ಪೇಳಲ್ ಕೇಳ್ದು ಸದಾಶಿವರಾಯನಾಯಕನ ಕುಮಾರನೆಂಬುದಂ ತಿಳಿದು ಸಂತಸಂದಳೆದು ಸಂಕಣನಾಯಕಂ ಕರೆದಾಲಿಂಗನಂಗೈದು ಸಮೀಪದೊಳ್ ಕುಳ್ಳಿರಿಸಿಕೊಂಡಿಂತು ಕಪಟವೇಷಮಂ ತಾಳ್ದಿತಂದೆನ್ನೊಳ್ ನಿಜವನುಸಿರದಿಂತು ಮರೆಮಾಜಲಹುದೆಯೆಂದು ಸಭೆ ಕೇಳ್ವಂತು ಸದಾಶಿವರಾಯನಾಯಕನ ಭುಜಬಲಪ್ರತಾಪಮಂ ವಿವರಿಸಿ ತತ್ಪುತ್ರನಾದ ಬಳಿಕಂ ನಿನ್ನ ಪರಾಕ್ರಮಾತಿಶಯವಂ ಪೇಳ್ವುದೇನೆಂದತ್ಯಂತ ಸಂತೋಷದಿಂ ಸಂಕಣನಾಯಕಂಗಂ ಸದರ್ಬೊರ್ಕಸೀಸಂ ಬಿಟ್ಟ ಹಸರು ನಿಶಾನಿಯ ಬಿರುದುಮಂ ಮತ್ತಮನರ್ಘ್ಯರತ್ನಾಭರಣಾಂಬರ ತಾಂಬೂಲಂಗಳುಮನಿತ್ತು ಪಿರಿದು ಮನ್ನಿಸಲೀಶ್ವರಾನುಗ್ರಹದಿಂದೆನಗೀ ಬಗೆಯ ಬಿರುದು ಬಾವುಲಿ

ಇನ್ನು ಯಾರೊಡನೆ ಕಾದಲಿ? ಎಂದನು." "ಪ್ರತಿರೋಧಿಯು ನಿನ್ನ ಎದುರಿಗೇನೇ ಯುದ್ಧ ಮಾಡುತ್ತಾ ನಿಂತಿರುವಾಗ ನೀನು ಏನೂ ಮಾಡದೆ ಸುಮ್ಮನೆ ಏಕೆ ನಿಂತಿರುವೆ? ಯುದ್ಧವನ್ನು ಪೂರೈಸು!" ಎಂಬುದಾಗಿ ಬಾದಷಹನು ತಿರುಗಿ ಕೇಳಿದನು. ಆ ಮಾತನ್ನು ಸಂಕಣ್ಣನಾಯಕನು ಕೇಳಿ ನಸುನಗುತ್ತಾ "ಹೆಣನ ಕೂಡ ಯಾವ ರೀತಿ ಯುದ್ಧ ಮಾಡುವುದು" ಎಂದನು. ಬಾದಷಹನು "ಇದೆಂತಹ ಮಾತು? ಸಜೀವನಾಗಿ ಯುದ್ಧಕ್ಕೆ ನಿಂತಿದ್ದವನನ್ನು ಹೆಣ ಎಂದು ಹೇಳಬಹುದೇ" ಎನ್ನಲು, "ಹಾಗಿದ್ದಲ್ಲಿ ಅವನು ಮೃತನಾಗಿರುವುದು ಹೌದೋ ಅಲ್ಲವೋ ಎಂಬುದನ್ನು ಚೆನ್ನಾಗಿ ನೋಡು" ಎಂಬುದಾಗಿ ತಾನು ಕೈಯಲ್ಲಿ ಹಿಡಿದ ಕತ್ತಿಯನ್ನು ಅವನ ಎದೆಗೆ ಮುಟ್ಟಿಸಲು, ಆಗ ಸೊಂಟದಿಂದ ಮೇಲಿನ ತುಂಡು ಚೂರು ಮಾಡಿದ ಬಾಳೆಯ ದಿಂಡಿನಂತೆ ನೆಲಕ್ಕೆ ಉರುಳಿತು. ಅನಂತರ ಅದನ್ನು ದಿಳ್ಳಿಯ ರಾಜನೂ, ಸಭೆಯೂ ಹಾಗೂ ಸರ್ವರೂ ಕಂಡು ಅತ್ಯಂತ ಆಶ್ಚರ್ಯದಿಂದಲು, ಒಡನೆ ಬಾದಷಹನು ಸಂಕಣ್ಣನಾಯಕನನ್ನೂ ಹಾಗೂ ಊಳಿಗದವರನ್ನೂ ತನ್ನ ಸಮೀಪಕ್ಕೆ ಬರಮಾಡಿಕೊಂಡನು. ಊಳಿಗದವರನ್ನು ಕುರಿತು ಬಾದಷಹನು "ಈತನು ಯಾರು; ನಿಶ್ಚಯವಾಗಿ ಹೇಳಿರಿ" ಎಂಬುದಾಗಿ ಪ್ರಶ್ನಿಸಿದನು. ಅವರು ಸಕಲ ವೃತ್ತಾಂತವನ್ನು ತಿಳಿಸಿ ಹೇಳಲು, ಈತನು ಸದಾಶಿವರಾಯನಾಯಕನ ಕುಮಾರನೆಂಬುದನ್ನು ತಿಳಿದು ಸಂತೋಷದಿಂದ ಸಂಕಣ್ಣನಾಯಕನನ್ನು ಆಲಿಂಗಿಸಿ ಹತ್ತಿರದಲ್ಲಿ ಕುಳ್ಳಿರಿಸಿಕೊಂಡನು. ಈ ರೀತಿ ಕಪಟವೇಷವನ್ನು ಧರಿಸಿ ನನ್ನಲ್ಲಿ ನಿಜವೃತ್ತಾಂತವನ್ನು ಹೇಳಲು ಮರೆಮಾಚಬಹುದೇ ಎಂದು ಸಭೆಗೆ ಕೇಳುವ ರೀತಿಯಲ್ಲಿ ಹೇಳಿ ಅನಂತರ ಸದಾಶಿವರಾಯನಾಯಕನ ಭುಜಬಲವನ್ನೂ ಹಾಗೂ ಪರಾಕ್ರಮವನ್ನೂ ವಿವರಿಸಿ, ಅವನ ಮಗನಾದ ಮೇಲೆ ನಿನ್ನ ಪರಾಕ್ರಮವನ್ನು ಏನೆಂದು ಹೇಳಲಿ ಎಂಬುದಾಗಿ ಸಂಕಣ್ಣನಾಯಕನಿಗೆ ಪರಮ ಸಂತೋಷದಿಂದ ಹಸುರು ನಿಶಾನಿ,

ರಾಜ್ಯ ರಾಷ್ಟ್ರಾದಿ ಸೌಭಾಗ್ಯಂಗಳೊಳಾವುದರಲ್ಲಿಯುಂ ಕೊರತೆಯಿಲ್ಲಮೆನ್ನ ಮನೋರಥಂ ಬೇರಿರ್ಪುದದಂ ಶಾಶ್ವತವಾಗಿ ನಡೆಸಿಕೊಡುವುದು ನಿಶ್ಚಯುಮಾದೊಡುಸಿರ್ವೆನೆನಲ್ ಕೇಳ್ದಿಮ್ಮಿಂದಪ್ಪ ಕಜ್ಜಮೇಮುಂಟಾದೊಡದಂ ದೃಢವಾಗಿ ನಡೆಸಿಕೊಟ್ಟಪೆನೆನಲಂತಾದೊಡಾಂ ಮುಂತೆ ಕಾಶೀಕ್ಷೇತ್ರಕೈದಿಯಾ ತಾಣದೊಳ್ ಶಿವಜಂಗಮಧರ್ಮಾರ್ಥಮಾಗಿ ಮಠಮಂ ಕಟ್ಟಿಸಿಯದಕ್ಕೆ ತಕ್ಕ ಭೂಸ್ವಾಸ್ಥೆಯುಂ ಬಿಡಿಸಿ ದಾನಧರ್ಮಂಗಳನಾಗಿಸಿ ವಿಶ್ವೇಶ್ವರನ ಪೂಜೆಯುಂ ರಚಿಸಿ ಮತ್ತಂ ನಿನ್ನ ರಾಷ್ಟ್ರದೊಳ್ ಪ್ರಸಿದ್ಧಮಾದ ಸ್ಥಳಂಗಳೊಳ್ ಶಿವ ಜಂಗಮಧರ್ಮಕ್ಕೋಸುಗಂ ಮಠಮಾನ್ಯಂಗಳನಾಗಿಸಿ ಬಳಿಕೆನ್ನ ಸಂಸ್ಥಾನಕೈದುವೆನೆಂದು ಸಂಕಲ್ಪಮಂ ರಚಿಸಿರ್ಪೆನೀ ಸಂಕಲ್ಪಸಿದ್ಧಿಯಂ ಪೂರ್ಣವನಾಗಿಸಲ್ವೇಳ್ಕೆಂದುಸಿರಲಂತಾಗಲೆಂದು ಮನಂದಂದಾಕ್ಷಣದೊಳ್ ತತ್ತತ್ಸ್ಥಾನಪ್ರವಿಷ್ಟರಾದ ಧಿಕಾರಿಗಳ್ಗೆ ಪರವಾನು ನಿರೂಪಲೇಖನಮಂ ಬರೆಸಿತ್ತು ತತ್ತದ್ದಾನಧರ್ಮಾರ್ಥವಾಗಿ ಪನ್ನಿರ್ಛಾಸಿರಪೊಂಗಳನಿತ್ತು ತತ್ತತ್ಸ್ಥಾನಂಗಳ್ಗುಚಿತಮಾದ ಮೇಲೂಳಿಗದವರ್ಗಳುಮಂ ಕೂಡ್ಕೆದಿ ಕಜ್ಜವನೊಡರ್ಚಿಸಿ ಬರ್ಪುದೆಂದು ನಿಯಾಮಿಸಿ ಪರಮಸಂಪ್ರೀತಿಯಿಂ ಬೀಳ್ಕೊಡಲೊಡನಾ ಡಿಳ್ಳಿಯೊಳ್ ಚಾವಲಿಕೆಮಂಡ್ಯೆ ಎಂಬ ಸ್ಥಳದೊಳ್ ಮನೋಹರಮಾದ ಮಠಮಂ ಕಟ್ಟಿಸಿ ಶಿವಜಂಗಮಧರ್ಮಕ್ಕೆ ಶಿವಾರ್ಪಣಂಗೈದ ನಂತರದೊಳ್

ಕಂ॥ ಒಡನೆಸೆವ ಡಿಲ್ಲಿಯಿಂ ಪೊರ
ಟಡಿಯಿಡುತಾಗರವನೈದಿ ರಚಿಯಿಸಿ ಮಠಮಂ
ಕಡೆಯ ಮಾಣಿಕ್ಯಪುರಮಂ
ಬೆಡೆಯಂ ಸಾರ್ದಮಲಗಂಗೆಯಂ ನೆರೆ ಕಂಡಂ ೪೧

ಬಿರುದು, ಅನರ್ಘ್ಯ ರತ್ನಾಭರಣಗಳು ಹಾಗೂ ತಾಂಬೂಲಗಳನ್ನು ನೀಡಿ ಗೌರವಿಸಿದನು. ಇದಕ್ಕೆ ನಾಯಕನು ಈ ರೀತಿ ಉತ್ತರಿಸುತ್ತಾ "ಈಶ್ವರಾನುಗ್ರಹದಿಂದ ನನಗೆ ಇಂತಹ ಬಿರುದು, ಬಾವುಲಿ, ರಾಜ್ಯ, ರಾಷ್ಟ್ರ ಮುಂತಾದ ಸೌಭಾಗ್ಯಗಳಾವುದರಲ್ಲಿಯೂ ಕೊರತೆಯಿಲ್ಲ; ನನ್ನ ಮನೋರಥವೇ ಬೇರೆ ಇದೆ; ಅದನ್ನು ಶಾಶ್ವತವಾಗಿ ನಡೆಸಿಕೊಡುವುದು ನಿಶ್ಚಯವಾದಲ್ಲಿ ಹೇಳುವೆನು" ಎಂದನು "ನನ್ನಿಂದ ಏನು ಬೇಕಾದರೂ ನಿನ್ನ ಕಾರ್ಯವನ್ನು ಖಂಡಿತವಾಗಿ ನಡೆಸಿಕೊಡುವೆನು, ಕೇಳು" ಎಂದು ಬಾದಷಹನು ಹೇಳಿದನು. ನಾನು ಮುಂದೆ ಕಾಶೀಕ್ಷೇತ್ರಕ್ಕೆ ತೆರಳಿ, ಆ ಪ್ರದೇಶದಲ್ಲಿ ಶಿವಜಂಗಮ ಧರ್ಮಕ್ಕೋಸ್ಕರ ಮಠವನ್ನು ಕಟ್ಟಿಸಿ, ಅದಕ್ಕೆ ತಕ್ಕ ಭೂಸ್ವಾಸ್ಥೆಯನ್ನು ಬಿಡಿಸಿ, ದಾನಧರ್ಮಗಳನ್ನು ಕೈಗೊಂಡು, ವಿಶ್ವೇಶ್ವರನ ಪೂಜೆಯನ್ನು ಮಾಡಿ ಮತ್ತೆ ನಿನ್ನ ರಾಷ್ಟ್ರದಲ್ಲಿ ಪ್ರಸಿದ್ಧವಾದ ಸ್ಥಳಗಳಲ್ಲಿ ಶಿವಜಂಗಮ ಧರ್ಮಕ್ಕಾಗಿ ಮಠಮಾನ್ಯಗಳನ್ನು ರಚಿಸಿ ಅನಂತರ ನನ್ನ ರಾಜ್ಯಕ್ಕೆ ಹಿಂದಿರುಗುವೆನೆಂದು ಸಂಕಲ್ಪವನು ಕೈಗೊಂಡಿದ್ದೇನೆ. ಈ ಸಂಕಲ್ಪವು ಪೂರ್ಣವಾಗಲು ಏರ್ಪಾಡುಮಾಡಬೇಕು." ಎಂದು ಸಂಕಣ್ಣನಾಯಕನು ಹೇಳಿದನು. ಹಾಗೆಯೇ ಆಗಲೆಂದು ಬಾದಷಹನು ಆಯಾ ಸ್ಥಾನಕ್ಕೆ ಇರುವ ಅಧಿಕಾರಿಗಳಿಗೆ ಆಜ್ಞಾ ನಿರೂಪಣೆಯ ಲೇಖನವನ್ನು ಬರೆಸಿ, ಆಯಾ ದಾನ ಧರ್ಮಗಳಿಗೆ ಹನ್ನೆರಡು ಸಾವಿರ ಹೊನ್ನುಗಳನ್ನು ಕೊಟ್ಟನು. ಆಯಾ ಸ್ಥಾನಗಳಿಗೆ ಉಚಿತವಾದ ಊಳಿಗದವರನ್ನು ಕೂಡಿಕೊಂಡು ಕಾರ್ಯವನ್ನು ನಡೆಸಿಕೊಂಡು ಬರತಕ್ಕು ದೆಂದು ನಿಯಮಿಸಿ ಪರಮ ಹರ್ಷದಿಂದ ಬೀಳ್ಕೊಟ್ಟನು. ಬಳಿಕ ನಾಯಕನು ದಿಳ್ಳಿಯಲ್ಲಿ (ದೆಹಲಿಯಲ್ಲಿ) "ಚಾವಲಿಕೆಮುಂಡ್ಯೆ" ಎಂಬ ಪ್ರದೇಶದಲ್ಲಿ ಮನೋಹರವಾದ ಮಠವನ್ನು ಕಟ್ಟಿಸಿ ಶಿವಜಂಗಮಧರ್ಮಕ್ಕೆ ಶಿವಾರ್ಪಣ ಮಾಡಿದನು. ೪೧. ದಿಳ್ಳಿಯಿಂದ ಹೊರಟ

ಅಲ್ಲಿಂ ತೆರಳ್ದು ತನ್ನೃಪ
ಮಲ್ಲ ಮೆರೆವಾ ಪ್ರಯಾಗಮಂ ಸಾರ್ದು ಬಳಿ
ಕ್ಕಲ್ಲಿ ಸುಜಂಗಮ ಧರ್ಮ
ಕ್ಕುಲ್ಲಸದಿಂದೆಸೆವ ಮಠವನುರೆ ವಿರಚಿಸಿದಂ ೪೨

ವ|| ಇಂತು ಗಂಗಾಯಮುನಾಸರಸ್ವತೀನದೀಸಂಯೋಗದಿಂತ್ರಿವೇಣಿಯೆಂಬ ಪೆಸರ್ವಡೆದು ಮಹಾವಟ ಮೂಲೋತ್ಪತ್ತಿ ಸ್ಥಾನಮಾದ ಮುಕ್ತಿಸ್ಥಾನವೆನಿಸಿ ಮೆರೆವ ಪ್ರಯಾಗಕ್ಷೇತ್ರದೊಳ್ ಜಂಗಮಮೂರ್ತಿಧರ್ಮಕ್ಕಂ ಮಂಗಲಮಯಮಪ್ಪ ಮಠಮಂ ನಿರ್ಮಾಣಂಗೈಸಿ ಶಿವಾರ್ಪಣಗೈದನಂತರ

ಕಂ|| ಒಸೆದಾ ಪ್ರಯಾಗಮಂ ನಿ
ಟ್ಟಿಸುತುಂ ಸಂತಸವಡುತ್ತುಮಲ್ಲಿಂ ತೆರಳ್ದಂ
ದಸಮಬಲಂ ಶ್ರೀಸಂಕಣ
ವಸುಧಾಧಿಪನೆಸೆವ ಕಾಶಿಯಂ ನೆರೆ ಪೊಕ್ಕಂ ೪೩

ಚಾರು ಪರಬ್ರಹ್ಮ ಸುತೇ
ಜೋರಾಶಿಯೆ ಪತ್ತನ ಸ್ವರೂಪವನಾಂತೀ
ಧಾರಿಣಿಯೊಳ್ ನೆಲಸಿತ್ತೆನೆ
ರಾರಾಜಿಸಿದತ್ತು ಕಣ್ಗೆ ಕಾಶೀಕ್ಷೇತ್ರಂ ೪೪

ವ|| ಇಂತು ವಿರಾಜಿಸುತಿರ್ಪ ಕಾಶೀಕ್ಷೇತ್ರದ ಪತ್ತನದೈಸಿರಿಯನಭಿವೀಕ್ಷಿಸುತ್ತುಂ ಮೆಲ್ಲಮೆಲ್ಲನಡಿಯಿಡುತ್ತೈದುತಿರಲಾ ವೇಳೆಯೊಳಾ ಪುರವರದ ವೀಥಿಯಿರ್ಕೆಲದ ಭವನಂಗಳ ಸೌಧಂಗಳೊಳ್ ಸೂರಿಜನರ್ ತತ್ಕಾಶೀಕ್ಷೇತ್ರಮಾಹಾತ್ಮೆಯನಭಿವರ್ಣಿಸುತ್ತಿರ್ದರದೆಂತೆನೆ

ಸಂಕಣ್ಣನಾಯಕನು ಆಗ್ರಾಕ್ಕೆ ಹೋಗಿ ಅಲ್ಲಿ ಮಠವನ್ನು ಕಟ್ಟಿಸಿ ಮಾಣಿಕ್ಯಪುರವೆಂಬ ಸ್ಥಳಕ್ಕೆ ತೆರಳಿ ಗಂಗಾದರ್ಶನವನ್ನು ಮಾಡಿದನು. ೪೨. ಅಲ್ಲಿಂದ ತೆರಳಿ ಆ ರಾಜನು ಪ್ರಯಾಗಕ್ಕೆ ಹೋಗಿ ಅಲ್ಲಿ ಜಂಗಮಧರ್ಮಕ್ಕೆ ಅನುಕೂಲವಾದ ಮಠವನ್ನು ನಿರ್ಮಿಸಿದನು. ವ|| ಈ ರೀತಿ ಗಂಗಾ ಯಮುನಾ ಸರಸ್ವತೀ ನದಿ ಸಂಯೋಗದಿಂದ ತ್ರಿವೇಣಿ ಎಂಬ ಹೆಸರು ಪಡೆದು ಮಹಾವಟವೃಕ್ಷದ ಮೂಲೋತ್ಪತ್ತಿಸ್ಥಾನವಾದ ಮುಕ್ತಿಸ್ಥಾನವೆಂದು ಶೋಭಿಸುವ ಪ್ರಯಾಗಕ್ಷೇತ್ರದಲ್ಲಿ ಜಂಗಮಮೂರ್ತಿ ಧರ್ಮಕ್ಕೆ ಮಂಗಳಕರವಾದ ಮಠವನ್ನು ರಚಿಸಿ ಶಿವಾರ್ಪಣೆ ಮಾಡಿದನು. ಆ ಮೇಲೆ ೪೩. ಆ ಪ್ರಯಾಗವನ್ನು ನೋಡಿ ಸಂತೋಷಪಟ್ಟು ಅಲ್ಲಿಂದ ಹೊರಟು ಅಸಮಾನ ಪರಾಕ್ರಮಿಯಾದ ಸಂಕಣ್ಣನಾಯಕನು ಕಾಶಿಯನ್ನು ಪ್ರವೇಶಿಸಿದನು. ೪೪. ಸುಂದರವಾದ ಪರಬ್ರಹ್ಮತೇಜಸ್ಸಿನ ರಾಶಿಯೇ ಪಟ್ಟಣದ ರೂಪವನ್ನು ತಾಳಿ ಈ ಭೂಮಿಯಲ್ಲಿ ನೆಲಸಿತು ಎನ್ನುವಂತೆ ಕಾಶೀಕ್ಷೇತ್ರವು ಕಣ್ಣಿಗೆ ಶೋಭಿಸಿತು. ವ|| ಈ ರೀತಿ ರಾರಾಜಿಸುತ್ತಿದ್ದ ಕಾಶೀಕ್ಷೇತ್ರದ ಪಟ್ಟಣದ ವೈಭವವನ್ನು ಈಕ್ಷಿಸುತ್ತಾ, ಮೆಲ್ಲ ಮೆಲ್ಲಗೆ ಅಡಿಯಿಡುತ್ತಾ ಹೋಗುತ್ತಿರಲು ಆ ವೇಳೆಯಲ್ಲಿ ಪಟ್ಟಣದಲ್ಲಿನ ಎಡಬಲದ ಸೌಧಗಳು ಹಾಗೂ ಭವನಗಳಲ್ಲಿ ವಿದ್ವಾಂಸರು ಆ ಕಾಶೀಕ್ಷೇತ್ರದ ಮಹಿಮೆಯನ್ನು

ಕಂ|| ಗರುಡತುಂಡಾಗ್ರದಿಂದಂ
ಧರೆಗುರುಳ್ದಸುಗಳೆದ ಪಾವದಾಗಳೆ ಕಿವಿಯೊಳ್
ಮೆರೆಯೆ ಫಣಿಕುಂಡಲಂಗಳ್
ಗರುಡಾಂಕಾರ್ಚಿತಪದಾಬ್ಜಮಾದುವು ಚಿತ್ರಂ ೪೫

ಜವನುರವನೊದೆವರಜನೊ
ಪ್ಪುವ ತಲೆಯಂ ತರಿವರಿರಿವರಚ್ಯುತನೆದೆಯಂ
ತವೆ ಕಾಶೀಕ್ಷೇತ್ರದಿ ಸಂ
ದವರುರು ವೀರತ್ವದಿರವನಾರ್ ಬಣ್ಣಿಸುವರ್ ೪೬

ವ|| ಇಂತೀ ಪುರಾಣೇತಿಹಾಸಂಗಳನೋದುತ್ತನುವಾದಿಸುತ್ತನ್ವಯಾರ್ಥಂಗಳಂ ಬಿತ್ತರಿಪ ಸೂರಿಜನರುಕ್ತಿಗಳಂ ಕೇಳ್ದು ಪರಮೋತ್ಸವಂಬಡುತ್ತೆ ಮುಂತೈದುತ್ತುಂ

ಕಂ|| ರಂಗತ್ಕಣಿಕಾಕಲಿತೋ
ತ್ತುಂಗತರಂಗಪ್ರಸಂಗೆಯಂ ಸತತ ಸಮಾ
ಲಿಂಗಿತ ಶಿವಮೌಳಿಯನತಿ
ಮಂಗಲಮಯಿಯೆನಿಪ ಗಂಗೆಯಂ ನೆರೆ ಕಂಡಂ ೪೭

ತೆರೆಯಿಂದಾವರ್ತದೆ ಬೆ
ಳ್ನೊರೆಯಿಂ ಬೊಬ್ಬುಳಿಗಳೋಳಿಯಿಂ ಶೋಭಿಪ ತುಂ
ತುರುದುರುಗಲಿನೆಸೆದುದು ಬಾಂ
ದೊರೆ ವಿಚರದ್ವಾಶ್ಚರಪ್ರಚಯದಿಂ ರಯದಿಂ ೪೮

ವರ್ಣಿಸುತ್ತಿದ್ದರು. ಅದು ಏನೆಂದರೆ-೪೫. ಗರುಡನ ಕೊಕ್ಕಿನಿಂದ ಭೂಮಿಗೆ ಉರುಳಿ ಪ್ರಾಣವನ್ನು ಕಳೆದುಕೊಂಡ ಹಾವುಗಳು ಆ ಕೂಡಲೇ (ಶಿವನ) ಕಿವಿಯಲ್ಲಿ ಸರ್ಪಕುಂಡಲಗಳಾದವು. ಅವು ಗರುಡಧ್ವಜನಾದ ವಿಷ್ಣುವಿನಿಂದ ಪೂಜಿಸಲ್ಪಟ್ಟವು! ಏನಾಶ್ಚರ್ಯ! ೪೬. ಕಾಶೀಕ್ಷೇತ್ರದಲ್ಲಿ ಸತ್ತವರು ಯಮನ ಎದೆಯನ್ನು ಒದೆಯುವರು; ಬ್ರಹ್ಮನ ತಲೆಯನ್ನು ಕತ್ತರಿಸುವರು; ವಿಷ್ಣುವಿನ ಎದೆಯನ್ನು ಚುಚ್ಚುವರು! ಅವರ ವೀರತ್ವವನ್ನು ಯಾರು ಬಣ್ಣಿಸುವರು? ವ|| ಈ ರೀತಿಯ ಪುರಾಣ, ಇತಿಹಾಸಗಳನ್ನು ಓದುತ್ತ-ಅನುವಾದಿಸುತ್ತ ಅನ್ವಯಾರ್ಥಗಳನ್ನು ಪ್ರಕಟಿಸುತ್ತಾ ಇರುವ ವಿದ್ವಾಂಸರ ಮಾತುಗಳನ್ನು ಕೇಳಿ ಪರಮ ಹರ್ಷಿತನಾಗಿ ಮುಂದುವರಿಯುತ್ತಿರಲು, ೪೭. ತೂರಾಡುವ ಜಲಬಿಂದುಗಳಿಂದ ಕೂಡಿದ ಎತ್ತರವಾದ ಅಲೆಗಳನ್ನು ಚಿಮ್ಮುತ್ತಿರುವ, ಶಿವನ ಕಿರೀಟವನ್ನು ಅಪ್ಪಿಕೊಂಡ, ಮಂಗಳಮಯವಾದ ಗಂಗಾನದಿಯನ್ನು ನೋಡಿದನು. ೪೮. ಆ ಗಂಗಾ ನದಿಯು ಅಲೆಯಿಂದ, ಸುಳಿಯಿಂದ, ಬಿಳಿನೊರೆಯಿಂದ, ಗುಳ್ಳೆಗಳ ಸಾಲಿನಿಂದ, ಹಾಗೂ ತುಂತುರುಹನಿಗಳಿಂದ, ಓಡಾಡುವ ಜಲಚರಗಳಿಂದ ಮತ್ತು ವೇಗದಿಂದ ಶೋಭಿಸಿತು.

ನಳನಳಿಸಿ ಬಳೆವ ನೀರ್ವೂ
ಗಳ ಸೌರಭಕೆಳಸಿ ಬಳಸಿ ಬಂಡುಗಳಂ ಕೊ
ಳ್ವಳಿಗಳ ಬಳಗಗಳಿಂ ಮಿಗೆ
ಪೊಳೆದುದು ಮಂಡಳಿಸಿ ಚಳಿಪ ನೀರ್ವಕ್ಕಿಗಳಿಂ ೪೯

ವ|| ಮತ್ತಮದಲ್ಲದಾ ಮಂದಾಕಿನಿ ತಾನಧೋಗತಿಕಳಾಗಿಯುಮತ್ಯುಚ್ಚಸ್ಥಾನಮಾರ್ಗ ಸಹಾಯಿನಿಯುಂ ಭಂಗವಿತಾನವಿಲುಲಿತೆಯಾಗಿಯುಮಭಂಗನಿತ್ಯಪದೈಕ ಸಹಕಾರಿಣಿಯುಂ ಉತ್ಕೃಷ್ಟ ಪ್ರತಿಕೂಲೆಯಾಗಿಯುಮಾನತಜನಾನುಕೂಲೆಯುಮೆನಿಸಿ ವಿರಾಜಿಸುತುಮಿರ್ದಳಂತುಮಲ್ಲದೆಯುಂ

ಕಂ|| ಮಿಂದರೆ ಕಣ್ಣುರಿಯಪ್ಪ ಕ
ಚಂ ದಲ್ ಜಡೆಯಪ್ಪ ಕಂಠಮುರುಕಾಳಿಮಮ
ಪ್ಪಂದದೊಡಲ್ ಬೂದಿಯುಮ
ಪ್ಪೊಂದಿರವಹುದೇಂ ವಿಚಿತ್ರಮೋ ಜಾಹ್ನವಿಯೊಳ್ ೫೦

ಚಂ|| ಕಳೆದುರುದೋಷಮಂ ಸಲೆ ಪವಿತ್ರತನಾದಪೆನೆಂದು ಮೀಯೆ ಪೇ
ರೆಲುದಲೆಮಾಲೆಯಂ ತಳೆದು ಪಂದೊವಲಂ ಪೊದೆದುಟ್ಟು ರುದ್ರಭೂ
ತಳದುರುಭಸ್ಮಮಂ ಧರಿಸಿ ವರ್ತಿಪ ದಂದುಗಬರ್ಪುದೆಂದೊಡಾ
ಪೊಳೆಯ ಮಹಾಮಹತ್ವದಿರವಂ ಮಿಗೆ ಬಣ್ಣಿಪನಾವನುರ್ವಿಯೊಳ್ ೫೧

ವ|| ಇಂತತ್ಯಂತಮಹಿಮಾಸ್ಪದೆಯಪ್ಪ ಗಂಗೆಯಂ ನಿಟ್ಟಿಸಿ ನಲಿನಲಿದು ತತ್ಸಂಕಷೇಂದ್ರಂ ತದ್ವಾರಣಸಿಯೊಳ್ ಮಜ್ಜನಂಗೈದನಂತರಂ ಮಣಿಕರ್ಣಿಕೆಯೊಳ್ ಮಿಂದು ಬಹುವಿಧ

೪೯. ನಳನಳಿಸಿ ಬೆಳೆದ ನೀರ ಹೂವುಗಳ ಪರಿಮಳಕ್ಕೆ ಆಶಿಸಿ, ಸುತ್ತುಬಂದು ಮಕರಂದವನ್ನು ಹೀರುವ ದುಂಬಿಗಳ ಬಳಗಗಳಿಂದಲೂ ಸುತ್ತುವರಿದು ಓಡಾಡುವ ನೀರಹಕ್ಕಿಗಳಿಂದಲೂ ಶೋಭಿಸಿತು. ವ|| ಅಲ್ಲದೆ ಆ ಗಂಗಾನದಿಯು ತಾನು ಅಧೋಗತಿಯಾಗಿದ್ದರೂ (ಕೆಳಮುಖವಾಗಿ ಹರಿಯುತ್ತಿದ್ದರೂ) ಅತ್ಯುಚ್ಚಸ್ಥಾನದ (ಸ್ವರ್ಗಾದಿ ಲೋಕಗಳ) ಮಾರ್ಗದಲ್ಲಿ ಸಹಾಯಕಳಾಗಿಯೂ, ಅಲೆಗಳಿಂದ ಚಂಚಲೆಯಾಗಿದ್ದರೂ ಅಭಂಗವಾದ ನಿತ್ಯಪದವಿಗೆ ಸಹಕಾರಿಯಾಗಿ, ಮೇಲ್ಮುಖವಾಗಿ ಹೋಗತಕ್ಕವರಿಗೆ ಪ್ರತಿಕೂಲೆಯಾದರೂ (ಶ್ರೇಷ್ಠವಾದ ದಂಡೆಗಳಿಂದ ಕೂಡಿಯೂ) ಸರಳರಿಗೆ ಅನುಕೂಲವಾಗಿ ವಿರಾಜಿಸುತ್ತಿರುವಳು. ೫೦. ಸ್ನಾನ ಮಾಡಿದರೆ ಕಣ್ಣುರಿಯಾಗುವ, ಕೂದಲು ಜಡೆಯಾಗುವ, ಕುತ್ತಿಗೆಯು ಕಪ್ಪಾಗುವ ಚಂದದ ಶರೀರವು ಬೂದಿಯಾಗುವ ವೈಚಿತ್ರ್ಯವು ಗಂಗಾನದಿಯಲ್ಲಿ ಆಶ್ಚರ್ಯಕರವಾಗಿದೆ. (ಇದು ವ್ಯಾಜನಿಂದೆ) ತಾತ್ಪರ್ಯ: ಸ್ನಾನವಮಾಡಿದರೆ ಶಿವನ ರೂಪವೇ ಪ್ರಾಪ್ತವಾಗುತ್ತದೆಯೆಂದು ಸ್ತುತಿ. ೫೧. ದೋಷಗಳನ್ನು ಕಳೆದುಕೊಳ್ಳುವೆನೆಂದು ಯಾರಾದರೂ ಸ್ನಾನಮಾಡಿದರೆ ಮೂಳೆಗಳ ಮತ್ತು ರುಂಡಗಳ ಮಾಲೆಯನ್ನು ಧರಿಸಿ ಹಸಿಚರ್ಮವನ್ನು ಹೊದೆದು ಉಟ್ಟುಕೊಂಡು ಶ್ಮಶಾನದ ಭಸ್ಮವನ್ನು ಧರಿಸುವ ಕಷ್ಟ ಉಂಟಾಗುತ್ತದೆ ಎಂದರೆ ಆ ನದಿಯ ಮಹತ್ವವನ್ನು ಭೂಮಿಯಲ್ಲಿ ಯಾರು ವರ್ಣಿಸಬಲ್ಲರು? ತಾತ್ಪರ್ಯ:- ಗಂಗಾಸ್ನಾನ ಮಾಡಿದವರು ಶಿವ ಸಾರೂಪ್ಯವನ್ನು ಹೊಂದುವರು. ವ|| ಈ ರೀತಿ ಅತ್ಯಂತ ಮಹಿಮೆಯಿಂದ ಕೂಡಿದ ಗಂಗೆಯನ್ನು ನೋಡಿ

**ದಾನಧರ್ಮಂಗಳನಾಗಿಸಿ ವಿಶ್ವೇಶ್ವರನಡಿದಾವರೆಯಂ ಭಜಿಸಿ ಮತ್ತಂ ಕಾಶೀಕ್ಷೇತ್ರ ಮಹಿಮಾತಿಶಯಂಗಳಂ ಕೇಳ್ದು ಸಂತಸಂಬಡುತ್ತುಂ ತತ್ತಲ್ಲಿಂಗತೀರ್ಥಂಗಳನವಲೋಕಿಸುತ್ತುಂ ಪಂಚಕ್ರೋಶಯಾತ್ರೆಯಂ ರಚಿಸಿ ಸಂತಸಂದಳೆಯುತಿಂತು ಕತಿಪಯದಿವಸಂ ವರ್ತಿಸುತ್ತುಮಿರ್ದು ಪಿಂತೆ ಬಹುಕಾಲದೊಳ್ ಶ್ರೀಶೈಲದೊಳ್ ನಂದೀಶ್ವರಾಂಶೀಭೂತನಾಗುದಿಸಿದ ವೀರಶೈವಶಿರೋಮಣಿಯಪ್ಪ ಶೀಲವಂತನಾಯಕನೆಂಬ ಕಾರಣಪುರುಷನೈತಂದು ಮೊರನನೆರಂಕೆಗಳಂ ಮಾಡಿಕೊಂಡು ಪಾರಿ ಪವಾಡಂಗಳಂ ಮೆರೆದು ಜಯಚಂದ್ರನರೇಂದ್ರನಂ ಮೆಚ್ಚಿಸಿ ದಶಾಶ್ವಮೇಧದ ಘಟ್ಟದ ಪಶ್ಚಿಮದಿಕ್ಕಿನೊಳೆಸೆವ ಹರಿಕೇಶವಾನಂದಕಾನನಮಂ ಪಡೆದಾ ಭೂಮಿಯೊಳ್ ಮಠಮಂ ಕಟ್ಟಿಸಿ ತನ್ಮಠದೊಳ್ ಮಲ್ಲಿಕಾರ್ಜುನದೇವರೆಂಬ ಜಂಗಮಂಗೆ ಪಟ್ಟಮಂ ಕಟ್ಟಿ ತನ್ನೊಡನೈದಿದ ಶಿಷ್ಯರ್ಕಳನಲ್ಲಿರಿಸಿ ತಾನಾ ಮಠಮಧ್ಯಸ್ತಂಭಾಗ್ರದೊಳ್ ಯೋಗಾರೂಢನಾಗಿ ಕುಳ್ಳಿರ್ದಂತರ್ಧಾನವನೈದಲ್ ಬಳಿಕಿತ್ತಂ ಪಲವು ವತ್ಸರಂಗಳ್ ಪೋಗಲೊಡನೆ ಜಯಚಂದ್ರನರೇಂದ್ರನ ವಂಶಾಗತರೆಲ್ಲಂ ಧರ್ಮಸಂತಾನಮಂ ಪಡೆಯಲಾಗಿ ಬಳಿಕಿತ್ತಂ ಮ್ಲೇಂಛರ್ಕಳ್ ಪೆರ್ಚಿ ತತ್ಸ್ಥಳವನಾಕ್ರಮಿಸಿರಲವರ್ಕಳಂ ವಾರೆದೆಗೆಸಿ ಸಂಕಣನಾಯಕಂ ತಾನಾ ಸ್ಥಾನಮಂ ಸಂಪಾದಿಸಿ ಚತುರ್ಗಡಿಗಳೊಳ್ ಶಿಲಾಸ್ಥಾಪನಮಂ**

ನಲಿದಾಡುತ್ತಾ ಸಂಕಣ್ಣನಾಯಕನು ವಾರಾಣಸಿಯಲ್ಲಿ ಸ್ನಾನಮಾಡಿದ ನಂತರ ಮಣಿಕರ್ಣಿಕೆಯಲ್ಲಿ ಮಿಂದು ಬಹುವಿಧವಾದ ದಾನಧರ್ಮಗಳನ್ನು ಕೈಕೊಂಡನು. ವಿಶ್ವೇಶ್ವರನ ಪಾದಕಮಲವನ್ನು ಭಜಿಸುತ್ತಾ, ಕಾಶೀಕ್ಷೇತ್ರದ ಮಹಿಮಾತಿಶಯಗಳನ್ನು ಕೇಳುತ್ತಾ ಹಾಗೂ ಸಂತೋಷಪಡುತ್ತಾ ಆಯಾ ವಿಭಾಗದ ಲಿಂಗ ಹಾಗೂ ತೀರ್ಥಗಳನ್ನು ಸಂದರ್ಶಿಸುತ್ತಾ ಪಂಚಕ್ರೋಶಯಾತ್ರೆಯನ್ನು ನೆರವೇರಿಸಿದನು. ಈ ರೀತಿ ಹಲವು ದಿವಸಗಳವರೆಗೆ ಸಂತೋಷದಿಂದ ಕಳೆಯುತ್ತ ವಾಸವಾಗಿದ್ದನು. ಆ ಸ್ಥಳದಲ್ಲಿ ಹಿಂದೆ ಒಂದು ಐತಿಹ್ಯ ಜರುಗಿತು. ಬಹುಕಾಲಕ್ಕೆ ಮುಂಚೆ ಶ್ರೀಶೈಲದಲ್ಲಿ ನಂದೀಶ್ವರಾಂಶೀಭೂತನಾಗಿ ವೀರಶೈವಶಿರೋಮಣಿ ಎನ್ನಿಸಿಕೊಂಡಿದ್ದ ಶೀಲವಂತ ನಾಯಕನು ಅವತರಿಸಿದ್ದನು. ಇವನು ತನ್ನ ತಪೋಬಲದಿಂದ ಮೊರವನ್ನು ರೆಕ್ಕೆಗಳಾಗಿ ಮಾಡಿಕೊಂಡು ಹಾರಿ ಪವಾಡಗಳನ್ನು ಪ್ರದರ್ಶಿಸುತ್ತಾ ಜಯಚಂದ್ರನೆಂಬ ರಾಜನನ್ನು ಮೆಚ್ಚಿಸಿ, ಕಾಶಿಯ ಪಶ್ಚಿಮ ದಿಕ್ಕಿನಲ್ಲಿರುವ ದಶಾಶ್ವಮೇಧ ಘಾಟಿಗೆ ಪಶ್ಚಿಮಕ್ಕೆ ಇರುವ ಹರಿಕೇಶವಾನಂದ ಕಾನನವನ್ನು ಸೇರಿ, ಆ ಭೂಮಿಯಲ್ಲಿ ಮಠವನ್ನು ಕಟ್ಟಿಸಿ, ಆ ಮಠದಲ್ಲಿ ಮಲ್ಲಿಕಾರ್ಜುನ ದೇವರೆಂಬ ಜಂಗಮನಿಗೆ ಪಟ್ಟವನ್ನು ಕಟ್ಟಿಸಿ, ಶಿಷ್ಯರನ್ನು ನೇಮಿಸಿದನು. ಬಳಿಕ ಆ ಮಹಾತ್ಮನಾದ ಶೀಲವಂತನಾಯಕನು ಆ ಮಠದ ಮಧ್ಯಸ್ತಂಭದ ಬಳಿ ಯೋಗಾರೂಢನಾಗಿ ಕುಳಿತು ಅಂತರ್ಧಾನವನ್ನು ಹೊಂದಿದನು. ತರುವಾಯ ಕೆಲವು ಸಂವತ್ಸರಗಳು ಕಳೆಯಲು ಜಯಚಂದ್ರರಾಜನ ವಂಶಿಕರೆಲ್ಲರೂ ಆ ಮಹಾಸ್ಥಳಕ್ಕೆ ಹರಕೆ ನಡೆಸಿ ಸಂತಾನವನ್ನು ಪಡೆಯುತ್ತಿದ್ದರು. ಆಮೇಲೆ ಮುಸಲ್ಮಾನರು ಅಲ್ಲಿಗೆ ಬಂದು ಆ ಪ್ರದೇಶವನ್ನು ಹಾವಳಿಮಾಡಿ ಆಕ್ರಮಿಸಿಕೊಂಡಿದ್ದರು. ಸಂಕಣ್ಣನಾಯಕನು ಇದನ್ನು ತಿಳಿದು ಆ ಕ್ಷೇತ್ರವನ್ನು ಹಿಂದಿರುಗಿ ಪಡೆದು ಚತುರ್ಗಡಿಗಳಲ್ಲಿ ಶಿಲಾಸ್ಥಾಪನೆ ಮಾಡಿಸಿ, ಜಂಗಮಘಾಟಿಯೆಂದು ಹೆಸರಿಟ್ಟನು. ಅಂತೆಯೇ ಅದರ ಮಧ್ಯದಲ್ಲಿ ಅತಿ ಮನೋಹರವಾದ ಮಠವನ್ನು ನಿರ್ಮಿಸಿ, ಮಠದ ಆಯಾಧರ್ಮಕ್ಕೆ ನೈರುತ್ಯ ದಿಕ್ಕಿನ ಪ್ರಾಂತದಲ್ಲಿರುವ ಜಂಗಮಪುರವೆಂಬ ಗ್ರಾಮವನ್ನು ಪಡೆದುಕೊಂಡು,

ರಚಿಸಿ ಜಂಗಮಗಾಟಿಯೆಂದು ಪೆಸರಿಟ್ಟು ತನ್ಮಧ್ಯದೊಳತಿಮನೋಹರಮಾದ ಮಠಮಂ ನಿರ್ಮಾಣಂಗೈಸಿ ತದ್ಧರ್ಮಾರ್ಥಮಾ ಮಠದ ನಿರ್ಋತಿದಿಶಾಪ್ರಾಂತದೊಳ್ ಜಂಗಮಪುರವೆಂಬ ಗ್ರಾಮಮಂ ಬಿಡಿಸಿ ಸ್ಥಿರಶಾಸನಮಂ ಬರೆಸಿ ಜಂಗಮಮೂರ್ತಿಗಳ್ಗೆ ಶಿವಾರ್ಪಣಂಗೈದು ಮತ್ತಮದಲ್ಲದೆ ಪಂಚಮಠಮಂ ಕಟ್ಟಿಸಿ ಶಿವಜಂಗಮಕ್ಕೆ ಶಿವಾರ್ಪಣಂಗೈದು ಪ್ರೌಢರುಗಳಪ್ಪ ಶಿಲ್ಪಿಗಳಂ ಬರಿಸಿ ತತ್ಕಾಶೀಕ್ಷೇತ್ರದೊಳೊಪ್ಪುವ ಕಪಿಲಾಧಾರಾತೀರ್ಥ ಮಾನಸಸರೋವರ ಗಂಧರ್ವಸಾಗರವೆಂಬ ತೀರ್ಥಂಗಳಂ ಶಿಲಾಮಯಂಗಳನಾಗಿಸಿ ಜೀರ್ಣೋದ್ಧಾರಮಂ ರಚಿಸಿ ಮತ್ತಮೈಯಪ್ಪನೆಂಬ ಸೇನಬೋವನ ಮುಖದಿಂ ಕರ್ದಮೇಶ್ವರ ನರ್ಮದೇಶ್ವರ ಭೀಮಚಂಡಿಕೆ ವೃಷಭಧ್ವಜೇಶ್ವರ ದೇವಸ್ಥಾನಂಗಳಂ ಜೀರ್ಣೋದ್ಧಾರಮಂ ರಚಿಸಿ ಸ್ವಪುತ್ರ ವೆಂಕಟಪ್ಪ ನಾಯಕರ ಹೆಸರಿನಲ್ಲಿ ಶಿಲಾಶಾಸನಂ ಬರೆಸಿ ಶಾಶ್ವತಮಾದ ಧರ್ಮಕೀರ್ತಿಸುಕೃತಂಗಳನಾರ್ಜಿಸಿ ಬಳಿಕ್ಕಾ ವಾರಾಣಸೀಕ್ಷೇತ್ರದೊಳೊಂದತಿಮನೋಹರಮಾದ ಸ್ಫಟಿಲಿಂಗಮಂ ಸಂಪಾದಿಸಿಕೊಂಡನಂತರದೊಳ್

ಕಂ।। ವರಕಾಶೀಕ್ಷೇತ್ರದಿನಾ
ಧರಣೀಶಂ ತೆರಳ್ದು ಕೂಡೆ ಗಯೆಯಂ ಸಾರ್ದಾ
ಧರೆಯೊಳ್ ಶಿವಜಂಗಮಕ
ತ್ಯುರುತರಮಠಮಾನ್ಯಧರ್ಮಮಂ ವಿರಚಿಸಿದಂ ೫೨

ಅವಿರಳವಿಕ್ರಮಜಿತರಿಪು
ನಿವಹಂ ಗಯೆಯಿಂ ತೆರಳ್ದುದಗ್ದಿಕ್ಕಿನೊಳೊ
ಪ್ಪುವ ನೀಲಕಂಠ ನೇಪಾ
ಳವನೊಲವಿಂ ಸಾರ್ದನಾ ನೃಪಾಲಕತಿಲಕಂ ೫೩

ಸ್ಥಿರಶಾಸನವನ್ನು ಬರೆಸಿ ಜಂಗಮಮೂರ್ತಿಗಳಿಗೆ ಶಿವಾರ್ಪಣೆ ಮಾಡಿದನು. ಮತ್ತು ಅಲ್ಲದೆ ಐದು ಮಠವನ್ನು ಕಟ್ಟಿಸಿ ಶಿವಜಂಗಮಕ್ಕೆ ಧಾರೆಯನ್ನೆರೆದು, ತಜ್ಞರಾದ ಶಿಲ್ಪಿಗಳನ್ನು ಬರಮಾಡಿಕೊಂಡು, ಆ ಕಾಶೀಕ್ಷೇತ್ರದಲ್ಲಿ ಶೋಭಿಸುವ ಕಪಿಲಾಧಾರಾತೀರ್ಥ, ಮಾನಸಸರೋವರ, ಗಂಧರ್ವಸಾಗರವೆಂಬ ತೀರ್ಥಗಳನ್ನು ಶಿಲೆಗಳಿಂದ ನಿರ್ಮಿಸಿ ಜೀರ್ಣೋದ್ಧಾರಮಾಡಿಸಿದನು. ಮತ್ತು ಐಯಪ್ಪನೆಂಬ ಶಾನುಭೋಗ (ಸೇನಬೋವ)ನ ಮುಖಾಂತರ ಕರ್ದಮೇಶ್ವರ, ನರ್ಮದೇಶ್ವರ, ಭೀಮಚಂಡಿಕೆ, ವೃಷಭಧ್ವಜೇಶ್ವರ ಮುಂತಾದ ದೇವಸ್ಥಾನಗಳನ್ನು ಜೀರ್ಣೋದ್ಧಾರ ಮಾಡಿಸಿ, ತನ್ನ ಪುತ್ರ ವೆಂಕಟಪ್ಪನಾಯಕನ ಹೆಸರಿನಲ್ಲಿ ಶಿಲಾಶಾಸನವನ್ನು ಬರೆಸಿದನು. ಈ ರೀತಿ ಶಾಶ್ವತವಾದ ಧರ್ಮಕಾರ್ಯಗಳನ್ನು ಕೈಗೊಂಡು ಕೀರ್ತಿಶಾಲಿಯಾದ ಬಳಿಕ ವಾರಾಣಸೀ ಕ್ಷೇತ್ರದಲ್ಲಿ ಅತಿ ಮನೋಹರವಾದ ಸ್ಫಟಿಲಿಂಗವೊಂದನ್ನು ಸಂಪಾದಿಸಿಕೊಂಡನು. ಅನಂತರದಲ್ಲಿ ೫೨. ಆ ಸಂಕಣ್ಣನಾಯಕನು ಕಾಶೀಕ್ಷೇತ್ರದಿಂದ ಹೊರಟು ಗಯಾಕ್ಷೇತ್ರವನ್ನು ಸೇರಿ ಆ ಸ್ಥಳದಲ್ಲಿ ಶಿವಜಂಗಮಕ್ಕೆ ಉತ್ತಮವಾದ ಮಠ ಮಾನ್ಯ ಧರ್ಮವನ್ನು ರಚಿಸಿದನು. ೫೩. ತನ್ನ ಅಧಿಕ ಪರಾಕ್ರಮದಿಂದ ಶತ್ರು ಸಮೂಹವನ್ನು ಗೆದ್ದಿರತಕ್ಕ ಆ ಸಂಕಣ್ಣನಾಯಕನು ಗಯೆಯಿಂದ ಹೊರಟು ಉತ್ತರ

ಆ ತಾಣದೊಳುರೆ ಮಠಮಂ
ವೀತಭಯ ಸಂಕಣೋರ್ವಿಪಂ ವಿರಚಿಸಿ ಮ
ತ್ತಾತನಲ್ಲಿಂ ತೆರಳ್ದುರು
ಕೇತಾರವನಘವಿದೂರಮಂ ಮಿಗೆ ಸಾರ್ದಂ ೫೪

ಕರಮೆಸೆವಾ ಕೇತಾರೇ
ಶ್ವರನಡಿದಾವರೆಯನ್ನೆದೆ ಪೂಜಿಸಿ ತದ್ಭೂ
ವರನಾ ಸ್ಥಳದೊಳ್ ಜಂಗಮ
ವರಧರ್ಮಾರ್ಥಂ ಸುಮಠವನಿರದಾಗಿಸಿದಂ ೫೫

ಧುರಧೀರಸಂಕಣೋರ್ವೀ
ಶ್ವರನಾ ಕೇತಾರದಿಂ ತೆರಳ್ದೊಡನತಿ ಬಂ
ಧುರಹರಿದ್ವಾರಮಂ ಶುಭ
ಕರ ಸುರಗಂಗಾವಿಹಾರಮಂ ಮಿಗೆ ಸಾರ್ದಂ ೫೬

ಆ ಹರಿದ್ವಾರದಿಂ ತೆರ
ಲ್ದಾಹವನಿಸ್ಸೀಮ ಸಂಕಣೋರ್ವಿಪನಹಿತ
ವ್ಯೂಹಮದಾಪಹನತ್ಯು
ತ್ಸಾಹದೆ ಕಾಶ್ಮೀರದೇಶವಂ ನೆರೆ ಸಾರ್ದಂ ೫೭

ವ॥ ಮತ್ತಮಾ ಸಂಕಣನಾಯಕಂ ಕಾಶ್ಮೀರಪುರವಾಸಿನಿಯಾದ ಶಾರದಾದೇವಿಯಂ ಸಂದರ್ಶನಂಗೈದಾ ಕಾಶ್ಮೀರದೇಶದಿಂ ಕುರುಕ್ಷೇತ್ರಮಂ ಸಾರ್ದಲ್ಲಿಂ ತೆರಳ್ದು ಪೈಠಣ ದೇಶಮಂ ಪೊಂದಿ ತತ್ಪೈಠಣದೇಶದೊಳ್ ದ್ವಾತ್ರಿಂಶತ್ಕರಕಮಲಶೋಭಿತಮಪ್ಪಘೋರಮೂರ್ತಿಯಂ ಕಂಡು

ದಿಕ್ಕಿನಲ್ಲಿ ಶೋಭಿಸುವ ನೀಲಕಂಠ ನೇಪಾಳವನ್ನು ಸೇರಿದನು. ೫೪. ಆ ಪ್ರದೇಶದಲ್ಲಿ ಒಂದು ಮಠವನ್ನು ನಿರ್ಮಿಸಿ, ಅಲ್ಲಿಂದ ಹೊರಟು ಪಾಪಪರಿಹಾರಕವಾದ ಕೇದಾರಕ್ಷೇತ್ರ ವನ್ನು ಸೇರಿದನು. ೫೫. ಅಲ್ಲಿ ಮೆರೆಯುವ ಕೇದಾರನಾಥನ ಪಾದಕಮಲಗಳನ್ನು ಪೂಜಿಸಿ ಆ ಸ್ಥಳದಲ್ಲಿ ಜಂಗಮಧರ್ಮಾರ್ಥವಾಗಿ ಒಳ್ಳೆಯ ಮಠವನ್ನು ಕಟ್ಟಿಸಿದನು. ೫೬. ರಣಧೀರನಾದ ಆ ಸಂಕಣ್ಣ ರಾಜನು ಕೇದಾರದಿಂದ ಹೊರಟು ಸುರಗಂಗಾ ವಿಹಾರ ಸ್ಥಾನವಾದ ಹಾಗೂ ಶುಭಕರವಾದ ಹರಿದ್ವಾರವನ್ನು ಸೇರಿದನು. ೫೭. ಶತ್ರುರಾಜರ ಗರ್ವಾಪಹಾರಕನಾದ ಸಂಕಣ್ಣರಾಜನು ಹರಿದ್ವಾರದಿಂದ ಹೊರಟು ಉತ್ಸಾಹದಿಂದ ಕಾಶ್ಮೀರದೇಶವನ್ನು ಸೇರಿದನು. ವ॥ ಮತ್ತೆ ಆ ಸಂಕಣ್ಣನಾಯಕನು ಕಾಶ್ಮೀರಪುರವಾಸಿನಿ ಯಾದ ಅಧಿಷ್ಠಾತೃ ದೇವತೆ ಶ್ರೀ ಶಾರದಾದೇವಿಯನ್ನು ಸಂದರ್ಶಿಸಿದನು. ಆ ಕಾಶ್ಮೀರ ದೇಶದಿಂದ ಹೊರಟು ಕುರುಕ್ಷೇತ್ರಕ್ಕೆ ಬಂದನು. ಅಲ್ಲಿಂದ ತೆರಳಿ ಪೈಠಣದೇಶವನ್ನು ಪ್ರವೇಶಿಸಿ, ಆ ಪೈಠಣ ದೇಶದಲ್ಲಿ ಮೂವತ್ತೆರಡು ಕರಕಮಲಗಳಿಂದ ಶೋಭಿಸುವ ಅಘೋರ ಮೂರ್ತಿಯನ್ನು ಕಂಡನು. ಅದರ ಆಕಾರವನ್ನು ಯಥಾರೀತಿಯಲ್ಲಿ ಕಾಗದದಲ್ಲಿ ಚಿತ್ರಿಸಿಕೊಂಡು ಬರೆದು ತೆಗೆದುಕೊಂಡನು. ಅಲ್ಲಿಂದ ಕೂಡಲೇ ಪಂಪಾಕ್ಷೇತ್ರವನ್ನು ಕುರಿತು

ಕಾಗದದೊಳ್ ತದಾಕಾರಮಂ ಚಿತ್ರಿಸಿ ನಿಮಾನಿಮಿಯಂ ಬರೆದು ತೆಗೆದುಕೊಂಡೊಡನೆ ಪಂಪಾಕ್ಷೇತ್ರಮಂ ಸಾರ್ದಲ್ಲಿಂ ತೆರಳ್ದು ಮಾಸೂರ ಸೀಮೆಯೊಳೆಸೆವಾಲವಳ್ಳಿಯೆಂಬ ಗ್ರಾಮಮಂ ಪೊರ್ದಿ ಮಲಂಗಿರಲಾ ಗ್ರಾಮತಟಾಕದೊಳಿರ್ಪ ವೀರಭದ್ರಮೂರ್ತಿಯಾ ಸಂಕಣನಾಯಕನ ಸ್ವಪ್ನದೊಳ್ ಜಂಗಮಮೂರ್ತಿಯಾಕಾರದಿಂದೈತಂದೆನ್ನಂ ನಿನ್ನ ರಾಷ್ಟ್ರಕ್ಕೆ ತೆಗೆದುಕೊಂಡು ಪೋಗಿ ಪ್ರತಿಷ್ಠೆಯಂ ರಚಿಸಿ ಪೂಜಿಸಲ್ ನಿನಗೆ ಸಮಸ್ತ ಮನೋಭಿಷ್ಟಂಗಳನೀವೆನೆಂದುಸಿರ್ದಂತರ್ಧಾನವನೈದಲ್ ಎಳ್ಚತ್ತು ಬಳಿಕಾ ತಟಾಕಜಲಮಧ್ಯದೊಳಿರ್ಪ ವೀರಭದ್ರಮೂರ್ತಿಯಂ ಸ್ವಾಧೀನಂಗೈದು

ಕಂ॥ ಬಳಿಕಾ ಸಂಕಣಭೂಪಂ
ಘಳಿಲನೆ ಮಾಸೂರದೇಶದಿಂ ಪೊರಟೊಡನು
ಜ್ಜ್ವಲಿಪ ನಿಜರಾಷ್ಟ್ರಮಂ ಸಾ
ರ್ದೊಲವಿಂದೆಳ್ತಂದು ಕೆಳದಿಪುರಮಂ ಪೊಕ್ಕಂ ೫೮

ವ॥ ಇಂತಾ ಸಂಕಣನಾಯಕಂ ಕೆಳದಿಪುರವರಮಂ ಪೊಕ್ಕನಂತರಮಾ ಕೆಳದಿಯ ರಾಮೇಶ್ವರಲಿಂಗದ ದಕ್ಷಿಣಪಾರ್ಶ್ವದೊಳ್

ಕಂ॥ ಬಲ್ಲಿದ ದಾನವಸುರರೆರ್ದೆ
ದಲ್ಲಣನಹ ವೀರಭದ್ರಮೂರ್ತಿಯನೆಸೆವಂ
ತಲ್ಲಿ ನೆಲೆಗೊಳಿಸಿ ತತ್ಪದ
ಪಲ್ಲವಮಂ ಭಜಿಸಿ ಪಡೆದನತ್ಯುಚ್ಛ್ರಯಮಂ ೫೯

ವ॥ ಇಂತಾಗಮೋಕ್ತವಿಧಾನದಿಂ ವೀರಭದ್ರಮೂರ್ತಿಯಂ ಪ್ರತಿಷ್ಠೆಯಂ ರಚಿಸಿ ಶಿಲಾಮಯವಾದ ಗರ್ಭಗೃಹವಂ ಕಟ್ಟಿಸಿ ತದ್ದೇವತಾಪೂಜಾರ್ಥಮತಿಮನೋಹರಮಪ್ಪ

ಹೊರಟು ಮಾಸೂರ ಸೀಮೆಯಲ್ಲಿರುವ ಆಲವಳ್ಳಿ ಎಂಬ ಗ್ರಾಮವನ್ನು ಹೊಂದಿ ಅಲ್ಲಿ ಒಂದೆಡೆ ಮಲಗಿರಲು, ಆ ಸಂದರ್ಭದಲ್ಲಿ ಗ್ರಾಮದ ಒಂದು ಸರೋವರದಲ್ಲಿದ್ದ ವೀರಭದ್ರಮೂರ್ತಿಯು ಈ ಸಂಕಣ್ಣ ನಾಯಕನ ಸ್ವಪ್ನದಲ್ಲಿ ಜಂಗಮ ಮೂರ್ತಿಯಾಕಾರ ದಲ್ಲಿ ದರ್ಶನವಿತ್ತನು. ನಾಯಕನನ್ನು ಕುರಿತು "ನನ್ನನ್ನು ನಿನ್ನ ರಾಷ್ಟ್ರಕ್ಕೆ ತೆಗೆದುಕೊಂಡು ಹೋಗಿ ಪ್ರತಿಷ್ಠೆಯನ್ನು ಮಾಡಿಸಿ ಪೂಜಿಸುವುದರಿಂದ ನಿನಗೆ ಸಮಸ್ತ ವಿಧವಾದ ಮನಸ್ಸಿನ ಅಭೀಷ್ಟಗಳನ್ನು ದಯಪಾಲಿಸುವೆನು" ಎಂಬುದಾಗಿ ಹೇಳಿ ಅಂತರ್ಧಾನ ಹೊಂದಿದನು. ನಾಯಕನು ಎಚ್ಚೆತ್ತ ಬಳಿಕ ಸರೋವರದ ನೀರಿನ ಮಧ್ಯದೊಳಿದ್ದ ವೀರಭದ್ರಮೂರ್ತಿಯನ್ನು ಪಡೆದುಕೊಂಡು ೫೮. ಆಮೇಲೆ ಆ ಸಂಕಣ್ಣ ರಾಜನು ಕೂಡಲೇ ಮಾಸೂರ ದೇಶದಿಂದ ಹೊರಟು ತನ್ನ ರಾಷ್ಟ್ರವನ್ನು ಸೇರಿ ಕೆಳದಿ ಪಟ್ಟಣವನ್ನು ಪ್ರವೇಶಿಸಿದನು. ವ॥ ಈ ರೀತಿಯಲ್ಲಿ ಆ ಸಂಕಣ್ಣನಾಯಕನು ಕೆಳದಿ ಪಟ್ಟಣವನ್ನು ಪ್ರವೇಶಿಸಿದ ಮೇಲೆ ಆ ಕೆಳದಿಯ ಶ್ರೀ ರಾಮೇಶ್ವರ ಲಿಂಗದ ದಕ್ಷಿಣ ಭಾಗದಲ್ಲಿ ೫೯. ಸಮರ್ಥರಾದ ಸುರಾಸುರರ ಎದೆಗೆಡಿಸಬಲ್ಲ ವೀರಭದ್ರಮೂರ್ತಿಯನ್ನು ಚೆನ್ನಾಗಿ ಶೋಭಿಸುವ ಹಾಗೆ ಅಲ್ಲಿ ಸ್ಥಾಪಿಸಿ ಆತನ ಪಾದವನ್ನು ಭಜಿಸಿ ಅತ್ಯುನ್ನತಿಯನ್ನು ಹೊಂದಿದನು. ವ॥ ಈ ರೀತಿ ಆಗಮೋಕ್ತ ವಿಧಾನದಿಂದ ವೀರಭದ್ರಮೂರ್ತಿಯನ್ನು ಪ್ರತಿಷ್ಠೆ ಮಾಡಿಸಿ ಶಿಲಾಮಯವಾದ ಗರ್ಭಗೃಹವನ್ನು ಕಟ್ಟಿಸಿದನು. ಆ ದೇವರ ಪೂಜೆಗೋಸ್ಕರ ಅತಿ ಮನೋಹರವಾದ ಹೆಚ್ಚಿನ ಭೂಮಿಯನ್ನು

ಭೂರಿಭೂಸ್ವಾಸ್ಥೆಯಂ ಬಿಡಿಸಿ ಬಳಿಕ್ಕಂ ಪೈಠಣದೇಶದೊಳ್ ಕಾಗದದೊಳ್ ಚಿತ್ರಿಸಿ ನಿಮಾನಿಮಿಯಂ ಬರೆದು ತಂದಘೋರಮೂರ್ತಿಯಾಕಾರದಿಂ ಶಿಲಾಮಯಮಾದಘೋರಮೂರ್ತಿಯಂ ರಚನೆಗೈಸಿಯನಂತರದೊಳಾಗಮೋಕ್ತ ವಿಧಾನದಿಂ

ಕಂ|| ಚಾರುಭುಜಬಲವಿದಾರಿತ
ಭೂರಿರಿಪುವ್ರಾತ ಸಂಕಣೋರ್ವೀಪನೆಸೆವಿ
ಕ್ಕೇರಿಪುರವರದೊಳೊಪ್ಪುವ
ಘೋರೇಶ್ವರನಂ ಪ್ರತಿಷ್ಠೆಯಂ ವಿರಚಿಸಿದಂ ೬೦

ವ|| ಇಂತಘೋರೇಶ್ವರನಂ ಪ್ರತಿಷ್ಠೆಯಂ ರಚಿಸಿ ತತ್ಪೂಜಾರ್ಥಮಪರಿಮಿತ ಭೂಸ್ವಾಸ್ಥೆಯಂ ಧಾರೆಯನೆರೆದು ಮಹಾದ್ಭುತಮಾದ ಶಿಲಾಮಯ ದೇವಸ್ಥಾನಮಂ ನಿರ್ಮಾಣಂಗೈಸಿ ತಟಾಕಾರಾಮ ಪುಷ್ಪವಾಟಿಗಳಂ ರಚನೆಗೈಸಿ

ಕಂ|| ರಾಜಿಸುವ ಘೋರಮೂರ್ತಿಯ
ಪೂಜೆಯನತ್ಯಂತ ವಿಭವದಿಂ ವಿರಚಿಸುತುಂ
ರಾಜಧರ್ಮದೊಳೆ ಸಂಕಣ
ರಾಜಂ ಸಂತಸದೆ ರಾಜ್ಯಮಂ ರಕ್ಷಿಸಿದಂ ೬೧

ವ|| ಮತ್ತಮದಲ್ಲದಾ ಸಂಕಣನಾಯಕಂ

ಕಂ|| ರಾಮರಾಯರ್ಗೆ ಮಲೆತತಿ
ತಾಮಸರ ತುರುಷ್ಕರದಟನುಡುಗಿಸಿ ಘನಸಂ
ಗ್ರಾಮದೆ ಭೈರಾದೇವಿಯ
ಸೀಮೆಯನುರೆ ಧೂಳಿಪಟ್ಟಮಂ ವಿರಚಿಸಿದಂ ೬೨

ಸಮರ್ಪಿಸಿದನು. ಬಳಿಕ ಪೈಠಣದೇಶದಲ್ಲಿ ಶ್ರೀ ಅಘೋರೇಶ್ವರ ಮೂರ್ತಿಯ ಆಕಾರವನ್ನು ಯಥಾವತ್ತಾಗಿ ಕಾಗದದಲ್ಲಿ ಬರೆದು ತಂದಿದ್ದಂತೆ ಶಿಲಾಮಯವಾಗಿ ಭವ್ಯ ಅಘೋರೇಶ್ವರ ಮೂರ್ತಿಯನ್ನು ಮಾಡಿಸಿದನು. ಅನಂತರದಲ್ಲಿ ಆಗಮೋಕ್ತ ವಿಧಾನದಿಂದ- ೬೦. ತನ್ನ ಸುಂದರವಾದ ಭುಜಬಲದಿಂದ ಅನೇಕ ಶತ್ರುಸಮೂಹವನ್ನು ಸೀಳಿದ ಸಂಕಣ್ಣರಾಯನು ಇಕ್ಕೇರಿ ಪಟ್ಟಣದಲ್ಲಿ ಅಘೋರೇಶ್ವರನ ಪ್ರತಿಷ್ಠೆಯನ್ನು ಮಾಡಿಸಿದನು. ವ|| ಈ ರೀತಿ ಶ್ರೀ ಅಘೋರೇಶ್ವರನ ಪ್ರತಿಷ್ಠೆಯನ್ನು ಕೈಗೊಂಡು ಆ ದೇವರ ಪೂಜೆಗಳಿಗೆ ಅಪರಿಮಿತವಾದ ಭೂಮಿಯನ್ನು ಧಾರೆಯನ್ನೆರೆದು, ಮಹಾದ್ಭುತವಾದ ಹಾಗೂ ಶಿಲಾಮಯವಾದ ದೇವಸ್ಥಾನವನ್ನು ನಿರ್ಮಿಸುವಂತೆ ಮಾಡಿ, ಕೊಳಗಳನ್ನೂ, ಆರಾಮಗಳನ್ನೂ ಹಾಗೂ ಹೂದೋಟಗಳನ್ನೂ ರಚನೆ ಮಾಡಿಸಿದನು. ೬೧. ಶೋಭಿಸುತ್ತಿರುವ ಶ್ರೀ ಅಘೋರೇಶ್ವರ ಮೂರ್ತಿಯ ಪೂಜೆಯನ್ನು ಅತ್ಯಂತ ವೈಭವದಿಂದ ನಡೆಸುತ್ತಾ ಸಂಕಣ್ಣರಾಜನು ರಾಜಧರ್ಮದಲ್ಲಿದ್ದು ಸಂತೋಷದಿಂದ ರಾಜ್ಯವನ್ನು ರಕ್ಷಿಸಿದನು. ವ|| ಮತ್ತೆ ಆ ಸಂಕಣ್ಣನಾಯಕನು ೬೨. ರಾಮರಾಯರಿಗೆ ಎದುರಾದ ತಾಮಸ ಸ್ವಭಾವದ ತುರುಕರ ಪರಾಕ್ರಮವನ್ನು ಅಡಗಿಸಿ ಭೈರಾದೇವಿಯ ಸೀಮೆಯನ್ನು ಯುದ್ಧದಲ್ಲಿ ಧೂಳಿಪಟ

ವ|| ಮತ್ತಮದಲ್ಲದೆ

ಕಂ|| ಮರಳ್ದಾ ಸಂಕಣಭೂಮೀ
ಶ್ವರನುರುವಿರುಪಣವೊಡೆಯರುಮಂ ಸಂಗರದೊಳ್
ಮುರಿದೊಪ್ಪುವ ಜಂಬೂರಂ
ಕರಮೆಸೆವುಡುಗುಣಿಯ ಕೋಂಟೆಯಂ ವಶಗೈದಂ ೬೩

ಒಡನೆ ಮಾದೇವಪುರದು
ಗ್ಗಡದ ಪರಿಸ್ತರಣಮಂ ವಶಂಗೈದು ಬಳಿ
ಕ್ಕೆಡವಲದೊಳುರುಬುವಹಿತರ
ಸೆಡವಂ ಮುರಿದಾ ಧರಿತ್ರಿಯಂ ಸಾಧಿಸಿದಂ ೬೪

ವ|| ಮತ್ತಮದಲ್ಲದಾ ಸಂಕಣನಾಯಕಂ

ಕಂ|| ತರತರದೊಳ್ಪೆದಿ ಮಾರ್ಮಲೆ
ತುರುಬುವ ಯವನರ್ಕಳದಟನುಡುಗಿಸಿ ಘನಸಂ
ಗರದೊಳ್ ಶರನಿಧಿಯ ಪರಿ
ಸ್ತರಣಮುಮಂ ವಡ್ಡಿಯವನಿಯಂ ಸಾಧಿಸಿದಂ ೬೫

ವ|| ಮತ್ತಮದಲ್ಲದತ್ಯಂತಗರ್ವೋದ್ರೇಕದಿಂ ಕುಹಕೋಪಾಯಂಗಳನೆಸಗುತಿರ್ಪ ಕಾರ್ಕಳದ ಭೈರಸವೊಡೆಯರುಮಂ ಪರಿಹರಿಸಿ ಕಪ್ಪಮಂ ಕೊಂಡು ತನ್ಮದೋದ್ರೇಕಮಂ ಮುಗ್ಗಿಸಿದನಂತುಮಲ್ಲದೆಯುಂ

ಕಂ|| ಚಾಳಕತನದಿಂ ದುಷ್ಟಜ
ನಾಳಿಯನೊಡವೆರಸು ರಾಜ್ಯಮಂ ಬಾಧಿಸುವಾ
ಸಾಳುವತಿಮ್ಮನ ಭುಜಬಲ
ದೂಳಿಗಮಂ ನಿಲಿಸಿ ರಾಷ್ಟ್ರಮಂ ರಕ್ಷಿಸಿದಂ ೬೬

ಮಾಡಿದನು. ವ|| ಮತ್ತೆ ೬೩. ಅಲ್ಲಿಂದ ಹಿಂತಿರುಗಿದ ಸಂಕಣ್ಣನಾಯಕನು ವಿರುಪಣ್ಣ ಒಡೆಯರನ್ನು ಯುದ್ಧದಲ್ಲಿ ಸೋಲಿಸಿ, ಜಂಬೂರನ್ನೂ ಹಾಗೂ ಉಡುಗಣಿಯ ಕೋಟೆಯನ್ನೂ ವಶಪಡಿಸಿಕೊಂಡನು. ೬೪. ಕೂಡಲೇ ಮಾದೇವಪುರದ ಪ್ರದೇಶವನ್ನು ವಶಪಡಿಸಿಕೊಂಡು ಎಡಬಲಗಳಲ್ಲಿ ಆಕ್ರಮಿಸುವ ಶತ್ರುಗಳ ಸೊಕ್ಕನ್ನು ಮುರಿದು ಆ ಭೂಮಿಯನ್ನು ಗೆದ್ದುಕೊಂಡನು. ವ|| ಮತ್ತೆ ಅದಲ್ಲದೆ ಆ ಸಂಕಣ್ಣನಾಯಕನು ೬೫. ಅನೇಕ ರೀತಿಗಳಿಂದ ಸೊಕ್ಕಿ ಆಕ್ರಮಿಸುವ ಯವನರ ಸಾಮರ್ಥ್ಯವನ್ನು ಕುಗ್ಗಿಸಿ, ದೊಡ್ಡ ಯುದ್ಧದಲ್ಲಿ ಸಮುದ್ರ ತೀರವನ್ನೂ ವಡ್ಡಿಯ ಭೂಮಿಯನ್ನೂ ಸಾಧಿಸಿದನು. ವ|| ಮತ್ತು ಅಲ್ಲದೆ ಅತ್ಯಂತ ಅಹಂಕಾರಗಳಿಂದಲೂ, ಗರ್ವದಿಂದಲೂ ಕೂಡಿದ ಹಾಗೂ ಕ್ಷುಲ್ಲಕ ಉಪಾಯಗಳನ್ನು ಎಸಗುತ್ತಿದ್ದ ಕಾರ್ಕಳದ ಭೈರಸ ಒಡೆಯರುಗಳನ್ನು ಸೋಲಿಸಿ, ಕಪ್ಪವನ್ನು ತೆಗೆದುಕೊಂಡು, ಅವರ ಅಹಂಕಾರ ಹಾಗೂ ಸೊಕ್ಕನ್ನೂ ಮುರಿದನು. ಅಲ್ಲದೆ ಸಮುದ್ರತೀರದ ಭೂಮಿಯನ್ನು ವಶಪಡಿಸಿಕೊಂಡನು. ಅಂತೂ ಅಲ್ಲದೆ- ೬೬. ದುಷ್ಟಜನರನ್ನು ಕೂಡಿಕೊಂಡು ಕುತಂತ್ರದಿಂದ ರಾಜ್ಯವನ್ನು ಪೀಡಿಸುತ್ತಿದ್ದ ಸಾಳುವ

ವ|| ಇಂತಾ ಸಂಕಣನಾಯಕಂ ಸಾಳುವ ತಿಮ್ಮನಂ ನಿಗ್ರಹಿಸಿ ಸಂಗ್ರಾಮಮುಖದೊಳ್ ತತ್ಸಾಳುವಪಡೆಯನೆಲ್ಲಮಂ ಸಂಹರಿಸಿ ಸ್ವರಾಷ್ಟ್ರದೊಳ್ ನಿಷ್ಕಂಟಕತ್ವಮಂ ರಚಿಸಿ ಸಮಸ್ತ ರಾಜ್ಯರಾಷ್ಟ್ರ ಪ್ರಜೆಪರಿವಾರಮಂ ಪರಿಪಾಲಿಸುತ್ತುಂ ಪರಮ ಪ್ರಖ್ಯಾತಿಯಂ ಪಡೆದು ವಿರಾಜಿಸುತ್ತು ಮಿರ್ದನಂತುಮಲ್ಲದೆಯುಂ

ಕಂ|| ಬಗೆ ಬಗೆಯ ದಾನಧರ್ಮಾ
ದಿಗಳಂ ಶಾಸ್ತ್ರೋಕ್ತಮಾರ್ಗದಿಂ ವಿರಚಿಸಿ ಮೂ
ಜಗಮ್ಮೆದೆ ಪೊಗಳೆ ತನ್ನೃಪ
ನಗಣಿತ ಸದ್ಧರ್ಮದಿಂದಮಿಳೆಯಂ ಪೊರೆದಂ ೬೭

ವ|| ಈ ದೊಡ್ಡ ಸಂಕಣನಾಯಕಂ ತನಗೆ ರಾಜಪಟ್ಟಮಾದ ವಿಶ್ವಾವಸುನಾಮ ಸಂವತ್ಸರದ ವೈಶಾಖ ಶುದ್ಧ ೫ ಯಾರಭ್ಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೫ ಯಲ್ಲಿಗೆ ವರುಷ ೧೩ ತಿಂಗಳು ೫ ಪರ್ಯಂತಂ ಸದ್ಧರ್ಮದಿಂ ರಾಜ್ಯಪರಿಪಾಲನಂಗೈದಂ.

ತಿಮ್ಮನ ಪರಾಕ್ರಮವನ್ನು ಇಳಿಸಿ (ತಗ್ಗಿಸಿ) ರಾಷ್ಟ್ರವನ್ನು ಕಾಪಾಡಿದನು. ವ|| ಈ ರೀತಿ ಆ ಸಂಕಣ್ಣನಾಯಕನು ಸಾಳುವ ತಿಮ್ಮನನ್ನು ಸೋಲಿಸಿ, ಯುದ್ಧರಂಗದಲ್ಲಿ ಆ ಸಾಳುವನ ಸೇನಾಪಡೆಗಳೆಲ್ಲವನ್ನೂ ಸಂಹರಿಸಿ, ತನ್ನ ರಾಷ್ಟ್ರದಲ್ಲಿ ಯಾವ ವಿಧವಾದ ಕಂಟಕಗಳೂ ಇಲ್ಲದಂತೆ ಮಾಡಿದನು. ಈ ರೀತಿ ಸಮಸ್ತ ರಾಜ್ಯ, ರಾಷ್ಟ್ರ, ಪ್ರಜೆಗಳು, ಪರಿವಾರಗಳು, ಮುಂತಾದವರನ್ನು ಕಾಪಾಡುತ್ತಾ ಪರಮ ಕೀರ್ತಿಯನ್ನು ಪಡೆದು ಪ್ರಖ್ಯಾತಿ ಹೊಂದಿದನು. ಅಂತೂ ಅಲ್ಲದೆ ೬೭. ಬಗೆ ಬಗೆಯ ದಾನಧರ್ಮಾದಿಗಳನ್ನು ಶಾಸ್ತ್ರೋಕ್ತ ರೀತಿಯಿಂದ ಮಾಡಿ ಮೂರು ಲೋಕವೂ ಚೆನ್ನಾಗಿ ಹೊಗಳುವಂತೆ ಆ ರಾಜನು ಲೆಖ್ಖವಿಲ್ಲದಷ್ಟು ಸದ್ಧರ್ಮದಿಂದ ಭೂಮಿಯನ್ನು ರಕ್ಷಿಸಿದನು. ಈ ದೊಡ್ಡ ಸಂಕಣ್ಣನಾಯಕರು ತನಗೆ ರಾಜಪಟ್ಟವಾದ ವಿಶ್ವಾವಸುನಾಮ ಸಂವತ್ಸರದ ವೈಶಾಖ ಶುದ್ಧ ೫ ರಿಂದ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೪ರವರೆಗೆ ವರುಷ ೧೩ ತಿಂಗಳು ೫ರ ವರೆಗೆ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿದರು.

# ಚತುರ್ಥಾಶ್ವಾಸಂ

ವ|| ಆ ದೊಡ್ಡ ಸಂಕಣನಾಯಕರ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೮೧ನೆಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೫ಯಲ್ಲಿ ಚಿಕ್ಕಸಂಕಣನಾಯಕರಿಗೆ ಇಕ್ಕೇರಿಯರಮನೆಯಲ್ಲಿ ರಾಜಪಟ್ಟಂ

ಕಂ|| ವರಸಂಕಣಾವನೀಶನ
ತರುವಾಯಿಯೊಳೆಸೆವ ತನ್ಮಹೀಶ್ವರನ ಸಹೋ
ದರನೆನಿಪ ಚಿಕ್ಕಸಂಕಣ
ಧರಣೀಶ್ವರನಾಳ್ದನೊಪ್ಪುವವನೀತಳಮಂ ೧

ವ|| ಇಂತಾ ಚಿಕ್ಕಸಂಕಣನಾಯಕಂ ತನ್ನಗ್ರಜ ಹಿರಿಯ ಸಂಕಣನಾಯಕನ ಪುತ್ರರಾದ ರಾಮರಾಜನಾಯಕ ವೆಂಕಟಪ್ಪನಾಯಕರ್ವೆರಸು ಸುಖದಿಂ ರಾಜ್ಯಂಗೆಯುತ್ತಿರಲ್ ಕತಿಪಯ ವತ್ಸರಂಗಳ್ ಪೋಗಲೊಡನೆ

ಕಂ|| ಕರಮೆಸೆವ ಚಿಕ್ಕಸಂಕಣ
ಧರಣೀಶಂಗಂ ಕನಿಷ್ಠ ಪತ್ನಿಯ ಬಸಿರೊಳ್
ಮೆರೆವ ಸುಲಗ್ನದೊಳತಿಬಂ
ಧುರತರಶುಭರೂಪನಪ್ಪ ಸುತನುದಯಿಸಿದಂ ೨

ಶುದ್ಧಯಿಸಿದುರುಸುವರ್ಣದ
ಮುದ್ದೆಯೆನಲ್ಕೆಸೆವ ತತ್ಕುಮಾರಂಗೊಲವಿಂ
ಸಿದ್ಧಪನಾಯಕನೆನುತುಂ
ಮುದ್ದಿನ ಪೆಸರಿಟ್ಟು ಮೋಹದಿಂ ಪೋಷಿಸಿದಂ ೩

ವ|| ಇಂತು ವಿರಾಜಿಸುತಿರ್ಪ ಸತ್ಪುತ್ರಂ ಪ್ರತಿದಿನದೊಳಭಿವರ್ಧಿಸಿ ಬಾಲಲೀಲೆಯಂ ನಟಿಸುತ್ತಲ್ ನಿಟ್ಟಿಸಿ ಸಂತಸಂದಳೆಯುತ್ತುಂ ರಾಜ್ಯಂಗೆಯ್ಯುತ್ತಿರಲಾ ಪ್ರಸ್ತಾವದೊಳ್

ವ|| ಆ ದೊಡ್ಡ ಸಂಕಣ್ಣನಾಯಕನ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ರೀಮನ್ನೃಪ ಶಾಲಿವಾಹನ ಶಕ ವರ್ಷ ೧೪೮೧ನೆಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೫ರಲ್ಲಿ ಇವರ ತಮ್ಮ ಚಿಕ್ಕಸಂಕಣ್ಣನಾಯಕರಿಗೆ ಇಕ್ಕೇರಿಯ ಅರಮನೆಯಲ್ಲಿ ರಾಜ್ಯಾಭಿಷೇಕವಾಯಿತು. ೧. ಶ್ರೇಷ್ಠನಾದ ಸಂಕಣ್ಣನಾಯಕನ ತರುವಾಯ, ಆ ರಾಜನ ಸಹೋದರನಾದ ಚಿಕ್ಕಸಂಕಣ್ಣನಾಯಕನು ರಾಜ್ಯವನ್ನಾಳಿದನು. ವ|| ಈ ರೀತಿ ಚಿಕ್ಕ ಸಂಕಣ್ಣನಾಯಕನು ತನ್ನ ಅಣ್ಣನಾದ ಹಿರಿಯ ಸಂಕಣ್ಣನಾಯಕನ ಮಕ್ಕಳಾದ ರಾಮ ರಾಜನಾಯಕ ಹಾಗೂ ವೆಂಕಟಪ್ಪನಾಯಕರಿಂದ ಕೂಡಿ ಸುಖವಾಗಿ ರಾಜ್ಯವನ್ನು ಪರಿಪಾಲಿಸುತ್ತಿರಲು, ಅನೇಕ ಸಂವತ್ಸರಗಳು ಕಳೆದವು. ಆ ಬಳಿಕ ೨. ಚಿಕ್ಕಸಂಕಣ್ಣನಾಯಕ ನಿಗೆ ಹಿರಿಯ ಹೆಂಡತಿಯ ಗರ್ಭದಲ್ಲಿ ಸುಂದರನೂ, ಒಳ್ಳೆಯ ಆಕಾರ ಹಾಗೂ ರೂಪ ವುಳ್ಳವನೂ ಆದ ಮಗನು ಶುಭಲಗ್ನದಲ್ಲಿ ಹುಟ್ಟಿದನು. ೩. ಶುದ್ಧಗೊಳಿಸಿದ ಬಂಗಾರದ ಮುದ್ದೆಯೆನ್ನುವ ರೀತಿಯಲ್ಲಿ ಶೋಭಿಸುವ ಆ ಕುಮಾರನಿಗೆ ಸಿದ್ದಪ್ಪನಾಯಕನೆಂಬ ಪ್ರೀತಿಯ ಹೆಸರಿಟ್ಟು ಮೋಹದಿಂದ ಪೋಷಿಸಿದನು. ವ|| ಈ ರೀತಿ ಶೋಭಿಸುತ್ತಿರುವ ಒಳ್ಳೆಯ

ಕಂ॥ ಗರುವಿಕೆಯೊಳ್ ಸೋದೆಯ ಹಿರಿ
ಯರಸಪನಾಯಕ ಸಮೇತಮೈದಿದ ವಿಜಯಾ
ಪುರದ ಸಲಾಬಿತಖಾನನ
ವರಸೈನ್ಯವನಾಜಿರಂಗದೊಳ್ ಮುಗ್ಗಿಸಿದಂ ೪

ಮತ್ತತಿಚಲದಿಂದಿಭಹಯ
ಪತ್ತಿಚಯಂವೆರಸು ಸರ್ವಸನ್ನಾಹದೆ ದಂ
ಡೆತ್ತಿ ಬಂದಾ ತುರುಷ್ಕರ
ಮೊತ್ತವನಂಕದೊಳೆ ಮುರಿದನಾ ನೃಪತಿಲಕಂ ೫

ವ॥ ಮತ್ತಮದಲ್ಲದೆ ಯೆಡೆಯೆಡೆಗೆಳ್ತಂದು ದಾಳಿವರಿಯುತಿರ್ದವಿದ್ಧರ್ಕರ್ಣಕಳದಟಂ ಮುರಿದು ಭುಜಬಲಪ್ರತಾಪದಿಂ ರಾಜ್ಯಂಗೆಯುತ್ತುಮಿರಲಾ ಕಾಲದೊಳ್ ರಾಮರಾಯರ್ ವಿದ್ಯಾನಗರಿಯಿಂ ತೆರಳ್ದು ತುರುಷ್ಕರ ಮೇಲೆ ದಂಡೆತ್ತಿ ಪೋಗಿರಲ್ ತದ್ರಾಕ್ಷಾಕ್ಷಿ ಸಂವತ್ಸರದ ಮಾಘಮಾಸದೊಳ್ ತುರುಷ್ಕಸೈನ್ಯಕ್ಕಂ ರಾಯಸೈನ್ಯಕ್ಕಂ ಮಹಾದ್ಭುತಮಾದ ಯುದ್ಧಂ ಪಣ್ಣಿ ರಾಯ ಸೈನ್ಯಕ್ಕಿದಿರ್ಚೆ ನಿಲಲಶಕ್ಯಮಾಗಿಯುವನ ಸೈನ್ಯಂ ಮುರಿದು ಹರಿಹಂಚಾಗಲ್ ಬಳಿಕ್ಕಂ ಗೋಲುಕೊಂಡೆಯದ ಕುತುಬಶಾಹನುಂ ಅಮದಾನಗರದ ಭೈರಿಪಾತುಶಾಹನೆನಿಪ ನಿಜಾಮಶಾಹನುಂ ಇವರಿರ್ವರುಂ ಯುದ್ಧರಂಗದೊಳ್ ಕೈಗೆಯ್ದು ನಿಂದು ನಿತ್ತರಿಸಲಮ್ಮದೆ ಪಲಾಯನಂಬಡೆದಿಂತು ರಾಯಸೈನ್ಯಮಂ ಮುರಿವುದಸಾಧ್ಯಮೆಂದಿರ್ವರ್ ಪಾತುಶಾಹರೊಂದಾಗಿ ಮಂತ್ರಾಲೋಚನೆಯಂ ರಚಿಸಿ ಮಾಯತಂತ್ರದಿಂ ಪೊರತು ಗೆಲ್ವುದಸಾಧ್ಯಮೆಂದು ನಿಶ್ಚಯಂಗೆಯ್ದು ರಾಯರ ಸಮೀಪದೊಳ್

ಪುತ್ರನು ಪ್ರತಿದಿನವೂ ಬೆಳೆಯುತ್ತಾ ಬಾಲಲೀಲೆಗಳನ್ನು ತೋರಿಸುತ್ತಿರಲು, ಚಿಕ್ಕಸಂಕಣ್ಣನಾಯಕನು ಸಂತೋಷವನ್ನು ಹೊಂದುತ್ತಾ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಆ ಸಂದರ್ಭದಲ್ಲಿ ೪. ಆ ಚಿಕ್ಕಸಂಕಣ್ಣನಾಯಕನು ಸೋದೆಯ ಹಿರಿಯ ಅರಸಪ್ಪ ನಾಯಕನೊಂದಿಗೆ ವಿಜಯಾಪುರದ ಸಲಾಬಿತಖಾನನ ಸೈನ್ಯವನ್ನು ರಣರಂಗದಲ್ಲಿ ಸೋಲಿಸಿದನು. ೫. ಆಮೇಲೆ ಹೆಚ್ಚಿನ ಹಟದಿಂದ ಆನೆ, ಕುದುರೆ, ಕಾಲಾಳುಗಳ ಸಮೂಹದೊಂದಿಗೆ ಸರ್ವಸನ್ನಾಹದಿಂದ ದಂಡೆತ್ತಿ ಬಂದ ತುರುಕರ ಸಮೂಹವನ್ನು ಆ ರಾಜನು ಯುದ್ಧದಲ್ಲಿ ಸೋಲಿಸಿದನು. ವ॥ ಮತ್ತೆ ಅದೂ ಅಲ್ಲದೆ ಆಗಾಗ ಬಂದು ದಾಳಿ ಮಾಡುತ್ತಿದ್ದ ತುರುಕರ ಪರಾಕ್ರಮವನ್ನು ಮುರಿದು, ತನ್ನ ಭುಜಬಲಪ್ರತಾಪದಿಂದ ರಾಜ್ಯವನ್ನು ರಕ್ಷಿಸುತ್ತಿದ್ದನು. ಆ ಕಾಲದಲ್ಲಿ ರಾಮರಾಯರು ವಿದ್ಯಾನಗರದಿಂದ (ವಿಜಯನಗರದಿಂದ) ಹೊರಟು, ತುರುಕರ ಮೇಲೆ ದಂಡೆತ್ತಿ ಹೋಗಿ, ರಕ್ತಾಕ್ಷಿ ಸಂವತ್ಸರದ ಮಾಘಮಾಸದಲ್ಲಿ ತುರುಕರ ಸೈನ್ಯಕ್ಕೂ ಹಾಗೂ ರಾಯರ ಪಡೆಗೂ ಅದ್ಭುತವಾದ ಯುದ್ಧವು ನಡೆದು ರಾಯರ ಸೈನ್ಯದ ಎದುರಿಗೆ ಮುಸಲ್ಮಾನರ ಸೈನ್ಯವು ನಿಲ್ಲಲಾರದೆ ಚದುರಿಹೋಯಿತು. ಆ ಬಳಿಕ ಗೋಲ್ಕೊಂಡೆಯ ಕುತುಬಶಾಹ, ಅಹಮ್ಮದಾನಗರದ ಭೈರಿ ಪಾತುಶಾಹನೆಂದು ಹೆಸರುಳ್ಳ ನಿಜಾಮಶಾಹ ಇವರಿಬ್ಬರೂ ಯುದ್ಧರಂಗದಲ್ಲಿ ಕೈಮಾಡಿದರೂ ನಿಲ್ಲಲಿಕ್ಕಾಗದೇ ಪಲಾಯನ ಮಾಡಿದರು. ಈ ಈರ್ವರೂ ಬಾದಷಾಹರೂ ಒಂದಾಗಿ ರಾಯರ ಸೈನ್ಯವನ್ನು ಸೋಲಿಸುವುದು ಅಸಾಧ್ಯವೆಂದು ಯೋಚಿಸಿ, ಮೋಸದಿಂದ ಹೊರತೂ ಬೇರೇನೂ

**ಮುಖ್ಯಸೇವಕನಾಗಿ ವರ್ತಿಸುತಿರ್ದ ವಿಜಾಪುರದ ಅಲ್ಲಿ ಅದುಲಪಾತುಶಾಹಂಗೆ ಸಂಧಾನವನೊಡರ್ಚಿಸಿ ಜಾತ್ಯಭಿಮಾನಹೇತುಪಂಥಮಂ ಪುಟ್ಟಿಸಿ ಮಂತ್ರಂ ಭಿನ್ನಿಸದಂತು ಸ್ವಜಾತ್ಯಭಿಮಾನದೇವತಾಸಾಕ್ಷಿ ಪೂರ್ವಕವಾಗಿ ಖಡ್ಗಮಂ ಮುಟ್ಟಿಸಿ ಕ್ರಿಯಾಪೂರ್ವಕವಾಗಿ ತಪ್ಪದಂತು ಭಾಷೆಯಂ ತೆಗೆದುಕೊಂಡೀ ಪ್ರಕಾರದಿಂ ಅಲ್ಲಿ ಅದುಲಶಾಹನನೊಳಗು ಮಾಡಿಕೊಂಡು ಗೋಲುಕೊಂಡೆಯದ ಕುತುಬಶಾಹನುಂ ಅಮದಾನಗರದ ಭೈರಿನಿಜಾಮಶಾಹನುಂ ನಂಬುಗೆಯಾದೊಡೆ ಸಂಧಾನಮುಖದಿಂದ್ಯೆತಂದು ಕಾಣ್ಬೆವೆಂದು ಹುಸಿಯ ವರ್ತಮಾನಮಂ ಪುಟ್ಟಿಸಿ ನಚ್ಚುಹಾಕಿ ರಾಯರಂ ಮೈಮರೆಸಿ ಸಮಯಸಾಧನೆಯಂ ರಚಿಸಿ ಬಳಿಕ್ಕಂ ವಿಜಾಪುರದ ಅಲ್ಲಿ ಅದುಲಶಾಹನ ಸಂಚಿನ ಮೇಲಾ ಪಾತುಶಾಹನರೊಂದಾಗಿ ಮೋಸದ ಮೇಲೆ ಶಾಲಿವಾಹನ ಶಕ ವರ್ಷ ೧೪೮೭ನೆಯ ರಕ್ತಾಕ್ಷಿ ಸಂವತ್ಸರದ ಮಾಘಬಹುಳದಲ್ಲಿ ರಕ್ಕಸದಂಗಡಿಯೆಂಬ ಸ್ಥಳದಲ್ಲಿ ರಾಮರಾಯರಂ ಪಿಡಿದು ಶಿರಶ್ಛೇದನಂಗೈದು ಆ ಶಿರಮಂ ಕಾಶಿಗೆ ಕಳುಹಿ ತತ್ತತ್ಸ್ಥಾನಂಗಳಿಗೆಲ್ಲಂ ತಾವೇ ಸ್ವತಂತ್ರಕರ್ತುಗಳಾಗಿರಲಿತ್ತಂ ರಾಯಸಂಸ್ಥಾನಂ ವಿಸ್ಖಲಿತಮಾಗಿ ವಿದ್ಯಾನಗರಂ ಪಾಳಾಗಲಾ ರಾಯರ ಮನೆವಾರ್ತೆ ಬೊಕ್ಕಸದ ಸೇನಬೋವ ಚಿನ್ನಭಂಡಾರದ ನಾರಣಪ್ಪಯ್ಯನೆಂಬಾತನಲ್ಲಿ ನಿತ್ತರಿಸಲಮ್ಮದೆ ಕುಟುಂಬಸಹಿತಂ ತೆರಳ್ದೈತಂದು ಚಿಕ್ಕಸಂಕಣನಾಯಕರ ಪಾದಾರವಿಂದವನಾಶ್ರಯಿಸಲವರ್ಗೆ ಪರಮಾಧಿಕಾರಭಾಗ್ಯಂಗಳನಿತ್ತು ಪೋಷಿಸಿದನಂತುಮಲ್ಲದೆಯುಂ**

ಉಪಾಯವು ನಡೆಯದೆಂದು ನಿಶ್ಚಯಿಸಿದರು. ರಾಯರ ಸಮೀಪದಲ್ಲಿ ಆಪ್ತ ಸೇವಕನಾಗಿದ್ದ ಬಿಜಾಪುರದ ಅಲ್ಲಿ ಅದುಲಬಾದಷಹನಿಗೆ ಸಂಧಾನದ ಮೂಲಕ ಮನವೊಪ್ಪಿಸಿ, ಜಾತ್ಯಭಿಮಾನಕ್ಕೆ ಕಾರಣವಾದ ಕಟ್ಟಾಣೆಯನ್ನು (ಪಂಥವನ್ನು) ಸೃಷ್ಟಿಮಾಡಿ, ಮಂತ್ರಾಲೋಚನೆಯು ವಿಫಲವಾಗದ ರೀತಿಯಲ್ಲಿ ತಮ್ಮ ಜಾತಿಯ ಅಭಿಮಾನ ದೇವರ ಸನ್ನಿಧಿಯಲ್ಲಿ, ಸಾಕ್ಷಿಪೂರ್ವಕವಾಗಿ ಕತ್ತಿಯನ್ನು ಮುಟ್ಟಿಸಿ, ಕಾರ್ಯವನ್ನು ಪೂರ್ತಿಮಾಡಲು ತಪ್ಪದ ರೀತಿಯಲ್ಲಿ ಭಾಷೆಯನ್ನು ತೆಗೆದುಕೊಂಡರು. ಈ ರೀತಿಯಿಂದ ಅಲ್ಲಿ ಅದುಲಶಾಹನನ್ನು ತಮ್ಮೊಳಗೆ ಮಾಡಿಕೊಂಡು ಗೋಲ್ಕೊಂಡೆಯ ಕುತುಬಶಾಹ, ಅಹಮ್ಮದಾನಗರದ ಭೈರಿ ನಿಜಾಮಶಾಹ ಇವರಲ್ಲಿ ನಂಬಿಗೆ ಬಂದ ಕೂಡಲೇ ಸಂಧಾನ ಮುಖದಿಂದ ಕರೆತಂದು ಕಾಣುವೆವೆಂದು, ಸುಳ್ಳು ಸಮಾಚಾರವನ್ನು ಹುಟ್ಟಿಸಿ, ರಾಯರನ್ನು ಮೈಮರೆಯುವಂತೆ ಮಾಡಿ, ನಂಬಿಸಿ, ಸಮಯಸಾಧನೆಯನ್ನು ಕೈಗೊಂಡರು. ಬಳಿಕ ಬಿಜಾಪುರದ ಅಲ್ಲಿ ಅದುಲಶಾಹನ ಹೊಂಚಿನ ಮೇಲೆ ಬಾದಷಹರೊಂದಾಗಿ, ಮೋಸದಿಂದ ಶಾಲಿವಾಹನ ಶಕವರ್ಷ ೧೪೮೭ನೆಯ ರಕ್ತಾಕ್ಷಿ ಸಂವತ್ಸರದ ಮಾಘ ಬಹುಳದಲ್ಲಿ ರಕ್ಕಸದಂಗಡಿ ಎಂಬ ಸ್ಥಳದಲ್ಲಿ ರಾಮರಾಯರನ್ನು ಹಿಡಿದುಕೊಂಡು ಶಿರಶ್ಛೇದನ ಮಾಡಿದರು. ಆ ತಲೆಯನ್ನು ಕಾಶಿಗೆ ಕಳುಹಿಸಿ, ಆಯಾ ಸ್ಥಾನಗಳಿಗೆಲ್ಲಾ ತಾವೇ ಸ್ವತಂತ್ರರಾಗಿ ಕಾರ್ಯಭಾರವನ್ನು ಕೈಗೊಳ್ಳುತ್ತಾ ಇದ್ದರು. ಈ ಕಡೆಯಲ್ಲಿ ರಾಯರ ಸಂಸ್ಥಾನವು ಹಾಳಾಗಿ ವಿಜಯನಗರವು ಧೂಳೀಪಟವಾಯಿತು. ರಾಯರ ಮನೆವಾರ್ತೆಯಾದ ಬೊಕ್ಕಸದ ಅಧಿಕಾರಿಯೂ, ಸೇನಬೋವನೂ (ಶಾನುಭೋಗನೂ) ಆದ ಚಿನ್ನಭಂಡಾರದ ನಾರಣಪ್ಪಯ್ಯನೆಂಬವನು ಅಲ್ಲಿ ನಿಲ್ಲಲಾರದೆ ಕುಟುಂಬಸಹಿತವಾಗಿ ಓಡಿಬಂದು ಚಿಕ್ಕಸಂಕಣ್ಣನಾಯಕರ ಆಶ್ರಯವನ್ನು ಬೇಡಿ ಮೊರೆಹೊಕ್ಕನು. ನಾಯಕನು ಅವರಿಗೆ ಹೆಚ್ಚಿನ ಅಧಿಕಾರವನ್ನು ಇತ್ತು ತನ್ನ ರಾಜ್ಯದಲ್ಲಿ ಪೋಷಿಸುತ್ತಿದ್ದನು. ಈ ರೀತಿ ಅಲ್ಲದೆ,

ಕಂ॥ ನೆರಹುತೆಡವಲದ ಮನ್ನೆಯ
ದೊರೆಗಳನಂಕದೊಳಿದಿರ್ಚಿ ಕೈಗೆಯ್ದದಟಂ
ಮೆರೆದಾ ಭೈರಾದೇವಿಯ
ಗರುವಿಕೆಯಂ ಮುರಿದನಾ ನೃಪಾಲಕತಿಲಕಂ ೬

ಇಂತಿದಿರಾಂತರ ದುರ್ಮದ
ಮಂ ತವಿಸುತೆ ಚಿಕ್ಕಸಂಕಣೋರ್ವೀಪತಿ ತಾಂ
ಸಂತಸದೆ ಸಂತರೊಡಬಡು
ವಂತಿರೆ ಸದ್ಧರ್ಮದಿಂದಮಿಳೆಯಂ ಪೊರೆದಂ ೭

ವ॥ ಚಿಕ್ಕಸಂಕಣನಾಯಕಂ ಇಂತು ತನಗೆ ರಾಜಪಟ್ಟಮಾದ ಶಾಲಿವಾಹನಶಕಾಬ್ದ ೧೪೮೧ನೆಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೫ ಯಾರಭ್ಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೪ ಯವರೆಗೆ ವರುಷ ೧೨ ತಿಂಗಳು ೧ ಪರ್ಯಂತ ರಾಜ್ಯಂಗೈದು ಶಿವಸಾಯುಜ್ಯಮಂ ಪಡೆದಂ.

ಆ ನಂತರಂ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೯೩ನೆಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೫ ಯಲ್ಲಿ ಚಿಕ್ಕಸಂಕಣನಾಯಕರ ಅಗ್ರಜನಾದ ದೊಡ್ಡ ಸಂಕಣನಾಯಕರ ಜ್ಯೇಷ್ಠಪುತ್ರನಾದ ರಾಮರಾಜನಾಯಕಂಗೆ ಇಕ್ಕೇರಿಯರಮನೆಯಲ್ಲಿ ರಾಜಪಟ್ಟಂ

ಕಂ॥ ನೆರೆ ಚಿಕ್ಕಸಂಕಣೇಂದ್ರನ
ತರುವಾಯಿಯೊಳಾ ಮಹೀಶನಗ್ರಜನೆನಿಪಾ
ಹಿರಿಯಸಂಕಣನರೇಂದ್ರನ
ವರತನುಜಂ ರಾಮರಾಜನಿಳೆಗರಸಾದಂ ೮

ವ॥ ಆ ರಾಮರಾಜನಾಯಕಂ ತಮ್ಮ ಕಿರಿಯಯ್ಯನಾದ ಚಿಕ್ಕಸಂಕಣನಾಯಕರಾಳಿ ಬರುತ್ತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪರಿಸ್ತರಣ ಪ್ರಜೆ ಪರಿವಾರ ಪರಿಜನ ಪುರಜನ ಮಿತ್ರಜನ ಸೇವಕಜನರ್

೬. ಎಡಬಲದ ರಾಜರುಗಳನ್ನು ಸೇರಿಸಿಕೊಂಡು ಯುದ್ಧದಲ್ಲಿ ಎದುರಾಗಿ, ಪರಾಕ್ರಮವನ್ನು ಮೆರೆದು, ಭೈರಾದೇವಿಯ ಗರ್ವವನ್ನು ಆ ರಾಜನು ಮುರಿದನು. ೭. ಹೀಗೆ ಎದುರುನಿಂತು ಕಾದಾಡಿದವರ ಸೊಕ್ಕನ್ನು ತಗ್ಗಿಸಿ ಚಿಕ್ಕ ಸಂಕಣ್ಣನಾಯಕನು ಸಜ್ಜನರು ಒಪ್ಪಿಕೊಳ್ಳುವ ಹಾಗೆ ಸಂತೋಷದಿಂದಲೂ, ಸದ್ಧರ್ಮದಿಂದಲೂ ಭೂಮಿಯನ್ನು ಕಾಪಾಡಿದನು. ವ॥ ಚಿಕ್ಕ ಸಂಕಣ್ಣನಾಯಕನು ಈ ರೀತಿಯಾಗಿ ತನಗೆ ರಾಜ್ಯಪಟ್ಟವಾದ ಶಾಲಿವಾಹನ ಶಕ ವರ್ಷ ೧೪೮೧ನೆಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೫ ರಿಂದ ಪ್ರಮೋದೂತ ಸಂವತ್ಸರದ ಕಾರ್ತೀಕ ಶುದ್ಧ ೪ರವರೆಗೆ ವರ್ಷ ೧೨ ತಿಂಗಳು ೧ರವರೆಗೂ ರಾಜ್ಯವಾಳಿ ಶಿವಸಾಯುಜ್ಯವನ್ನು ಪಡೆದನು. ಅನಂತರದಲ್ಲಿ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೪೯೩ನೆಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೫ರಲ್ಲಿ ಚಿಕ್ಕ ಸಂಕಣ್ಣನಾಯಕರ ಅಣ್ಣನಾದ ದೊಡ್ಡಸಂಕಣ್ಣನಾಯಕರ ಜೇಷ್ಠಪುತ್ರ ರಾಮರಾಜನಾಯಕನಿಗೆ ಇಕ್ಕೇರಿಯ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ೮. ಚಿಕ್ಕಸಂಕಣ್ಣನಾಯಕನ ತರುವಾಯ ಆ ರಾಜನ ಅಣ್ಣನಾದ ದೊಡ್ಡಸಂಕಣ್ಣನಾಯಕನ ಸುಪುತ್ರನಾದ ರಾಮರಾಜನು ದೊರೆಯಾದನು. ವ॥ ಆ ರಾಮರಾಜನಾಯಕನು ತನ್ನ ಚಿಕ್ಕಪ್ಪನಾದ ಚಿಕ್ಕಸಂಕಣ್ಣನಾಯಕರು

ಮುಂತಾದ ಸಮಸ್ತಜನರಂ ಪರಿಪಾಲಿಸುತ್ತುಂ ತನ್ನನುಜನಾದ ವೆಂಕಟಪ್ಪನಾಯಕನಂ ಪ್ರೀತಿಯಿಂ ನಡೆಸಿಕೊಡುತ್ತುಂ ತಮ್ಮ ಕುಮಾರರಾದ ವೀರವೊಡೆಯರ್ ಬಸವಲಿಂಗನಾಯಕರುಮಂ ಸಂತೋಷದಿಂ ಪೋಷಿಸುತ್ತುಂ ಅಂಕೆ ಝುಂಕೆ ಆಣೆ ಘೋಷಣೆ ಮುಂತಾದ ರಾಜಧರ್ಮದೊಳಾವುದರಲ್ಲಿಯುಂ ಕೊರತೆ ಬಾರದಂತು ವರ್ತಿಸುತ್ತುಂ

ಕಂ॥ ಶ್ರೀರಾಮರಾಜನೃಪನಪರಿ
ವಾರಣಹರ್ಯಕ್ಷನಾನತಾವನದಕ್ಷಂ
ಚಾರುಯಶನೆನಿಸಿ ಧರ್ಮದ
ಸಾರವನುಡುಗಿಸದೆ ಪೊರೆದನವನೀತಳಮಂ ೯

ವ॥ ಇಂತಾ ರಾಮರಾಜನಾಯಕರ್ ತಮಗೆ ರಾಜಪಟ್ಟಮಾದ ಶಾಲಿವಾಹನ ಶಕ ವರ್ಷ ೧೪೯೩ನೆಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೫ ಯಾರಭ್ಯ ಚಿತ್ರಭಾನು ಸಂವತ್ಸರದ ಮಾರ್ಗಶಿರ ಶುದ್ಧ ೪ಯವರೆಗೆ ವರ್ಷ ೧೨ ತಿಂಗಳು ೧ ಪರ್ಯಂತಂ ರಾಜ್ಯಂಗೈದು ಶಿವಸಾಯುಜ್ಯಮಂ ಪಡೆದರ್

ಆಳಿ ಬರುತ್ತಿದ್ದ ರಾಜ್ಯ, ರಾಷ್ಟ್ರ, ದೇಶ, ಕೋಶ, ವಿಸ್ತಾರ, ಪ್ರಜೆ, ಪರಿವಾರ, ಪರಿಜನ, ಪುರಜನರು, ಮಿತ್ರಜನರು, ಸೇವಕಜನರು ಮುಂತಾದ ಸಮಸ್ತ ಜನರುಗಳನ್ನೂ ಪೋಷಿಸುತ್ತಾ, ತನ್ನ ತಮ್ಮನಾದ ವೆಂಕಟಪ್ಪನಾಯಕನನ್ನು ಪ್ರೀತಿಯಿಂದ ನಡೆಸಿಕೊಳ್ಳುತ್ತಾ ಹಾಗೂ ತಮ್ಮ ಮಕ್ಕಳಾದ ವೀರವೊಡೆಯರು, ಬಸವಲಿಂಗನಾಯಕರುಗಳನ್ನು ಸಂತೋಷದಿಂದ ಕಾಪಾಡುತ್ತಾ, ಅಂಕೆ, ಮುದ್ರೆ, ಕಟ್ಟಪ್ಪಣೆ ಮತ್ತು ಆಜ್ಞೆ ಮುಂತಾದ ರಾಜಧರ್ಮಗಳಲ್ಲಿ ಯಾವುದರಲ್ಲಿಯೂ ಹಿಂದೆ ಬೀಳದಂತೆ ಇರುತ್ತಿದ್ದನು. ೯. ಶತ್ರುಗಳೆಂಬ ಆನೆಗಳಿಗೆ ಸಿಂಹದಂತೆಯೂ, ಶರಣಾಗತರನ್ನು ಕಾಪಾಡುವವನೂ ಆದ ರಾಮರಾಜನು ಹೆಚ್ಚಿನ ಕೀರ್ತಿಯುಳ್ಳವನಾಗಿ, ಧರ್ಮದ ಸಾರವನ್ನು ಕುಗ್ಗಿಸದೆ ಭೂಮಂಡಲವನ್ನು ಕಾಪಾಡಿದನು. ವ॥ ಈ ರೀತಿಯಲ್ಲಿ ರಾಮರಾಜನಾಯಕರು ತಮಗೆ ರಾಜ್ಯಪಟ್ಟಾಭಿಷೇಕವಾದ ಶಾಲಿವಾಹನ ಶಕ ವರ್ಷ ೧೪೯೩ನೆಯ ಪ್ರಮೋದೂತ ಸಂವತ್ಸರದ ಕಾರ್ತಿಕ ಶುದ್ಧ ೫ ಆರಂಭದಿಂದ ಚಿತ್ರಭಾನು ಸಂವತ್ಸರದ ಮಾರ್ಗಶಿರ ಶುದ್ಧ ೪ರವರೆಗೆ ವರ್ಷ ೧೨ ತಿಂಗಳು ೧ ರವರೆಗೂ ರಾಜ್ಯವನ್ನಾಳಿ ಶಿವಸಾಯುಜ್ಯವನ್ನು ಹೊಂದಿದರು.

# ಪಂಚಮಾಶ್ವಾಸಂ

ವ|| ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೫೦೫ನೆಯ ಚಿತ್ರಭಾನು ನಾಮಸಂವತ್ಸರದ ಮಾರ್ಗಶಿರ ಶುದ್ಧ ೫ಯಲ್ಲಿ ದೊಡ್ಡ ಸಂಕಣನಾಯಕರ ಜೇಷ್ಠಪುತ್ರರಾದ ರಾಮರಾಜನಾಯಕರ್ಗೆ ಸಹೋದರರಾದ ವೆಂಕಟಪ್ಪನಾಯಕರ್ಗೆ ಇಕ್ಕೇರಿಪುರವರದರಮನೆಯೊಳ್ ರಾಜಪಟ್ಟಂ

ಕಂ|| ಆ ರಾಮರಾಜನಾಯಕ
ವೀರನನಂತರದೆ ತತ್ಸಹೋದರನೆನಿಪಾ
ಧೀರವೆಂಕಟನೃಪಂ ರಿಪು
ಭೈರವನವನೀಶವರ್ಯನಿಳೆಗರಸಾದಂ ೧

ಇರೆ ತದ್ವೆಂಕಟಧರಣೀ
ಶ್ವರಗೊಗೆದಂ ಪುತ್ರನೊರ್ವನತಿಶಯತೇಜಂ
ನಿರುಪಮಸುಗುಣಸಮಾಜಂ
ದೊರೆಗಳೊಳಧಿರಾಜನಿಳೆಗೆ ನೂತ್ನಮನೋಜಂ ೨

ಅನುಪಮಶಿಶುರೂಪದೊಳೊಗೆ
ದಿನನೆನೆ ಶೋಭಿಸುವ ತತ್ಕುಮಾರಂಗೊಲ್ದಾ
ಜನಪಂ ಭದ್ರಪನಾಯಕ
ನೆನಿಪೊಳ್ಪೆಸರಿಟ್ಟು ಪೊರೆವನತಿಮುದದಿಂದಂ ೩

ವ|| ಮತ್ತಮದಲ್ಲದಾ ವೆಂಕಟಪ್ಪನಾಯಕಂಗೊರ್ವ ಪೆಣ್ಮಣಿಯುದಿಸಲಾಕೆಗೆ ಹಿರಿಯಮ್ಮನೆಂದು ಪೆಸರಿಟ್ಟು ಪೋಷಿಸಿ ಕತಿಪಯವತ್ಸರಂಗಳ್ ಪೋಗಲೊಡನಾಕೆಯಂ ಜಂಬೂರ ವಿರುಪಣವೊಡೆಯರ್ಗೆ

ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ರೀಮನ್ನೃಪಶಾಲಿವಾಹನ ಶಕ ವರ್ಷ ೧೫೦೫ನೆಯ ಚಿತ್ರಭಾನು ನಾಮಸಂವತ್ಸರದ ಮಾರ್ಗಶಿರ ಶುದ್ಧ ೫ರಲ್ಲಿ ದೊಡ್ಡ ಸಂಕಣ್ಣನಾಯಕರ ಜೇಷ್ಠಪುತ್ರರಾದ ಹಾಗೂ ರಾಮರಾಜನಾಯಕರ ಸಹೋದರರಾದ ವೆಂಕಟಪ್ಪನಾಯಕರಿಗೆ ಇಕ್ಕೇರಿ ಪಟ್ಟಣದ ಅರಮನೆಯಲ್ಲಿ ರಾಜ್ಯದ ಪಟ್ಟಾಭಿಷೇಕವಾಯಿತು. ೧. ವೀರನಾದ ರಾಮರಾಜನಾಯಕನ ಬಳಿಕ ಅವನ ಸಹೋದರನಾದ ವೆಂಕಟಪ್ಪನಾಯಕನು ಶತ್ರುಗಳಿಗೆ ಭಯಂಕರನೂ, ರಾಜಶ್ರೇಷ್ಠನೂ ಎನ್ನಿಸಿಕೊಂಡು ರಾಜ್ಯಕ್ಕೆ ಅರಸನಾದನು. ೨. ಆ ವೆಂಕಟಪ್ಪನಾಯಕನಿಗೆ ಒಬ್ಬ ಮಗನು ಹುಟ್ಟಿದನು. ಆ ಪುತ್ರನು ಬಹಳ ತೇಜಸ್ವಿ, ಅಸಮಾನ ಗುಣಗಳುಳ್ಳವನು, ರಾಜಾಧಿರಾಜನು, ಭೂಮಿಗೆ ಹೊಸ ಮನ್ಮಥನು. ೩. ಅಸಮಾನವಾದ ಶಿಶುರೂಪದಿಂದ ಹುಟ್ಟಿದ ಸೂರ್ಯನೆಂಬಂತೆ ಶೋಭಿಸುವ ಆ ಕುಮಾರನಿಗೆ ಆ ರಾಜನು ಭದ್ರಪ್ಪನಾಯಕನೆಂಬ ಒಳ್ಳೆಯ ಹೆಸರನ್ನಿಟ್ಟು ಅತಿ ಸಂತೋಷದಿಂದ ಕಾಪಾಡಿದನು. ವ|| ಮತ್ತೂ ಅಲ್ಲದೆ ವೆಂಕಟಪ್ಪನಾಯಕನಿಗೆ ಒಬ್ಬ ಹೆಣ್ಣುಮಗಳು ಜನಿಸಿದಳು. ಆಕೆಗೆ ಹಿರಿಯಮ್ಮನೆಂದು ನಾಮಕರಣ ಮಾಡಿ ಪೋಷಿಸಿದನು. ಹಲವು ವರ್ಷಗಳು ಕಳೆದನಂತರ

ವಿವಾಹಮಂ ರಚಿಸಲಾ ಪೆಣ್ಮಣಿಯ ಬಸಿರೊಳೊರ್ವ ಪುತ್ರನುದಿಸಲಾತಂಗೆ ಸದಾಶಿವಯ್ಯನೆಂದು ಪೆಸರಿಟ್ಟು ಸಂರಕ್ಷಿಸುತ್ತುಂ ನಿಜಕುಮಾರ ಭದ್ರಪನಾಯಕಂಗಂ ರಾಯಸಂಬಂಧಿಯಪ್ಪ ಬೇಲೂರು ವೆಂಕಟಾದ್ರಿನಾಯಕನ ಕುಮಾರಿ ಬಂಗಾರಮ್ಮನೆಂಬ ಪೆಣ್ಮಣಿಯಂ ದಾನಿವಾಸದ ಸೀಮೆಯ ಮಳಲ ಹೊಳೆಯೆಂಬ ಸ್ಥಳದೊಳತ್ಯಂತ ಸಂಭ್ರಮದಿಂ ವಿವಾಹಮಂ ರಚಿಸಿಯವರ್ ಬಳುವಳಿಗಿತ್ತ ಜಾಗರದ ಸೀಮೆ ಕೋಂಟೆಯಂ ಪರಿಗ್ರಹಿಸಿ ತತ್ಕೋಂಟೆಯಂ ಬಲಿಸಿ ಬಳಿಕ್ಕಿಕ್ಕೇರಿಯ ಪುರವರಕ್ಕೆಯ್ತಂದು ಕುಮಾರಭದ್ರಪನಾಯಕನುಮಂ ತನ್ನಗ್ರಜ ರಾಮರಾಜನಾಯಕನ ಕುಮಾರರಪ್ಪ ವೀರವೊಡೆಯರ್ ಬಸವಲಿಂಗನಾಯಕರುಮಂ ತಮ್ಮ ಕಿರಿಯಯ್ಯನಾದ ಚಿಕ್ಕಸಂಕಣನಾಯಕರ ಕುಮಾರನಾದ ಸಿದ್ದಪ್ಪನಾಯಕನುಮಂ ಪೋಷಿಸುತ್ತುಂ ಸುಖದಿಂ ರಾಜ್ಯಂಗೆಯ್ಯುತ್ತುಮಿರಲಾ ಪ್ರಸ್ತಾವದೊಳ್

ಚಂ॥ ಮೆರೆವ ವಿಜಾಪುರಾಧಿಪತಿಯಪ್ಪ ತುರುಷ್ಕರ ಪಾತುಶಾಹನಂ
ದಿರದೆ ವಜೀರರಂ ನೆರಪಿ ದಕ್ಷಿಣರಾಜ್ಯವನೆಯ್ದೆ ಸಾಧ್ಯಮಂ
ವಿರಚಿಪುದೆಂದವರ್ಗುರೆ ನಿಯಾಮಿಸಿ ವೀಳಯವಿತ್ತು ಕೂಡನಂ
ತರುಚಿರ ಮತ್ತಹಸ್ತಿಹಯಸೈನ್ಯವನೆಯ್ದೆ ತೆರಳ್ಚೆ ಖ್ಯಾತಿಯಿಂ ೪

ಕಂ॥ ಮಂಜುಳಖಾನಂ ಕರಮಾ
ರಂಜಿಪ ಮಹಮುದ್ದಖಾನ ಬಹಿಲಿಮಖಾನಂ
ಸಂಜರಖಾನಂ ಹಯಮದ
ಕುಂಜರತತಿಪತ್ತಿವೆರಸು ಶಾಕೆಯಖಾನಂ ೫

ಆಕೆಯನ್ನು ಜಂಬೂರ ವಿರುಪಣ್ಣ ಒಡೆಯರಿಗೆ ಕೊಟ್ಟು ವಿವಾಹವಾಯಿತು. ಈಕೆಯ ಗರ್ಭದಲ್ಲಿ ಒಬ್ಬ ಮಗನು ಜನಿಸಲು ಆತನಿಗೆ ಸದಾಶಿವಯ್ಯನೆಂದು ಹೆಸರಿಟ್ಟು ಕಾಪಾಡುತ್ತಿದ್ದರು. ತನ್ನ ಕುಮಾರನಾದ ಭದ್ರಪ್ಪನಾಯಕನಿಗೆ ರಾಯರ ಸಂಬಂಧಿಯಾದ ಬೇಲೂರು ವೆಂಕಟಾದ್ರಿನಾಯಕನ ಕುಮಾರಿ ಬಂಗಾರಮ್ಮನೆಂಬ ಕುವರಿಯನ್ನು ತಂದುಕೊಂಡು ದಾನಿವಾಸದ ಸೀಮೆಯ ಹತ್ತಿರ ಇರುವ 'ಮಳಲಹೊಳೆ' ಎಂಬ ಪ್ರದೇಶದಲ್ಲಿ ಅತ್ಯಂತ ವೈಭವದಿಂದ ವಿವಾಹವನ್ನು ನೆರವೇರಿಸಿದರು. ಬಳುವಳಿಯ ಮೂಲಕ ಬಂದ ಜಾಗರದ ಸೀಮೆ ಕೋಟೆಯನ್ನು ಸ್ವೀಕರಿಸಿ, ಆ ಕೋಟೆಯನ್ನು ಬಲಪಡಿಸಿ, ಬಳಿಕ ಇಕ್ಕೇರಿಯ ಪಟ್ಟಣಕ್ಕೆ ಬಂದು ಕುಮಾರನಾದ ಭದ್ರಪ್ಪನಾಯಕನನ್ನೂ, ತನ್ನ ಅಣ್ಣ ರಾಮರಾಜನಾಯಕನ ಕುಮಾರರಾದ ವೀರಒಡೆಯರು-ಬಸವಲಿಂಗನಾಯಕರುಗಳನ್ನು ಹಾಗೂ ತಮ್ಮ ಕಿರಿಯ ಚಿಕ್ಕಪ್ಪನಾದ ಚಿಕ್ಕಸಂಕಣ್ಣನಾಯಕನ ಮಗನಾದ ಸಿದ್ದಪ್ಪನಾಯಕನನ್ನೂ ಪೋಷಣೆ ಮಾಡುತ್ತಾ ಸುಖದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಆ ಸಂದರ್ಭದಲ್ಲಿ
೪. ಬಿಜಾಪುರದ ಒಡೆಯನಾದ ತುರುಕ ಪಾತುಶಾಹನು ಮಂತ್ರಿಗಳೊಡನೆ ಸೇರಿ ದಕ್ಷಿಣ ರಾಜ್ಯವನ್ನು ವಶಪಡಿಸಿಕೊಳ್ಳಬೇಕೆಂದು ನಿಯಮಿಸಿ ವೀಳೆಯಕೊಟ್ಟನು. ಜೊತೆಗೆ ಅಸಂಖ್ಯಾತವಾದ ಮದ್ದಾನೆಗಳ ಮತ್ತು ಕುದುರೆಗಳ ಸೈನ್ಯವನ್ನು ಕಳುಹಿಸಿದನು.
೫. ಮಂಜುಳಖಾನ, ಮಹಮುದ್ದಖಾನ, ಬಹಿಲಿಮಖಾನ ಮತ್ತು ಕುದುರೆ, ಆನೆ,

ಒಡನೆ ಸಲಾಬಿತಖಾನಂ
ಕಡುಹಿಂ ನಿಜಸೈನ್ಯಸಹಿತಮಂಬರಖಾನಂ
ಪಡೆವೆರಸಂಕುಶಖಾನಂ
ಸಡಗರದಿಂ ಸೈನ್ಯಗೂಡಿದಂಮದಖಾನಂ ೬

ಚಂ॥ ನೆರೆದಿನಿಬರ್ ವಜೀರರುಗಳೆಳ್ತರೆ ಹೈದರಮಲ್ಲಿನಾಯಕಂ
ಬರಿಗಿಯ ದೇವಿನಾಯಕನುಮೆಯ್ದೆ ಸಿಡಿಲ್ಗಳ ಮೊತ್ತದಂತೆ ಭೀ
ಕರತರತಂತ್ರಮಾರ್ಭಟಿಸುತೆಯ್ತರೆ ಸೈನ್ಯಪದೋಚ್ಚ ಧೂಳಿಯಂ
ಬರವ ಮುಸುಂಕೆ ಬಂದುದು ಮಹೋಗ್ರ ತುರುಷ್ಕರ ದಾಳಿ ತೀವ್ರದಿಂ ೭

ಕಂ॥ ಕಡೆಗಾಲದಗ್ರದೊಳ್ ಮಿಗೆ
ಕಡಲ್ಗಳ್ ತೀವ್ರದೊಳೆ ಮೇರೆವರಿವಂತಿರೆ ಪೆ
ರ್ಪಡೆವೆರಸೈದುತ್ತನಿಬರ್
ಜಡೆಯದ ಕೋಂಟೆಯ ಸಮೀಪಮಂ ಸಾರುತ್ತುಂ ೮

ಮುತ್ತಿಗೆಯನಿಕ್ಕೆ ಕೇಳ್ದು ಸು
ವೃತ್ತಂ ವೆಂಕಟನೃಪಾಲನರಿಕುಲಕಾಲಂ
ಪತ್ತಿಚಯವೆರಸು ತದ್ದು
ರ್ವೃತ್ತರ ಸೇನಾಸಮೂಹಕಂದಿದಿರಾಂತಂ ೯

ವ॥ ಇಂತಾ ವೆಂಕಟಪ್ಪನಾಯಕಂ ಜಡೆಯದ ಕೋಂಟೆಯಂ ವೇಷ್ಟೈಸಿದ ತುರುಷ್ಕರ ಸೈನ್ಯಕ್ಕಿದಿರ್ಚಿ ನಿಂದು ಕೈಗೆಯ್ದಾಸಮರಾಂಗಣದೊಳಂಬರಖಾನನಂ ಕುಂಬಿಡಿಸಿ ಅಂಕುಶಖಾನನ

ಕಾಲಾಳುಗಳಿಂದ ಕೂಡಿದ ಶಾತೇಯಖಾನ. ೬. ಸಲಾಬಿತಖಾನ, ತನ್ನ ಸೈನ್ಯದಿಂದ ಕೂಡಿದ ಅಂಬರಖಾನ, ಸೈನ್ಯ ಸಹಿತನಾದ ಅಂಕುಶಖಾನ, ಸೇನಾಸಮೇತನಾದ ಅಹಮ್ಮದಖಾನ. ೭. ಇಷ್ಟು ಮಂದಿ ಮಂತ್ರಿ ಸೇನಾನಾಯಕರುಗಳು ಬರುತ್ತಿರಲು ಹೈದರಮಲ್ಲಿನಾಯಕನು ಮತ್ತು ಬರಿಗಿಯ ದೇವಿನಾಯಕನು ಒಟ್ಟುಗೂಡಿಕೊಂಡು ಸಿಡಿಲುಗಳ ಗುಂಪಿನ ಹಾಗೆ ಭಯಂಕರವಾಗಿ ಆರ್ಭಟಿಸುತ್ತಾ ಬರಲು ಸೈನ್ಯದ ಕಾಲ್ತುಳಿತದಲ್ಲಿ ಎದ್ದು ಧೂಳಿ ಆಕಾಶವನ್ನು ಆವರಿಸಲು, ಅತ್ಯಂತ ಉಗ್ರವಾದ ತುರುಕರ ಧಾಳಿಯು ತೀವ್ರವಾಗಿ ಬಂದಿತು. ೮. ಪ್ರಳಯಕಾಲದಲ್ಲಿ ಸಮುದ್ರಗಳು ಮೇರೆ ಮೀರಿ ಹರಿಯುವ ಹಾಗೆ ದೊಡ್ಡ ಸೈನ್ಯವನ್ನು ಸೇರಿಸಿ ಅಷ್ಟು ಮಂದಿಯೂ ಜಡೆಯದ ಕೋಟೆಯ ಸಮೀಪವನ್ನು ಸೇರಿದರು. ೯. ತುರುಕರು ಮುತ್ತಿಗೆ ಹಾಕಿದ ಸುದ್ದಿಯನ್ನು ಕೇಳಿ ಒಳ್ಳೆಯ ನಡತೆಯವನೂ ಶತ್ರುಸಮೂಹಕ್ಕೆ ಯಮನೂ ಆದ ವೆಂಕಟಪ್ಪನಾಯಕನು ಕಾಲಾಳು ಸೈನ್ಯದೊಂದಿಗೆ ಆ ದುಷ್ಟರ ಸೇನಾಸಮೂಹಕ್ಕೆ ಎದುರಾದನು. ವ॥ ಈ ರೀತಿ ವೆಂಕಟಪ್ಪನಾಯಕನು ಜಡೆಯ ಕೋಟೆಯನ್ನು ಆಕ್ರಮಿಸಿದ ತುರುಕರ ಸೈನ್ಯಕ್ಕೆ ಎದುರಾಗಿ ನಿಂತು ಹೋರಾಡಿದನು. ರಣರಂಗದಲ್ಲಿ ಕೈಮಾಡಿದ ಅಂಬರಖಾನನನ್ನು ಸೋಲಿಸಿ, ಅಂಕುಶಖಾನನ ಸೊಕ್ಕನ್ನು ಮುರಿದು, ಸಲಾಬತಖಾನನನ್ನು ಬಗ್ಗಿಸಿ, ಬಹಿಲಿಮಖಾನನ್ನು ಅಂದಗೆಡಿಸುವಂತೆ ಮಾಡಿ,

ಬಿಂಕಮಂ ಮುರಿದು ಸಲಾಬತಖಾನನಂ ನಿಲವಿಕೆಗೆಡಿಸಿ ಬಹಿಲಿಮಖಾನನಂ ಬಹಿರ್ಮುಖನೆನಿಸಿ ಮಂಜುಳಖಾನನಂ ರಂಜನೆಗೆಡಿಸಿ ಶಾತೆಯಖಾನನ ಲೂಟಿಯಂ ನಿಲಿಸಿ ಮಹಮುದಖಾನನಹಮಿಕೆಯಂ ತೀರ್ಚಿ ಅಂಮದಖಾನನ ಹೆಮ್ಮೆಯಂ ಮುರಿದು ಸಂಜರಖಾನನಂ ಭಂಜನೆಗೈದು ಸರ್ಜಾಖಾನನ ಗರ್ಜನೆಯಂ ನಿಲಿಸಿ ಹೈದರಮಲ್ಲಿನಾಯಕನಂ ಕೈದುವನಿಕ್ಕಿಸಿ ಬರಿಗಿಯ ದೇವೀನಾಯಕನಂ ಪರಾಭವಂಗೈದು ಇಂತುರುಬಿ ತರುಬಿದ ತುರುಷ್ಕಸೈನ್ಯಸಾಗರಮಂ ಕಲಂಕಲವರ್ ನಿಂದು ನಿತ್ತರಿಸಲಮ್ಮದೆ ಮುರಿದು ಮುತ್ತಿಗೆದೆಗೆದ ನಂತರಂ

ಕಂ|| ಮುತ್ತಂ ಹನುಮನರೇಂದ್ರನ
ಪತ್ತಿಚಯಂವೆರಸು ತುಡುಗುಣಿಯ ಕೋಂಟೆಯುಮಂ
ಮುತ್ತಿದ ಯವನರ ಸೈನ್ಯದ
ಮೊತ್ತವನಂಕದೊಳೆ ಸದೆದು ಮುರಿದೋಡಿಸಿದಂ ೧೦

ಮತ್ತೆಸೆವ ಹಾನಗಲ್ಲಂ
ಗುತ್ತಿಯನಾವರಿಸಿದುರುತುರುಷ್ಕರ ಫೌಜಂ
ತತ್ತರದರಿದರಿಕದಳೀ
ಮತ್ತಗಜಂ ವೆಂಕಟೇಂದ್ರನಿರಿದೋಡಿಸಿದಂ ೧೧

ವ|| ಮತ್ತಮದಲ್ಲದಾ ವೆಂಕಟಪ್ಪನಾಯಕಂ ರಾಮರಾಯರ್ ಪಾಲ್ಬೆಣ್ಣೆಯುಂಬಳಿಗೆಂದು ಮುನ್ನಿತ್ತ ಮಾಸೂರ ಸೀಮೆಯಂ ಕಟ್ಟಿಕೊಳಲ್ಕೆದಿದ ಮಂಜುಳಖಾನನಂ ಮುರಿದೆಂಜಲಖಾನನೆಂದು ಪೆಸರಿಟ್ಟಂತುಮಲ್ಲದವನಂ ಬೆಂಕೊಂಡು ಬಡಿದ್ಯೆದಿ

ಮಂಜುಳಖಾನನನ್ನು ಸಂತೋಷವಿಲ್ಲದ ಹಾಗೆ ಮಾಡಿ, ಶಾತೆಯಖಾನನ ಲೂಟಿಯನ್ನು ನಿಲ್ಲಿಸಿ, ಮಹಮ್ಮುದಖಾನನ ಗರ್ವವನ್ನು ಭಂಗಮಾಡಿ, ಅಹಮ್ಮದಖಾನನ ಹೆಮ್ಮೆಯನ್ನು ಮುರಿದು, ಸಂಜರಖಾನನನ್ನು ಮುರಿದು, ಸರ್ಜಖಾನನ ಗರ್ಜನೆಯನ್ನು ನಿಲ್ಲಿಸಿ, ಹೈದರಮಲ್ಲಿನಾಯಕನು ಆಯುಧವನ್ನು ಕೆಳಗೆ ಹಾಕುವಂತೆ ಮಾಡಿ, ಬರಿಗಿಯ ದೇವೀನಾಯಕನನ್ನು ಸೋಲಿಸಿ ಈ ರೀತಿ ಮುನ್ನುಗ್ಗಿ ಮುತ್ತಿಗೆ ಹಾಕಿದ ತುರುಷ್ಕರ ಸೈನ್ಯವೆಂಬ ಸಮುದ್ರವನ್ನು ಕಲಕಿದನು. ಆಗ ಎದುರಾಳಿಗಳು ನಿಲ್ಲಲಾರದೆ ಮುತ್ತಿಗೆಯನ್ನು ತೆಗೆದರು. ೧೦. ಆಮೇಲೆ ಹನುಮರಾಜನ ಸೈನ್ಯದೊಂದಿಗೆ ಉಡುಗುಣಿಯ ಕೋಟೆಯನ್ನು ಮುತ್ತಿದ ಯವನರ ಸೈನ್ಯದ ಮೊತ್ತವನ್ನು ಯುದ್ಧದಲ್ಲಿ ಹೊಡೆದು ಸೋಲಿಸಿ ಓಡಿಸಿದನು. ೧೧. ಅನಂತರ ಹಾನಗಲ್ಲನ್ನೂ, ಗುತ್ತಿಯನ್ನೂ ಆಕ್ರಮಿಸಿದ ಸೈನ್ಯವನ್ನೂ ಸಂಹರಿಸಿ, ಶತ್ರುಗಳೆಂಬ ಬಾಳೆಯ ತೋಟಕ್ಕೆ ಮದ್ದಾನೆಯಂತಿರುವ ವೆಂಕಟಪ್ಪನಾಯಕನು ಓಡಿಸಿದನು. ವ|| ಮತ್ತೆ ಅದೂ ಅಲ್ಲದೆ ವೆಂಕಟಪ್ಪನಾಯಕನು ರಾಮರಾಯರು ಹಾಲು ಬೆಣ್ಣೆಗೆಂದು ಉಂಬಳಿಯಾಗಿ ನೀಡಿದ ಮಾಸೂರ ಸೀಮೆಯನ್ನು ಹಿಡಿದುಕೊಳ್ಳಲು ಬಂದ ಮಂಜುಳಖಾನನನ್ನು ಮುರಿದು ಅವನಿಗೆ ಎಂಜಲಖಾನನೆಂದು ಹೆಸರಿಟ್ಟನು! ಅಲ್ಲದೆ

ಕಂ॥ ಗಡಿಯಂ ದಾಂಟಿಸಿ ತರುಬಿದ
ಪಡೆಯಂ ಸಂಹರಿಸಿ ಹಾನಗಲ್ಲವನಿಯೊಳಂ
ತಡೆಯದೆ ತೊಲಗದ ಕಂಬವ
ನೆಡಿಸಿ ಮಹಾದ್ಭುತ ಪರಾಕ್ರಮವನುರೆ ಮೆರೆದಂ ೧೨

ವ॥ ಇಂತತ್ಯಂತ ಸಾಹಸಂಗೈದು ಭುಜಬಲಪರಾಕ್ರಮದಿಂ ರಾಜ್ಯಂಗೆಯ್ಯುತಿರ್ಪ ವೆಂಕಟಪ್ಪನಾಯಕರ ಪ್ರತಾಪಾತಿಶಯಮಂ ವಿಜಾಪುರದ ಪಾತುಶಾಹಂ ಕೇಳ್ದು ಕೆರಳ್ದು ತನ್ನೃಪನ ರಾಜ್ಯಮಂ ವಶಂಗೆಯ್ವುದೆಂದು ನಿಯಾಮಿಸಿ ಮಗುಳ್ದ ಪರಿಮಿತಸೇನಾಸಮುದ್ರಮಂ ತೆರಳ್ಚಲವರ್ ಗಡಿಯಂ ದಾಂಟಿ ಮಿಕ್ಕು ಮೀರಿ ದಾಳಿವರಿಯುತ್ತತಿಸಮೀಪಕ್ಕೈತಂದರೆಂಬ ವಾರ್ತೆಯಂ ಕೇಳ್ದತ್ಯಂತ ಕೋಪಾಟೋಪದಿಂದಾ ಪ್ರಸ್ಥಾನದೊಳ್

ಕಂ॥ ಏಕಾಂಗದಿ ಪೊಕ್ಕಹಿತಾ
ನೀಕವನಿರ್ಕಯ್ಯ ಖಡ್ಗದಿಂ ಕುರಿದರಿದಾ
ಶ್ರೀಕರ ವೆಂಕಟಭೂಪಂ
ದೋಖಂಡೇರಾಯನೆಂಬ ಬಿರುದಂ ಮೆರೆದಂ ೧೩

ವ॥ ಮತ್ತಮಾ ವೇಳೆಯೊಳ್

ಕಂ॥ ಅಸಮಬಲ ವೆಂಕಟೋರ್ವಿಪ
ನಸಿಯೆಂಬಸಿತಾಹಿ ಯುದ್ಧರಂಗದೊಳಹಿತ
ಪ್ರಸರದೆಸೆವುಸಿರೆಲರನಸ
ವಸದಿಂ ನುಂಗಿದುದು ನಿಮಿರ್ದು ಪಸಿವಡಗುವಿನಂ ೧೪

ವ॥ ಮತ್ತಮದಲ್ಲದೊಂದವಸರದೊಳ್ ತುರುಷ್ಕಯುದ್ಧದೊಳ್

ಅವನನ್ನು ಎಲ್ಲಿಗೂ ಬಿಡದೆ ಹಿಂಬಾಲಿಸಿ ೧೨. ಗಡಿಯನ್ನು ದಾಟಿಸಿ, ತಡೆದ ಸೈನ್ಯವನ್ನು ಸಂಹರಿಸಿ, ಹಾನಗಲ್ಲಿನ ಭೂಮಿಯಲ್ಲಿ ಒಂದು ಸ್ಥಿರವಾದ ವಿಜಯಸ್ತಂಭವನ್ನು ಸ್ಥಾಪಿಸಿ, ತನ್ನ ಅದ್ಭುತವಾದ ಪರಾಕ್ರಮವನ್ನು ಮೆರೆದನು. ವ॥ ಈ ರೀತಿಯಾಗಿ ಅತ್ಯಂತ ಪರಾಕ್ರಮದಿಂದ ಮೆರೆದು ಸಾಹಸದಿಂದ ರಾಜ್ಯವನ್ನು ಪಡೆಯುತ್ತಿದ್ದ ವೆಂಕಟಪ್ಪನಾಯಕನ ಪ್ರತಾಪವನ್ನೂ, ಕೀರ್ತಿಯನ್ನೂ ಬಿಜಾಪುರದ ಬಾದಷಹನು ಕೇಳಿ ಸಿಟ್ಟುಗೊಂಡನು. ಅಪರಿಮಿತವಾದ ಸೇನೆಯನ್ನು ಕಳುಹಿಸಿ ಅವನ ರಾಜ್ಯವನ್ನು ವಶಪಡಿಸಿಕೊಳ್ಳಬೇಕೆಂದು ಕಟ್ಟಪ್ಪಣೆ ಮಾಡಿದನು. ಆ ಸೈನಿಕರು ತನ್ನ ಗಡಿಯನ್ನು ದಾಟಿ ಬಂದು ಧಾಳಿ ಮಾಡುತ್ತಿರುವರೆಂಬ ವರ್ತಮಾನವನ್ನು ಗೂಢಚಾರದಿಂದ ತಿಳಿದು ಕೋಪಗೊಂಡವನಾಗಿ ೧೩. ವೆಂಕಟಪ್ಪನಾಯಕನು ಏಕಾಂಗಿಯಾಗಿ ಶತ್ರುಸೈನ್ಯದ ಒಳಹೊಕ್ಕು ಎರಡೂ ಕೈಗಳಿಂದಲೂ ಕತ್ತಿಹಿಡಿದು ಸೈನಿಕರನ್ನು ಕತ್ತರಿಸಿ ಹಾಕಿದ್ದರಿಂದ "ದೋಖಂಡೇರಾಯ"ನೆಂಬ ಬಿರುದನ್ನು ಪಡೆದನು. ವ॥ ಮತ್ತೆ ಆ ಸಮಯದಲ್ಲಿ ೧೪. ಅಸಮಾನ ಬಲಶಾಲಿಯಾದ ವೆಂಕಟಪ್ಪನಾಯಕನ ಖಡ್ಗವೆಂಬ ಕೃಷ್ಣಸರ್ಪವು ಯುದ್ಧರಂಗದಲ್ಲಿ ಶತ್ರುಸಮೂಹದ ಉಸಿರ ಗಾಳಿಯನ್ನು ತನ್ನ ಹಸಿವು ಇಂಗುವ ತನಕವೂ ಆಸಕ್ತಿಯಿಂದ ನುಂಗಿತು. ವ॥ ಮತ್ತೆ

ಕಂ॥ ಪುದಿದೆಣ್ಣೆದಲೆಯೊಳೇಕಾಂ
ಗದೆ ಬೆತ್ತಲೆಗುದುರೆಯೇರ್ದು ದುವ್ವಾಳಿಸುತಾ
ಕಿದ ಪಾತುಶಾಹಫೌಜಂ
ಸದೆದೋಡಿಸಿ ಜಯವನಾಂತನಾ ವೆಂಕನೃಪಂ ೧೫

ವ॥ ಮತ್ತಮಾ ಕಾಲದೊಳ್

ಕಂ॥ ಉರವಣಿಸಿ ಸೈನ್ಯಸಹಿತಂ
ಧುರದೊಳ್ ಮಾರ್ಮಲೆತು ನಿಂದು ಕೈಗೆಯ್ದು ಲಸ
ದ್ಬರಿದಗ ವಜೀರನಂ ಮದ
ಕರಿಸಹಿತಂ ಪಿಡಿದು ಮೆರೆದನತಿವಿಕ್ರಮಮಂ ೧೬

ವ॥ ಮತ್ತಮದಲ್ಲದೊಂದವಸರದೊಳ್

ಕಂ॥ ವರಪಾತುಶಾಹ ಸೈನ್ಯೋ
ತ್ಕರವನೆರಳ್ಕಯ್ಯೊಳಾಂತ ನೇಜಗಳಿಂ ಕೋ
ಡಿರಿದು ಕಾಲ್ದೆಗೆಸಿ ವೆಂಕಟ
ನರಪತಿ ದೋನೇಜನೆಂಬ ಬಿರುದಂ ಮೆರೆದಂ ೧೭

ವ॥ ಇಂತೆರಳ್ಮೂರ್ ಸೂಳೆಯ್ದಿದ ಪಾತುಶಾಹನ ಫೌಜಂ ಪುಡಿಗೆಯ್ದು ಪಲಾಯನಂಗೊಳಿಸಿ ಪ್ರಖ್ಯಾತಿಯಂ ಪಡೆದಾ ವೆಂಕಟಪ್ಪನಾಯಕಂ ತನ್ನ ಕಿರಿಯಯ್ಯ ಚಿಕ್ಕಸಂಕಣನಾಯಕರ ಪುತ್ರನಾದ ಸಿದ್ದಪ್ಪನಾಯಕಂಗಿರ್ವರ್ ಕನ್ಯಾಶಿರೋಮಣಿಗಳಂ ವಿವಾಹಮಂ ರಚಿಸಿ ಸ್ವಪುತ್ರ ಭದ್ರಪನಾಯಕಂಗಂಡಿಗೆಯವರಲ್ಲಿ ತಂದ ಪೆಣ್ಮಣಿಯ ಬಸರೊಳಿರ್ವರ್ ಪುತ್ರರುದಿಸಲವರ್ಗೆ ರಾಮಲಿಂಗನಾಯಕ ವೀರಭದ್ರನಾಯಕರೆಂದು ನಾಮಕರಣಮಂ ರಚಿಸಿ ಸಂತಸದಿಂ

ಅದೂ ಅಲ್ಲದೆ ಒಂದು ಕಾಲದಲ್ಲಿ ತುರುಕರ ಯುದ್ಧದಲ್ಲಿ ೧೫. ತಲೆಗೆ ಎಣ್ಣೆ ಎರೆದುಕೊಂಡು, ಜೀನನ್ನು ಹಾಕದ ಕುದುರೆಯನ್ನು ಹತ್ತಿಕೊಂಡು ಓಡಿಸುತ್ತಾ ಆಕ್ರಮಿಸಿದ ಬಾದಶಹ ಸೈನ್ಯವನ್ನು ಹೊಡೆದು ಓಡಿಸಿ, ಆ ವೆಂಕಟಪ್ಪನಾಯಕನು ಜಯವನ್ನು ಪಡೆದನು. ವ॥ ಮತ್ತೆ ಆ ಕಾಲದಲ್ಲಿ ೧೬. ಸೈನ್ಯಸಮೇತನಾಗಿ ಮುನ್ನುಗ್ಗಿಬಂದು ಸೊಕ್ಕಿನಿಂದ ಯುದ್ಧಮಾಡಿದ ಬರಿದಗನೆಂಬ ಮಂತ್ರಿಯನ್ನು ಮದ್ದಾನೆ ಸಹಿತವಾಗಿ ಸೆರೆಹಿಡಿದು ಹೆಚ್ಚಿನ ಪರಾಕ್ರಮವನ್ನು ಮೆರೆದನು. ವ॥ ಮತ್ತೆ ಅದಲ್ಲದೆ ಒಂದು ಸಲ ೧೭. ಬಾದಷಹನ ಸೈನ್ಯಸಮೂಹವನ್ನು ಎರಡೂ ಕೈಗಳಲ್ಲಿ ಹಿಡಿದ ಭರ್ಚಿಗಳಿಂದ ಇರಿದು ಓಡಿಸಿ ವೆಂಕಟಪ್ಪನಾಯಕನು "ದೋನೇಜ"ನೆಂಬ ಬಿರುದನ್ನು ಪಡೆದು ಮೆರೆದನು. ವ॥ ಈ ರೀತಿ ಎರಡು-ಮೂರು ಬಾರಿ ಬಾದಷಹನ ಸೈನ್ಯವನ್ನು ಪುಡಿಮಾಡಿ, ಪಲಾಯನಗೊಳಿಸಿ ಕೀರ್ತಿಯನ್ನು ಪಡೆದನು. ಹೀಗೆ ಮೆರೆದ ವೆಂಕಟಪ್ಪನಾಯಕನು ತನ್ನ ಕಿರಿಯ ಚಿಕ್ಕಪ್ಪನಾದ ಚಿಕ್ಕಸಂಕಣ್ಣನಾಯಕರ ಪುತ್ರನಾದ ಸಿದ್ದಪ್ಪನಾಯಕನಿಗೆ ಇಬ್ಬರು ಕನ್ಯೆಯರನ್ನು ತಂದುಕೊಂಡು ವಿವಾಹವನ್ನು ನೆರವೇರಿಸಿದನು. ತನ್ನ ಪುತ್ರ ಭದ್ರಪ್ಪನಾಯಕನಿಗೆ ಅಂಡಿಗೆಯಿಂದ ಹೆಣ್ಣನ್ನು ತಂದು ಮದುವೆ ಮಾಡಿದನು. ಈಕೆಯ ಗರ್ಭದಲ್ಲಿ ಪುತ್ರರೀರ್ವರು ಜನಿಸಲು ಅವರಿಗೆ ರಾಮಲಿಂಗನಾಯಕ ಮತ್ತು ವೀರಭದ್ರನಾಯಕರೆಂಬುದಾಗಿ ನಾಮಕರಣವನ್ನು

ಪೋಷಿಸುತ್ತಿರಲವರಿರ್ವರೊಳ್ ಪಿರಿಯನಾದ ರಾಮಲಿಂಗನಾಯಕಂ ಬಾಲತ್ವದಲ್ಲಿಯೇ ಸಂದ ನಂತರಮಾ ಭದ್ರಪನಾಯಕಂಗೊರ್ವಳ್ ಪೆಣ್ಮಗೆಯುದಿಸಲಾ ಪೆಣ್ಮಗೆಯನಾ ವೆಂಕಟಪ್ಪನಾಯಕಂ ತನ್ನ ದೌಹಿತ್ರನಾದ ಜಂಬೂರ ವಿರುಪಣ ಒಡೆಯರ ಸುತ ಸದಾಶಿವಯ್ಯಂಗೀಯಲಾ ಪೆಣ್ಮಗೆಯ ಬಸಿರೊಳ್ ವೆಂಕಟಯ್ಯ ಭದ್ರಯ್ಯರೆಂಬಿರ್ವರ್ ಪುತ್ರರುದಿಸಲವರ್ಕಳಂ ನಿಟ್ಟಿಸಿ ಪರಮ ಸಂತೋಷಂಬಡುತಿಂತು ಮಕ್ಕಳ್ ಮೊಮ್ಮಕ್ಕಳ್ ಮರಿಮಕ್ಕಳ್ವೆರಸು ಸುಖದಿಂ ರಾಜ್ಯಂಗೈಯುತಿರಲೊಡನೆ ಸ್ವಪುತ್ರಭದ್ರಪನಾಯಕಂ ತುರುಷ್ಕ ಕಿರಾತರ ಮೇಲೆ ಕೆಲವು ರಾಜಕಾರ್ಯಂಗಳಂ ಮಾಡಿ ಪ್ರಖ್ಯಾತಿವೆತ್ತು ಕತಿಪಯವತ್ಸರಂ ಸುಖಮಿರ್ದು ನಂತರಂ ಶಿವಸಾಯುಜ್ಯವನೈದಲ್ ವೆಂಕಟಪ್ಪನಾಯಕಂ ಪುತ್ರಶೋಕದಿಂ ಮಹಾವ್ಯಾಕುಲಿತಚಿತ್ತನಾಗಿ ಬಳಿಕಧ್ಯಾತ್ಮಶಾಸ್ತ್ರ ವಿಚಾರಮುಖದಿಂ ಸ್ವಸ್ಥಚಿತ್ತನಾಗಿರುತ್ತುಂ ಮೊಮ್ಮಗ ವೀರಭದ್ರನಾಯಕಂಗಂ ಕೊಲ್ಲೂರಮ್ಮಾಜಿಯವರ ಮಕ್ಕಳಿರ್ವರ್ ಕನ್ಯಾರತ್ನಂಗಳನತ್ಯಂತ ವಿಭವದಿಂ ವಿವಾಹಮಂ ರಚಿಸಿ ಕಿರಿಯಯ್ಯ ಚಿಕ್ಕಸಂಕಣನಾಯಕನ ಪುತ್ರಂ ಸಿದ್ದಪ್ಪನಾಯಕಂಗೆ ಜೇಷ್ಠ ಪತ್ನಿಯೊಳೊರ್ವ ಕುಮಾರನುದಿಸಲಾತಂಗೆ ಶಿವಪ್ಪನಾಯಕನೆಂದು ಪೆಸರಿಟ್ಟು ಮತ್ತಮಾ ಪತ್ನಿಯೊಳ್ ಉದ್ಭವಿಸಿದ ಪೆಣ್ಮಕ್ಕಳ್ಗೆ ಪರಮೇಶ್ವರಮ್ಮ ನಾಗಾಜಮ್ಮ ಚನ್ನಮ್ಮನೆಂದು ಪೆಸರಿಟ್ಟು ಮತ್ತಮಾ ಸಿದ್ದಪ್ಪನಾಯಕಂಗೆ ಕನಿಷ್ಠಪತ್ನಿಯೊಳೊರ್ವಂ ಕುಮಾರಂ ಜನಿಸಲಾತಂಗೆ ವೆಂಕಟಪ್ಪನಾಯಕನೆಂದು ನಾಮಕರಣಮಂ ರಚಿಸಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ

ಮಾಡಿಸಿದನು. ಈ ರೀತಿ ಸಂತೋಷದಿಂದ ಪೋಷಿಸುತ್ತಿರಲು, ಅವರಿಬ್ಬರಲ್ಲಿ ಹಿರಿಯನಾದ ರಾಮಲಿಂಗನಾಯಕನು ಬಾಲ್ಯದಲ್ಲಿಯೇ ಮೃತಿಹೊಂದಿದನು, ಭದ್ರಪ್ಪನಾಯಕನಿಗೆ ಒಬ್ಬ ಹೆಣ್ಣು ಮಗಳು ಜನಿಸಿದಳು. ಆಕೆಯನ್ನು ವೆಂಕಟಪ್ಪನಾಯಕನು ತನ್ನ ಮಗಳ ಮಗನೂ ಹಾಗೂ ಜಂಬೂರ ವಿರುಪಣ್ಣ ಒಡೆಯರ ಸುತನೂ ಆದ ಸದಾಶಿವಯ್ಯನಿಗೆ ಕೊಟ್ಟು ಮದುವೆ ಮಾಡಿಸಿದನು. ಈ ದಂಪತಿಗಳಿಗೆ ವೆಂಕಟಯ್ಯ ಮತ್ತು ಭದ್ರಯ್ಯರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರುಗಳೆಲ್ಲರನ್ನೂ ಈಕ್ಷಿಸುತ್ತಾ, ಮಕ್ಕಳು, ಮೊಮ್ಮಕ್ಕಳು ಹಾಗೂ ಮರಿಮಕ್ಕಳುಗಳೊಡನೆ ಕೂಡಿಕೊಂಡು ಬಹು ಸಂತೋಷಪಡುತ್ತಾ ಸುಖದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಹೀಗಿರಲು ತನ್ನ ಮಗ ಭದ್ರಪ್ಪನಾಯಕನು ತುರುಕರು ಹಾಗೂ ಬೇಡರ ಮೇಲೆ ಹಲವು ರಾಜಕಾರ್ಯಗಳನ್ನು ಕೈಗೊಂಡು ಕೀರ್ತಿಯನ್ನು ಸಂಪಾದಿಸಿ ಹಲವು ಸಂವತ್ಸರಗಳವರೆಗೆ ಸುಖವಾಗಿದ್ದು ಶಿವಸಾಯುಜ್ಯವನ್ನು ಹೊಂದಿದನು. ಇದರಿಂದ ವೆಂಕಟಪ್ಪನಾಯಕನಿಗೆ ಪುತ್ರಶೋಕವುಂಟಾಗಿ ಜೀವನದಲ್ಲಿ ವೈರಾಗ್ಯ ಉತ್ಪನ್ನವಾಯಿತು. ತನ್ನ ಮನಸ್ಸಿನ ನೆಮ್ಮದಿಗಾಗಿ ಅಧ್ಯಾತ್ಮಶಾಸ್ತ್ರದ ಕಡೆಗೆ ಗಮನವಿತ್ತನು. ತನ್ನ ಮೊಮ್ಮಗ ವೀರಭದ್ರನಾಯಕನಿಗೆ ಕೊಲ್ಲೂರಮ್ಮಾಜಿಯವರ ಇಬ್ಬರು ಪುತ್ರಿಯರನ್ನು ತಂದುಕೊಂಡು ಅತ್ಯಂತ ವೈಭವದಿಂದ ವಿವಾಹವನ್ನು ನೆರವೇರಿಸಿದನು. ಚಿಕ್ಕಪ್ಪನಾದ ಚಿಕ್ಕಸಂಕಣ್ಣನಾಯಕನ ಮಗ ಸಿದ್ದಪ್ಪನಾಯಕನಿಗೆ ಜೇಷ್ಠಪತ್ನಿಯಲ್ಲಿ ಒಬ್ಬ ಕುಮಾರನು ಜನಿಸಲು ಆತನಿಗೆ ಶಿವಪ್ಪನಾಯಕನೆಂದು ಹೆಸರಿಟ್ಟು ಮತ್ತೆ ಆ ಪತ್ನಿಯಲ್ಲಿ ಹುಟ್ಟಿದ ಹೆಣ್ಣುಮಕ್ಕಳಿಗೆ ಪರಮೇಶ್ವರಮ್ಮ, ನಾಗಾಜಮ್ಮ, ಚನ್ನಮ್ಮನೆಂದು ಹೆಸರಿಟ್ಟನು. ಮತ್ತೆ ಸಿದ್ದಪ್ಪ ನಾಯಕನ ಕೊನೆಯ ಹೆಂಡತಿಯಲ್ಲಿ ಒಬ್ಬ ಮಗನು ಹುಟ್ಟಿದನು. ಆತನಿಗೆ ವೆಂಕಟಪ್ಪನಾಯಕನೆಂದು ನಾಮಕರಣ ಮಾಡಿ ಸುಖದಿಂದಲೂ ವಿನೋದದಿಂದಲೂ ರಾಜ್ಯವನ್ನು ಪಾಲಿಸುತ್ತಿದ್ದನು.

ಕಂ॥ ಚಂಡಪರಾಕ್ರಮ ಜಿತದೋ
ರ್ದಂಡಾರ್ಜಿತಭೂರಿವಿಭವ ವೆಂಕಟಭೂಪಂ
ದಂಡಯಾತ್ರೆಯೊಳೆ ಪರಭೂ
ಮಂಡಲಮಂ ಯುದ್ಧರಂಗದೊಳು ಸಾಧಿಸಿದಂ ೧೮

ವ॥ ಅದೆಂತೆಂದೊಡೆ

ಕಂ॥ ಮೆರೆವ ಕಿರಾತರ ವಶಮಾ
ಗಿರುತಿಹ ಹರಕಾಳನೆಡೆಯಹಳ್ಳಿಯುಮಂ ಕೊಂ
ಡುರುಕೋಂಟೆಯ ಬಲಿಯಿಸಿ ತ
ದ್ಧರಣಿಪನಾನಂದಪುರಮೆನಿಪ ಪೆಸರಿಟ್ಟಂ ೧೯

ವ॥ ಮತ್ತಮದಲ್ಲದಾ ವೆಂಕಟಪ್ಪನಾಯಕನಾನಂದಪುರದ ಪರಿಸ್ತರಣದೊಳಾಗಮೋಕ್ತ ವಿಧಾನದಿಂ ತಾಂಡವೇಶ್ವರನೆಂಬ ಮೂರ್ತಿಯಂ ಪ್ರತಿಷ್ಠೆಯಂ ರಚಿಸಿ ಪರಮ ಮನೋಹರಮಾದ ರಮನೆಯಂ ರಚನೆಗೈಸಿ ವಾಪೀಕೂಪತಟಾಕಾರಾಮಾದಿಗಳಂ ನಿರ್ಮಾಣಂಗೈಸಿ ಮಗುಳ್ದಿಕ್ಕೇರಿಯ ರಮನೆಯೊಳ್ ವಿಚಿತ್ರತರ ರಚನಾಕೌಶಲ್ಯದಿಂ ನಾಟಕಶಾಲೆಯಂ ನಿರ್ಮಾಣಂಗೈಸಿ ತದಿಕ್ಕೇರಿಯಾನಂದ ಪುರಕ್ಕಂ ವೈಹಾಳಿಯನೆಸಗುತ್ತತ್ಯಂತೋತ್ಸಾಹದಿಂ ವಿಹರಿಸುತ್ತುಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ

ಕಂ॥ ತುರುಕರ ಮೂಲಕದೆ ಕಿರಾ
ತರ ವಶಮಾಗಿರ್ಪ ಪೊಳೆಯ ಪೊನ್ನೂರ ಪರಿ
ಸ್ತರಣವನಾ ಸಂಕಣನೃಪ
ವರನಾತ್ಮಜನಾಜಿರಂಗದೊಳ್ ಸಾಧಿಸಿದಂ ೨೦

ಅಲ್ಲದೆ ೧೮. ಪ್ರಚಂಡ ಪರಾಕ್ರಮಶಾಲಿಯೂ, ಭುಜಬಲದಿಂದ ಹೇರಳ ಸಂಪತ್ತನ್ನು ಸಂಪಾದಿಸಿದವನೂ ಆದ ವೆಂಕಟಪ್ಪನಾಯಕನು ದಂಡಯಾತ್ರೆಯಲ್ಲಿ ಶತ್ರುಭೂಮಂಡಲವನ್ನು ಯುದ್ಧರಂಗದಲ್ಲಿ ಗೆದ್ದುಕೊಂಡನು. ವ॥ ಅದು ಯಾವ ರೀತಿ ಎಂದರೆ-೧೯. ಕಿರಾತರ ವಶದಲ್ಲಿದ್ದ ಹರತಾಳ, ಎಡೆಹಳ್ಳಿಗಳನ್ನು ವಶಪಡಿಸಿಕೊಂಡು ಕೋಟೆಯನ್ನು ಬಲಪಡಿಸಿದ ವೆಂಕಟಪ್ಪನಾಯಕನು, ಆ ಕೋಟೆಯನ್ನು ಭದ್ರಪಡಿಸಿ, ಅದಕ್ಕೆ "ಆನಂದಪುರ" ಎಂಬ ಹೆಸರನ್ನು ಇಟ್ಟನು. ವ॥ ಮತ್ತು ಅಲ್ಲದೆ ವೆಂಕಟಪ್ಪನಾಯಕನು ಆನಂದಪುರದ ಕೋಟೆಯಲ್ಲಿ ಆಗಮೋಕ್ತ ವಿಧಾನಗಳಿಂದ ತಾಂಡವೇಶ್ವರನೆಂಬ ಮೂರ್ತಿಯನ್ನು ಪ್ರತಿಷ್ಠೆ ಮಾಡಿಸಿದನು. ಅಲ್ಲಿ ಮನೋಹರವಾದ ಅರಮನೆಯೊಂದನ್ನು ಕಟ್ಟಿಸಿ, ಬಾವಿ, ಕೊಳ, ಕೆರೆ, ತೋಟ ಮುಂತಾದವುಗಳನ್ನು ನಿರ್ಮಿಸಿ ಇಕ್ಕೇರಿಗೆ ಹಿಂತಿರುಗಿದನು. ಇಕ್ಕೇರಿಯ ಅರಮನೆಯಲ್ಲಿ ವಿಚಿತ್ರವಾದ ರಚನ ಕೌಶಲ್ಯಗಳಿಂದ ಕೂಡಿದ ನಾಟಕಶಾಲೆಯೊಂದನ್ನು ನಿರ್ಮಾಣ ಮಾಡಿಸಿ, ಇಕ್ಕೇರಿಗೂ ಹಾಗೂ ಆನಂದಪುರಕ್ಕೂ ಕುದುರೆ ಮೆರವಣಿಗೆಗಳನ್ನು ಕೈಗೊಳ್ಳುತ್ತಾ, ಅತ್ಯಂತ ಉತ್ಸಾಹದಿಂದಲೂ ಹಾಗೂ ಸಂತೋಷದಿಂದಲೂ ವಿಹರಿಸುತ್ತಾ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ವ॥ ಅಂತೂ ಅಲ್ಲದೆ - ೨೦. ತುರುಕರ ಮೂಲಕ ಕಿರಾತರ ವಶವಾಗಿದ್ದ ಹೊಳೆಹೊನ್ನೂರ ಕೋಟೆಯನ್ನು ಸಂಕಣ್ಣರಾಜನ ಮಗನಾದ ವೆಂಕಟಪ್ಪನಾಯಕನು ಯುದ್ಧರಂಗದಲ್ಲಿ ಸಾಧಿಸಿದನು.

ವ|| ಇಂತಾ ವೆಂಕಟಪ್ಪನಾಯಕಂ ಹರಕಾಳೆಡೆಯಹಳ್ಳಿ ಪೊಳೆಯಪೊನ್ನೂರ ಪರಿಸ್ತರಣ ಸೀಮೆಗಳನಧೀನಮಂ ರಚಿಸಲ್ ತನ್ನ ಸೀಮೆಕೋಂಟೆಗಳನೀಳ್ದನೆಂದತ್ಯಂತ ಕೋಪಾಟೋಪದಿಂ

ಕಂ|| ಪಿಂಗದಡಿಗಡಿಗೆ ನಿಲ್ತೇ
ಕಾಂಗದೆ ಕೈಗೆಯ್ದು ಸಾಸಮಂ ಮೆರೆದ ಲಸತ್
ಕೆಂಗೆಯ ಹನುಮನರೇಂದ್ರೋ
ತ್ತುಂಗನ ಭುಜಬಲವನಂಕದೊಳ್ ಮಗ್ಗಿಸಿದಂ ೨೧

ವ|| ಮತ್ತಮದಲ್ಲದಾ ವೆಂಕಟಪ್ಪನಾಯಕಂ

ಕಂ|| ಕುಂಬಸೆಯ ದಾನಿವಾಸದ
ಕುಂಭಿನಿಗಳನಾಳ್ವ ಬೊಂಮಣಂ ವೀರಣರೆಂ
ದೆಂಬದಟರ ಮುರಿದಾ ಧರೆ
ಯಂ ಭುಜಬಲದಿಂದಧೀನಮಂ ವಿರಚಿಸಿದಂ ೨೨

ವ|| ಮತ್ತಮದಲ್ಲದೆ

ಕಂ|| ಅಂಡಿಗೆಯುದ್ರೆಯ ಗುಡುವೆಯ
ಗೆಂಡಲತಲವೂರನೆಸೆವ ಮಂಚಿಯನಾಳ್ದು
ದ್ದಂಡರನುರೆ ಮುರಿದಾ ಭೂ
ಮಂಡಲಗಳನಧಿಕಶೌರ್ಯದಿಂ ಸಾಧಿಸಿದಂ ೨೩

ವ|| ಈ ರೀತಿ ವೆಂಕಟಪ್ಪನಾಯಕನು ಹರಕಾಳ, ಎಡೆಯಹಳ್ಳಿ, ಹಾಗೂ ಹೊಳೆಯ ಹೊನ್ನೂರ ಕೋಟೆಯ ಸೀಮೆಗಳನ್ನು ಅಧೀನ ಮಾಡಿಕೊಂಡನು. ಆಗ ಕೆಂಗೆಯ ಹನುಮರಾಜನು ತನ್ನ ಸೀಮೆಯ ಕೋಟೆಗಳಿಗೆ ಎದುರಾದನೆಂದು ಅತ್ಯಂತ ಕೋಪಾಟೋಪದಿಂದ-೨೧. ಮತ್ತೆ ಮತ್ತೆ ಎದುರಾಗಿ ಯುದ್ಧಮಾಡಿ ಸಾಹಸವನ್ನು ತೋರಿಸಿದನು. ನಾಯಕನು ಆತನ ಭುಜಬಲವನ್ನು ಯುದ್ಧದಲ್ಲಿ ಅಡಗಿಸಿದನು. ವ|| ಮತ್ತೆ ಅದಲ್ಲದೆ ವೆಂಕಟಪ್ಪನಾಯಕನು ೨೨. ಕುಂಸಿಯನ್ನು ಆಳುವ ಬೊಂಮಣ್ಣ, ದಾನಿವಾಸವನ್ನು ಆಳುವ ವೀರಣ್ಣ ಎಂಬ ವೀರರಿಬ್ಬರನ್ನು ಸೋಲಿಸಿ, ಆ ಭೂಮಿಯನ್ನು ತನ್ನ ಭುಜಬಲದಿಂದ ವಶಪಡಿಸಿಕೊಂಡನು. ವ|| ಮತ್ತೂ ಅಲ್ಲದೆ ೨೩. ಅಂಡಿಗೆ, ಉದ್ರೆ, ಗುಡುವೆ, ಗೆಂಡಲ, ತಲವೂರು, ಮಂಚೆಗಳನ್ನು ಆಳುವ ಉದ್ದಂಡರಾದ ಪಾಳೆಯಗಾರರನ್ನು ಸೋಲಿಸಿ ಆ ಭೂಮಂಡಲಗಳನ್ನು ಹೆಚ್ಚು ಶೌರ್ಯದಿಂದ ಸಾಧಿಸಿದನು. ವ|| ಮತ್ತೆ ಇದಲ್ಲದೆ ವೆಂಕಟಪ್ಪನಾಯಕನು ಸಾತಳಲು, ಬೆಳವಂದೂರು, ಹೆಬ್ಬೆ, ಮಂಡಗದ್ದೆ, ಹೊನ್ನೂರು, ಹಾರನಹಳ್ಳಿ ಸೀಮೆಗಳನ್ನು ಸಾಧಿಸಿ ಆಯಾ ಖಾತೆಯದಾರರು ಗಳಿಂದ ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ಕುಂಸಿ, ದಾನಿವಾಸ, ಹೆಬ್ಬೆ, ಮಂಡಗದ್ದೆ ಮುಂತಾದ ಸ್ಥಳಗಳಲ್ಲಿ ಶೋಭಿಸುವ ಕೋಟೆಗಳನ್ನು ನಿರ್ಮಾಣಮಾಡಿಸಿದನು.

ವ|| ಮತ್ತಮದಲ್ಲದಾ ವೆಂಕಟಪ್ಪನಾಯಕಂ ಸಾತಳಲ್ಬೆಳವಂದೂರು ಹೆಬ್ಬೆ ಮಂಡಗದ್ದೆ ಹೊನ್ನೂರು ಹಾರನಹಳ್ಳಿ ಸೀಮೆಗಳಂ ಸಾಧಿಸಿ ತತ್ತತ್ಪಟ್ಟೆಯದಾರರ್ಕಳಿಂ ಪಣಮಣಿಹಂಗೊಂಡು ಕುಂಬಸೆ ದಾನಿವಾಸ ಹೆಬ್ಬೆ ಮಂಡಗದ್ದೆ ಮುಂತಾದ ಸ್ಥಳಗಳಲ್ಲಿ ಪರಿಶೋಭಿಪ ಪರಿಸ್ತರಣಂಗಳಂ ರಚನೆಗೈಸಿದನಂತುಮಲ್ಲದೆಯುಂ

ಕಂ|| ಗರುವ ನರಶಿಂಗನಾಯಕ
ನುರುತರಶೌರ್ಯಾತಿಶಯವನುಡುಗಿಸಿ ಬಂಕೀ
ಪುರದ ಪರಿಸ್ತರಣವನನು
ವರದೊಳ್ ಕೊಂಡಾಳ್ದನೆಸೆವ ತದ್ಭೂತಳಮಂ ೨೪

ಮಿರುಪೇಕಲಕ್ಷದೇಶದ
ದೊರೆಮನ್ನೆಯಳೆನಿಸಿ ರೂಢಿವೆತ್ತತಿಚಲಮಂ
ಮೆರೆದಾ ಭೈರಾದೇವಿಯ
ಗರುವಿಕೆಯಂ ಮುರಿದು ಧುರದೆ ಕೈಸೆರೆವಿಡಿದಂ ೨೫

ವ|| ಇಂತು ದಳವಾಯಿ ಲಿಂಗಣನಾಯಕನಂ ಕಳುಹಿ ಕೈಸೆರೆವಿಡಿದಾವಿನಹಳ್ಳಿ ಕರವೂರು ಮೊರಬಡಿ ಸಾಳನಾಡು ಬಟ್ಟಕಳ ಗೆರೆಸಪ್ಪೆ ಚಂದಾವರ ಗೋವರ್ಧನಗಿರಿ ವಡ್ಡಿ ಮೇದಿನಿ ಮುಂತಾದಾಕೆಯಾಳ್ವ ರಾಜ್ಯ ಪರಿಸ್ತರಣಮುಂ ವಶಮಾಡಿಕೊಂಡು ತದೀಯ ವಿಚಿತ್ರತರ ವಸ್ತುವಾಹನಾಂಬರಾರ್ಥಾದಿ ಸರ್ವಸ್ವಮಂ ಸ್ವಾಧೀನಂಗೈದನಂತುಮಲ್ಲದೆಯುಂ

ಕಂ|| ಹೊನ್ನೆಯ ಕಂಬಳಿವೆಸರಿನ
ಮನ್ನೆಯನಾರ್ನಾಡು ಮುಂಗಿನಾಡೆಡವೂರ
ಚಿನ್ನ ಬಿದರೂರ್ ಪೊಸಂಗಡಿ
ಗನ್ನಾಯಕನೆನಿಸಿ ನೆರೆ ವಿರಾಜಿಸುತಿರ್ದಂ ೨೬

ವ|| ಇಂತು ನೆಗೆಳ್ತವೆತ್ತ ಹೊನ್ನೆಯಕಂಬಳಿಯೆಂಬ ಮನ್ನೆಯಂ ಹೊಸಂಗಡಿಯೆಂಬೂರೊಳಿರ್ದು ಶಂಕರನಾರಾಯಣಭಟ್ಟನೆಂಬವನಂ ಮಂತ್ರಿಯಂ ಮಾಡಿಕೊಂಡವನ ಮುಖದಿಂ ತನ್ನ ರಾಜ್ಯಭಾರವಿಚಾರಂ ಮುಂತಾದುದೆಲ್ಲ ಕಾರ್ಯಂಗಳಂ ನಡೆಸಿಕೊಳುತ್ತುಮಿರಲ್ ದಿನದಿನದೊಳಾ

ಅಂತೂ ಅಲ್ಲದೆ- ೨೪. ಗರ್ವಿಷ್ಠನಾದ ನರಸಿಂಗನಾಯಕನ ಪರಾಕ್ರಮವನ್ನು ಕುಗ್ಗಿಸಿ, ಅವನ ಬೆಂಕೀಪುರದ ಕೋಟೆಯನ್ನು ಯುದ್ಧದಲ್ಲಿ ವಶಪಡಿಸಿಕೊಂಡು ಆ ಭೂಭಾಗವನ್ನು ಆಳಿದನು. ೨೫. ಏಕಲಕ್ಷದೇಶದ ರಾಣಿಯೆಂದು ಪ್ರಸಿದ್ಧಳಾಗಿ ಛಲವನ್ನು ಮೆರೆದ ಭೈರಾದೇವಿಯ ಗರ್ವವನ್ನು ಮುರಿದು ಯುದ್ಧದಲ್ಲಿ ಆಕೆಯನ್ನು ಸೆರೆಹಿಡಿದನು. ವ|| ಈ ರೀತಿ ದಳವಾಯಿ ಲಿಂಗಣ್ಣ ನಾಯಕನನ್ನು ಕಳುಹಿಸಿ ಆಕೆಯನ್ನು ಕೈಸೆರೆ ಹಿಡಿದು, ಆವಿನಹಳ್ಳಿ, ಕರುವೂರು (ಕರೂರು?) ಮೊರಬಡಿ, ಸಾಳನಾಡು, ಭಟಕಳ, ಗೇರುಸೊಪ್ಪೆ, ಚಂದಾವರ, ಗೋವರ್ಧನಗಿರಿ, ವಡ್ಡಿ ಮೇದಿನಿ ಮುಂತಾದ ಆಕೆಯ ಆಳುವ ರಾಜ್ಯದ ಕೋಟೆಗಳನ್ನು ವಶಮಾಡಿಕೊಂಡು, ಅವಳ ವಿಚಿತ್ರತರ ವಸ್ತುಗಳು, ವಾಹನಗಳು, ಬಟ್ಟೆಗಳು, ಹಣಗಳು ಮುಂತಾದ ಸರ್ವಸ್ವವನ್ನೂ ಸ್ವಾಧೀನಮಾಡಿಕೊಂಡನು. ಅಂತೂ ಅಲ್ಲದೆ- ೨೬. ಹೊನ್ನೆಯ ಕಂಬಳಿ ಎಂಬ ಹೆಸರಿನ ಪಾಳೆಯಗಾರನು ಆರ್ನಾಡು, ಮುಂಗಿನಾಡು, ಎಡವೂರು, ಚಿನ್ನಬಿದರೂರು, ಹೊಸಂಗಡಿಗಳಿಗೆ ನಾಯಕನಾಗಿ ಮೆರೆಯುತ್ತಿದ್ದನು. ವ|| ಈ ರೀತಿ

**ಶಂಕರನಾರಾಯಣಭಟ್ಟಂ ಕ್ರಮದಿಂ ಪ್ರಖ್ಯಾತನಾಗಿ ಹೊನ್ನೆಯ ಕಂಬಳಿಯಂ ಬಗೆಗೊಳದೆ ತಾಂ ಬಿದೂರೂರೊಳ್ ನೆಲೆಯಾಗಿ ನಿಂದೆಡವಲದೊಳಿರ್ಪಾರುನಾಡು ಕಬ್ಬುನಾಡು ಮುಂಗಿನಾಡು ಮುಂತಾದ ಸೀಮೆಗ್ರಾಮಗಳ್ಗೆಲ್ಲಂ ತಾನೆ ಸ್ವತಂತ್ರಕರ್ತೃವಾಗಿ ವರ್ತಿಸುತ್ತುಮಿರಲಾ ಕಾಲದೊಳ್ ವೆಂಕಟಪ್ಪನಾಯಕಂ ದಳವಾಯಿ ಲಿಂಗಣ್ಣನಾಯಕಂವೆರಸು ಸೈನ್ಯಸಮೇತಂ ದಾಳಿವರಿಯುತ್ತೈದಿ ಬಿದುರೂರ ಪ್ರಾಂತ ದೊಳಿಳಿದು ಪ್ರಯತ್ನದಿಂದೊಳಸಾರ್ದು ಬಿದುರೂರ ಪರಿಸ್ತರಣಮಂ ವೇಢೈಸಿ ಜಕೀರಿರಿಸ್ತು ಮುಸ್ಸೈದೆಗಳೊಳವೊಗದಂತು ಕಂಡಿಕಣಿವೆಪಥಂಗಳಂ ಕಟ್ಟಿ ಜೇರುಮುತ್ತಿಗೆಯಂ ರಚಿಸಲಾ ಶಂಕರನಾರಾಯಣಭಟ್ಟಂ ಹೇರಳ ಮಂದಿಮಕ್ಕಳಂ ನೆರಹಿ ಮಾರ್ಮಲೆತು ಕೋಂಟೆಯಂ ಕಲಿಯೇರಿಸಿ ನಾಲ್ಕಾರು ತಿಂಗಳಪ್ಪನ್ನೆವರಂ ಕಾದಿಸಲಾಗಳಾ ಕೋಂಟೆಯ ನಾಲ್ಗಡೆಯಡೆದಿಟ್ಟೆಗಳೊಳ್ ಬುರುಜುಗಳ ನೆಬ್ಬಿಸಿ ಶತಘ್ನಿಗಳಂ ಪೂಡಿಸಿ ತತ್ಪ್ರಯೋಗಮುಖದಿಂದಾ ಬಿದುರೂರ ಕೋಂಟೆಯಂ ತೆಗೆದುಕೊಂಡು ಶಂಕರನಾರಾಯಣಭಟ್ಟನಂ ಕೈವಶಂಗೆಯ್ದಾ ಕೋಂಟೆಯಂ ಬಲಿಸಿ ಯೆಡವೂರ್ಮುಂಗಿ ನಾಡಾರುನಾಡು ಕಬ್ಬುನಾಡು ಪುಟ್ಟಗುಪ್ಪೆ ಮುಂತಾದ ಸೀಮೆಯ ಪ್ರಜೆಪರಿವಾರಂಗಳಿಂ ಕಾಣಿಸಿಕೊಂಡು ಕಾಣಿಕೆಗೊಂಡ ಬಳಿಕ್ಕಂ ಸ್ಕಾಂದಪುರಾಣದೊಳ್ ಸನತ್ಕುಮಾರಸಂಹಿತೆಯೊಳ್ ಸಹ್ಯಾದ್ರಿಖಂಡದೊಳುಸಿರ್ದಂತಾ ಬಿದುರೂರೊಳ್ ಸ್ನಾನಮಾತ್ರದೊಳನೇಕ ದುಷ್ಕೃತಂಗಳಂ ನಿವಾರಿಪ ಕಲಾವತಿಯ ನದಿಯ ತೀರದೊಳ್**

ಪ್ರಸಿದ್ಧವಾದ ಹೊನ್ನೆಯ ಕಂಬಳಿಯೆಂಬ ರಾಜನು ಹೊಸಂಗಡಿ ಎಂಬ ಊರಲ್ಲಿದ್ದು ಶಂಕರನಾರಾಯಣಭಟ್ಟನೆಂಬವನನ್ನು ಮಂತ್ರಿಯನ್ನಾಗಿ ಮಾಡಿಕೊಂಡು ಅವನ ಮುಖಾಂತರ ರಾಜ್ಯಭಾರ ಕಾರ್ಯಗಳೆಲ್ಲವನ್ನೂ ನಡೆಸುತ್ತಿದ್ದನು. ಈ ಶಂಕರ ನಾರಾಯಣಭಟ್ಟನು ಕ್ರಮಕ್ರಮವಾಗಿ ಪ್ರಖ್ಯಾತಿ ಹೊಂದುತ್ತಾ ಹೊನ್ನೆಯಕಂಬಳಿಯನ್ನು ಲಕ್ಷಿಸದೆ ಬಿದರೂರಲ್ಲಿ ನೆಲೆಯೂರಿ, ಎಡಬಲಗಳಲ್ಲಿದ್ದ ಆರುನಾಡು, ಕಬ್ಬುನಾಡು, ಮುಂಗಿನಾಡು ಮುಂತಾದ ಸುತ್ತಮುತ್ತಲಿನ ಸೀಮೆ ಗ್ರಾಮಗಳೆಲ್ಲವನ್ನೂ ಆಕ್ರಮಿಸಿಕೊಂಡು ಸ್ವತಂತ್ರವಾಗಿ ವರ್ತಿಸುತ್ತಿದ್ದನು. ಇದೇ ಸಮಯದಲ್ಲಿ ವೆಂಕಟಪ್ಪನಾಯಕನು ದಳವಾಯಿ ಲಿಂಗಣ್ಣನಾಯಕನನ್ನು ಕೂಡಿಕೊಂಡು ಸೈನ್ಯಸಹಿತ ಹೊರಟು ದಾಳಿಮಾಡುತ್ತಾ ಬಿದನೂರು ಪ್ರಾಂತದಲ್ಲಿಳಿದು, ಪ್ರಯತ್ನದಿಂದ ಒಳಹೊಕ್ಕು ಬಿದರೂರ ಕೋಟೆಯನ್ನು ಆಕ್ರಮಿಸಿಕೊಂಡು, ಧನಧಾನ್ಯಾದಿ ವಸ್ತುಗಳು ಒಳಹೋಗದಂತೆ ಎಲ್ಲ ಕಡೆಗೂ ಬಲವಾದ ಕಾವಲಿರಿಸಿ ಕಂಡಿ, ಕಣಿವೆ, ದಾರಿಗಳನ್ನು ಕಟ್ಟಿ, ಎಲ್ಲ ಕಡೆಗೂ ಮುತ್ತಿಗೆ ಹಾಕಿದನು. ಶಂಕರನಾರಾಯಣಭಟ್ಟನು ಹೇರಳವಾದ ಜನರನ್ನು ಸೇರಿಸಿ, ಕೋಟೆಯನ್ನು ಬಲಪಡಿಸಿ, ನಾಲ್ಕಾರು ತಿಂಗಳುವರೆಗೂ ಹೋರಾಟವನ್ನಿತ್ತನು. ಆಗ ವೆಂಕಟಪ್ಪನಾಯಕನು ಕೋಟೆಯ ನಾಲ್ಕು ದಿಕ್ಕುಗಳ ದಿಣ್ಣೆಗಳಲ್ಲೂ ಬುರುಜಗಳನ್ನೆಬ್ಬಿಸಿ, ಫಿರಂಗಿಗಳನ್ನು ಹೂಡಿಸಿ, ಈ ಪ್ರಯೋಗಗಳಿಂದ ಬಿದುರೂರು ಕೋಟೆಯನ್ನು ತೆಗೆದುಕೊಂಡು ಶಂಕರನಾರಾಯಣ ಭಟ್ಟನನ್ನು ಕೈಸೆರೆ ಹಿಡಿದನು. ಈ ರೀತಿ ಕೋಟೆಯನ್ನು ಕೈವಶಮಾಡಿಕೊಂಡ ನಂತರ ಯಡವೂರು, ಮುಂಗಿನಾಡು, ಆರುನಾಡು, ಕಬ್ಬುನಾಡು, ಪಟ್ಟಗುಪ್ಪೆ ಮುಂತಾದ ಸೀಮೆಯ ಪ್ರಜೆಗಳು ಹಾಗೂ ಪರಿವಾರದವರನ್ನು ಕಾಣಿಸಿಕೊಂಡು ಕಾಣಿಕೆಗಳನ್ನು ವೆಂಕಟಪ್ಪನಾಯಕನು ಪಡೆದುಕೊಂಡನು. ಆ ಬಳಿಕ ಸ್ಕಾಂದಪುರಾಣದ ಸನತ್ಕುರಮಾರ ಚರಿತ್ರೆಯಲ್ಲಿನ ಸಹ್ಯಾದ್ರಿಖಂಡದಲ್ಲಿ ಹೇಳಿದ ಬಿದರೂರದಲ್ಲಿದ್ದ, ಸ್ನಾನಮಾತ್ರದಿಂದಲೇ ಅನೇಕ ಪಾಪಗಳನ್ನು ಪರಿಹರಿಸುವ ಕಲಾವತೀನದಿಯ ತೀರದಲ್ಲಿ ವೇಣುವನಮಧ್ಯದಲ್ಲಿರುವ, ಹುತ್ತದಿಂದ

ವೇಣುವನಮಧ್ಯದೊಳ್ ವಲ್ಮೀಕದೆಡೆಯೊಳ್ ಪ್ರಾದುರ್ಭಾವಮಾಗಿ ಮಹಾಪ್ರಸನ್ನಮೂರ್ತಿಯೆನಿಸಿ ಭಕ್ತಜನರ್ಗೆ ಬೇಡಿದಿಷ್ಟಾರ್ಥಂಗಳನೀಯುತುಂ ವಿರಾಜಿಸುತ್ತಿರ್ಪ ತದ್ಬಿದುರೂರ ನೀಲಕಂಠೇಶ್ವರಲಿಂಗದ ಪೂಜೆ ಲೋಪಮಾಗದೆ ನಡೆವಂತು ಕಟ್ಟಳೆಯಂ ರಚಿಸಿ ಮತ್ತಮಾ ವೆಂಕಟಪ್ಪನಾಯಕಂ ಬಿದುರೂರಿಂ ತೆರಳ್ದು ಘಟ್ಟವನಿಳಿದು ಹೊನ್ನೆಯ ಕಂಬಳಿಯೆಂಬ ಮನ್ನೆಯನಂ ಮಗ್ಗಿಸಿ ಹೊಸಂಗಡಿ ಕಡರಿ ಬಗ್ಗವಾಡಿಯ ಹೋಬಳಿ ಕೊಲ್ಲೂರು ಮುಂತಾದ ಹೊನ್ನೆಯಕಂಬಳಿಯಾಳ್ವ ಸೀಮೆಯ ಪ್ರಜೆಪರಿವಾರಮಂ ಕಾಣಿಸಿಕೊಂಡು ಬಗ್ಗವಾಡಿ ಹೊಸಂಗಡಿ ಯೆಂಬ ಸ್ಥಳಂಗಳೊಳ್ ಪರಿಸ್ತರಣಮಂ ನಿರ್ಮಾಣಂಗೈಸಿ ಕೊಲ್ಲೂರು ಮೂಕಾಂಬಿಕೆಯಮ್ಮನವರ ಪೂಜಾದಿ ವಿಭವಂ ಲೋಪಮಾಗದಂತೆ ನಡೆವಂತು ನಿಯಾಮಕಂಗೈಸಿದನಂತುಮಲ್ಲದೆಯುಂ

ಕಂ॥ ಎಡಬಲದೊಳಿರ್ಪ ಧೂರ್ತರ
ಕಡುಹಂ ಮಗ್ಗಿಸಿ ಸದಾಶಿವೇಂದ್ರನ ಪೌತ್ರಂ
ಪಿಡಿದು ಪುಂಡರ್ಕಳಂ ಬಳಿ
ಕಡಿಮಲೆಯ ಧರಿತ್ರಿಯಂ ಕರಂ ವಶಗೈದಂ ೨೭

ಭೈರಸವೊಡೆಯರುಮಂ ತ
ದ್ಧೀರಂ ನಿಗ್ರಹಿಸಿ ಕೊಪ್ಪಮಂ ಬೆಳ್ಳರೆಯಂ
ಕಾರಕಳ ಕಳಸ ಖಾಂಡ್ಯದ
ಚಾರುಪರಿಸ್ತರಣಭೂಮಿಯಂ ವಶಗೈದಂ ೨೮

ವ॥ ಇಂತು ಕಾರಕಳದ ಭೈರಸವೊಡೆಯರಂ ನಿಗ್ರಹಿಸಿ ತದ್ರಾಜ್ಯಪರಿಸ್ತರಣಂಗಳಂ ವಶಂಗೈದನಂತರಂ ಮಾಳಕಾಡ ಹೊಳೆಯ ಬಯಲೂರ ಕೋಂಟೆಗಳಂ ನಿರ್ಮಾಣಂಗೈಸಿದನಂತು ಮಲ್ಲದೆಯುಂ

ಉದ್ಭವವಾಗಿರುವ, ಮಹಾಪ್ರಸನ್ನಮೂರ್ತಿಯೆನಿಸಿ ಭಕ್ತಜನರಿಗೆ ಬೇಡಿದ ಇಷ್ಟಾರ್ಥಗಳನ್ನು ನೀಡುವ, ಬಿದರೂರಲ್ಲಿ ಶೋಭಿಸುವ ನೀಲಕಂಠೇಶ್ವರ ಲಿಂಗದ ಪೂಜೆಗೆ ಲೋಪವಾಗದಂತೆ ಕಟ್ಟುಪಾಡುಮಾಡಿದನು. ಮತ್ತೆ ಆ ವೆಂಕಟಪ್ಪನಾಯಕನು ಬಿದರೂರಿಂದ ಹೊರಟು ಘಟ್ಟವನ್ನಿಳಿದು ಹೊನ್ನೆಯ ಕಂಬಳಿಯೆಂಬ ರಾಜನನ್ನು ಸೋಲಿಸಿ ಹೊಸಂಗಡಿ, ಕಡರಿ, ಬಗ್ಗವಾಡಿಯ ಹೋಬಳಿ, ಕೊಲ್ಲೂರು ಮುಂತಾದ ಆ ಹೊನ್ನೆಯ ಕಂಬಳಿಯು ಆಳುವ ಸೀಮೆಯ ಪ್ರಜೆ-ಪರಿವಾರದವರನ್ನು ಕಾಣಿಸಿಕೊಂಡು ಹೊಸಂಗಡಿ ಎಂಬ ಸ್ಥಳದಲ್ಲಿ ಕೋಟೆಯನ್ನು ನಿರ್ಮಿಸಿದನು. ಕೊಲ್ಲೂರು ಶ್ರೀಮೂಕಾಂಬಿಕಾ ಅಮ್ಮನವರ ಪೂಜಾದಿ ವೈಭವಗಳಿಗೆ ಯಾವ ಲೋಪವೂ ಬಾರದಂತೆ ನಡೆಯಲು ಕಟ್ಟುಪಾಡು ಮಾಡಿದನು. ಅಂತೂ ಅಲ್ಲದೆ ೨೭. ಎಡಬಲಗಳಲ್ಲಿದ್ದ ಧೂರ್ತರಾದ ಅರಸರ ಶಕ್ತಿಯನ್ನು ಕುಗ್ಗಿಸಿದ ವೆಂಕಟಪ್ಪನಾಯಕನು ಪುಂಡರನ್ನು ಹಿಡಿದು ಘಟ್ಟದ ಕೆಳಗಿನ ಭೂಮಿಯನ್ನು ವಶಪಡಿಸಿಕೊಂಡನು. ೨೮. ಆ ಧೀರನಾದ ವೆಂಕಟಪ್ಪನಾಯಕನು ಭೈರಸ ಒಡೆಯರನ್ನು ನಿಗ್ರಹಿಸಿ, ಕೊಪ್ಪ, ಬೆಳ್ಳಾರೆ, ಕಾರ್ಕಳ, ಕಳಸ ಮತ್ತು ಖಾಂಡ್ಯದ ಕೋಟೆ ಹಾಗೂ ಭೂಮಿಯನ್ನು ವಶಪಡಿಸಿಕೊಂಡನು. ವ॥ ಈ ರೀತಿ ಕಾರ್ಕಳದ ಭೈರಸ ಒಡೆಯರನ್ನು ಸೋಲಿಸಿ ಅವನ ರಾಜ್ಯದ ಕೋಟೆಯನ್ನು ವಶಪಡಿಸಿಕೊಂಡ ನಂತರ ಮಾಳಕಾಡ,

ಕಂ॥ ಬಲ್ಲಿದ ಶಿರಾಲೆಯವರಂ
ಘಲಿಸಿ ವಶಗೈದು ಕೂಡೆ ತದ್ಭೂತಳಮಂ
ಹಲ್ಲಗ್ಗಡೆಯೆನಿಸಿದ ಕೇ
ಡಿಲ್ಲದ ವಸುಪುರವನಾ ನೃಪಂ ಸಾಧಿಸಿದಂ ೨೯

ವ॥ ಇಂತು ಬಸುರೂರಂ ಸಾಧಿಸಿ ಮಹಾಲಿಂಗೇಶ್ವರ ದೇವರ ಪೂಜೆಲೋಪಮಾಗದಂತು ನಿಯಾಮಕಂಗೈದು ತೆರಳ್ದನಂತುಮಲ್ಲದೆಯುಂ

ಕಂ॥ ಆವನೀಶಭೂತಪಾಂಡ್ಯೋ
ದ್ಭವರ್ಗಳ್ ಮುನ್ನಾಳ್ದ ಪರಮವೈಭವದಿಂದೊ
ಪ್ಪುವ ಬಾರಕೂರ ಸಂಸ್ಥಾ
ನವನುರೆ ವಶಗೈದನಾ ನೃಪಾಲಕತಿಲಕಂ ೩೦

ವ॥ ಇಂತಾ ವೆಂಕಟಪ್ಪನಾಯಕಂ ಬಾರಕೂರ ಸಂಸ್ಥಾನಮಂ ಸ್ವಾಧೀನಂಗೆಯ್ದು ಬಾರಕೂರು ಕಲ್ಯಾಣಪುರ ಮಲ್ಲಿಕಾರ್ಜುನಗಿರಿ ಕಂಡುಲೂರ ಕೋಂಟೆಗಳಂ ನಿರ್ಮಾಣಂಗೈಸಿದನಂತುಮಲ್ಲದೆಯುಂ

ಕಂ॥ ಮುರಿದು ಸುರಾಲರ ತೊಳಹರ
ಸಿರಿಯರ ನಾಲ್ವತ್ತುನಾಡು ಕೆಲನಾಡು ಶಂ
ಕರನಾರಾಯಣ ಬೈದೂ
ರ್ವೆರಸಿದ ಹಳ್ಳಿಗೆರೆಯವನಿಯಂ ಸಾಧಿಸಿದಂ ೩೧

ವ॥ ಇಂತು ಸುರಾಲರ ತೊಳಹರ ಸೀಮೆಗಳಂ ವಶಂಗೈದನಂತರಂ

ಕಂ॥ ಬಂಗಾಜಲ ಸಾವಂತ ಮ
ನಂಗೊಳಿಸುವ ಚೌಟ ಮೂಲ ಕುಂಬಳೆಯಿವರಂ
ಭಂಗಿಸಿ ತದ್ಧರೆಯುಮನು
ತ್ತುಂಗ ಶ್ರೀಮಂಗಳೂರನುರೆ ಸಾಧಿಸಿದಂ ೩೨

ಹೊಳೆಯಬಯಲೂರು ಕೋಟೆಗಳನ್ನು ನಿರ್ಮಿಸಿದನು. ಅಂತೂ ಅಲ್ಲದೆ, ೨೯. ಶಿರಾಲಿ ನಾಡಿನವರನ್ನು ಯುದ್ಧದಲ್ಲಿ ಸದೆಬಡಿದು, ಆ ಭೂಭಾಗವನ್ನು ವಶಪಡಿಸಿಕೊಂಡನು. ಸಾಮಾನ್ಯರಿಗೆ ಅವಕಾಶವಿಲ್ಲದ, ಯಾವ ಕೆಡಕೂ ಇಲ್ಲದ ವಸುಪುರವನ್ನು ಸಾಧಿಸಿದನು. ವ॥ ಈ ರೀತಿ ಬಸರೂರನ್ನು ಸಾಧಿಸಿ ಮಹಾಲಿಂಗೇಶ್ವರ ದೇವರ ಪೂಜೆ ಲೋಪವಾಗದಂತೆ ಕಟ್ಟುಪಾಡು ಮಾಡಿ ತೆರಳಿದನು. ಅಂತೂ ಅಲ್ಲದೆ ೩೦. ಭೂತಾಳ ಪಾಂಡ್ಯನ ವಂಶೀಕರು ಹಿಂದೆ ವೈಭವದಿಂದ ಆಳಿದ್ದ ಬಾರಕೂರ ಸಂಸ್ಥಾನವನ್ನು ನಾಯಕನು ವಶಪಡಿಸಿಕೊಂಡನು. ವ॥ ಈ ರೀತಿ ವೆಂಕಟಪ್ಪನಾಯಕನು ಬಾರಕೂರು ಸಂಸ್ಥಾನವನ್ನು ಸ್ವಾಧೀನಪಡಿಸಿಕೊಂಡು ಬಾರಕೂರು, ಕಲ್ಯಾಣಪುರ, ಮಲ್ಲಿಕಾರ್ಜುನಗಿರಿ ಹಾಗೂ ಕಂಡ್ಲೂರು ಕೋಟೆಗಳನ್ನು ನಿರ್ಮಾಣಮಾಡಿಸಿದನು. ಅಂತೂ ಅಲ್ಲದೆ ೩೧. ಸುರಾಲರು, ತೊಳಹರು, ಸಿರಿಯರು ಇವರನ್ನು ಸೋಲಿಸಿ ನಲವತ್ತುನಾಡು, ಕೆಲನಾಡು, ಶಂಕರನಾರಾಯಣ, ಬೈದೂರು, ಹಳ್ಳಿಗೆರೆ ಮುಂತಾದ ಪ್ರದೇಶವನ್ನು ಸಾಧಿಸಿದನು. ವ॥ ಈ ರೀತಿ ಸುರಾಲರ ಹಾಗೂ ತೊಳಹರ ಸೀಮೆಗಳನ್ನು ವಶಮಾಡಿಕೊಂಡನಂತರ ೩೨. ಬಂಗಾಜಲ, ಸಾವಂತ, ಚೌಟ,

ವ|| ಇಂತು ಚೌಟ ಬಂಗಾಜಲ ಸಾವಂತ ಮೂಲ ಕುಂಬಳೆಕಾಸರಗೋಡ ಮನ್ನೆಯರ ಮುರಿದು ತತ್ತದ್ಧರಿತ್ರಿಯಂ ವಶಗೈದು ಮಂಗಳೂರ ಸಂಸ್ಥಾನಮಂ ಸ್ವಾಧೀನಂಗೈದನಂತರಂ ಮೂಲಿಕೆ ಕೊಡೆಯಾಲ ಮೂಡಬಿದಿರೆ ಉಳ್ಳಾಲ ಕುಂಬಳೆ ಕಾಸರಗೋಡು ಪುದುವೆಟ್ಟು ಬೆಳ್ಳರೆ ಕಾಂತಮಂಗಲ ಬಂದ್ಯಡಕ ಕಂಡಂಕುಳಿ ಕೊಲ್ಲೂರಬಾಚಿ ಶಿಶಿಲ ಚಂದ್ರಗಿರಿ ಕಿದುಟು ಮೂಡಗೊಡೆಯಾಲ ಫಣಿಯಾಲ ಮುಂತಾದ ಕೋಂಟೆಗಳಂ ಬಲಿಯಿಸಿದನಂತುಮಲ್ಲದೆಯುಂ

ಕಂ|| ಕಡುಗಲಿಗಳೆನಿಸುವಗ್ಗದ
ಕೊಡಗರನೊಳಗೆನಿಸಿ ಸಾರ್ದು ಗೋರಾಷ್ಟ್ರದ ನಾ
ಲ್ಗಡೆಯ ಸಾಧಿಸಿ ಪಡುಗಡ
ಲೊಡೆಯಂ ತಾನೆನಿಸಿ ವೆಂಕಟೋರ್ವಿಪನೆಸೆದಂ ೩೩

ವ|| ಮತ್ತಮದಲ್ಲದೆ

ಕಂ|| ಚಾರುತುರಂಗಮಚಯಮದ
ವಾರಣಬಹುಪತ್ತಿವೆರಸುತಲ್ಲಿಂ ತೆರಳ್ದಾ
ಧೀರವೆಂಕಟನೃಪಾಲಂ
ಕೌಲಿಗ್ರಾಮಪ್ರದೇಶಮಮಂ ಮಿಗೆ ಸಾರ್ದಂ ೩೪

ಮೂಲ, (ಮೂಲಕಿ) ಮತ್ತು ಕುಂಬಳೆ-ಇವರುಗಳನ್ನು ಸೋಲಿಸಿ, ಆ ಭೂಮಿಯನ್ನು ಹಾಗೂ ಅಧಿಕ ಸಂಪತ್ತಿನಿಂದ ಕೂಡಿದ ಮಂಗಳೂರನ್ನೂ ಗೆದ್ದುಕೊಂಡನು. ವ|| ಈ ರೀತಿಯಾಗಿ ಚೌಟ, ಬಂಗಾಜಲ, ಸಾವಂತ, ಮೂಲ, ಕುಂಬಳೆ, ಕಾಸರಗೋಡು ಮುಂತಾದ ಕಡೆಯ ರಾಜರನ್ನು ಗೆದ್ದು, ಆಯಾ ಪ್ರದೇಶಗಳನ್ನು ವಶಪಡಿಸಿಕೊಂಡು ಆಮೇಲೆ, ಮಂಗಳೂರು ಸಂಸ್ಥಾನವನ್ನು ಸ್ವಾಧೀನಪಡಿಸಿಕೊಂಡ ಮೇಲೆ, ಮೂಲಿಕೆ, ಕೊಡೆಯಾಲ, ಮೂಡಬಿದಿರೆ, ಉಳ್ಳಲ, ಕುಂಬಳೆ, ಕಾಸರಗೋಡು, ಪುದುವೆಟ್ಟು, ಬೆಳ್ಳರೆ, ಕಾಂತಮಂಗಲ, ಬಂದ್ಯಡಕ, ಕಂಡಂಕುಳಿ, ಕೊಲ್ಲೂರಬಾಚಿ, ಶಿಶಿಲ, ಚಂದ್ರಗಿರಿ, ಕಿದುಟು, ಮೂಡಗೊಡೆಯಾಲ, ಫುಣಿಯಾಲ ಮುಂತಾದ ಕೋಟೆಗಳನ್ನು ಬಲಪಡಿಸಿದನು. ಅಂತೂ ಅಲ್ಲದೆ-೩೩. ಕಡುಗಲಿಗಳೆನಿಸಿದ ಶ್ರೇಷ್ಠರಾದ ಕೊಡಗರನ್ನು ಅಧೀನಗೊಳಿಸಿ ಗೋರಾಷ್ಟ್ರದೇಶದ ನಾಲ್ಕೂ ಭಾಗಗಳನ್ನು ಸಾಧಿಸಿ ಪಶ್ಚಿಮ ಸಮುದ್ರದ ಒಡೆಯನೆನ್ನಿಸಿ ವೆಂಕಟಪ್ಪನಾಯಕನು ಮೆರೆದನು. ಮತ್ತೂ ಅಲ್ಲದೆ-೩೪. ಕುದುರೆಗಳ ಸಮೂಹ, ಮದಗಜಗಳು, ಅನೇಕ ಪದಾತಿಗಳು ಸಹಿತ ಅಲ್ಲಿಂದ ಹೊರಟ ವೆಂಕಟಪ್ಪನಾಯಕನು ಕೌಲಿ ಗ್ರಾಮ ಪ್ರದೇಶವನ್ನು ಸೇರಿದನು. ವ|| ಈ ರೀತಿಯಾಗಿ ಕೌಲಿ ಗ್ರಾಮ ಪ್ರದೇಶಕ್ಕೆ ತೆರಳಿ ಕೌಲೇದುರ್ಗಕ್ಕೆ ಮುತ್ತಿಗೆ ಹಾಕಿದನು. ಆ ಗ್ರಾಮಾಧಿಪತಿಗಳಾದ ತೊಲೆ ತಮ್ಮ ಹಾಗೂ ಮುಂಡಿಗೆ ತಮ್ಮರೆಂಬ ಅತಿ ಪರಾಕ್ರಮಶಾಲಿಗಳಾದ ಇಬ್ಬರು ಸೋದರರು ಅಸಂಖ್ಯಾತ ಮಂದಿ ಜನರನ್ನು ಸೇರಿಸಿಕೊಂಡು ಸೊಕ್ಕಿನಿಂದ ಕೂಡಿ, ಕೋಟೆಯನ್ನು ಬಲಪಡಿಸಿ ಹಲವು ಮಾಸಗಳವರೆಗೆ ಕಾದಿದರು. ಆ ಬಳಿಕ ಧನಧಾನ್ಯಾದಿ ವಸ್ತುಗಳು ಒಳಗೆ ಹೋಗದಂತೆ ಮಾಡಲು ಹೊರಗೆ ಒಂದು ದಾರಿ, ಒಳದಾರಿ, ಸಂದಿ, ಕಣಿವೆಗಳನ್ನು

ವ|| ಇಂತು ಕೌಲಿಗ್ರಾಮಪ್ರದೇಶಮಂ ಸಾರ್ದಾ ಕೌಲಿದುರ್ಗಕ್ಕೆ ಮುತ್ತಿಗೆಯಿಕ್ಕಲಾ ಗ್ರಾಮಾಧಿಪತಿಗಳಪ್ಪ ತೋಲೆತಮ್ಮ ಮುಂಡಿಗೆತಮ್ಮರೆಂಬತಿಪರಾಕ್ರಮಶಾಲಿಗಳಪ್ಪಿರ್ವರ್ ಸಹೋದರರಸಂಖ್ಯಾತಮಾದ ಮಂದಿಮಕ್ಕಳಂ ನೆರಹಿ ಮಾರ್ಮಲೆತು ಕೋಂಟೆಯಂ ಕಲಿಯೇರಿಸಿ ಪಲವು ಮಾಸಂ ಕಾದಿಸಲ್ ಬಳಿಕ್ಕಂ ಜಕೀರಿರಸ್ತುಮುಸ್ತೈದೆಯೊಳಪುಗದಂತು ಪಥ ಪೈಕ ಕಂಡಿ ಕಣಿವೆಗಳಂ ಕಟ್ಟಿ ಕೋಟೆಯಂ ಜೇರುಗೆಯ್ಯಲೊಳಗೆ ನಿತ್ತರಿಸಲಮ್ಮದೆ ಪೊರಗಣ್ಗೈದಿ

ಕಂ|| ಛಲಪದಮಂ ಮೆರೆದತಿಭುಜ
ಬಲದಿಂ ಮಾರ್ಮಲೆತು ನಿಂದಿದಿರ್ಚಿದ ಬಲವ
ತ್ತೊಲೆಮುಂಡಿಗೆದಮ್ಮಾಖ್ಯೆಯ
ಮಲೆತರನುರೆ ಗೆಲ್ದು ಕೋಂಟೆಯಂ ಸಾಧಿಸಿದಂ ೩೫

ವ|| ಇಂತತ್ಯಂತ ಸಾಹಸದಿಂದಾ ಕೋಂಟೆಯಂ ಕೊಂಡ ನಂತರಮಾ ಕೋಂಟೆಯಂ ಬಲಿಸಿಯದಕ್ಕೆ ಭುವನಗಿರಿಯ ದುರ್ಗಮೆಂದು ನಾಮಾಂಕಿತಮಂ ರಚಿಸಿ ಪಿಂತೆ ತಮ್ಮ ಜನಕ ದೊಡ್ಡಸಂಕಣನಾಯಕಂ ಕಾಶೀಕ್ಷೇತ್ರದಿಂ ತಂದ ದಿವ್ಯಲಿಂಗಮಂ ವಿಶ್ವೇಶ್ವರಲಿಂಗಮೆಂದಾ ಗಮವಿಧಾನದಿಂದಾ ಕೋಂಟೆಯೊಳ್ ಪ್ರತಿಷ್ಠೆಯಂ ರಚಿಸಿ ಶಿಲಾಮಯಮಾದ ದೇವಸ್ಥಾನಮಂ ಕಟ್ಟಿಸಿ ಭೂಸ್ವಾಸ್ಥೆಯಂ ಧಾರೆಯನೆರೆದು ತತ್ಪೂಜಾದಿವಿಭವಂಗಳಂ ನಡೆಯಿಸಿ ಮತ್ತಮಾ ದುರ್ಗ

ಕಟ್ಟಿ ಮುತ್ತಿಗೆ ಹಾಕಲು, ಒಳಗೆ ನಿಲ್ಲಲಿಕ್ಕಾಗದೇ ಅವರು ಹೊರಗಡೆಗೆ ಬಂದರು. ಆಗ ೩೫. ಛಲವನ್ನು ಸಾಧಿಸಿ, ಹೆಚ್ಚಿನ ಭುಜಬಲದಿಂದ ಸೊಕ್ಕಿ ಎದುರಾದ ತೋಲೆ ತಮ್ಮ-ಮುಂಡಿಗೆ ತಮ್ಮ ಎಂಬ ಬಲಶಾಲಿಗಳನ್ನು ಗೆದ್ದು ಕೋಟೆಯನ್ನು ವಶಪಡಿಸಿಕೊಂಡನು. ವ|| ಈ ರೀತಿ ಅತ್ಯಂತ ಪರಾಕ್ರಮದಿಂದ ಕೋಟೆಯನ್ನು ವಶಪಡಿಸಿಕೊಂಡ ನಂತರ, ಆ ಕೋಟೆಯನ್ನು ಬಲಪಡಿಸಲು, ಅದಕ್ಕೆ "ಭುವನಗಿರಿದುರ್ಗ"ವೆಂದು ಹೆಸರಿತ್ತು, ಹಿಂದೆ ತಮ್ಮ ತಂದೆ ದೊಡ್ಡಸಂಕಣ್ಣನಾಯಕನು ಕಾಶೀಕ್ಷೇತ್ರದಿಂದ ತಂದ ದಿವ್ಯವಾದ ಲಿಂಗವನ್ನು ವಿಶ್ವೇಶ್ವರಲಿಂಗವೆಂದು ಆಗಮೋಕ್ತ ವಿಧಾನದಿಂದ ಕೋಟೆಯಲ್ಲಿ ಪ್ರತಿಷ್ಠೆಯನ್ನು ನಿರ್ವಹಿಸಿ, ಅಲ್ಲಿ ಶಿಲಾಮಯವಾದ ದೇವಸ್ಥಾನವನ್ನು ಕಟ್ಟಿಸಿದನು. ಇದಕ್ಕೆ ಭೂಸ್ವಾಸ್ಥೆಯನ್ನು ಧಾರೆಯನ್ನೆರೆದು ಪೂಜಾದಿ ನಿತ್ಯವೈಭವಗಳು ನಡೆಯುವಂತೆ ಏರ್ಪಡಿಸಿದನು. ಮತ್ತೆ ಆ ಕೋಟೆಯಲ್ಲಿ, ಅಲ್ಲಲ್ಲೇ ಉಚಿತವಾದ ತಾಣಗಳಲ್ಲಿ ಪರಿವಾರ ದೇವತೆಗಳನ್ನು ಪ್ರತಿಷ್ಠೆ ಮಾಡಿಸಿ, ನಿತ್ಯವೂ ಅವುಗಳ ಅರ್ಚನೆ ನಡೆಯುವಂತೆ ನೇಮಿಸಿದನು. ಮತ್ತೆ ಆ ಕೋಟೆಯಲ್ಲಿ ಶ್ರೇಷ್ಠವಾದ ಅರಮನೆಯನ್ನು ಕಟ್ಟಿಸಿ ಭಂಡಾರ, ವಾಹನಗಳ ಶಾಲೆ, ಉಗ್ರಾಣ, ಪಣತ, ಆನೆಯ ಮಹಲು, ಕುದುರೆಯ ಲಾಯ ಮುಂತಾದ ಮಹಲುಗಳನ್ನು ನಿರ್ಮಾಣ ಮಾಡಿಸಿದನು. ಮತ್ತೆ ಆ ಕೋಟೆಯ ಹೊರಭಾಗದಲ್ಲಿ ಕಲ್ಯಾಣಮಹಲೆಂಬ ಬೆಟ್ಟದ ಅರಮನೆಯನ್ನು ಕಟ್ಟಿಸಿದನು. ಅಗ್ರಹಾರ, ಮಹತ್ತಿನಮಠ, ಶೃಂಗೇರಿಮಠ, ಪೇಟೆ, ತಳವಾರಕಟ್ಟೆ, ಕೆರೆ, ತೋಟ, ಗದ್ದೆಗಳನ್ನು ನಿರ್ಮಾಣ ಮಾಡಿಸಿ, ಆಯಾಸ್ಥಾನಗಳಲ್ಲಿ ಗ್ರಾಮಾಧಿದೇವತೆಗಳನ್ನು ಸ್ಥಾಪಿಸಿದನು. ಹೊರಭಾಗದಲ್ಲಿ ಆಕ್ಕಾಯಿ ಹಾಗೂ ಕೋಟೆಯ

ದೊಳುಚಿತಸ್ಥಾನಂಗಳೊಳ್ ಪರಿವಾರದೇವತೆಗಳಂ ಪ್ರತಿಷ್ಠೆಗೈಸಿ ನಿಚ್ಚಂ ತದರ್ಚನೆ ನಡೆವಂತು ನಿಯಾಮಕಂಗೈದು ಮತ್ತಮಾ ಕೋಂಟೆಯೊಳುತ್ಕೃಷ್ಟಮಾದರಮನೆಯಂ ಕಟ್ಟಿಸಿ ಭಂಡಾರ ಜಾನಶಾಲೆಯುಗ್ರಾಣ ಪಣತವಾನೆಯಮಹಲು ಕುದುರೆಯಲಾಯ ಮುಂತಾದ ಮಹಲುಗಳಂ ನಿರ್ಮಾಣಗೈಸಿ ಮತ್ತಮಾ ಕೋಂಟೆಯ ಹೊರಗಡೆಯೊಳ್ ಕಲ್ಯಾಣಮಹಲೆಂಬ ಬೆಟ್ಟದರಮನೆಯಂ ಕಟ್ಟಿಸಿ ಮತ್ತಮಗ್ರಹಾರ ಮಹತ್ತಿನಮಠ ಶೃಂಗೇರಿಮಠ ಪೇಟೆ ತಲವಾರಗಟ್ಟೆ ಕೆರೆ ತೋಟ ಗದ್ದೆಗಳಂ ನಿರ್ಮಾಣಂಗೈಸಿ ತತ್ತತ್ಸ್ಥಾನಂಗಳೊಳ್ ಗ್ರಾಮಾಧಿದೇವತೆಗಳಂ ನೆಲೆಗೊಳಿಸಿ ಪೊರಗುಕ್ಕುಡಮನೊಡ್ಡುಗಳಂ ಬಲಿಯಿಸಿ ರಚನೆಗೈಸಿದನಂತುಮಲ್ಲದೆಯುಂ

ಕಂ॥ ಹೆಗ್ಗಡೆ ಬಲ್ಲಾಳರ್ಕಳ
ಮೊಗ್ಗಳಮಂ ಮುರಿದುಕೊಂಡು ತತ್ಭೂತಳಮಂ
ಬಗ್ಗದ ಮನ್ನೆಯರದಟಂ
ಮುಗ್ಗಿಸಿ ತತ್ತದ್ಧರಿತ್ರಿಯಂ ವಶಗೈದಂ ೩೬

ವ॥ ಮತ್ತಮದಲ್ಲದಾಯನೂರ ಗೌಡಂ ಮೊಸರೂರೊಳು ಕೋಂಟೆಯಂ ಮಾಡಿಕೊಂಡಿರಲಾ ಕೋಂಟೆಸೀಮೆಗಳಂ ತೆಗೆದುಕೊಂಡಾ ಕೋಂಟೆಯಂ ಕೆಡಹಿ ಸಿದ್ಧೇಶ್ವರದೊಳ್ ನವೀನಪರಿಸ್ತರಣಂ ನಿರ್ಮಾಣಂಗೈಸಿದನಂತುಮಲ್ಲದೆಯುಂ

ಕಂ॥ ಹಿರಿಯ ಹನುಮೇಂದ್ರಸುತನಂ
ಪೊರೆದೆಡತೊರೆ ಗಾಜನೂರು ಸೀಮೊಗೆಯ ಸುವಿ
ಸ್ತರಮಾದ ಲಕ್ಕುವಳ್ಳಿಯ
ವರಕೋಂಟಾತ್ರಯವನಾ ನೃಪಂ ವಶಗೈದಂ ೩೭

ವ॥ ಅದೆಂತೆಂದೊಡೆ ತರಿಕೆರೆಯ ಹಿರಿಯಹನುಮಪ್ಪನಾಯಕನ ಸುತರಿರ್ವರುಂ ತಂದೆ ಹಸುಗೆಗೆಯ್ದು ಕೊಟ್ಟಂತಿರದೆ ತಮ್ಮೊಳ್ ವಿವಾದಿಸಿ ಪೊಣರ್ದು ಕಿರಿಯಾತಂ ಕಡವೂರಂ

---

ಒಡ್ಡುಗಳನ್ನು ಬಲಪಡಿಸಲು ಏರ್ಪಡಿಸಿದನು. ಅಂತೂ ಮಾತ್ರವಲ್ಲದೆ. ೩೬. ಹೆಗ್ಗಡೆ ಬಲ್ಲಾಳರುಗಳ ಸೊಕ್ಕನ್ನು ಮುರಿದು ಅವರ ರಾಜ್ಯಗಳನ್ನು ವಶಪಡಿಸಿಕೊಂಡನು. ಬಗ್ಗದ ರಾಜರ ಪರಾಕ್ರಮವನ್ನು ಮುರಿದು ಅವರ ಭೂಮಿಯನ್ನು ಪಡೆದುಕೊಂಡನು. ವ॥ ಮತ್ತೂ ಅಲ್ಲದೆ ಅಯನೂರ ಗೌಡನು ಮೊಸರೂರಲ್ಲಿ ಕೋಟೆಯನ್ನು ರಚಿಸಿಕೊಂಡು, ಇರಲು, ಆ ಕೋಟೆ ಮತ್ತು ಸೀಮೆಗಳನ್ನು ತೆಗೆದುಕೊಂಡು, ಆ ಕೋಟೆಯನ್ನು ಕೆಡಿಸಿ, ಸಿದ್ಧೇಶ್ವರದಲ್ಲಿ ಹೊಸ ಕೋಟೆಯನ್ನು ನಿರ್ಮಾಣ ಮಾಡಿಸಿದನು. ಅಂತೂ ಅಲ್ಲದೆ- ೩೭. ಹಿರಿಯಹನುಮಪ್ಪನಾಯಕನ ಮಗನನ್ನು ಕಾಪಾಡಿ ಎಡತೊರೆ, ಗಾಜನೂರು, ಶಿವಮೊಗ್ಗೆಯನ್ನೂ, ಲಕ್ಕವಳ್ಳಿಯ ವಿಸ್ತಾರವಾದ ಊರು ಮತ್ತು ಕೋಟೆಯನ್ನೂ ವಶಪಡಿಸಿಕೊಂಡನು ವ॥ ಅದು ಯಾವ ರೀತಿ ಎಂದರೆ ತರೀಕೆರೆಯ ಹಿರಿಯ ಹನುಮಪ್ಪನಾಯಕನ ಮಕ್ಕಳಿಬ್ಬರಿಗೆ ಅವರ ತಂದೆಯು ಆಸ್ತಿಯನ್ನು (ರಾಜ್ಯವನ್ನು) ವಿಭಾಗ ಮಾಡಿಕೊಟ್ಟಿರುವುದು ಸರಿಯಾಗಿರದೆ, ಅವರೊಳಗೆ ವಿವಾದವುಂಟಾಗಿ, ಹೋರಾಟದ ಮೂಲಕ ಕಿರಿಯವನು ಕಡವೂರನ್ನು ತಗೆದುಕೊಂಡನು. ಹಿರಿಯುವನು ಸಹಾಯಕ್ಕಾಗಿ ಇಕ್ಕೇರಿಯ ಅರಸನ ಮೊರೆಹೊಕ್ಕು ಪ್ರಾರ್ಥಿಸಿಕೊಂಡನು. ನಾಯಕನು ಚಿಕ್ಕ ಕಲ್ಲಪ್ಪನೆಂಬ

**ತೆಗೆದುಕೊಳಲ್ ಪಿರಿಯಾತನಿಕ್ಕೇರಿಗೆ ಬಿನ್ನೈಸಿ ಕಳುಪಲ್ ಚಿಕ್ಕಕಲ್ಲಪ್ಪನೆಂಬ ದಳವಾಯ ಸಂಗಡಂ ಸೈನ್ಯಮಂ ಕೂಡಿಸಿ ಕಳುಪಲಾ ಚಿಕ್ಕಕುಮಾರಂ ಬೇಲೂರ ವೆಂಕಟಾದ್ರಿನಾಯಕರ್ ಮೈಸೂರವರ್ ಚಿಕ್ಕನಾಯಕನಹಳ್ಳಿಯವರ್ ಚಿಂತನಕಲ್ಲವರ್ ಸೀರೆದ ರಂಗಪ್ಪನಾಯಕರ್ ಮುಂತಾದವರ ಸೈನ್ಯಮಂ ಬರಿಸಿಕೊಂಡು ಹೇರಳ ಬಲಮಂ ಮಾಡಿಕೊಂಡಿದಿರ್ಚ ನಿಲಲ್ ಪಿರಿಯ ಕುಮಾರಂ ನಿತ್ತರಿಸಿ ನಿಲಲಶಕ್ಯಮಾಗಿ ಮತ್ತಮಿಕ್ಕೇರಿಗೆ ಬಿನ್ನೈಸಿ ಕಳುಪಲಾಗಳಾ ವೆಂಕಟಪ್ಪನಾಯಕಂ ಸೈನ್ಯಸಹಿತಂ ಇಕ್ಕೇರಿಯಿಂ ತಾನೆ ತೆರಳ್ದೈತರಲಾಗಳಾ ಪಿರಿಯ ಕುಮಾರನೆಳ್ತಂದು ಗಂಗೂರೆಡೆಯೊಳ್ ಸಂಧಿಸಿ ಸೀಮೆಗೆ ಗಾಜನೂರು ಲಕ್ಕುವಳ್ಳಿಯ ಸೀಮೆ ಕೋಂಟೆಗಳಂ ಕಾಣಿಕೆರೂಪಾಗಿತ್ತು ಮರೆವುಗಲಭಯ ಮಿತ್ತು ತುಂಗಭದ್ರಾನದಿಯನುತ್ತರಿಸಲಾ ವಾರ್ತೆಯಂ ಕೇಳ್ದು ಕಿರಿಯ ಕುಮಾರನ ಸಹಾಯಕ್ಕೆ ಬಂದವರ್ ಧೈರ್ಯಗುಂದಿ ನಿತ್ತರಿಸಲಾರದೆ ಬಾಣಾವರಕ್ಕಾಗಿ ಪಲಾಯನಂಗೈಯಲಾಗಳಾ ವೆಂಕಟಪ್ಪನಾಯಕಂ ಹಿರಿಯ ಲಿಂಗಣನಾಯಕನೆಂಬ ದಳವಾಯ ಸಂಗಡಂ ಹೇರಳಬಲವಂ ತೆರಳ್ಚಿ ಕಳುಪಲಾತಂ ಕಡವೂರ ಕೋಂಟೆಯಂ ವೇಢೈಸಿ ತಳಿಸುರಂಗಗಳಂ ನಡೆಸಿ ತತ್ಕೋಂಟೆಯಂ ತೆಗೆದುಕೊಳಲಾ ಕೋಂಟೆಯಂ ಹಿರಿಯ ಕುಮಾರಂಗಿತ್ತು ಮನ್ನಿಸಿ ಮತ್ತಂ ಬಾಣಾವರಕ್ಕೈದುತಿರಲಾ ವಾರ್ತೆಯಂ ಕೇಳ್ದತ್ಯಂತಭಯೋದ್ರೇಕದಿಂ ಚಿಕ್ಕಕುಮಾರನೆಳ್ತಂದು ಮರೆಪುಗಲವರಿರ್ವರ ವಿವಾದಮಂ ತೀರ್ಚಿ ಮನಸ್ಸಂಕೋಚಮಂ ಪರಿಹರಿಸಿ ಬುದ್ಧಿಮಾರ್ಗಂಗಳಂ ತಿಳುಪಿ ಬಳಿಕವರ್ಗಳಿಂದನೇಕದ್ರವ್ಯಾಭ ರಣಾಂಬರವಸ್ತುವಾಹನಾದಿಗಳಂ ಸಂಗ್ರಹಿಸಿ ಪರಮಪ್ರಖ್ಯಾತಿಯಂ ಪಡೆದು ಮರಳ್ದನಂತುಮಲ್ಲದೆಯುಂ**

ದಳವಾಯಿಯೊಡನೆ ಸೈನ್ಯವನ್ನು ಕೂಡಿಸಿ ಕಳುಹಿಸಿದನು. ಚಿಕ್ಕವನು ಬೇಲೂರು ವೆಂಕಟಾದ್ರಿನಾಯಕ, ಮೈಸೂರವರು ಚಿಕ್ಕನಾಯಕನ ಹಳ್ಳಿಯವರು, ಚಿಂತನಕಲ್ಲಿನವರು, ಸೀರ್ಯದ ರಂಗಪ್ಪನಾಯಕರು ಮುಂತಾದವರ ಸೈನ್ಯವನ್ನು ಬರಮಾಡಿಕೊಂಡು ಹೇರಳ ಬಲವನ್ನು ಮುಂದಿಟ್ಟುಕೊಂಡು ಎದುರಾಗಲು ಹಿರಿಯ ಕುಮಾರನು ಇವರ ಎದುರಿಗೆ ನಿಲ್ಲಲಾರದೆ ಮತ್ತೆ ಇಕ್ಕೇರಿಗೆ ನಿರೂಪದ ಮೂಲಕ ಪ್ರಾರ್ಥಿಸಿ ಬಿನ್ನೈಸಿಕೊಂಡನು. ಆಗ ವೆಂಕಟಪ್ಪನಾಯಕನು ಸೈನ್ಯಸಹಿತ ಇಕ್ಕೇರಿಯಿಂದ ತಾನೇ ಹೊರಟುಬಂದನು. ಆಗ ಹಿರಿಯವನು ಗಂಗೂರು ಎಂಬಲ್ಲಿ ನಾಯಕನನ್ನು ಎದುರುಗೊಂಡು ಶಿವಮೊಗ್ಗೆ, ಗಾಜನೂರು, ಲಕ್ಕವಳ್ಳಿ ಸೀಮೆ ಹಾಗೂ ಕೋಟೆಗಳನ್ನು ಕಾಣಿಕೆಯಾಗಿ ಕೊಟ್ಟು ಶರಣಾಗತನಾದನು. ಅವನಿಗೆ ನಾಯಕನು ಅಭಯ ನೀಡಿ ತುಂಗಭದ್ರಾ ನದಿ ತೀರದಲ್ಲಿ ಬೀಡುಬಿಟ್ಟು ಧಾಳಿಮಾಡಿದನು. ಈ ಸಮಾಚಾರವನ್ನು ಕೇಳಿ ಕಿರಿಯ ಕುಮಾರನ ಸಹಾಯಕ್ಕೆ ಬಂದವರು ಧೈರ್ಯಗುಂದಿ ಅಲ್ಲಿ ನಿಲ್ಲಲಾರದೆ ಬಾಣಾವರಕ್ಕೆ ಪಲಾಯನ ಮಾಡಿದರು. ಆಗ ವೆಂಕಟಪ್ಪನಾಯಕನು ಹಿರಿಯ ಲಿಂಗಣ್ಣನಾಯಕನ ಸಂಗಡ ಹೇರಳ ಬಲವನ್ನು ಕೊಟ್ಟು ಕಳುಹಿಸಲು, ಆ ಸೇನೆಯು ಕಡವೂರ ಕೋಟೆಯನ್ನು ಆಕ್ರಮಿಸಿ, ತಳಿಸುರಂಗಗಳ ಮೂಲಕ ಕೋಟೆಯನ್ನು ವಶಮಾಡಿಕೊಳ್ಳಲು, ಆ ಕೋಟೆಯನ್ನು ಹಿರಿಯ ಕುಮಾರನಿಗೆ ಕೊಟ್ಟು ಮನ್ನಿಸಿದನು. ಅನಂತರ ಬಾಣಾವರಕ್ಕೆ ಕೆಳದಿಸೈನ್ಯವು ಹೊರಟಿತು. ಈ ವಾರ್ತೆಯನ್ನು ಕೇಳಿ ಅತ್ಯಂತ ಭಯದಿಂದ ಚಿಕ್ಕಕುಮಾರನು ನಾಯಕನ ಮೊರೆಹೋಗಲು, ಅವರಿಬ್ಬರ ವಿವಾದವನ್ನೂ ಬಗೆಹರಿಸಿ, ಅವರ ಮನಸ್ಸಿನ ಅಶಾಂತತೆಯನ್ನು ಪರಿಹರಿಸಿ, ಬುದ್ಧಿವಾದಗಳಿಂದ ಅವರಿಗೆ ಸಮಾಧಾನಪಡಿಸಿದನು. ಅನಂತರ ಅವರುಗಳಿಂದ ಅನೇಕ ದ್ರವ್ಯ-ಆಭರಣ-ವಸ್ತ್ರ-ವಾಹನಾದಿಗಳನ್ನು ಸ್ವೀಕರಿಸಿ ಪರಮಕೀರ್ತಿಯನ್ನು ಹೊಂದಿ

ಕಂ॥ ವರರಾಯದುರ್ಗ ಬೇಲೂ
ರರಸರನೊಳಗೆನಿಸಿ ಹರಪುರಾಧೀಶ್ವರನಂ
ಪೊರೆದುರುತರ ಚಿಂತನಕ
ಲ್ಲೆರೆಯನನೆ ದಳಗೆಡಿಸಿ ಬಾಹುಬಲಮಂ ಮೆರೆದಂ ೩೮

ವ॥ ಇಂತಾ ವೆಂಕಟಪ್ಪನಾಯಕಂ ಸೋದೆ ಬಿಳಿಗೆ ತರಿಕೆರೆ ಮುಂತಾದ ಮನ್ನೆಯರ್ಕಳೊಳ್ ತಾನತ್ಯಂತ ಪ್ರಖ್ಯಾತಿಯಂ ಪಡೆದು ರಾಜ್ಯಮಂ ಪರಿಪಾಲಿಸುತ್ತುಂ ಸ್ವರಾಜ್ಯ ಪರಿಸ್ತರಣಂಗಳೊಳ್ ತತ್ತತ್ಸ್ಥಾನಂಗಳ್ಗುಚಿತಮಾದಧಿಕಾರಿಗಳಂ ನೆಲೆಗೊಳಿಸಿ ಕೋಂಟೆಗಳಂ ಬರಿಸಿ ಜಕೀರಿರಸ್ತು ಮುಸ್ತೈದೆಗಳಂ ಪೂರ್ಣವನಾಗಿಸಿ ತತ್ಪರಿಸ್ತರಣಂಗಳ ಯೋಗ್ಯತಾನುಸಾರವರಿತು ಪದಾತಿಗಳಂ ನೆಲೆಗೊಳಿಸಿದನಂತು ಮಲ್ಲದೆಯುಂ

ಕಂ॥ ಕೆರೆ ಕಾಳ್ವೆರಮಾರಾಮಂ
ವರಶಾಲಿ ಸಿತೇಕ್ಷು ಧಾನ್ಯಭೂಮಿಕೆಯೆಸೆವಾ
ಗರ ತೋಂಟಮಿವರ್ಗಳಿಂದೆಡೆ
ದೆರಪಿಲ್ಲದ ತೆರದೆ ಗೆಯ್ಮೆಗೊಳಿಸಿದನಿಳೆಯಂ ೩೯

ಮ॥ ತರುವೆಲ್ಲಂ ಸುರಭೂಜಗಳ್ ಲತೆಗಳೆಲ್ಲಂ ದೇವಾತವಲ್ಲಿಗಳ್
ತೊರೆಯೆಲ್ಲಂ ಬರ್ದಿಲೇರುಗಳ್ ಕರಿಗಳೆಲ್ಲಂ ದೇವಮಾತಂಗಗಳ್
ಗಿರಿಯೆಲ್ಲಂ ರಜತಾದ್ರಿಗಳ್ ವನಜಮೆಲ್ಲಂ ಪುಂಡರೀಕಂಗಳಾ
ಗಿರೆ ಪರ್ವಿತ್ತುರೆ ವೆಂಕಟೋರ್ವಿಪಯಶಂ ವಿಶ್ವಂಭರಾಚಕ್ರದೊಳ್ ೪೦

ಮರಳಿದನು. ಅಂತು ಅಲ್ಲದೆ- ೩೮. ರಾಯದುರ್ಗ ಮತ್ತು ಬೇಲೂರಿನ ಅರಸರನ್ನು ಅಧೀನಗೊಳಿಸಿ ಹರಪುರದ ರಾಜನನ್ನು ಕಾಪಾಡಿ, ಚಿಂತನಕಲ್ಲಿನ ರಾಜನನ್ನು ಕಂಗೆಡಿಸಿ ಭುಜಬಲವನ್ನು ಮೆರೆದನು. ವ॥ ಈ ರೀತಿ ವೆಂಕಟಪ್ಪನಾಯಕನು ಸೋದೆ, ಬಿಳಿಗೆ, ತರೀಕೆರೆ ಮುಂತಾದ ರಾಜರಲ್ಲಿ ತಾನು ಅತ್ಯಂತ ಪ್ರಖ್ಯಾತಿಯನ್ನು ಪಡೆದು ರಾಜ್ಯವನ್ನು ಪರಿಪಾಲಿಸುತ್ತಿದ್ದನು. ತನ್ನ ರಾಜ್ಯದ ಕೋಟೆಗಳಲ್ಲಿ ಆಯಾ ಸ್ಥಾನಗಳಿಗೆ ಉಚಿತವಾದ ಅಧಿಕಾರಿಗಳನ್ನು ನೇಮಿಸಿ, ಕೋಟೆಗಳನ್ನು ಅಲ್ಲಲ್ಲಿಯೇ ನಿರ್ಮಿಸಿ ಜಕೀರಿರಸ್ತು ಮುಸ್ತೈದೆಗಳನ್ನು ಪೂರ್ಣ ಮಾಡಿಸಿದನು. ಆಯಾ ಕೋಟೆಗಳಿಗೆ ಉಚಿತಾನುಸಾರವಾಗಿ ಸೈನ್ಯಗಳನ್ನು ನೆಲೆಗೊಳಿಸಿದನು. ಅಂತೂ ಅಲ್ಲದೆ- ೩೯. ಕೆರೆ, ಕಾಲುವೆ, ತೋಟ, ಭತ್ತ, ಬಿಳಿಕಬ್ಬು ಮತ್ತಿತರ ಧಾನ್ಯಗಳು ಬೆಳೆಯುವ ಭೂಮಿಯನ್ನು ಮನೆ ಹಾಗೂ ತೋಟಗಳಿಂದ ಒಂದಿಷ್ಟೂ (ಬೀಳುಬಿಡಲು) ಅವಕಾಶ ಇಲ್ಲದ ಹಾಗೆ ಫಲವತ್ತಾಗಿ ವ್ಯವಸಾಯ ಮಾಡಿಸಿದನು. ೪೦. ಅಲ್ಲಿನ ಎಲ್ಲ ಮರಗಳೂ ಕಲ್ಪವೃಕ್ಷಗಳು; ಎಲ್ಲಾ ಬಳ್ಳಿಗಳೂ ಕಲ್ಪಲತೆಗಳು; ಎಲ್ಲಾ ಹೊಳೆಗಳೂ ಸ್ವರ್ಗದ ಏಣಿಗಳು; ಆನೆಗಳೆಲ್ಲವೂ ಐರಾವತಗಳು; ಬೆಟ್ಟಗಳೆಲ್ಲವೂ ಬೆಳ್ಳಿ ಬೆಟ್ಟಗಳು; ನೀರು ಹೂಗಳೆಲ್ಲವೂ ಪುಂಡರೀಕಗಳು (ಕಮಲ).

ಕಂ|| ಪಶುಗಳ್ ಮೆಯ್ಯುಂದಿದುವಹಿ
ಝುಷಕಪಿಗಳಿಲ್ಲವಾದುದೆಡೆ ಪೂಗಚಯಂ
ನಸಿದುವು ಕೆಳದಿಯ ವೆಂಕಟ
ವಸುಧಾಧಿಪನೊಡನಿದಿರ್ಚಿದರಿಗಳ ದೆಸೆಯಿಂ ೪೧

ವ|| ಇಂತು ಭುವನಜನಂ ನುತಿಸಲ್ ಸದ್ಧರ್ಮದಿಂ ರಾಜ್ಯಪರಿಪಾಲನಂಗೈದನಂತು ಮಲ್ಲದೆಯುಂ

ಕಂ|| ಕಾರಕಳದೊಡೆಯರೆನಿಸಿದ
ಭೈರಸವೊಡೆಯರ್ ವಿರೋಧದಿಂ ವಿಲಸಚ್ಛೃಂ
ಗೇರಿಯ ಧರೆಯಂ ಕೊಂಡುರೆ
ಘೇರಿಸಿ ಮಾತ್ಸರ್ಯದಿಂದೆ ತತ್ಪುರವರಮಂ ೪೨

ಭೈರವನ ಬೆಟ್ಟದೆಡೆಯೊಳ್
ಭೂರಿಶತಘ್ನಿಗಳ ಪೂಡಿ ಬಲ್ಗುಂಡುಗಳಂ
ಪಾರಿಸಿ ಪುರಮಠಗಳೊಳಡಿ
ಯೂರದೊಲಂಡಲೆದುಪದ್ರವಂಗಳನೆಸಗಲ್ ೪೩

ವ|| ಇಂತೆಸಗಿದ ಭೈರಸವೊಡೆಯರ ಮದೋದ್ರೇಕಮಂ ಮಗ್ಗಿಸಿ ಮುತ್ತಿಗೆದೆಗೆಸಿ ಬಳಿಕ್ಕವನತಿರೇಕದಿಂದಾಕ್ರಮಿಸಿದ ಭೂಮಿಯಂ ತೆಗೆದುಕೊಂಡು ಶೃಂಗಪುರದ ಸ್ವಾಮಿಗಳ್ಗಿತ್ತು ತನ್ಮಠದ ಧರ್ಮಕ್ಕೆ ತಾನುಂ ಬೇರೆ ಶಿವಾರ್ಪಿತಮಾಗಿ ಭೂಸ್ವಾಸ್ಥ್ಯೆಯಂ ಧಾರೆಯನೆರೆದು ತನ್ಮಠಮಂ

ಹೀಗೆ ವೆಂಕಟಪ್ಪನಾಯಕನ ಕೀರ್ತಿ ಭೂಮಂಡಲದಲ್ಲಿ ಹರಡಿತು. ೪೧. ಕೆಳದಿ ವೆಂಕಟಪ್ಪನಾಯಕನನ್ನು ಎದುರಿಸಿದ ಶತ್ರುರಾಜರ ರಾಜ್ಯಗಳಲ್ಲಿ ಹಸುಗಳು ಸೊರಗಿ ಹೋದುವು. ಸರ್ಪ, ಮೀನು, ಮಂಗಗಳು ಇಲ್ಲವಾದವು. ಅಡಿಕೆ ತೋಟ ನಾಶವಾಯಿತು ವ|| ಈ ರೀತಿಯಲ್ಲಿ ಭೂಮಿಯಲ್ಲಿನ ಜನಗಳು ಸ್ತುತಿ ಮಾಡುತ್ತಿರಲು ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅಂತೂ ಅಲ್ಲದೆ, ೪೨. ಕಾರ್ಕಳದ ಒಡೆಯನೆನಿಸಿದ ಭೈರಸ ಒಡೆಯನು ವಿರೋಧದಿಂದ ಶೃಂಗೇರಿಯ ಭೂಮಿಯನ್ನು ಆಕ್ರಮಿಸಿ, ಆ ಪಟ್ಟಣವನ್ನು ವಶಪಡಿಸಿಕೊಂಡಿದ್ದನು. ೪೩. ಆ ಭೈರವರಾಜನು ಬೆಟ್ಟಗಳಲ್ಲಿ ಅನೇಕ ತೋಪುಗಳನ್ನು ಹೂಡಿ ಅನೇಕ ಗುಂಡುಗಳನ್ನು ಹಾರಿಸಿ, ಊರು, ಮನೆ ಹಾಗೂ ಮಠಗಳಲ್ಲಿ ಹೆಜ್ಜೆಯಿಡದಂತೆ ಉಪದ್ರವ ಕೊಡುತ್ತಿದ್ದನು. ವ|| ಈ ರೀತಿ ಎದುರಾದ ಭೈರಸ ಒಡೆಯರ ಸೊಕ್ಕನ್ನು ಮುರಿದು ಅವನು ಹಾಕಿದ ಮುತ್ತಿಗೆಯನ್ನು ತೆಗೆಸಿ, ಅತಿರೇಕದಿಂದ ಅವನು ಆಕ್ರಮಿಸಿಕೊಂಡಿದ್ದ ಭೂಮಿಯನ್ನು ತೆಗೆದುಕೊಂಡು ಶೃಂಗೇರಿಯ ಸ್ವಾಮಿಗಳಿಗೆ ನೀಡಿದನು. ಆ ಮಠದ ಧರ್ಮಕ್ಕೆ ತಾನೇ ಬೇರೆಯಾಗಿ ಶಿವಾರ್ಪಿತವಾಗಿ ಭೂಸ್ವಾಸ್ಥ್ಯೆಯನ್ನು ಧಾರೆಯನ್ನೆರೆದನು. ಆ ಮಠದ ಜೀರ್ಣೋದ್ಧಾರವನ್ನು ಕೈಗೊಂಡು, ಶೃಂಗೇರಿಯ ಧರ್ಮಸಂಸ್ಥಾನವನ್ನು ಉದ್ಧರಿಸಿ, ಕಾಪಾಡಿ ಪರಮ ಖ್ಯಾತಿಯನ್ನು ಹೊಂದಿದನು. ಅಂತೂ

ಜೀರ್ಣೋದ್ಧಾರಮಂ ರಚಿಸಿ ಇಂತು ಶೃಂಗೇರಿಯ ಧರ್ಮಸಂಸ್ಥಾನವನುದ್ಧರಿಸಿ ಪರಮಪ್ರಖ್ಯಾತಿಯಂ ಪಡೆದನಂತುಮಲ್ಲದಿಕ್ಕೇರಿಯ ಪುರವರದ ಸಮೀಪದೊಳ್

ಕಂ॥ ಭದ್ರಗುಣ ವೆಂಕಟೇಂದ್ರಂ
ಭದ್ರಪನಾಯಕನ ಪೆಸರೊಳೊಪ್ಪುವ ವಿಲಸ
ದ್ಭದ್ರಪುರವೆಂಬ ಪೇಟೆಯ
ಭದ್ರಮೆನಲ್ ಬಹಳರಚನೆಗೆಯ್ಸಿದನನುವಿಂ ೪೪

ವ॥ ಇಂತಾ ವೆಂಕಟಪ್ಪನಾಯಕಂ ಭದ್ರರಾಜಪುರವೆಂಬ ಪೇಟೆಯಂ ಕಟ್ಟಿಸಿಯನಂತರಂ ಕೆಳದಿಯಿಕ್ಕೇರಿ ಪುರವರದ ಮಧ್ಯದೊಳ್ ತಮ್ಮ ಪಿತಾಮಹನ ಹೆಸರಲ್ಲಿ ಪೇಟೆ ಪಟ್ಟಣಮಂ ಕಟ್ಟಿಸಿಯಾ ಪೊಳಲ್ಗೆ ಸದಾಶಿವಸಾಗರಮೆಂದು ನಾಮಾಂಕಿತಗೈದನಂತುಮಲ್ಲದೆಯುಂ

ಕಂ॥ ಸಾಗರದ ಪೊಳಲೊಳೆಸೆವ ಮ
ಹಾಗಣಪತಿಯಂ ಪ್ರತಿಷ್ಠೆಯಂ ವಿರಚಿಸಿ ಚ
ನ್ನಾಗಿರೆ ತಟಾಕಮಂ ತಾ
ನಾಗಿಸಿ ಬಳಿಯೊಳ್ ಸುಸೌಧಮಂ ಕಟ್ಟಿಸಿದಂ ೪೫

ಕಂ॥ ಚಂದಬನಮೆಂಬ ಪೆಸರಿನ
ನಂದನಮಂ ರಚನೆಗೊಳಿಸಿ ವೆಂಕಟನೃಪನಾ
ನಂದದೆ ಗಣಪತಿಯರ್ಚನೆ
ಗಂದುರುತರಮಾದ ಭೂಮಿಯಂ ಕಲ್ಪಿಸಿದಂ ೪೬

ವ॥ ಮತ್ತಮದಲ್ಲದಾ ವೆಂಕಟಪ್ಪನಾಯಕಂ ತನ್ಮಹಾಗಣಪತಿದೇವರ್ಗೆ ಶಿಲಾಮಯಮಾದ ದೇವಸ್ಥಾನಮಂ ನಿರ್ಮಾಣಂಗೈಸಿ ರಥೋತ್ಸವಾದಿ ಕಟ್ಟಲೆಗಳ್ ನಡೆವಂತು ನಿಯಾಮಕಂಗೈಸಿ

ಅಲ್ಲದೆ ಇಕ್ಕೇರಿಯ ಪಟ್ಟಣದ ಸಮೀಪದಲ್ಲಿ ೪೪. ಮಂಗಳಕರವಾದ ಗುಣಗಳುಳ್ಳ ವೆಂಕಟಪ್ಪನಾಯಕನು ಭದ್ರಪ್ಪನಾಯಕನ ಹೆಸರಿನಲ್ಲಿ ಭದ್ರಪುರವೆಂಬ ಪೇಟೆಯನ್ನೂ ಅದಕ್ಕೆ ಭದ್ರವಾದ ಕೋಟೆಯನ್ನೂ ಮಾಡಿಸಿದನು. ವ॥ ಈ ರೀತಿ ವೆಂಕಟಪ್ಪನಾಯಕನು ಭದ್ರರಾಜಪುರವೆಂಬ ಪೇಟೆಯನ್ನು ಕಟ್ಟಿಸಿ, ಅನಂತರ ಕೆಳದಿ-ಇಕ್ಕೇರಿ ಪಟ್ಟಣದ ಮಧ್ಯದಲ್ಲಿ ತನ್ನ ಪಿತಾಮಹನ ಹೆಸರಿನಲ್ಲಿ ಪೇಟೆ ಹಾಗೂ ಪಟ್ಟಣವನ್ನು ಕಟ್ಟಿಸಿ, ಆ ಪಟ್ಟಣಕ್ಕೆ "ಸದಾಶಿವಸಾಗರ" ವೆಂದು ಹೆಸರು ಕೊಟ್ಟನು. ಅಂತೂ ಅಲ್ಲದೆ ೪೫. ಸಾಗರದ ಪಟ್ಟಣದಲ್ಲಿ ಶ್ರೀ ಮಹಾಗಣಪತಿಯನ್ನು ಪ್ರತಿಷ್ಠೆ ಮಾಡಿ, ಉತ್ತಮವಾದ ಕೆರೆಯನ್ನು ಕಟ್ಟಿಸಿ, ಪಕ್ಕದಲ್ಲಿಯೇ ದೊಡ್ಡಮಹಡಿಯ ಮನೆಯನ್ನು ಕಟ್ಟಿಸಿದನು. ೪೬. ಚಂದವನವೆಂಬ ಉದ್ಯಾನವನ್ನು (ಚಂದ್ರಮಾವಿನಕೊಪ್ಪಲು) ರಚಿಸಿ, ವೆಂಕಟಪ್ಪನಾಯಕನು ಗಣಪತಿಯ ಪೂಜೆಗೆ ಶ್ರೇಷ್ಠವಾದ ಭೂಮಿಯನ್ನು ಕಲ್ಪಿಸಿಕೊಟ್ಟನು. ವ॥ ಅಲ್ಲದೆ ವೆಂಕಟಪ್ಪನಾಯಕನು ಆ ಮಹಾಗಣಪತಿ ದೇವರಿಗೆ ಶಿಲಾಮಯವಾದ ದೇವಸ್ಥಾನವನ್ನು ಕಟ್ಟಿಸಿ, ರಥೋತ್ಸವಾದಿ ಕಟ್ಟಲೆಗಳು ನಡೆಯುವ ಹಾಗೆ ಕಟ್ಟುಪಾಡು ಮಾಡಿದನು, ಮತ್ತೆ ಆ ಸದಾಶಿವಸಾಗರದ

ಮತ್ತಮಾ ಸದಾಶಿವಸಾಗರದ ಬಳಿಯ ವರದಾನದೀತೀರದೊಳ್ ವಿಶ್ವೇಶ್ವರದೇವರಂ ಪ್ರತಿಷ್ಠೆಯಂ ರಚಿಸಿ ದೇವಾಲಯಮಂ ಕಟ್ಟಿಸಿ ಭೂಸ್ವಾಸ್ಥೆಯಂ ಬಿಡಿಸಿ ಮತ್ತಮಾ ನದೀತೀರದೊಳ್ ವಿಶ್ವನಾಥಪುರಮೆಂಬಗ್ರಹಾರಮಂ ರಚಿಸಿ ವೃತ್ತಿಕ್ಷೇತ್ರ ನಿವೇಶನಂಗಳಂ ನಿಯಾಮಿಸಿ ಶ್ರೋತ್ರಿಯ ಬ್ರಾಹ್ಮಣರ್ಗೆ ಧಾರೆಯನೆರೆದು ಸ್ಥಿರಶಾಸನವಂ ಬರೆಸಿತ್ತು ಗಣೇಶದೀಕ್ಷಿತರ ಕಯ್ಯಿಂ ವಾಜಪೇಯಯಾಗಮಂ ರಚಿಯಿಸಿ ಮತ್ತಮಾ ಸದಾಶಿವಸಾಗರದ ಪೊಳಲೊಳ್ ಮನೋಹರಮಾದ ರಾಜಾಲಯಮಂ ನಿರ್ಮಾಣಂಗೈಸಿ ಮತ್ತಮಾ ಸದಾಶಿವಸಾಗರ ಕೆಳದಿಯ ಪೊಳಲ ಮಧ್ಯದೊಳೆಸೆವ ಸಂಗಮೇಶ್ವರಮೆಂಬ ಗ್ರಾಮದೆಡೆಯೊಳ್ ಲೋಕಹಿತಾರ್ಥಮತ್ಯಂತ ಮನೋಹರಮಾದ ತಟಾಕಮಂ ನಿರ್ಮಾಣಂಗೈಸಿದನಂತುಮಲ್ಲದೆಯುಂ

ಕಂ|| ಆ ಕೆರೆಯ ಬಳಿಯೊಳನುಪಮ
ನಾಕೋದ್ಯಾನಕ್ಕೆ ತೊಣೆಯೆನಿಪ್ಪಾರಾಮಾ
ನೀಕವನರಮನೆಯಂ ಸೌ
ಖ್ಯಾಕರಕೇಳೀಸುಸೌಧಮಂ ರಚಿಯಿಸಿದಂ ೪೭

ವ|| ಮತ್ತಮಾ ಸಂಗಮೇಶ್ವರದೆಡೆಯೊಳ್ ಶಾಲೀಕ್ಷೇತ್ರ ಪುಂಡ್ರೇಕ್ಷುವಾಟಗಳಂ ಕಲ್ಪಿಸಿ ಇಕ್ಕೇರಿಯಘೋರೇಶ್ವರದೇವರ ಹೋಬಳಿಯೆಂದಘೋರೇಶ್ವರದೇವರ ಪೂಜಾವೈಭವಾರ್ಥ ಮೀರಾರ್ಸಾಸಿರ ಪೊಂಗಳನೀವ ಸಿಸ್ತಿನ ಸೀಮೆಯಂ ವಿಂಗಡಿಸಿ ಅದಕ್ಕುಚಿತಮಾದದಧಿಕಾರಿಯಂ ನೆಲೆಗೊಳಿಸಿ ಆಗಮೋಕ್ತವಿಧಾನದಿಂ ತದ್ದೇವತಾಪೂಜೆ ಕಾರ್ತಿಕದೀಪಾರಾಧನೆ ಮುಂತಾದ ಪೂಜೆಗಳಂ

ಹತ್ತಿರ ಇರುವ ವರದಾನದೀತೀರದಲ್ಲಿ ವಿಶ್ವೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿ, ದೇವಸ್ಥಾನವನ್ನು ಕಟ್ಟಿಸಿ ಭೂಸ್ವಾಸ್ಥೆಯನ್ನು ಬಿಡಿಸಿದನು. ಮತ್ತೆ ಆ ನದೀತೀರದಲ್ಲಿ ವಿಶ್ವನಾಥಪುರವೆಂಬ ಅಗ್ರಹಾರವನ್ನು ನಿರ್ಮಾಣಮಾಡಿ ವೃತ್ತಿಕ್ಷೇತ್ರ ನಿವೇಶನಗಳನ್ನು ಕಲ್ಪಿಸಿದನು. ಇದನ್ನು ಶ್ರೋತ್ರಿಯಬ್ರಾಹ್ಮಣರಿಗೆ ಧಾರೆಯನ್ನೆರೆದು ಸ್ಥಿರಶಾಸನವನ್ನು ಬರೆಸಿದನು. ಗಣೇಶದೀಕ್ಷಿತರ ಕೈಯಿಂದ ವಾಜಪೇಯಯಾಗವನ್ನು ಏರ್ಪಡಿಸಿದನು. ಮತ್ತೆ ಆ ಸದಾಶಿವಸಾಗರದ ಪಟ್ಟಣದಲ್ಲಿ ಮನೋಹರವಾದ ರಾಜಾಲಯವೊಂದನ್ನು ನಿರ್ಮಾಣ ಮಾಡಿಸಿದನು. ಮತ್ತೆ ಆ ಸದಾಶಿವಸಾಗರ ಹಾಗೂ ಕೆಳದಿಯ ಪಟ್ಟಣದ ಮಧ್ಯಭಾಗದಲ್ಲಿ ಶೋಭಿಸುವಂತೆ ಸಂಗಮೇಶ್ವರ ಎಂಬ ಗ್ರಾಮದ ಪ್ರದೇಶದಲ್ಲಿ ಲೋಕಹಿತಾರ್ಥವಾಗಿ ಅತ್ಯಂತ ಮನೋಹರವಾದ ಕೆರೆಯೊಂದನ್ನು ನಿರ್ಮಾಣ ಮಾಡಿಸಿದನು. ಅಂತೂ ಅಲ್ಲದೆ. ೪೭. ಆ ಕೆರೆಯ ಬಳಿಯಲ್ಲಿ ಅಸಮಾನವಾದ ಸ್ವರ್ಗದ ನಂದನವನಕ್ಕೆ ಮಿಗಿಲೆನ್ನಿಸಿದ ತೋಟಗಳ ಸಮೂಹವನ್ನೂ, ಅರಮನೆಯನ್ನೂ ಸೌಖ್ಯದಾಯಕವಾದ ಆಟದ ಮಹಡಿಯನ್ನೂ ಕಟ್ಟಿಸಿದನು. ವ|| ಮತ್ತೆ ಸಂಗಮೇಶ್ವರದ ಸಮೀಪದಲ್ಲಿ ಭತ್ತದ ಗದ್ದೆ, ನಾಮದ ಕಬ್ಬುಪ್ರದೇಶ ಮುಂತಾದುವುಗಳನ್ನು ರಚಿಸಿದನು. ಇಕ್ಕೇರಿ ಅಘೋರೇಶ್ವರ ದೇವರ ಹೋಬಳಿಯೆಂದು ಅಘೋರೇಶ್ವರ ದೇವರ ಪೂಜಾ ವೈಭವಗಳಿಗೆ ೧೨,೦೦೦ ಹೊನ್ನುಗಳ ಆದಾಯವಿರುವ ಸಿಸ್ತಿನ ಸೀಮೆಯನ್ನು ವಿಂಗಡಿಸಿ, ಅದಕ್ಕೆ ಉಚಿತವಾದ ಅಧಿಕಾರಿಗಳನ್ನು ನಿಯಮಿಸಿದನು. ಆಗಮೋಕ್ತ ವಿಧಾನಗಳಿಂದ ಆಯಾದೇವತಾ ಪೂಜೆ, ಕಾರ್ತೀಕ ದೀಪಾರಾಧನೆ ಮುಂತಾದ ಪೂಜೆಗಳನ್ನು ಏರ್ಪಡಿಸಿದನು. ಕೆಳದಿ ಶ್ರೀರಾಮೇಶ್ವರ

ನಡೆಸಿ ಕೆಳದಿರಾಮೇಶ್ವರದೇವರ್ಗಂ ವೀರಭದ್ರದೇವರ್ಗಂ ವಿಶೇಷ ಭೂಸ್ವಾಸ್ಥೆಯಂ ಬಿಟ್ಟು ಪೂಜೆಗಳಂ ನಡೆಸಿ ರಾಮೇಶ್ವರದೇವರ ರಂಗಮಂಟಪಮಂ ಶಿಲಾಮಯವನಾಗಿಸಿ ಮತ್ತಮಾ ಕೆಳದಿಯರಮನೆಯ ಸಮೀಪದೊಳ್ ಸಂಪೆಕಟ್ಟೆಯೆಂಬ ತಟಾಕಮಂ ಪುಷ್ಪವಾಟಗಳುಮಂ ನಿರ್ಮಾಣಂಗೈಸಿದನಂತು ಮಲ್ಲದೆಯುಂ

ಕಂ॥ ಚಾರುತರತುಂಗಭದ್ರಾ
ತೀರಸಮೀಪದೊಳೆ ಮಾತೃನಾಮಾಂಕಿತದೊಳ್
ವೀರಾಂಬಾಪುರಮೆಂಬ ಮ
ಹಾ ರಮ್ಯತರಾಗ್ರಹಾರಮಂ ವಿರಚಿಸಿದಂ ೪೮

ವ॥ ಇಂತು ತುಂಗಭದ್ರಾನದೀತೀರದೊಳ್ ಭೀಮನಕಟ್ಟೆಯೊಳ್ ವೀರಾಂಬಾಪುರ ವೆಂಬಗ್ರಹಾರಮಂ ಕಟ್ಟಿಸಿ ಮತ್ತಂ ಭಾರಂಗಿಯೊಳ್ ಶರಾವತೀತೀರದೊಳ್ ಸ್ವಪತ್ನಿಯ ಪೆಸರೊಳಭಿನವವೀರಾಂಬಾಪುರಮೆಂಬಗ್ರಹಾರಮಂ ಕಟ್ಟಿಸಿ ವೃತ್ತಿಕ್ಷೇತ್ರನಿವೇಶನಂಗಳಂ ಕಲ್ಪಿಸಿ ಸದ್ಬ್ರಾಹ್ಮಣರ್ಗೆ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತನಂತುಮಲ್ಲದೆಯುಂ

ಕಂ॥ ಬಾರಕೂರ್ ಬೆಣ್ಣೆವಳ್ಳಿಯು
ಮಾರಗ ಶಂಕರನಾರಾಯಣ ಸಾಗರ ಬೋ
ಳೂರು ಕೊಡೆಯಾಲಗಳೊಳಮು
ದಾರ ಮಹತ್ತಿನ ಮಠಂಗಳಂ ಕಟ್ಟಿಸಿದಂ ೪೯

ದೇವರಿಗೆ ಹಾಗೂ ವೀರಭದ್ರ ದೇವರಿಗೆ ವಿಶೇಷ ಭೂಸ್ವಾಸ್ಥೆಯನ್ನು ಬಿಟ್ಟು ಪೂಜೆಗಳನ್ನು ನಡೆಸಿದನು. ಕೆಳದಿ ರಾಮೇಶ್ವರದೇವರ ರಂಗಮಂಟಪವನ್ನು ಶಿಲಾಮಯವನ್ನಾಗಿಸಿ, ಮತ್ತೆ ಆ ಕೆಳದಿಯ ಅರಮನೆಯ ಸಮೀಪದಲ್ಲಿ "ಸಂಪೆಕಟ್ಟೆ" ಎಂಬ ಕೆರೆಯನ್ನೂ, ಹೂವಿನ ತೋಟವನ್ನೂ ನಿರ್ಮಾಣಮಾಡಿಸಿದನು. ಅಂತೂ ಅಲ್ಲದೆ, ೪೮. ಸುಂದರವಾದ ತುಂಗಭದ್ರಾ ತೀರದ ಸಮೀಪದಲ್ಲಿ ತನ್ನ ತಾಯಿಯ ಹೆಸರಿನಲ್ಲಿ ವೀರಾಂಬಾಪುರವೆಂಬ ಅತಿ ಸುಂದರವಾದ ಅಗ್ರಹಾರವನ್ನು ನಿರ್ಮಿಸಿದನು. ವ॥ ಈ ರೀತಿ ತುಂಗಭದ್ರಾ ನದೀತೀರದಲ್ಲಿರುವ ಭೀಮನಕಟ್ಟೆಯಲ್ಲಿ ವೀರಾಂಬಾಪುರವೆಂಬ ಅಗ್ರಹಾರವನ್ನು ಕಟ್ಟಿಸಿದನು. ಮತ್ತೆ ಭಾರಂಗಿಯ ಹತ್ತಿರ ಇರುವ ಶರಾವತೀ ನದಿಯ ತೀರದಲ್ಲಿ ತನ್ನ ಹೆಂಡತಿಯ ಹೆಸರಿನಲ್ಲಿ "ಅಭಿನವ ವೀರಾಂಬಾಪುರ" ವೆಂಬ ಅಗ್ರಹಾರವನ್ನು ಕಟ್ಟಿಸಿದನು. ಅಲ್ಲಿ ವೃತ್ತಿ (ಉದ್ಯೋಗ), ಕ್ಷೇತ್ರ ನಿವೇಶನಗಳನ್ನು ಕಲ್ಪಿಸಿ ಸದ್ಬ್ರಾಹ್ಮಣರಿಗೆ ಶಿವಾರ್ಪಿತವಾಗಿ ಧಾರೆಯನ್ನೆರೆದು ಸ್ಥಿರವಾದ ಶಾಸನವನ್ನು ಬರೆಸಿತ್ತನು. ಅಂತೂ ಅಲ್ಲದೆ. ೪೯. ಬಾರಕೂರು, ಬೆಣ್ಣೆವಳ್ಳಿ, (ಬೆಳ್ಳೆಣ್ಣೆ), ಆರಗ, ಶಂಕರನಾರಾಯಣ, ಸಾಗರ, ಬೋಳೂರು, ಕೊಡೆಯಾಲಗಳಲ್ಲಿ ದೊಡ್ಡದಾದ ಮಹತ್ತಿನ ಮಠಗಳನ್ನು ಕಟ್ಟಿಸಿದನು. ವ॥ ಈ ಮುಂತಾದ ಸ್ಥಳಗಳಲ್ಲಿ ಮಹತ್ತಿನ ಮಠವನ್ನು ಕಟ್ಟಿಸಿ ಭೂಸ್ವಾಸ್ಥೆಗಳನ್ನು ಬಿಡಿಸಿ ಶಿವಜಂಗಮಾರ್ಥವಾಗಿ ಶಿವಾರ್ಪಣವೆಂದು ಧಾರೆಯನ್ನೆರೆದು, ಸ್ಥಿರವಾದ ಶಾಸನವನ್ನು ಬರೆಸಿ ಸುಖದಿಂದಿದ್ದನು. ಹೀಗಿರಲು ತನ್ನ ಚಿಕ್ಕಪ್ಪನಾದ ಚಿಕ್ಕಸಂಕಣ್ಣನಾಯಕನ ಮಗ ಸಿದ್ದಪ್ಪನಾಯಕನು

ವ|| ಇಂತಿವು ಮುಂತಾದ ಸ್ಥಳಂಗಳೊಳ್ ಮಹತ್ತಿನ ಮಠಮಂ ಕಟ್ಟಿಸಿ ಭೂಸ್ವಾಸ್ಥೆಗಳಂ ಬಿಡಿಸಿ ಶಿವಜಂಗಮಾರ್ಥಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಸುಖಮಿರುತ್ತುಮಿರಲ್ ತನ್ನ ಕಿರಿಯಯ್ಯ ಚಿಕ್ಕಸಂಕಣನಾಯಕನ ಪುತ್ರನಾದ ಸಿದ್ದಪ್ಪನಾಯಕನಂ ಶಿವಸಾಯುಜ್ಯವನೈದಲತ್ಯಂತದುಃಖದಿಂ ಚಿತ್ತವಿಹ್ವಲನಾಗಿ ವೈರಾಗ್ಯಂ ಪುಟ್ಟಿ ಬಳಿಕ್ಕಾತ್ಮಜ್ಞಾನಾನುಸಂಧಾನೋಪಯುಕ್ತಮಾದಧ್ಯಾತ್ಮಶಾಸ್ತ್ರಂಗಳಂ ಸಕಲ ನೀತಿಶಾಸ್ತ್ರಂಗಳಂ ಕೇಳ್ದು ಬಳಿಕ ಪದ್ಮಪುರಾಣದುತ್ತರಖಂಡದೊಳ್ ಶ್ರೀಮತ್ಪರಮೇಶ್ವರಂ ರಾಮಭದ್ರಂಗುಪದೇಶಂಗೈದ ಪದಿನೆಂಟಧ್ಯಾಯಂಗಳುಳ್ಳ ಶಿವಗೀತೆಯಂ ಲೋಕೋಪಕಾರಾರ್ಥಮಾಗಿ ಕವಿತಿರುಮಲಭಟ್ಟರಿಂ ವಾರ್ಧಕಷಟ್ಪದಿಯೊಳ್ ಕರ್ಣಾಟಕಕಾವ್ಯಮನಾಗಿಸಿ ಮತ್ತಮದಲ್ಲದಾ ಕವಿತಿರುಮಲಭಟ್ಟರಿಂ ಗೀರ್ವಾಣದೊಳ್ ಶಿವಾಷ್ಟಪದಿಯಂ ರಚನೆಗೈಸಿ ಮತ್ತಮದಲ್ಲದೆ ರಂಗನಾಥದೀಕ್ಷಿತನೆಂಬ ವಿದ್ವಾಂಸನಿಂ ತಂತ್ರಸಾರಮೆಂಬಾಗಮಗ್ರಂಥಕ್ಕೆ ವ್ಯಾಖ್ಯಾನಮಂ ಮಾಡಿಸಿ ದೇವತಾಸ್ವಪ್ನಸೂಚನಾಮೂಲದಿಂ ತನ್ನೆಡೆಗೈದಿದಶ್ವಪಂಡಿತರ ಮುಖದಿಂ ಮಾನಪ್ರಿಯಮೆಂಬ ಪೆಸರುಳ್ಳ ವಿಸ್ತಾರಮಾದಶ್ವಶಾಸ್ತ್ರಮಂ ಸಂಪಾದಿಸಿ ವರ್ತಿಸುತ್ತುಮಿರಲಾ ಕಾಲದೊಳ್ ವಿಶೇಷಬಿರುದನಾಂತು ವರ್ತಿಸುತ್ತುಮಿರ್ದ ವಿಶಿಷ್ಟಾದ್ವೈತವಾದ ಸಮರ್ಥನಾದ ಚತುಶ್ಶಾಸ್ತ್ರಪಂಡಿತನೆನಿಪ್ಪ ರಾಮಾನುಜಶೃಂಗಿವರ್ಯನೆಂಬೊರ್ವ ವಿದ್ವಾಂಸ ಇಕ್ಕೇರಿಗೆ ಬಂದು ತಮ್ಮಂ ಸಂಧಿಸಿ ಸಮೀಪದಲ್ಲಿ ವರ್ತಿಸುತ್ತುಮಿರಲಾ ಕಾಲದೊಳ್ ಕಾಶಿಯಿಂ ಭಟ್ಟೋಜಿದೀಕ್ಷಿತನೆಂಬ ಘಟಕ ವಿದ್ವಾಂಸನೈದಿರಲಾ ಭಟ್ಟೋಜಿದೀಕ್ಷಿತರ್ಗಂ ಆ ರಾಮಾನುಜಶೃಂಗಿಗಂ ವಿಶಿಷ್ಟಾದ್ವೈತ ಶುದ್ಧಾದ್ವೈತ ಶಾಸ್ತ್ರಂಗಳಲ್ಲಿ ಪ್ರಸಂಗವಂ ಮಾಡಿಸಿ

ಶಿವಸಾಯುಜ್ಯವನ್ನು ಹೊಂದಿದನು. ಇದರಿಂದ ಅತ್ಯಂತ ದುಃಖದಿಂದ ಕೂಡಿದ ರಾಜನಿಗೆ ಮಾನಸಿಕ ವೇದನೆಯುಂಟಾಗಿ ವೈರಾಗ್ಯ ಹುಟ್ಟಿತು. ಬಳಿಕ ಆತ್ಮಜ್ಞಾನಕ್ಕೆ ಪ್ರಬೋಧಕವಾದ ಅಧ್ಯಾತ್ಮ ಶಾಸ್ತ್ರಗಳನ್ನು ಹಾಗೂ ಸಕಲ ನೀತಿಶಾಸ್ತ್ರಗಳನ್ನೂ ಕೇಳಿದ ಬಳಿಕ ಪದ್ಮಪುರಾಣದ ಉತ್ತರಖಂಡದಲ್ಲಿ ಶ್ರೀಮತ್ಪರಮೇಶ್ವರನು ರಾಮಭದ್ರನಿಗೆ ಉಪದೇಶ ಮಾಡಿದ ಹದಿನೆಂಟು ಅಧ್ಯಾಯಗಳಿಂದ ಕೂಡಿದ ಶಿವಗೀತೆಯನ್ನು ಲೋಕೋಪಕಾರಾರ್ಥವಾಗಿ ಕವಿ ತಿರುಮಲಭಟ್ಟರಿಂದ ವಾರ್ಧಕ ಷಟ್ಪದಿಯಲ್ಲಿ ಕರ್ನಾಟಕದಲ್ಲಿ ಕಾವ್ಯವನ್ನಾಗಿಸಿದನು. ಮತ್ತೆ ಅದಲ್ಲದೆ ಕವಿ ತಿರುಮಲಭಟ್ಟರಿಂದ ಸಂಸ್ಕೃತದಲ್ಲಿ ಶಿವಾಷ್ಟಪದಿಯನ್ನು ರಚನೆ ಮಾಡಿಸಿದನು. ರಂಗನಾಥ ದೀಕ್ಷಿತನೆಂಬ ವಿದ್ವಾಂಸನಿಂದ ತಂತ್ರಸಾರವೆಂಬ ಆಗಮ ಗ್ರಂಥಕ್ಕೆ ವ್ಯಾಖ್ಯಾನವನ್ನು ಮಾಡಿಸಿ, ದೇವತಾಸ್ವಪ್ನಮೂಲದಿಂದ ತನ್ನೆಡೆಗೆ ಬಂದ ಅಶ್ವಪಂಡಿತರ ಮುಖದಿಂದ "ಮಾನಪ್ರಿಯ"ವೆಂಬ ಹೆಸರುಳ್ಳ ವಿಸ್ತಾರವಾದ ಅಶ್ವಶಾಸ್ತ್ರವನ್ನು ಸಂಪಾದಿಸಿದನು. ಹೀಗಿರುವ ಕಾಲದಲ್ಲಿ ವಿಶೇಷವಾದ ಬಿರುದನ್ನು ಹೊಂದಿದ್ದು ಮೆರೆಯುತ್ತಿದ್ದ ವಿಶಿಷ್ಟಾದ್ವೈತವಾದ ಸಮರ್ಥನೂ, ಚತುಶ್ಶಾಸ್ತ್ರ ಪಂಡಿತನೂ ಆದ 'ರಾಮಾನುಜ ಶೃಂಗಿವರ್ಯ'ರೆಂಬ ವಿದ್ವಾಂಸನೊಬ್ಬನು ಇಕ್ಕೇರಿಗೆ ಬಂದು ನಾಯಕನನ್ನು ಸಂಧಿಸಿದನು. ಅದೇ ಕಾಲದಲ್ಲಿ ಕಾಶಿಯಿಂದ ಭಟ್ಟೋಜಿ ದೀಕ್ಷಿತನೆಂಬ ವ್ಯಾಕರಣ ವಿದ್ವಾಂಸನು ಕೆಳದಿ ಅರಮನೆಗೆ ಆಗಮಿಸಿದ್ದನು. ಇಕ್ಕೇರಿಯ ಅರಮನೆಯಲ್ಲಿ ಭಟ್ಟೋಜೀದೀಕ್ಷಿತನಿಗೂ ರಾಮಾನುಜ ಶೃಂಗಿಗೂ ವಿಶಿಷ್ಟಾದ್ವೈತ-ಶುದ್ಧಾದ್ವೈತ ಶಾಸ್ತ್ರಗಳಲ್ಲಿ ವಾಗ್ವಾದವು ಜರುಗಿತು. ಸಕಲ ವಿದ್ವಜ್ಜನ ಸಮ್ಮತಿಯಿಂದ ವಿಶಿಷ್ಟಾದ್ವೈತವಾದ ಸಮರ್ಥನಾದ ರಾಮಾನುಜ ಶೃಂಗಿಯ ಕಕ್ಷಿಯನ್ನು ಖಂಡಿಸಿ ಮತ್ತು ಹಲವು ಶಾಸ್ತ್ರಪ್ರಸಂಗಗಳ ವಾಗ್ವಾದಗಳ

ಸಕಲವಿದ್ವಜ್ಜನಸಮ್ಮತಿಯಿಂದಾ ವಿಶಿಷ್ಟಾದ್ವೈತವಾದಸಮರ್ಥನಾದ ರಾಮಾನುಜಶೃಂಗಿಯ ಕಕ್ಷಿಯಂ ಖಂಡಿಸಿ ಮತ್ತಂ ಕೆಲವು ಶಾಸ್ತ್ರಪ್ರಸಂಗಮುಖದಿಂದವನಂ ಸೋಲಿಸಿ ಅವನ ವಿಶೇಷ ಬಿರುದಂ ಕಳಚಿಸಿ ವಶಂಗೈದು ವಿಶಿಷ್ಟವೈದಿಕಾದ್ವೈತಸಿದ್ಧಾಂತಸ್ಥಾಪನಾಚಾರ್ಯನೆಂಬ ಬಿರುದಿನ ಪೊಗಳ್ತೆಯಭಿಧಾನಮಂ ಸಂಪಾದಿಸಿದ ನಂತರಂ ತಮ್ಮ ಕಿರಿಯಯ್ಯ ಚಿಕ್ಕಸಂಕಣನಾಯಕರ ಪೌತ್ರನಾದ ಶಿವಪ್ಪನಾಯಕಂಗೆ ದುರ್ಗದ ಪಟ್ಟಣಶೆಟ್ಟರ ಮಗಳು ಲಿಂಗಮ್ಮಾಜಿಯವರು ಸೂರಿರಾಯನ ಬಸವಪ್ಪನ ತಂಗಿ ಶಾಂತಮ್ಮಾಜಿಯವರು ಹೀಗೆ ಇರ್ವರ್ ಕನ್ಯಾರತ್ನಂಗಳಂ ವಿವಾಹಮಂ ರಚಿಸಿ ತಚ್ಛಿವಪ್ಪನಾಯಕರ ಸಹೋದರನಾದ ಚಿಕ್ಕವೆಂಕಟಪ್ಪನಾಯಕಂಗೆ ವೀರವೊಡೆಯರ ಕುಮಾರಿಯಾದ ಮಲ್ಲಮ್ಮಾಜಿಯೆಂಬ ಪೆಣ್ಮಣಿಯನುದ್ವಾಹಮಂ ರಚಿಸಿ

ಕಂ॥ ಸರಸ ಸಂಗೀತಲೋಲಂ
ನಿರಪಮಕೌಶಲ್ಯ ವಿವಿಧಸಾಹಿತ್ಯವಿದಂ
ಸುರುಚಿರ ಸಕಲಕಲಾಸ
ತ್ವರಿಣತನೆಂದೆನಿಸಿ ವೆಂಕಟೋರ್ವಿಪನೆಸೆದಂ ೫೦

ವ॥ ಮತ್ತಮದಲ್ಲದಾ ವೆಂಕಟಪ್ಪನಾಯಕಂ ಕೊಲ್ಲೂರ ಮೂಕಾಂಬಿಕೆಯಂಮನವರ ದೇವಸ್ಥಾನಮಂ ವಿಸ್ತಾರವಾಗಿ ಶಿಲಾಮಯುವನಾಗಿಸಿ ವಿಶೇಷಭೂಸ್ವಾಸ್ಥೆಯಂ ಬಿಡಿಸಿ ತತ್ಪೂಜಾವಿಭವಂಗಳಂ ಲೋಪಮಾಗದಂತೆ ನಡೆಸಿ ತಾಂ ಸಾಧಿಸಿದ ಘಟ್ಟದ ಮೇಗಣ ಕೆಳಗಣ ಮಹಾದೇವತಾಸ್ಥಳಂಗಳೊಳ್ ಪ್ರತಿವರ್ಷ ಶ್ರಾವಣಮಾಸದೊಳ್ ವಿಶೇಷಗಟ್ಟಲೆಯಾಗಿ ಪೂಜೆ ಕಾರ್ತಿಕಮಾಸದೊಳ್ ಲಕ್ಷದೀಪಾರಾಧನೆ ರಥೋತ್ಸವಾದಿ ಕಟ್ಟಳೆಗಳ್ ನಡೆವಂತು ನಿಯಾಮಕಂಗೈಸಿ

ಮುಖದಿಂದ ಅವನನ್ನು ಸೋಲಿಸಿ, ಅವನ ವಿಶೇಷ ಬಿರುದನ್ನು ತೆಗೆಸಿ ವಶಪಡಿಸಿಕೊಂಡನು. ಹೀಗೆ ಮಾಡಿ "ವಿಶಿಷ್ಟ ವೈದಿಕಾದ್ವೈತ ಸಿದ್ಧಾಂತ ಸ್ಥಾಪನಾಚಾರ್ಯ" ಎಂಬ ಬಿರುದಿನಿಂದ ಅಭಿದಾನವನ್ನು ಪಡೆದುಕೊಂಡು ಹೊಗಳಿಸಿಕೊಂಡನು. ಅನಂತರ ತನ್ನ ಚಿಕ್ಕಪ್ಪ ಚಿಕ್ಕಸಂಕಣ್ಣನಾಯಕರ ಪೌತ್ರನಾದ ಶಿವಪ್ಪನಾಯಕನಿಗೆ ದುರ್ಗದ ಪಟ್ಟಣಶೆಟ್ಟರ ಕುಮಾರಿ ಲಿಂಗಮ್ಮಾಜಿ ಹಾಗೂ ಸೂರಿರಾಯನ ಬಸಪ್ಪನ ತಂಗಿ ಶಾಂತಮ್ಮಾಜಿ ಹೀಗೆ ಇಬ್ಬರು ಕನ್ಯಾರತ್ನಗಳನ್ನು ತಂದುಕೊಂಡು ವಿವಾಹವನ್ನು ನೆರವೇರಿಸಿದನು. ಶಿವಪ್ಪನಾಯಕರ ಸಹೋದರನಾದ ಚಿಕ್ಕವೆಂಕಟಪ್ಪನಾಯಕನಿಗೆ ವೀರ ಒಡೆಯರ ಕುಮಾರಿ ಮಲ್ಲಮ್ಮಾಜಿಯೆಂಬ ಹೆಣ್ಣನ್ನು ತಂದು ವಿವಾಹ ನಡೆಸಿದರು. ೫೦. ರಸವತ್ತಾದ ಸಂಗೀತದಲ್ಲಿ ಆಸಕ್ತನೂ, ಅಸಮಾನ ಕೌಶಲ್ಯವುಳ್ಳ ವಿವಿಧ ಸಾಹಿತ್ಯಗಳನ್ನು ಬಲ್ಲವನೂ, ಸುಂದರವಾದ ಸಕಲಕಲೆಗಳಲ್ಲಿ ನಿಪುಣನೂ ಎಂದೆನಿಸಿ ವೆಂಕಟಪ್ಪನಾಯಕನು ಮೆರೆದನು. ವ॥ ಮತ್ತೆ ಇದಲ್ಲದೆ ವೆಂಕಟಪ್ಪನಾಯಕನು ಕೊಲ್ಲೂರು ಶ್ರೀ ಮೂಕಾಂಬಿಕಾ ಅಮ್ಮನವರ ದೇವಸ್ಥಾನವನ್ನು ವಿಸ್ತಾರವಾಗಿ ಶಿಲೆಯ ಕಲ್ಲಿನಿಂದ ಕೂಡಿರುವಂತೆ ಮಾಡಿ, ಆ ದೇವರಿಗೆ ವಿಶೇಷ ಭೂಸ್ವಾಸ್ಥೆಯನ್ನು ಬಿಡಿಸಿ, ದೇವರ ಪೂಜಾವೈಭವಗಳಿಗೆ ಲೋಪವಾಗದಂತೆ ಏರ್ಪಡಿಸಿದನು. ಘಟ್ಟದ ಮೇಲೆ ಮತ್ತು ಕೆಳಗೆ ಇರುವ ದೇವತಾಸ್ಥಳಗಳಲ್ಲಿ ಪ್ರತಿವರ್ಷವೂ ಶ್ರಾವಣಮಾಸದಲ್ಲಿ ವಿಶೇಷಗಟ್ಟಲೆ ಪೂಜೆ, ಕಾರ್ತೀಕಮಾಸದಲ್ಲಿ ಲಕ್ಷ ದೀಪಾರಾಧನೆ ರಥೋತ್ಸವಾದಿ ಕಟ್ಟಳೆಗಳು ನಡೆಯುವ ಹಾಗೆ ನಿಯಮಿಸಿದನು. ಗುರುಲಿಂಗಜಂಗಮಾದಿ

ಗುರುಲಿಂಗಜಂಗಮಾದಿ ಪೂಜಾನಿರತನಾಗಿ ಶೃಂಗೇರಿಯ ಧರ್ಮ ಬಾಳೆಹಳ್ಳಿಸಿಂಹಾಸನರ ಧರ್ಮ ಸ್ವರಾಷ್ಟ್ರಗಳೊಳ್ ನಾಲ್ಗಡೆಗಳೊಳ್ಳುಳ್ಳ ಸನ್ಯಾಸಿಗಳ ಮಠ ಮಹತ್ತಿನ ಮಠಾಗ್ರಹಾರ ಕೊಡಗಿ ಮಾನ್ಯ ಉಂಬಳಿ ಉತ್ತಾರ ಪಳ್ಳಿದಾಸರ ಧರ್ಮ ಮುಂತಾದ ನಾನಾಧರ್ಮಂಗಳಂ ಸಮಗ್ರವಾಗಿ ನಡೆಸಿ ಗಜತುರಗಪತ್ತಿರಾವುತಠಾಣ್ಯಪ್ರಜೆಪರಿವಾರನೆರೆಸಾವಂತಪುರಜನಪರಿಜನವಿದ್ವಜ್ಜನಾಶ್ರಿತ ಸೇವಕಜನಯಾಚಕಜನರ್ ಮುಂತಾದ ಸಮಸ್ತಜನರ್ಕಳಂ ಸಂರಕ್ಷಿಸುತ್ತುಂ ವಿರಾಜಿಸುತ್ತಿರ್ದನಂತು ಮಲ್ಲದೆಯುಂ

ಶಾ॥ವಿ॥ ಶ್ರೀಮಚ್ಚೌಡಪವಂಶ ವರ್ಧನಕರಂ ಶತ್ರುಚ್ಛಟಾಭೀಕರಂ
ಸೋಮೋತ್ತಂಸ ದಯಾತ್ತಭಾಗ್ಯನಿಕರಂ ಗಾಂಭೀರ್ಯರತ್ನಾಕರಂ
ಕಾಮಾಕಾರನುದಗ್ರಸಾಯಕಕರಂ ಪೂರ್ಣಾನುಕಂಪಾಕರಂ
ಧೀಮಚ್ಛೇಖರನಾಳ್ದನೊಪ್ಪುವಿಳೆಯಂ ಶ್ರೀವೆಂಕಟೋರ್ವೀಶ್ವರಂ ೫೧

ವ॥ ಈ ವೆಂಕಟಪ್ಪನಾಯಕರ್ ಚೈತ್ರಭಾನುಸಂವತ್ಸರದ ಮಾರ್ಗಶಿರ ಶುದ್ಧ ೫ ಯಾರಭ್ಯ ಶುಕ್ಲ ಸಂವತ್ಸರ ಕಾರ್ತಿಕ ಬಹುಳ ೩೦ ಯವರೆಗೆ ವರ್ಷ ೪೬ ತಿಂಗಳು ೧೧ ದಿನ ೨೬ ಪರ್ಯಂತಂ ರಾಜ್ಯವಾಳಿ ಐಕ್ಯವಾದರ್.

ಪೂಜೆಗಳಲ್ಲಿ ನಿರತನಾಗಿ ಶೃಂಗೇರಿಯ ಧರ್ಮ, ಬಾಳೇಹಳ್ಳಿಯ ಸಿಂಹಾಸನದ ಧರ್ಮ, ಸ್ವಂತ ರಾಷ್ಟ್ರಗಳಲ್ಲಿ ನಾಲ್ಕು ದಿಕ್ಕಿನಲ್ಲಿರುವ ಕಡೆಗಳಲ್ಲೂ ಇರುವ ಸನ್ಯಾಸಿಗಳ ಮಠ, ಮಹತ್ತಿನ ಮಠ, ಅಗ್ರಹಾರ, ಕೊಡಗಿ ಮಾನ್ಯ, ಉಂಬಳಿ, ಉತ್ತಾರ ಹಳ್ಳಿದಾಸರ ಧರ್ಮ ಮುಂತಾದ ನಾನಾವಿಧವಾದ ಧರ್ಮಗಳನ್ನು ಸಮಗ್ರವಾಗಿ ನಡೆಸಿದನು. ಆನೆ, ಕುದುರೆ, ಪದಾತಿ, ಕಾಲಾಳುಗಳು, ಕುದುರೆ ಸವಾರರು, ಪ್ರಜೆ-ಪರಿವಾರದವರು, ನೆರೆ ಸಾಮಂತರು, ಪುರಜನರು, ಪರಿವಾರಜನರು, ವಿದ್ವಜ್ಜನರು, ಆಶ್ರಿತಜನರು, ಸೇವಕ ಜನರು, ಯಾಚಕಜನರು ಮುಂತಾದ ಸಮಸ್ತರನ್ನೂ ಸಂರಕ್ಷಿಸಿ ಕಾಪಾಡುತ್ತಾ ವಿರಾಜಿಸುತ್ತಿದ್ದನು. ಅಂತೂ ಅಲ್ಲದೆ-೫೧. ವೆಂಕಟಪ್ಪನಾಯಕನು ಚೌಡಪ್ಪನ ವಂಶವನ್ನು ಬೆಳೆಸಿದನು. ಅವನು ಶತ್ರು ಸಮೂಹಕ್ಕೆ ಭಯವನ್ನು ಹುಟ್ಟಿಸತಕ್ಕವನು; ಶಿವನ ದಯೆಯಿಂದ ಅನೇಕ ಭಾಗ್ಯಗಳನ್ನು ಪಡೆದವನು; ಸಮುದ್ರದಂತೆ ಗಂಭೀರನು; ಮನ್ಮಥನಂತಹ ಸುಂದರ ಆಕಾರವುಳ್ಳವನು; ತೀಕ್ಷ್ಣವಾದ ಬಾಣಗಳನ್ನು ಕೈಯಲ್ಲಿ ಹಿಡಿದವನು; ಪೂರ್ಣಕೃಪೆಯ ನೆಲೆಯು; ಬುದ್ಧಿವಂತರಲ್ಲಿ ಶ್ರೇಷ್ಠನು. ಈ ರೀತಿಯಾದ ವೆಂಕಟಪ್ಪ ನಾಯಕನು ಭೂಮಿಯನ್ನು ಕಾಪಾಡಿದನು. ವೆಂಕಟಪ್ಪನಾಯಕರು ಚಿತ್ರಭಾನು ನಾಮಸಂವತ್ಸರದ ಮಾರ್ಗಶಿರ ಶುದ್ಧ ೫ ರಿಂದ ಶುಕ್ಲ ಸಂವತ್ಸರದ ಕಾರ್ತೀಕ ಬಹುಳ ೩೦ರವರೆಗೆ ವರ್ಷ ೪೬ ತಿಂಗಳು ೧೧ ದಿನ ೨೬ರವೆರಗೂ ರಾಜ್ಯವಾಳಿ ಶಿವಾಧೀನರಾದರು.

# ಷಷ್ಠಾಶ್ವಾಸಂ

ಕಂ॥ ವರ ಕೆಳದಿಯ ಚೌಡಮಹೀ
ಶ್ವರನ ಸುತಂ ವರ ಸದಾಶಿವೋರ್ವೀಪಾಲಂ
ಧುರಧೀರತತ್ಸದಾಶಿವ
ಧರಣೀಶ್ವರವರ್ಯಗಾತ್ಮಸಂಭವರೀರ್ವರ್ ೧

ಪಿರಿಯಂ ಸಂಕಣಭೂಪಂ
ಕಿರಿಯಾತಂ ಚಿಕ್ಕಸಂಕಣೋರ್ವೀಪತಿಯಾ
ಪಿರಿಯಸಂಕಣಧರಾಧೀ
ಶ್ವರಗಿರ್ವರ್ ತನುಜರ್ಕಳಹಿಮಧಾಮನಿಭರ್ ೨

ಅವರಿರ್ವರೊಳಂ ಪಿರಿಯಂ
ಭುವನೈಕ್ಯಪ್ರಥಿತ ರಾಮರಾಜನೃಪಾಲಂ
ಅವಿರಳಕ್ರಮತತ್ಸಹ
ಭುವನನವನೀನಾಥತಿಲಕ ವೆಂಕಟಭೂಪಂ ೩

ಆ ವೆಂಕಟನೃಪನ ಸುತಂ
ಭೂವಿನುತ ಭದ್ರಭೂಪನಾತನ ತನುಜಂ
ಶ್ರೀವೀರಭದ್ರನೃಪನಿವ
ರಾ ವರಸಂಕಣನೃಪಾಲವಂಶಜರಾದರ್ ೪

ಅರಿವಂತಿನ್ನೊರೆವೆಂ ನೃಪ
ವರನೆನಿಸುವ ಪಿರಿಯಸಂಕಣೋರ್ವಿಪನ ಸಹೋ
ದರನೆನಿಪ ಚಿಕ್ಕಸಂಕಣ
ಧರಣೀಶನ ವಿತತವಂಶಪಾರಂಪರೆಯಂ ೫

೧. ಕೆಳದಿಯ ಚೌಡಪ್ಪನಾಯಕನ ಮಗ ಸದಾಶಿವನಾಯಕ; ರಾಜಶ್ರೇಷ್ಠನಾದ ಆ ಸದಾಶಿವನಾಯಕನಿಗೆ ಇಬ್ಬರು ಪುತ್ರರು. ೨. ಹಿರಿಯವನು ಸಂಕಣ್ಣನಾಯಕ (ದೊಡ್ಡ ಸಂಕಣ್ಣನಾಯಕ); ಕಿರಿಯವನು ಚಿಕ್ಕಸಂಕಣ್ಣನಾಯಕ. ಹಿರಿಯ ಸಂಕಣ್ಣನಾಯಕನಿಗೆ ಸೂರ್ಯನಂತೆ ತೇಜಸ್ವಿಗಳಾದ ಇಬ್ಬರು ಪುತ್ರರು. ೩. ಅವರಿಬ್ಬರಲ್ಲಿ ಹಿರಿಯವನು ಲೋಕಪ್ರಸಿದ್ಧನಾದ ರಾಮರಾಜನು. ಅತ್ಯಂತ ಪರಾಕ್ರಮಿಯೂ, ರಾಜರಲ್ಲಿ ತಿಲಕಪ್ರಾಯನೂ ಆದ ವೆಂಕಟಪ್ಪನಾಯಕನು ಅವನ ತಮ್ಮನು. ೪. ಆ ವೆಂಕಟಪ್ಪನಾಯಕನ ಮಗ ಭೂಮಿಯಲ್ಲಿ ಹೊಗಳಿಕೆ ಪಡೆದ ಭದ್ರಪ್ಪನಾಯಕ; ಅವನ ಮಗನೇ ವೀರಭದ್ರ ನಾಯಕನು. ಇವರೆಲ್ಲರೂ ಶ್ರೇಷ್ಠನಾದ ಸಂಕಣ್ಣನಾಯಕನ ವಂಶದಲ್ಲಿ ಹುಟ್ಟಿದವರು. ೫. ರಾಜಶ್ರೇಷ್ಠನಾದ ದೊಡ್ಡಸಂಕಣ್ಣನಾಯಕನ ಸಹೋದರನಾದ ಚಿಕ್ಕಸಂಕಣ್ಣನಾಯಕನ ವಿಶಾಲವಾದ ವಂಶಪರಂಪರೆಯನ್ನು ನನಗೆ ತಿಳಿದಂತೆ ಮುಂದೆ ಹೇಳುವೆನು.

ದೊರೆ ಚಿಕ್ಕಸಂಕಣ್ಣೋರ್ವೀ
ಶ್ವರಪುತ್ರಂ ಸಿದ್ಧಪೋರ್ವಿಪಂ ತತ್ತನುಜಂ
ಮೆರೆವ ಶಿವನೃಪತಿ ತತ್ಸೋ
ದರನುರು ವೆಂಕಟನೃಪಾಲನರಿಕುಲಕಾಲಂ ೬

ಆ ಶಿವನೃಪನ ತನೂಜಂ
ಭಾಸುರಗುಣ ಭದ್ರಭೂಮಿಪಂ ತದನುಜನಾ
ಶ್ರೀಸೋಮಶೇಖರೇಂದ್ರಮ
ಹೀಶಂ ತತ್ಪತ್ನಿ ಚನ್ನಮಾಂಬಿಕೆ ತಿಳಿಯಲ್ ೭

ಅರಿವೊಡಾ ಸೋಮಶೇಖರ
ವರನೃಪತಿಯ ಪತ್ನಿ ಚನ್ನಮಾಂಬಿಕೆಯೊರ್ವಳ್
ಧರೆಯರಿಯೆ ತದ್ಗೃಹೀತಂ
ಮರಿಯಪಕುವರಿಯೊಳುದಿಸಿದ ಬಸವಮಹೀಪಂ ೮

ಮೆರೆವಾ ಬಸವನೃಪಾಗ್ರೇ
ಶ್ವರಗಿರ್ವರ್ ಪುತ್ರರವರೊಳಂ ಪಿರಿಯಾತಂ
ವರ ಸೋಮಶೇಖರೇಂದ್ರಂ
ಕಿರಿಯಮಗಂ ವೀರಭದ್ರನಾಯಕನೆನಿಪಂ ೯

ಆ ವೀರಭದ್ರಪಾಖ್ಯಮ
ಹೀವಿಭುವಿನ ಸೂನು ಬಸವಭೂಮಿಪನೆನಿಪಂ
ಆ ವರಬಸವೇಂದ್ರನ ಸತಿ
ಭಾವಿಸೆ ತಾಂ ಚನ್ನವೀರಮಾಂಬಿಕೆಯೆನಿಪಳ್ ೧೦

ಪರಿಕಿಪೊಡೆ ತದ್ಗೃಹೀತಂ
ಸುರುಚಿರ ಗೀರ್ವಾಣಮಂತ್ರಿಯಾತ್ಮಜನೆನಿಪಾ
ಗುರವೇಂದ್ರನ ಸುಕುಮಾರಂ
ಧರಣಿಪಮಣಿ ಚನ್ನಬಸವಭೂಮಿಪನೆನಿಪಂ ೧೧

೬. ಚಿಕ್ಕ ಸಂಕಣ್ಣನಾಯಕನ ಮಗನು ಸಿದ್ದಪ್ಪನಾಯಕನು; ಅವನ ಮಗ ಶಿವಪ್ಪನಾಯಕನು. ಆತನ ಸಹೋದರನೇ ಶತ್ರುಗಳಿಗೆ ಯಮನಂತಿರುವ ವೆಂಕಟಪ್ಪ ನಾಯಕನು; ೭. ಆ ಶಿವಪ್ಪನಾಯಕರ ಮಗನಾದ ಭದ್ರಪ್ಪನಾಯಕನು ಪ್ರಕಾಶಿಸುವ ಗುಣಗಳುಳ್ಳವನು. ಅವನ ತಮ್ಮನು ಸೋಮಶೇಖರನೆಂಬವನು. ಅವನ ಹೆಂಡತಿ ಚನ್ನಮಾಂಬಿಕೆ. ೮. ಸೋಮಶೇಖರನಾಯಕನಿಗೆ ಚೆನ್ನಮ್ಮ ಎಂಬವಳು ಒಬ್ಬಳೇ ಪತ್ನಿ; ಆಕೆ ಮರಿಯಪ್ಪನ ಮಗಳಲ್ಲಿ ಜನಿಸಿದ ಬಸವಪ್ಪನಾಯಕನನ್ನು ಮಗನನ್ನಾಗಿ ದತ್ತು ತೆಗೆದುಕೊಂಡಳು. ೯. ಆ ಬಸವರಾಜನಿಗೆ ಇಬ್ಬರು ಪುತ್ರರು; ಅವರಲ್ಲಿ ಹಿರಿಯವನು ಸೋಮಶೇಖರನಾಯಕ. ಕಿರಿಯವನು ವೀರಭದ್ರನಾಯಕ. ೧೦. ಆ ವೀರಭದ್ರನೆಂಬ ರಾಜನ ಮಗನು ಬಸವಪ್ಪನಾಯಕನೆಂಬವನು, ಆ ಬಸವಪ್ಪನಾಯಕನ ಹೆಂಡತಿ ಚೆನ್ನವೀರಮಾಂಬಿಕೆ ಎಂಬವಳು. ೧೧. ದೇವತೆಗಳ ಮಂತ್ರಿಯಾದ ಬೃಹಸ್ಪತಿಯ ಮಗನೆಂಬಂತಿದ್ದ

ಆತನನಂತರ ಮತಿವಿ
ಖ್ಯಾತ ಶ್ರೀ ಚನ್ನವೀರಮಾಂಬಿಕೆಯಿಂದಂ
ಭೂತಳವರಿಯಲ್ಕಾದ ಗೃ
ಹೀತನದಾರೆನಲು ಪೇಳ್ವೆನನುನಯದಿಂದಂ ೧೨

ಧರೆಯೊಳಗತಿಶಯ ಬಂಕಾ
ಪುರದುಜ್ಜ್ವಲ ಚನ್ನವೀರಪನ ಸುಕುಮಾರಂ
ಧುರಧೀರ ಸೋಮಶೇಖರ
ಧರಣೀಶ್ವರವರ್ಯನಮರಗಿರಿನಿಭಧೈರ್ಯಂ ೧೩

ವ॥ ಆ ಹಿರಿಯ ವೆಂಕಟಪ್ಪನಾಯಕರ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೫೫೨ ನೆಯ ಶುಕ್ಲ ಸಂವತ್ಸರದ ಮಾರ್ಗಶಿರ ಶುದ್ಧ ೧ ಯಲ್ಲಿ ವೆಂಕಟಪ್ಪನಾಯಕರ ಪೌತ್ರರಾದ ವೀರಭದ್ರನಾಯಕರ್ಗೆ ಇಕ್ಕೇರಿಯರಮನೆಯಲ್ಲಿ ರಾಜಪಟ್ಟಂ.

ಕಂ॥ ವರ ವೆಂಕಟಭೂಪನನಂ
ತರದೊಳ್ತತ್ಪೌತ್ರನಧಿಕಪುಣ್ಯಚರಿತ್ರಂ
ನೆರೆ ವೀರಭದ್ರನಾಯಕ
ನರಿಹಿಮಕರರಾಹು ರಾಜ್ಯರಮೆಗರಸಾದಂ ೧೪

ವ॥ ಮತ್ತಮಾ ವೀರಭದ್ರನಾಯಕಂ ತನ್ನ ತಂದೆ ಭದ್ರಪ್ಪನಾಯಕ ಹಿರಿಯಪ್ಪ ರಾಮರಾಜನಾಯಕನ ಪುತ್ರರಾದ ವೀರವೊಡೆಯರ್ ಬಸವಲಿಂಗನಾಯಕಂ ಚಿಕ್ಕ ಸಂಕಣ್ಣನಾಯಕರ ಪೌತ್ರರಾದ ಸಿದ್ದಪ್ಪನಾಯಕರ ಪುತ್ರರಾದ ವಾವೆಯಿಂ ತಮಗೆ ಚಿಕ್ಕಪ್ಪಂದಿರಾದ ಶಿವಪ್ಪನಾಯಕ

ಗುರುವಪ್ಪನೆಂಬ ಮಂತ್ರಿಯ ಮಗನೆನ್ನಿಸಿದ ಹಾಗೂ ಭೂಮಿಗೆ ರತ್ನಪ್ರಾಯನಾದ ಚೆನ್ನಬಸವನು ಆಕೆಯ ದತ್ತುಮಗನಾದನು. ೧೨. ಆತನ ಬಳಿಕ ಚೆನ್ನವೀರಮಾಂಬಿಕೆಯಿಂದ ದತ್ತುಸ್ವೀಕರಿಸಲ್ಪಟ್ಟವನು ಯಾರು ಎಂಬುದನ್ನು ತಿಳಿಸುವೆನು. ೧೩. ಭೂಮಿಯಲ್ಲಿ ಹೆಚ್ಚಿನದಾದ ಬಂಕಾಪುರದ ಚೆನ್ನವೀರಪ್ಪನ ಮಗನಾದ ಸೋಮಶೇಖರನು ಯುದ್ಧದಲ್ಲಿ ಧೀರನು; ಮೇರುಪರ್ವತದಷ್ಟು ಧೈರ್ಯವುಳ್ಳವನು; ರಾಜರಲ್ಲಿ ಶ್ರೇಷ್ಠನು. ವ॥ ಆ ಹಿರಿಯ ವೆಂಕಟಪ್ಪನಾಯಕನ ಅನಂತರ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೫೫೨ನೆಯ ಶುಕಸಂವತ್ಸರದ ಮಾರ್ಗಶಿರ ಶುದ್ಧ ೧ರಲ್ಲಿ ವೆಂಕಟಪ್ಪನಾಯಕರ ಪೌತ್ರರಾದ ವೀರಭದ್ರನಾಯಕರಿಗೆ ಇಕ್ಕೇರಿಯ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ೧೪. ಶ್ರೇಷ್ಠನಾದ ವೆಂಕಟಪ್ಪನಾಯಕನ ಅನಂತರ ಅವನ ಮೊಮ್ಮಗನೂ, ಅತ್ಯಂತ ಪುಣ್ಯಚರಿತ್ರನೂ, ಶತ್ರುಗಳೆಂಬ ಚಂದ್ರನಿಗೆ ರಾಹುವೆನಿಸಿ ದವನೂ ಆದ ವೀರಭದ್ರ ನಾಯಕನು ರಾಜ್ಯಲಕ್ಷ್ಮಿಗೆ ಅರಸನಾದನು. ವ॥ ಮತ್ತೆ ಆ ವೀರಭದ್ರ ನಾಯಕನು ತನ್ನ ತಂದೆ ಭದ್ರಪ್ಪನಾಯಕನ ದೊಡ್ಡಪ್ಪನಾದ ಹಾಗೂ ರಾಮರಾಜನಾಯಕನ ಗಂಡುಮಕ್ಕಳೂ ಆದ ವೀರವೊಡೆಯರ್ ಮತ್ತು ಬಸವಲಿಂಗನಾಯಕ, ಚಿಕ್ಕಸಂಕಣ್ಣ ನಾಯಕರ ಮೊಮ್ಮಕ್ಕಳೂ, ಸಿದ್ದಪ್ಪನಾಯಕನ ಪುತ್ರರೂ ಸಂಬಂಧದಿಂದ ತಮಗೆ ಚಿಕ್ಕಪ್ಪಂದಿರೂ

ವೆಂಕಟಪ್ಪನಾಯಕರುಮಂ ಮೈದುನ ಸದಾಶಿವಯ್ಯನುಮಂ ತತ್ಪುತ್ರ ಭದ್ರಯ್ಯ ವೆಂಕಟಯ್ಯನುಮನತ್ಯಂತಪ್ರೀತಿಯಿಂ ನಡೆಸಿಕೊಳುತ್ತುಂ ರಾಜ್ಯಂಗೆಯ್ಯುತಿರ್ದವಸರದೊಳ್

ಕಂ॥ ಸ್ವಾರಿಮಾರ್ಗದೊಳೆ ತಾನಿ
ಕ್ಕೇರಿಯ ಪೊಳಲಿಂ ತೆರಳ್ದು ಪೊಕ್ಕಾರಗಮಂ
ವೀರಭದ್ರಾವನೀಶ್ವರ
ನಾ ರಾಜಿಪ ತೀರ್ಥರಾಜಪುರಮಂ ಸಾರ್ದಂ ೧೫

ಮೆರೆವಾ ಪುಣ್ಯಕ್ಷೇತ್ರದೊ
ಳುರೆ ಶೋಭಿಸುತಿರ್ಪ ದಿವ್ಯತುಂಗಾತಟದೊಳ್
ಪರಮಾನಂದದೆ ವಿಹರಿಸು
ತಿರುತಿರೆ ತನ್ನೃಪತಿಯಿತ್ತಮಿಕ್ಕೇರಿಯೊಳಂ ೧೬

ಭಾವಿಸಲಾ ಮೃತ್ಯುಂಜಯ
ದೇವುಗಳಂ (?) ಪರಮಕುಹಕಿ ಲಕ್ಷ್ಮೀಪತಿಯುಂ
ಸೇವಕನಿಕರಾಧಮ ಗ
ರ್ವಾವಿಷ್ಕೃತ ಠಾಣದಾರ (?) ತಿಮ್ಮಣನಿನಿಬರ್ ೧೭

ನೆನೆದುರು ಕುಮಂತ್ರಮಂ ಕಾ
ಪಿನೊಳಿರುತಿಹ ರಾಮರಾಜಭೂಪನ ವರ ನಂ
ದನಗೆಸೆವ ರಾಜಪಟ್ಟವ
ನನುನಯದಿಂ ಕಟ್ಟಿ ನಡೆಸಿಕೊಳುತಿರಲಿತ್ತಂ ೧೮

ಮ॥ವಿ॥ ಧರಣೀಶಾಗ್ರಣಿ ವೀರಭದ್ರನೃಪನಂದೀ ವಾರ್ತೆಯಂ ಕೇಳ್ದು ತಾಂ
ಭರದಿಂ ಕೌಲಿಯ ದುರ್ಗಕೈದಿ ಗಡಮಂ ಸ್ವಾಧೀನಮಂ ಮಾಡಿಕೊಂ
ಡಿರದಲ್ಲಿಂದೆ ತೆರಳ್ದಾನಂದಪುರಮಂ ಪೊಕ್ಕೊಪ್ಪುವಾ ಕೋಂಟೆಯ
ಲ್ಲಿರುತಿರ್ದಂ ನೃಪತಿತ್ವಮಿಂತುಭಯರೂಪಾಗಲ್ ಕ್ವಚಿತ್ಕಾಲದೊಳ್ ೧೯

ಆದ ಶಿವಪ್ಪನಾಯಕ, ವೆಂಕಟಪ್ಪನಾಯಕರುಗಳನ್ನು, ಮೈದುನ ಸದಾಶಿವಯ್ಯ-ಅವರ ಗಂಡುಮಕ್ಕಳಾದ ಭದ್ರಯ್ಯ, ವೆಂಕಟಯ್ಯ-ಇವರೆಲ್ಲರನ್ನೂ ಅತ್ಯಂತ ಪ್ರೀತಿಯಿಂದ ನೋಡಿಕೊಳ್ಳುತ್ತಾ ರಾಜ್ಯವನ್ನು ಪಾಲಿಸುತ್ತಿದ್ದನು. ಈ ಸಮಯದಲ್ಲಿ. ೧೫. ವೀರಭದ್ರನಾಯಕನು ಯಾತ್ರಾರ್ಥವಾಗಿ ಇಕ್ಕೇರಿಯ ಪಟ್ಟಣದಿಂದ ಹೊರಟು, ಆರಗವನ್ನು ಸೇರಿ, ಶೋಭಿಸುತ್ತಿದ್ದ ತೀರ್ಥರಾಜಪುರವನ್ನು ಪ್ರವೇಶಿಸಿದನು. ೧೬. ಆ ಪುಣ್ಯಕ್ಷೇತ್ರದಲ್ಲಿ ಚೆನ್ನಾಗಿ ಶೋಭಿಸುತ್ತಿರುವ ದಿವ್ಯವಾದ ತುಂಗಾನದಿಯ ತೀರದಲ್ಲಿ ಆ ವೀರಭದ್ರನಾಯಕನು ವಿಹರಿಸುತ್ತಿದ್ದನು. ಆಗ ಈ ಕಡೆ ಇಕ್ಕೇರಿಯಲ್ಲಿ. ೧೭. ಮೃತ್ಯುಂಜಯ, ಲಕ್ಷ್ಮೀಪತಿ, ಠಾಣದಾರನಾದ ತಿಮ್ಮಣ್ಣ-ಎಂಬ ಕುಹಕಿಗಳು ಕುಮಂತ್ರವನ್ನಾಲೋಚಿಸಿ, ರಾಮರಾಜರ ಮಗನಿಗೆ ರಾಜಪಟ್ಟವನ್ನು ಕಟ್ಟಿ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲಾರಂಭಿಸಿದರು. ೧೮. ದುರಾಲೋಚನೆಯನ್ನು ಮಾಡಿ ಅರಮನೆಯ ರಕ್ಷಣೆಯಲ್ಲಿದ್ದ ರಾಮರಾಜನಾಯಕನ ಮಗನಿಗೆ ಪಟ್ಟವನ್ನು ಕಟ್ಟಿ ರಾಜ್ಯಭಾರವನ್ನು ನಡೆಸುತ್ತಿದ್ದರು ಈ ಕಡೆ. ೧೯. ರಾಜಶ್ರೇಷ್ಠನಾದ ವೀರಭದ್ರನಾಯಕನು ಈ ವಾರ್ತೆಯನ್ನು ಕೇಳಿ ಕೂಡಲೇ

ವ|| ಇಂತು ದೊರೆತನಮೆರಡಾಗಿ ನಡೆಯುತ್ತುಮಿರಲ್ ತರುವಾಯ ತ್ರಿಮಾಸಂ ಸಲಲಿಕ್ಕೇರಿಯೊಳಾಳುತಿರ್ಪ ವೀರವೊಡೆಯರ್ ದೈವವಶದಿಂ ಶಿವಸಾಯುಜ್ಯಮಂ ಪಡೆಯಲೀ ವಾರ್ತೆಯಂ ಕೇಳ್ದು ವೀರಭದ್ರನಾಯಕನಾನಂದಪುರದಿಂದೆಳ್ತಪ್ಪನಿತರೊಳಾ ವೀರಭದ್ರನಾಯಕರ ಮೈದುನ ಸದಾಶಿವನಾಯಕಂ ತನಗೆ ರಾಜಪಟ್ಟವಾಗಬೇಕೆಂಬಭಿಲಾಷೆಯಿಂ ಮುಂದುವರಿದು ವೀರವೊಡೆಯರ ಸಹೋದರ ಬಸವಲಿಂಗನಾಯಕನನಂಗವಿಕಲನಂ ಮಾಡಿ ತಾಂ ಪಟ್ಟಕ್ಕೆ ಕುಳ್ಳಿರ್ಪನಿತರೊಳ್ ವೀರಭದ್ರನಾಯಕಂ ಸೈನ್ಯಂವೆರಸತಿಶೀಘ್ರದಿಂದೊದಗಿ ಬರಲತ್ಯಂತ ಭಯೋದ್ರೇಕದಿಂ ಮೈದುನ ಸದಾಶಿವಯ್ಯಂ ನಿತ್ತರಿಸಲಮ್ಮದಲ್ಲಿಂ ಪಲಾಯನಂಬಡೆದು ಸೋದೆಯುವರಂ ಸೇರ್ದಿರುತ್ತಮಿರಲ್ ವೀರಭದ್ರನಾಯಕನಾ ಸದಾಶಿವನಾಯಕನಂ ಕಳುಪಲೆಂದು ಪೇಳಿ ಕಳುಪಲ್ ಸೋದೆ ಬಿಳಿಗಿಯವರೊಂದಾಗಿ ಸದಾಶಿವಯ್ಯನಂ ಕೊಡದಿರಲಾಗಳಾ ವಿರಭದ್ರನಾಯಕನತ್ಯಂತ ಕೋಪಾಟೋಪದಿಂ ಸೈನ್ಯಸಮೇತನಾಗಿ ತಾನೇ ತೆರಳಲ್ ಕ್ವಚಿತ್ಕಾಲದೊಳಾ ಸದಾಶಿವಯ್ಯಂ ವಿಧಿವಶದಿಂದಲ್ಲಿಯೆ ಶಿವಾಧೀನಮಾಗಲೊಡನಾ ವೀರಭದ್ರನಾಯಕಂ

ಕಂ|| ಸೋದೆ ಬಿಳಿಗಿಯ ನೃಪಾಲರ
ಮೇದಿನಿಯಂ ಕೊಂಡು ತತ್ಪರಿಸ್ತರಣಗಳಂ
ಸ್ವಾಧೀನಂಗೈದು ಬಳಿ
ಕ್ಕಾದೊರೆಗಳನಾಜಿರಂಗದೊಳ್ ನೆರೆ ಮುರಿದಂ ೨೦

ಕೌಲಿಯ ದುರ್ಗಕ್ಕೆ ಹೋಗಿ ಆ ಕೋಟೆಯನ್ನು ವಶಪಡಿಸಿಕೊಂಡನು. ಅಲ್ಲಿಂದ ಹೊರಟು ಆನಂದಪುರವನ್ನು ಪ್ರವೇಶಿಸಿ ಅಲ್ಲಿನ ಕೋಟೆಯಲ್ಲಿ ಇರುತ್ತಿದ್ದನು. ಹೀಗೆ ಸ್ವಲ್ಪಕಾಲ ಅರಸೊತ್ತಿಗೆಯು ಎರಡು ಭಾಗವಾಯಿತು. ವ|| ಈ ರೀತಿ ದೊರೆತನವು ಎರಡಾಗಿ ನಡೆಯುತ್ತಾ ಇರಲು, ಮೂರು ತಿಂಗಳು ಕಳೆದಮೇಲೆ ಇಕ್ಕೇರಿಯಲ್ಲಿ ಆಳುತ್ತಿದ್ದ ವೀರವೊಡೆಯರು ದೈವವಶದಿಂದ ಶಿವಸಾಯುಜ್ಯವನ್ನು ಹೊಂದಿದರು. ಈ ವಾರ್ತೆಯನ್ನು ಕೇಳಿ ವೀರಭದ್ರನಾಯಕನು ಆನಂದಪುರದಿಂದ ಬರುವಷ್ಟರಲ್ಲಿ, ಈತನ ಮೈದುನ ಸದಾಶಿವನಾಯಕನು ತನಗೆ ರಾಜ್ಯಾಭಿಷೇಕವಾಗಬೇಕೆಂಬ ಅಭಿಲಾಷೆಯಿಂದ ಮುಂದುವರಿದು ವೀರವೊಡೆಯರ ಸಹೋದರನಾದ ಬಸವಲಿಂಗನಾಯಕನನ್ನು ಅಂಗಹೀನನನ್ನಾಗಿ ಮಾಡಿ ತಾನು ಪಟ್ಟವೇರಿದನು. ಅಷ್ಟರಲ್ಲಿಯೇ ವೀರಭದ್ರನಾಯಕನು ಸೈನ್ಯದೊಡನೆ ಅತಿ ಶೀಘ್ರದಿಂದ ಎದುರಾಗಿ ಬಂದನು. ಭಯಭ್ರಾಂತನಾದ ಸದಾಶಿವಯ್ಯನು ಅಲ್ಲಿ ನಿಲ್ಲಲಾರದೆ ಪಲಾಯನ ಮಾಡಿ ಸೋದೆಯುವರನ್ನು ಮರೆಹೊಕ್ಕನು. ವೀರಭದ್ರನಾಯಕನು 'ಸದಾಶಿವಯ್ಯನನ್ನು ಕಳುಹಿಸಿರಿ' ಎಂಬುದಾಗಿ ಹೇಳಿಕಳಿಸಿದನು. ಸೋದೆ ಬಿಳಿಗಿಯುವರು ಒಂದಾಗಿ ಸದಾಶಿವಯ್ಯನನ್ನು ಬಿಟ್ಟುಕೊಡದಿರಲು, ಆ ವೀರಭದ್ರನಾಯಕನು ಅತ್ಯಂತ ಕೋಪದಿಂದ ಸೈನ್ಯಸಹಿತವಾಗಿ ತಾನೇ ಎದುರಾಗಲು ಬಂದನು. ಸ್ವಲ್ಪ ಕಾಲದಲ್ಲಿಯೇ ಸದಾಶಿವಯ್ಯನು ವಿಧಿವಶದಿಂದ ಅಲ್ಲಿಯೇ ಶಿವಾಧೀನನಾದನು. ಒಡನೆ ವೀರಭದ್ರನಾಯಕನು-೨೦. ಸೋದೆ ಮತ್ತು ಬಿಳಿಗಿ ಅರಸರ ಭೂಮಿಯನ್ನು ವಶಪಡಿಸಿ, ಅಲ್ಲಿನ ಕೋಟೆಗಳನ್ನು ಸ್ವಾಧೀನಪಡಿಸಿ, ಆಮೇಲೆ

ವರ ವೀರಭದ್ರನೃಪ ಭಾ
ಸ್ಕರನತಿಶಯಶೌರ್ಯಪಾದಮೊದೆದೊದೆದು ವಿಜಾ
ಪುರಕೆಬ್ಬಟ್ಟಿದುದು ಸುಧಾ
ಪುರ ಬಿಳಿಗಿಯ ದೊರೆಗಳೆಂಬ ತಿಮಿರೋತ್ಕರಮಂ ೨೧

ವ॥ ಇಂತಾ ವೀರಭದ್ರನಾಯಕಂ ಸೋದೆಯ ಬಿಳಿಗಿಯ ದೊರೆಗಳದಟಂ ಮುರಿದವರ ರಾಜ್ಯಪರಿಸ್ತರಣಂಗಳಂ ಕಟ್ಟಿಕೊಳಲವರ್ ವಿಜಾಪುರಕ್ಕೈದಿ ಪಾತುಶಾಹನಂ ಸಂಧಿಸಿ ವೀರಭದ್ರನಾಯಕನ ಮೇಲಣ ಕೊಂಡೆಯಂಗಳಂ ಪೇಳ್ದು ಕುಮಂತ್ರಮಂ ಬೋಧಿಸಿ ಕಿಮಿಗೆಡಿಸಿ ದೂರುತ್ತುಮಿಂತೆಂದರ್

ಕಂ॥ ಅಳಿಯೆ ಸದಾಶಿವನಾಯಕ
ನಳವಂ ಮುರಿದೊಪ್ಪುವೆಮ್ಮ ಕೋಂಟೆಗಳಂ ಕೊಂ
ಡಿಳೆಯಂ ಕವರ್ದು ನಿಮ್ಮ
ಗ್ಗಳಮಂ ಲೆಕ್ಕಿಸದೆ ಮೀರಿ ನಡೆಯುತ್ತಿರ್ಪಂ ೨೨

ವ॥ ಇಂತು ಬಹುವಿಧ ಕುಬೋಧೆಗಳಂ ತುಂಬಿ ವಿಜಾಪುರಾಧಿರಾಜನ ಮನಮಂ ಸಂತಸಗೆಡಿಸಿ ಬಳಿಕ್ಕವನಂತಃಕರಣಕ್ಕೆ ಖತಿಯಂ ಪುಟ್ಟಿಸುತ್ತುಂ

ಕಂ॥ ಮರಳಾ ಸದಾಶಿವಯ್ಯನ
ತರುಣಂಗಿಕ್ಕೇರಿಯಲ್ಲಿ ಪಟ್ಟವನನುವಿಂ
ದಿರದಾಗಿಸಿ ತಮ್ಮ ಪರಿ
ಸ್ತರಣಗಳಂ ಕೊಡಿಸಬೇಹುದೆಂದೀ ತೆರದಿಂ ೨೩

ಆ ಅರಸರನ್ನು ಯುದ್ಧರಂಗದಲ್ಲಿ ಸೋಲಿಸಿದನು. ೨೧. ವೀರಭದ್ರನಾಯಕನೆಂಬ ಸೂರ್ಯನ ಹೆಚ್ಚಿನ ಪರಾಕ್ರಮವೆಂಬ ಪಾದವು (ಕಿರಣವು) ಒದೆದೂ ಒದೆದು, ಸೋದೆ ಬಿಳಿಗಿಗಳ ಅರಸರೆಂಬ ಕತ್ತಲಿನ ಗುಂಪನ್ನು ವಿಜಾಪುರಕ್ಕೆ ಓಡಿಸಿತು. ವ॥ ಈ ರೀತಿ ವೀರಭದ್ರನಾಯಕನು ಸೋದೆ ಹಾಗೂ ಬಿಳಿಗಿಯ ಅರಸರ ಪರಾಕ್ರಮವನ್ನು ಮುರಿದು, ಅವರ ರಾಜ್ಯ ಹಾಗೂ ಕೋಟೆಗಳನ್ನೂ ವಶಪಡಿಸಿಕೊಂಡನು. ಅವರು ವಿಜಾಪುರಕ್ಕೆ ಹೋಗಿ ಬಾದಷಹನನ್ನು ಸಂಧಿಸಿ ವೀರಭದ್ರನಾಯಕನ ಮೇಲೆ ಚಾಡಿಗಳನ್ನು ಹೇಳಿ, ಕುಮಂತ್ರಗಳನ್ನು ವಿವರಿಸುತ್ತಾ ಕಿವಿಗೆಡಿಸಿ ಈ ರೀತಿ ದೂರಿತ್ತನು-೨೨. ಸದಾಶಿವನಾಯಕನು ಮಡಿದಾಗ, ವೀರಭದ್ರನಾಯಕನು ನಮ್ಮ ಪರಾಕ್ರಮವನ್ನು ಕೆಡಿಸಿ, ಕೋಟೆಗಳನ್ನು ತೆಗೆದುಕೊಂಡು, ರಾಜ್ಯವನ್ನು ಆಕ್ರಮಿಸಿ, ನಿಮ್ಮ ಹಿರಿಮೆಯನ್ನು ಗಣನೆ ಮಾಡದೆ ನಡೆಯುತ್ತಿದ್ದಾನೆ. ವ॥ ಈ ರೀತಿ ನಾನಾ ವಿಧವಾಗಿ ದುರ್ಬೋಧೆಗಳನ್ನು ತುಂಬಿ ವಿಜಾಪುರದ ರಾಜನ ಮನಸ್ಸನ್ನು ಹದಗೆಡಿಸಿ ಬಳಿಕ ಅವನ ಅಂತರಂಗದಲ್ಲಿ ಕೋಪವನ್ನು ಉಂಟುಮಾಡಿದರು. ೨೩. ಆ ಸದಾಶಿವಯ್ಯನ ಮಗನಿಗೆ ಇಕ್ಕೇರಿಯಲ್ಲಿ ಪಟ್ಟವನ್ನು ಕಟ್ಟಿ ನಮ್ಮ ಕೋಟೆಗಳನ್ನು ಕೊಡಿಸಿ ಕೊಡಬೇಕು ಎಂಬುದಾಗಿ-೨೪. ಬಾದಷಹನ ಕಾಲಿಗೆ ಬಿದ್ದು ಅವನನ್ನು ಒಪ್ಪಿಸಿ, ಸಹಾಯಕ್ಕಾಗಿ ತುರುಕರ ಸೈನ್ಯವನ್ನು ಕೂಡಿಕೊಂಡು ಬರುವಷ್ಟರಲ್ಲಿ

ಅಡಿವಿಡಿದು ಪಾತುಶಾಹನ
ನೊಡವಡಿಸಿ ಸಹಾಯಕುರುತುರುಷ್ಕರ ಫೌಜಂ
ಒಡಗೊಂಡು ಬರ್ಪನಿತರೊಳ್
ಕಡುಗಲಿ ಭದ್ರೇಂದ್ರಸೂನುವರಿದೀ ಕಥೆಯಂ ೨೪

ವ|| ಇಂತು ಸೋದೆಬಿಳಿಗಿಯವರ್ ಪಾತುಶಾಹನಂ ಕಿಮಿಗೆಡಿಸಿ ಹೇರಳಮಾದ ತುರುಷ್ಕ ಸೈನ್ಯವನೊಡಗೊಂಡು ಬರಲುದ್ಯುಕ್ತರಾಗಿರ್ಪರೆಂಬ ವಾರ್ತೆಯಂ ವೀರಭದ್ರನಾಯಕಂ ಕೇಳ್ದು ರಾಯಸದ ಶಂಕರನಾರಣಯ್ಯನೆಂಬ ನಿಯೋಗಿಯಂ ವಿಜಾಪುರಕ್ಕೆ ಕಳುಹಿ ಮುರಾರಿಪಂತನೆಂಬ ಮಂತ್ರಿಯ ಮುಖದಿಂ ಪಾತುಶಾಹಂಗೆ ತಮ್ಮ ಸಂಸ್ಥಾನದ ಸಕಲ ಪೂರ್ವೋತ್ತರದ ವೃತ್ತಾಂತಂಗಳಂ ತಿಳುಪಲ್ ಕೇಳ್ದು ಪರಮಪರಿತೋಷಂಬಟ್ಟು ಸೈನ್ಯಮಂ ತೆರಳುವ ಬುದ್ಧಿಯಂ ಮಾಣ್ದು ಸೋದೆಬಿಳಿಗಿಯವರ್ ಕುಹಕಿಗಳ್ ತಮ್ಮ ಪರಿಸ್ತರಣಂಗಳ್ ಪೋದ ಸಂಕಟಕೋಸುಗಂ ದುರ್ಬೋಧೆಯಂ ಬೋಧಿಸುತಿರ್ಪರಿಕ್ಕೇರಿಯ ದೊರೆತನಕ್ಕೆ ವೀರಭದ್ರನಾಯಕನೆ ಸಲ್ವನೆಂಬುದಂ ದೃಢಮಾಗಿ ನಿರ್ಧರಿಸಿ ರಾಯಸದ ಶಂಕರನಾರಣಯ್ಯಂಗೆ ಶರಜಾರಾಯನೆಂದು ಪೆಸರಿತ್ತುಚಿತಮಾದುಡುಗೊರೆವೀಳ್ಯಂಗಳನಿತ್ತು ತನ್ನೆಡೆಗೈದಿ ಬಹುಪ್ರಕಾರ ದೈನ್ಯೋಕ್ತಿಗಳಿಂ ಪೇಳಿಕೊಂಡರೆಂಬುದಕ್ಕೋಸುಗಂ ಸೋದೆಬಿಳಿಗಿಯವರ ರಾಜ್ಯಪರಿಸ್ತರಣಂಗಳನವರ್ಗೆ ಕೊಡಿಸುವುದೆಂದು ನಿಯಾಮಿಸಿ ವೀರಭದ್ರನಾಯಕನ ಪ್ರಾಮಾಣಿಕತ್ವಕ್ಕಂ ಭುಜಬಲಪ್ರತಾಪಾತಿಶಯಂಗಳ್ಗಂ ಮೆಚ್ಚಿ ಹಸುರುತ್ತಿಗೆ ನಿಶಾನಿ ಮುಂತಾದ ಬಿರುದುಗಳುಮಂ ಮತ್ತಮನೇಕಮಾದಂಗೋಚಿತಾಭರಣಾಂಬರಂ ಮೊದಲಾದುಡುಗೊರೆಗಳುಮನಿತ್ತು ಕಳುಪಲ್ ವೀರಭದ್ರನಾಯಕನತ್ಯಂತಸಂತೋಷದಿಂದಾ ಬಿರುದುಗಳನಂಗೀಕರಿಸಿ ಸೋದೆಬಿಳಿಗಿಯವರ

ಕಡುಗಲಿಯಾದ ವೀರಭದ್ರನಾಯಕನು ಈ ಕಥೆಯನ್ನು ತಿಳಿಸಿದನು. ವ|| ಈ ರೀತಿಯಾಗಿ ಸೋದೆ (ಸ್ವಾದಿ) ಮತ್ತು ಬಿಳಿಗಿಯವರು ಬಾದಷಹನ ಮನಸ್ಸನ್ನು ಕೆಡಿಸಿ, ಅಪರಿಮಿತವಾದ ಮುಸಲ್ಮಾನರ ಸೈನ್ಯವನ್ನು ಕೂಡಿಕೊಂಡು ಬರುತ್ತಿರುವರೆಂಬ ಸಮಾಚಾರವನ್ನು ವೀರಭದ್ರನಾಯಕನು ಕೇಳಿ, ರಾಯಸದ ಶಂಕರನಾರಣಯ್ಯನೆಂಬ ನಿಯೋಗಿಯನ್ನು ವಿಜಾಪುರಕ್ಕೆ ಕಳುಹಿಸಿದನು. ಆತನು ಮುರಾರಿಪಂತನೆಂಬ ಮಂತ್ರಿಯ ಮುಖದಿಂದ ಬಾದಷಹನಿಗೆ ತಮ್ಮ ಸಂಸ್ಥಾನದ ಸಕಲ ಹಿಂದಿನ ವೃತ್ತಾಂತಗಳನ್ನು ತಿಳಿಸಿ ಹೇಳಲು, ಇದನ್ನು ಕೇಳಿ ತಿಳಿದ ಬಾದಷಹನು ಬಹಳ ಸಂತೋಷಪಟ್ಟು ಸೈನ್ಯವನ್ನು ಕೆಳದಿಯ ಮೇಲೆ ಕಳುಹಿಸುವ ಮನಸ್ಸನ್ನು ತ್ಯಜಿಸಿದನು. ತಮ್ಮ ಕೋಟೆಗಳು ಕೈಬಿಟ್ಟಿರುವ ಸಂಕಟಕ್ಕೋಸ್ಕರ ಕುಹಕಿಗಳಾದ ಸ್ವಾದೆ ಬಿಳಿಗಿಯವರು ತಮಗೆ ದುರ್ಬೋಧೆ ಮಾಡಿರುವರೆಂದು ಅರಿತನು; ಇಕ್ಕೇರಿಯ ದೊರೆತನಕ್ಕೆ ವೀರಭದ್ರನಾಯಕನೇ ಶಕ್ತನೆಂಬುದಾಗಿ ನಿರ್ಧರಿಸಿಕೊಂಡು ರಾಯಸದ ಶಂಕರನಾರಯಣಯ್ಯನಿಗೆ ಶರಜಾರಾಯ ನೆಂದು ಹೆಸರಿಟ್ಟು ಉಚಿತವಾದ ಉಡುಗೊರೆ ವೀಳ್ಯಗಳನ್ನು ನೀಡಿ ಅವನನ್ನು ಸನ್ಮಾನಿಸಿ ಕಳುಹಿಸಿಕೊಟ್ಟನು. ತನ್ನ ಹತ್ತಿರ ಬಹು ಪ್ರಕಾರವಾಗಿ ದೈನ್ಯದಿಂದ ಪ್ರಾರ್ಥಿಸಿಕೊಂಡ ಮೇರೆಗೆ, ಸ್ವಾದೆ ಬಿಳಿಗಿಯವರ ಕೋಟೆಗಳನ್ನು ಹಾಗೂ ರಾಜ್ಯವನ್ನು ಅವರಿಗೆ ಹಿಂತಿರುಗಿ ಕೊಡಿಸಲು ಏರ್ಪಡಿಸಿದನು. ಬಾದಷಹನು ವೀರಭದ್ರನಾಯಕನ ಪ್ರಾಮಾಣಿಕತ್ವ ಹಾಗೂ ಭುಜಬಲಪ್ರತಾಪಗಳಿಗೆ ತಲೆದೂಗಿ ಹಸುರು ಕೊಡೆ, ಬಾವುಟ, ಬಿರುದುಗಳು

ರಾಜ್ಯಪರಿಸ್ತರಣಂಗಳನವರ್ಗಿತ್ತು ಬಳಿಕಂ ಬಿಳಿಗಿಯ ಘಂಟೆವೊಡೆಯರ ಪುತ್ರಿ ಘಂಟೆಯಮ್ಮನಂ ಸದಾಶಿವಯ್ಯನವರ ಪುತ್ರನಾದಳಿಯಭದ್ರಯ್ಯಂಗತ್ಯಂತಸಂಭ್ರಮದಿಂ ವಿವಾಹಮಂ ರಚಿಯಿಸಿ ಸುಖದಿಂ ರಾಜ್ಯಂಗೆಯ್ಯುತ್ತುಮಿರಲ್ಕೆ ಮತ್ತಮೊಂದವಸರದೊಳ್

ಕಂ॥ ಮೆರೆವ ತರೀಕೆರೆಯಾಣ್ಮಂ
ವರ ಬಾಣಾವರದ ದುಷ್ಟ ವೆಂಕಟಪತಿ ಪೇ
ಳ್ದುರುಕುಮಂತ್ರಕ್ಕೆಯೊಡವ
ಟ್ಟಿರದೈದಿಸಿ ಪಾತುಶಾಹಸೈನ್ಯೋತ್ಕರಮಂ ೨೫

ರಣದುಲಖಾನನ ಮುಖದಿಂ
ದಣಿಯರಮಿಕ್ಕೇರಿಮುಖ್ಯರಾಜ್ಯವನೆಲ್ಲಂ
ಕ್ಷಣದೆ ಪುಡಿಗೈಸೆ ತನ್ನೃಪ
ಮಣಿ ಕೌಲಿಯ ದುರ್ಗಮಂ ದಲಂದುರೆ ಸಾರ್ದಂ ೨೬

ವ॥ ಇಂತು ರಣದುಲ್ಲಾಖಾನನ ದಾಳಿಯಂ ಶಾಲಿವಾಹನ ಶಕವರ್ಷ ೧೫೬೦ನೆಯ ಈಶ್ವರ ಸಂವತ್ಸರದ ಪುಷ್ಯ ಬಹುಳ ದಶಮಿಯ ದಿವಸದೊಳಿಕ್ಕೇರಿಯ ಪತ್ತನಂ ವಿಸ್ಖಲಿತಮಾಗಲಲ್ಲಿ ನಿತ್ತರಿಸಲಮ್ಮದೆ ವೀರಭದ್ರನಾಯಕಂ ಸ್ವಕುಟುಂಬವೆರಸು ಭುವನಗಿರಿಯ ದುರ್ಗವನೈದಿ ಪೋಗಲೊಡನಾ ರಣದುಲ್ಲಾಖಾನಂ ಕೆಂಗೆಯ ಹನುಮನಾಯಕನ ಸೈನ್ಯಂವೆರಸು ತಾನೈತಂದು

ಮುಂತಾದುವುಗಳನ್ನು ಮತ್ತು ಶ್ರೇಷ್ಠವಾದ ಆಭರಣಗಳು ಬಟ್ಟೆಗಳು ಹಾಗೂ ಉಡುಗೊರೆಗಳನ್ನು ಕೊಟ್ಟು ಕಳುಹಿಸಿದನು. ವೀರಭದ್ರನಾಯಕನು ಬಹು ಸಂತೋಷದಿಂದ ಆ ಬಿರುದುಗಳನ್ನು ಸ್ವೀಕರಿಸಿ, ಸ್ವಾದೆ-ಬಿಳಿಗಿಯವರ ರಾಜ್ಯ ಹಾಗೂ ಕೋಟೆಗಳನ್ನು ಅವರಿಗೆ ಕೊಟ್ಟು, ತರುವಾಯ ಬಿಳಿಗಿಯ ಘಂಟೆವೊಡೆಯರ ಮಗಳು ಘಂಟೆಯಮ್ಮನನ್ನು ಸದಾಶಿವಯ್ಯನ ಮಗನೂ ಹಾಗೂ ತನ್ನ ಅಳಿಯನೂ ಆದ ಭದ್ರಯ್ಯನಿಗೆ ತಂದುಕೊಂಡು ಸಂಭ್ರಮದಿಂದ ವಿವಾಹವನ್ನು ನೆರವೇರಿಸಿದನು. ಈ ರೀತಿ ಸುಖದಿಂದ ರಾಜ್ಯವನ್ನು ಪಾಲಿಸುತ್ತಾ ಇರಲು ಮತ್ತೆ ಒಂದು ಕಾಲದಲ್ಲಿ-೨೫. ತರೀಕೆರೆಯ ರಾಜನು ಬಾಣಾವರದ ದುಷ್ಟ ವೆಂಕಟಪತಿಯು ಹೇಳಿದ ದುರಾಲೋಚನೆಗೆ ಒಪ್ಪಿಕೊಂಡು ಬಾದಷಹನ ಸೈನ್ಯವು ದಾಳಿಗೆ ಹೊರಡುವಂತೆ ಮಾಡಿದನು. ೨೬. ರಣದುಲ್ಲಖಾನನ ಮೂಲಕ ಇಕ್ಕೇರಿ ಮುಂತಾದ ಎಲ್ಲಾ ರಾಜ್ಯಗಳನ್ನೂ ಒಂದೇ ಕ್ಷಣದಲ್ಲಿ ಪುಡಿಗೈಯಲು (ಧ್ವಂಸಮಾಡುವ ಉದ್ದೇಶದಿಂದ) ಆ ತರೀಕೆರೆ ರಾಜನು ಕೌಲೇದುರ್ಗವನ್ನು ಸೇರಿದನು. ವ॥ ಈ ರೀತಿಯಾಗಿ ರಣದುಲ್ಲಾಖಾನನ ದಾಳಿಯಿಂದ ಶಾಲಿವಾಹನಶಕ ವರ್ಷ ೧೫೬೦ನೆಯ ಈಶ್ವರ ಸಂವತ್ಸರದ ಪುಷ್ಯಬಹುಳ ದಶಮಿಯ ದಿವಸದಲ್ಲಿ ಇಕ್ಕೇರಿಯ ಪಟ್ಟಣವು ನಾಶವಾಯಿತು. ಅಲ್ಲಿ ನಿಲ್ಲಲಿಕ್ಕೆ ಆಗದೇ ವೀರಭದ್ರನಾಯಕನು ತನ್ನ ಕುಟುಂಬ ಸಮೇತನಾಗಿ ಭುವನಗಿರಿಯ ದುರ್ಗವನ್ನು ಸೇರಿದನು. ಒಡನೆ ಆ ರಣದುಲ್ಲಾಖಾನನು ಕೆಂಗೆಯ ಹನುಮನಾಯಕನ ಸೈನ್ಯವನ್ನು ಕೂಡಿಕೊಂಡು ತಾನೇ ಬಂದು ಭುವನಗಿರಿಯ ದುರ್ಗವನ್ನು ಆಕ್ರಮಿಸಿದನು.

ಭುವನಗಿರಿಯ ದುರ್ಗಮಂ ವೇಢೈಸಲ್ ದೈವವಶದಿಂದಪಾಯದೊಳ್ ಬಂದ ಬವರದೊಳ್ ಧೈರ್ಯಗುಂದದೆಂತಾದೊಡಂ ನಿತ್ತರಿಸಿನಿಂದು ತಾನುಳಿದು ಮುಂದೆ ಕಾಲಸಾಧನೆಯಂ ಮಾಡಿ ಶತ್ರುವಂ ಮುರಿದು ಮಹಾಕಾರ್ಯಮಂ ಸಾಧಿಸಬೇಕೆಂಬ ರಾಜ್ಯನೀತಿಯಂ ನಿಶ್ಚಯಿಸಿಯುಚಿತರಪ್ಪ ನಿಯೋಗಿಗಳ ಮುಖದಿಂದಾ ರಣದುಲ್ಲಾಖಾನನಂ ತಿಳುಹಿ ಸಂಧಾನವನೊಡರ್ಚಿಸಿ

ಕಂ॥ ಆ ನರನಾಥಂ ರಣದುಲ
ಖಾನನ ಪಿಂದೆಗೆಸಿ ವೇಣುಪುರದೊಳ್ ನಿಂದೀ
ಶಾನಪದಕಮಲಮಧುಕರ
ನಾನಂದದೊಳಖಿಲರಾಜ್ಯಮಂ ಪಾಲಿಸಿದಂ ೨೭

ವ॥ ಇಂತಾ ವೀರಭದ್ರನಾಯಕಂ ರಾಜನೀತಿಮಾರ್ಗವಿಡಿದು ಸಂಧಾನಮುಖದಿಂ ರಣದುಲ್ಲಾಖಾನನಂ ಮುತ್ತಿಗೆದೆಗೆಸಿ ಕಳುಹಿ ರಾಜ್ಯರಾಷ್ಟ್ರವನುಳುಹಿಕೊಂಡು ಶಾಲಿವಾಹನ ಶಕವರ್ಷ ೧೫೬೦ನೆಯ ಬಹುಧಾನ್ಯ ಸಂವತ್ಸರದ ಮಾರ್ಗಶಿರ ಮಾಸದಲ್ಲಿ ಬಿದರೂರ ಕೋಂಟೆಯರ ಮನೆಯೊಳ್ ನೆಲೆಯಾಗಿ ನಿಂದು ತರಿಕೆರೆಯವರೊಡರ್ಚಿದಪಕಾರಮಂ ಮನದೆಗೊಂಡು ರಾಮಕೃಷ್ಣನೆಂಬ ನಿಯೋಗಿಯಂ ವಿಜಾಪುರಕ್ಕೆ ಕಳುಪಿ ಪಾತುಶಾಹನಂ ಪ್ರಸನ್ನೀಕರಿಸಿಕೊಂಡು ಪಿಂತೈದಿದ ರಣದುಲ್ಲಾಖಾನನ ಸಂಗಡಮಪರಿಮಿತ ತುರುಷ್ಕಸೈನ್ಯಮಂ ತೆರಳ್ಚಿಸಿ ತಂದಾ ವೀರ ಭದ್ರನಾಯಕಂ ಹರಿಹರದೆಡೆಯೊಳ್ ಆ ರಣದುಲ್ಲಾಖಾನನಂ ಸಂಧಿಸಿ ಶಿವಪ್ಪನಾಯಕನಂ ರಾಮಕೃಷ್ಣಪ್ಪಯ್ಯನಿವರೊಡಸಂಖ್ಯಾತಸೈನ್ಯಮಂ ಕೂಡಿಸಿ ರಣದುಲ್ಲಾಖಾನನ ಸಂಗಡಂ

ಒದಗಿದ ಈ ಅಪಾಯವನ್ನು ಕಂಡು ವೀರಭದ್ರನಾಯಕನು ದೈವಾನುಗ್ರಹದಿಂದ ಯುದ್ಧದಲ್ಲಿ ಧೈರ್ಯಗೆಡದೆ ಎದುರುನಿಂತು ಕಾಲಕ್ರಮೇಣ ಶತ್ರುವನ್ನು ಗೆದ್ದು ಮಹಾಕಾರ್ಯವನ್ನು ಸಾಧಿಸಬೇಕೆಂದು ನಿಶ್ಚಯಿಸಿ, ಉಚಿತರಾದ ನಿಯೋಗಿಗಳ ಮುಖದಿಂದ ರಣದುಲ್ಲಾ ಖಾನನೊಡನೆ ಸಂಧಾನವನ್ನು ಏರ್ಪಡಿಸಿದನು. ೨೭. ಆ ರಾಜನು (ವೀರಭದ್ರನಾಯಕನು) ರಣದುಲ್ಲಾಖಾನನನ್ನು ಹಿಂದಕ್ಕೆ ಕಳಿಸಿ ವೇಣುಪುರದಲ್ಲಿ ಇದ್ದು ಶಿವನ ಪಾದಕಮಲದಲ್ಲಿ ದುಂಬಿಯಾಗಿ ಆನಂದದಿಂದ ಎಲ್ಲಾ ರಾಜ್ಯವನ್ನು ಪಾಲಿಸಿದನು. ವ॥ ಈ ರೀತಿಯಾಗಿ ವೀರಭದ್ರನಾಯಕನು ಉಚಿತವಾದ ರಾಜನೀತಿ ಮಾರ್ಗವನ್ನನುಸರಿಸಿ ಸಂಧಾನದಿಂದ ರಣದುಲ್ಲಾಖಾನನ ಮುತ್ತಿಗೆಯನ್ನು ತೆಗೆಸಿ, ಅವನನ್ನು ಹಿಂತಿರುಗಿಸಿದನು. ಹೀಗೆ ತನ್ನ ರಾಜ್ಯ ಹಾಗೂ ರಾಷ್ಟ್ರವನ್ನು ಉಳಿಸಿಕೊಂಡು ಶಾಲಿವಾಹನ ಶಕವರ್ಷ ೧೫೬೦ನೆಯ ಬಹುಧಾನ್ಯ ಸಂವತ್ಸರದ ಮಾರ್ಗಶಿರ ಮಾಸದಲ್ಲಿ ಬಿದರೂರ ಕೋಟೆಯ ಅರಮನೆಯಲ್ಲಿ ಸ್ಥಿರವಾಗಿ ನಿಂತನು. ತರೀಕೆರೆಯವರು ಮಾಡಿದ ಅಪಕಾರವನ್ನು ಮನಸ್ಸಿನಲ್ಲಿಟ್ಟುಕೊಂಡು ರಾಮಕೃಷ್ಣನೆಂಬ ನಿಯೋಗಿಯನ್ನು ವಿಜಾಪುರಕ್ಕೆ ಕಳುಹಿಸಿ ಬಾದಷಹನನ್ನು ಪ್ರಸನ್ನೀಕರಿಸಿಕೊಂಡನು. ಹಿಂದಿರುಗಿ ಬಂದ ರಣದುಲ್ಲಾಖಾನನ ಸಂಗಡ ಅಪಾರವಾದ ತುರುಕರ ಸೈನ್ಯವನ್ನು ಹೊರಡಿಸಿಕೊಂಡು ಬಂದು ಖಾನನನ್ನು ಹರಿಹರದ ಸಮೀಪದಲ್ಲಿ ಸಂಧಿಸಿದನು. ಶಿವಪ್ಪನಾಯಕ, ರಾಮಕೃಷ್ಣಯ್ಯ ಮುಂತಾದವರೊಡನೆ ಅಸಂಖ್ಯಾತ ಸೈನ್ಯವನ್ನು ಕೂಡಿಸಿಕೊಂಡು ರಣದುಲ್ಲಾಖಾನನ ಸಂಗಡ ಕಳುಹಿಸಿ ತರೀಕೆರೆಯ ಮೇಲೆ

ಪ್ರಯಾಣವನೊಡರ್ಚಿಸಿ ಕಳುಹಿ ದಾಳಿವರಿಸಿ ತರಿಕೆರೆಯವನ ರಾಜ್ಯರಾಷ್ಟ್ರಮಂ ನಿಪಾತಂಗೈಸಿ ಬಳಿಕಾನೆವಳ್ಳಿಯೆಂದು ಪೂರ್ವನಾಮಾಂಕಿತಮಾದ ಬಸವಾಪಟ್ಟಣದ ಕೋಂಟೆಗೆ ಮುತ್ತಿಗೆಯಿಕ್ಕಿಸಿಯಾ ಕೋಂಟೆಯಂ ಕೊಂಡು ಯುದ್ಧಮುಖದೊಳ್ ಕೆಂಗೆಯ ಹನುಮಪ್ಪನಾಯಕನ ಸಹೋದರರಂ ಕೈಸೆರೆವಿಡಿಸಿ ಪಾತುಶಾಹನೆಡೆಗೆ ಕಳುಪಿ ಬಳಿಕಮಾ ರಣದುಲ್ಲಾಖಾನನೊಡನೆ ಶಿವಪ್ಪನಾಯಕ ರಾಮಕೃಷ್ಣಯ್ಯರಂ ಸೈನ್ಯಸಮೇತಮಾಗಿ ಮಾಯಾವಾದಿಗಳ ರಾಷ್ಟ್ರಮುಖಕ್ಕೆ ತೆರಳ್ಚಿ ಕಳುಹಿ ಪಾತುಶಾಹಂಗಾಮುಖದೊಳಪ್ಪ ಕಜ್ಜಂಗಳನೆಲ್ಲಮನಿರ್ವರ್ಗಳ ಮುಖದಿಂ ನಿರ್ವಾಹಂಗೈಸಿ ತತ್ಪಾತುಶಾಹಂ ಕಳುಪಿದನೇಕಮಾದುಚಿತವುಡುಗೊರೆಗಳಂ ಪರಿಗ್ರಹಿಸಿ ಬಹಳ ಸನ್ಮಾನಂಬೆತ್ತು ಪರಮಪ್ರಖ್ಯಾತಿಯಂ ಪಡೆದು ವಿರಾಜಿಸುತಿರ್ದನಂತುಮಲ್ಲದೆಯುಂ

ಕಂ|| ಮೇದಿನಿಗತಿಬಲನೆನಿಸುವ
ಸೋದೆಯ ರಘುನಾಥರಾಜನಂ ಕೆಂಗೆರೆಯೊಳ್
ಕಾದಿ ಪಿಂದೆಗೆಸಿ ಪೊಗಲಾ
ಮೋದದೆ ಸಂಧಿಯೊಳೆ ಮೈತ್ರಿಯಿಂ ಮನ್ನಿಸಿದಂ ೨೮

ಅಡಿಗಡಿಗಲೆವ ತುರುಷ್ಕರ
ಪಡೆಯಂ ಮುಗ್ಗಿಸುತೆ ಮಲೆತ ತೌಳವ ನೃಪರಂ
ಜಡಿದು ಮಾರ್ಮಲೆತ ಕಾರ್ಕಳ
ದೊಡೆಯನ ನಿಗ್ರಹಿಸಿ ವಿತ್ತಮಂ ನೆರೆಕೊಂಡಂ ೨೯

ವ|| ಮತ್ತಮಾ ವೀರಭದ್ರನಾಯಕಂ ತಮ್ಮ ಚಿಕ್ಕಪ್ಪನಾದ ವೆಂಕಟಪ್ಪನಾಯಕರ್ಗೆ ಬೊಕ್ಕಸದಧಿಕಾರವನಿತ್ತು ಶಿವಪ್ಪನಾಯಕರುಮಂ ಪ್ರೀತಿಯಿಂ ನಡೆಸಿಕೊಳುತ್ತಮಿರಲ್ ಸೇನೆ ದಿವಾನ ಪುಟ್ಟಣ್ಣಂ ಮುಂತಾದ ಕುಹಕಿಜನರ್ ಕುಮಂತ್ರಮಂ ನೆನೆಯಲೆಚ್ಚತ್ತು ಶಿವಪ್ಪನಾಯಕಂ ಶೀಘ್ರದಿಂ

ದಾಳಿಮಾಡಿ ಆ ರಾಜ್ಯವನ್ನು ಉರುಳಿಸಿದನು. ಅನಂತರ ಆನೆವಳ್ಳಿ ಎಂಬುದಾಗಿ ಪೂರ್ವದ ಹೆಸರುಳ್ಳ ಬಸವಾಪಟ್ಟಣದ ಕೋಟೆಗೆ ಮುತ್ತಿಗೆ ಹಾಕಿಸಿ ಆ ಕೋಟೆಯನ್ನು ವಶಪಡಿಸಿಕೊಂಡನು. ಯುದ್ಧಮುಖದಲ್ಲಿ ಕೆಂಗೆಯ ಹನುಮಪ್ಪನಾಯಕನ ಸಹೋದರರನ್ನು ಕೈಸೆರೆಹಿಡಿದು ಬಾದಷಹನ ಬಳಿಗೆ ಕಳುಹಿಸಿದನು. ಆಮೇಲೆ ಆ ರಣದುಲ್ಲಾಖಾನನೊಡನೆ ಶಿವಪ್ಪನಾಯಕ ಹಾಗೂ ರಾಮಕೃಷ್ಣಯ್ಯರನ್ನು ಸೈನ್ಯ ಸಹಿತವಾಗಿ ಮಾಯಾವಾದಿಗಳ ರಾಷ್ಟ್ರಕ್ಕೆ ಕಳಿಸಿದನು. ಬಾದಷಹನ ಮುಖ್ಯಕಾರ್ಯಗಳನ್ನು ಅವರ ಮೂಲಕ ಮಾಡಿಸಿ ಕೊಟ್ಟನು. ಆ ಬಾದಷಹನು ಕಳುಹಿಸಿದ ಅನೇಕ ಉಡುಗೊರೆ ಮುಂತಾದುವುಗಳನ್ನು ಪರಿಗ್ರಹಿಸಿ ಬಹು ಸನ್ಮಾನ ಹೊಂದಿ, ಪರಮಪ್ರಖ್ಯಾತಿಯನ್ನು ಪಡೆದು ವಿರಾಜಿಸುತ್ತಿದ್ದನು. ಅಂತೂ ಅಲ್ಲದೆ-೨೮. ಭೂಮಿಯಲ್ಲಿ ಅತ್ಯಂತ ಬಲಶಾಲಿಯೆನ್ನಿಸಿದ ಸೋದೆಯ ರಘುನಾಥರಾಜನನ್ನು ಕೆಂಗೆರೆಯಲ್ಲಿ ಯುದ್ಧಮಾಡಿ ಸೋಲಿಸಿ, ಸಂಧಾನದ ಮೂಲಕ ಸ್ನೇಹವನ್ನು ಸಂತೋಷದಿಂದ ಒಪ್ಪಿಕೊಂಡನು. ೨೯. ಆಗಾಗ ಬರುವ ತುರುಕರ ಸೈನ್ಯವನ್ನು ಸೋಲಿಸಿ ಕೊಬ್ಬಿದ ತೌಳವ ರಾಜರನ್ನು ಸದೆಬಡಿದು ಎದುರಾದ ಕಾರ್ಕಳದ ಒಡೆಯನನ್ನು ಸೋಲಿಸಿ ಧನರಾಶಿಯನ್ನು ಪಡೆದನು. ವ|| ಮತ್ತೆ ಆ ವೀರಭದ್ರನಾಯಕನು ತನ್ನ ಚಿಕ್ಕಪ್ಪನಾದ ವೆಂಕಪ್ಪನಾಯಕನಿಗೆ ಬೊಕ್ಕಸದ ಅಧಿಕಾರವನ್ನು ಕೊಟ್ಟು ಶಿವಪ್ಪನಾಯಕನನ್ನು ಪ್ರೀತಿಯಿಂದ

ಸಾಗರಕ್ಕೈದಲ್ ಸೇನೆದಿವಾನ ಪುಟ್ಟಣ್ಣಂ ಪಟ್ಟಗುಪ್ಪೆಗ್ಯೆದಿ ನಿಂದಿಕ್ಕೇರಿಯೊಳಿರ್ಪ ಪಾತುಶಾಹನ ವಕೀಲನಾಗಿರುತಿರ್ದ ಜನ್ನೋಪಂತಂಗೆ ಪರಿಧಾನಮನಿತ್ತು ಒಳಗು ಮಾಡಿಕೊಂಡು ಶಿವಪ್ಪನಾಯಕನಂ ಕೈವಶಮಂ ಮಾಡಿಕೊಳಬೇಕೆಂದು ಬಹುವಿಧಪ್ರಯತ್ನದಿಂ ಹುಡುಕುವನಿತರೊಳ್ ಆ ಸಾಗರದ ಮಹಾನಾಡು ಬಾದಾವಿ ಲಿಂಗಪ್ಪ ರುದ್ರಪ್ಪ ಸಹಿತಂ ಸುಂಕದ ಸೇನಬೋವ ಕೋನಪ್ಪನ ಮನೆಯೊಳ್ ನೆಲಮಾಳಿಗೆಯೊಳಡಂಗಿಸಿ ಪೇಟೆಯೊಳಿಲ್ಲವೆಂಬುದಂ ಮಾಡಿ ಕಳುಪಲೊಡನಿಂತು ಮರೆಯಾಗಿರುತಿರಲ್ ಕತಿಪಯದಿನಂಗಳ್ ಪೋಗಲೊಡನೆ ಸಮೀಪವರ್ತಿಗಳಾದ ಸೇನೆದಿವಾನ ಪುಟ್ಟಣ್ಣಂ ಮುಂತಾದ ಕುಹಕಿಗಳ್ ಮತ್ತಂ ಸದಾಶಿವನಾಯಕನಂ ಪಿಡಿದು ನಿಗ್ರಹಿಸಬೇಕೆಂದು ದುರಾಲೋಚನೆಯನೆಸಗುತ್ತಿರಲ್ ವೀರಭದ್ರನಾಯಕಂ ತಿಳಿದಂತಪ್ಪುದುಚಿತಮಲ್ತೆಂದು ಬಗೆದು

ಕಂ॥ ಬರಿಸಿ ಶಿವಭೂಮಿಪತಿಯಂ
ವರ ಚಂದಾವರದ ಸೀಮೆಕೋಂಟೆಯ ಮುಖದಾ
ಹೊರಪಾಳ್ಯದಾಧಿಪತ್ಯವ
ನುರುಕರುಣದೊಳಿತ್ತು ನೃಪವರಂ ಬೀಳ್ಕೊಟ್ಟಂ ೩೦

ವ॥ ಇಂತಾ ವೀರಭದ್ರನಾಯಕಂ ಚಿಕ್ಕಪ್ಪ ಶಿವಪ್ಪನಾಯಕಂಗೆ ಚಂದಾವರದ ಸೀಮೆಕೋಂಟೆಗಳ ಹೊರಪಾಳ್ಯದಧಿಕಾರವನಿತ್ತು ಕಳುಹಿ ಸುಖದಿಂ ರಾಜ್ಯಂಗೈಯುತ್ತುಮಿರಲ್ ತಮ್ಮ ಪತ್ನಿಯಾದ ವೀರಮ್ಮಾಜಿಯವರ್ ಶಿವಸಾಯುಜ್ಯಮನೈದಲೊಡನತ್ಯಂತ ವೈರಾಗ್ಯಪರಮನಾಗುತಂ ತಮ್ಮ ಕನಿಷ್ಠ ಪತ್ನಿಯಾದ ಕೊಲ್ಲೂರಮ್ಮಾಜಿಯವರ್ವೆರಸು

ಕಾಣುತ್ತಿದ್ದನು. ಹೀಗಿರಲು ಸೇನೆ ದಿವಾನ ಪುಟ್ಟಣ್ಣ ಮುಂತಾದ ಕಪಟಿಗಳು ಪಿತೂರಿಯನ್ನು ನಡೆಸಿದರು. ಕೂಡಲೇ ಶಿವಪ್ಪನಾಯಕನು ಸಾಗರಕ್ಕೆ ಹೋಗಲು ಸೇನೆದಿವಾನ ಪುಟ್ಟಣ್ಣನು ಪಟಗುಪ್ಪೆಗೆ ತೆರಳಿ, ಇಕ್ಕೇರಿಯಲ್ಲಿ ಬಾದಷಹನಿಗೆ ವಕೀಲನಾಗಿರುತ್ತಿದ್ದ ಜನ್ನೋಪಂತನಿಗೆ ಉಚಿತ ಕಾಣಿಕೆಯಿತ್ತು ಅವನನ್ನು ತನ್ನೊಳಗು ಮಾಡಿಕೊಂಡನು. ಶಿವಪ್ಪನಾಯಕನನ್ನು ಕೈವಶಮಾಡಿಕೊಳ್ಳಬೇಕೆಂದು ಬಹುವಿಧದಲ್ಲಿ ಪ್ರಯತ್ನಪಡುತ್ತಾ ಹುಡುಕುವಷ್ಟರಲ್ಲಿ, ಆ ಸಾಗರದ ಮಹಾನಾಡು ಬಾದಾಮಿ ಲಿಂಗಪ್ಪ-ರುದ್ರಪ್ಪರು ಕೂಡಿ ಸುಂಕದ ಶ್ಯಾನುಭೋಗನಾದ ಕೋನಪ್ಪನ ಮನೆಯಲ್ಲಿನ ನೆಲಮಾಳಿಗೆಯಲ್ಲಿ ಅಡಗಿಸಿ ಪೇಟೆಯಲ್ಲಿ ಇಲ್ಲರೆಂಬುದಾಗಿ ಸಾರಿದರು. ಈ ರೀತಿ ಮರೆಯಾಗುತ್ತಿರಲು ಕೆಲವು ದಿನಗಳ ನಂತರ ಸೇನೆ ದಿವಾನ ಪುಟ್ಟಣ್ಣನು ಹಾಗೂ ಪಿತೂರಿಗಾರರು ಸದಾಶಿವನಾಯಕನನ್ನು ಹಿಡಿದು ನಿಗ್ರಹಿಸಿಬೇಕೆಂದು ದುರಾಲೋಚನೆ ಮಾಡುತ್ತಿರಲು, ವೀರಭದ್ರನಾಯಕನು ಇದನ್ನು ಅರಿತು ಉಚಿತವಲ್ಲೆಂದು ಆಲೋಚಿಸಿ ೩೦. ಶಿವಪ್ಪನಾಯಕನನ್ನು ಬರಮಾಡಿಕೊಂಡು ಚಂದಾವರದ ಸೀಮೆಯ ಕೋಟೆ ಮುಂತಾದ ಹೊರಪಾಳ್ಯದ ಅಧಿಕಾರವನ್ನು ಕರುಣೆಯಿಂದ ನೀಡಿ ಕಳುಹಿಸಿಕೊಟ್ಟನು. ವ॥ ಈ ರೀತಿ ವೀರಭದ್ರನಾಯಕನು ತನ್ನ ಚಿಕ್ಕಪ್ಪ ಶಿವಪ್ಪನಾಯಕನಿಗೆ ಚಂದಾವರದ ಸೀಮೆ ಹಾಗೂ ಕೋಟೆಗಳ ಹೊರಪಾಳ್ಯದ ಅಧಿಕಾರವನ್ನು ನೀಡಿ ಕಳುಹಿಸಿ, ಸುಖದಿಂದ ರಾಜ್ಯಭಾರ ಮಾಡುತ್ತಿರಲು, ತಮ್ಮ ಪತ್ನಿ ವೀರಮ್ಮಾಜಿಯವರು ಶಿವಸಾಯುಜ್ಯವನ್ನು ಹೊಂದಲು, ಇದರಿಂದ ಬಹು ವ್ಯಸನಗೊಂಡು ವೈರಾಗ್ಯ ಪರವಶನಾಗಿ ತಮ್ಮ ಕನಿಷ್ಠ ಹೆಂಡತಿಯಾದ ಕೊಲ್ಲೂರಮ್ಮಾಜಿಯನ್ನು ಕೂಡಿಕೊಂಡು

ಕಂ॥ ವೀರಭದ್ರಾವನೀಶಂ
ಚಾರು ಹೊಸಂಗಡಿಯೊಳಿರ್ದನಂತರಮಾ ಕೊ
ಲ್ಲೂರಂ ಪೊರ್ದಿ ಬಳಿಕ್ಕಾ
ಭೂರಿಯಶಂ ಕಂಡಲೂರನಂದುರೆ ಸಾರ್ದಂ ೩೧

ವ॥ ಇಂತಾ ವೀರಭದ್ರನಾಯಕಂ ಕಂಡಲೂರಂ ಸಾರ್ದಾ ಕೋಂಟೆಯೊಳ್ ವರ್ತಿಸುತ್ತುಮಿರಲಾ ಕಾಲದೊಳ್

ಕಂ॥ ಬಿದುರೂರೊಳ್ ಸಂಸ್ಥಾನದ
ಬದುಕಿಂಗರುಹರುಮನೊರ್ವರಂ ಕಾಣದೆಯ
ಲ್ಲಿದ ಪಳಬರೊಳಂ ಮಿಗೆ ಬ
ಲ್ಲಿದನೆನಿಸುವ ಬಾಲರಾವುತನ ಪರುವಪನುಂ ೩೨

ಕಂ॥ ಆ ಸಿದ್ದಪನುಂ ವಸುಧಾ
ಧೀಶಂಗಿರದರಿಕೆಗೈಸೆ ಚಂದಾವರದಿಂ
ಭಾಸುರ ಬಿದರೂರ್ಗೈತಂ
ದೋಸರಿಸದೆ ಸಬ್ಬಬರ್ದುಕನಾಗಿಪುದೆನುತುಂ ೩೩

ಮಾ॥ ಬರಿಸೆ ಶಿವಪ್ಪನಾಯಕರಿಗಟ್ಟಿ ನಿರೂಪವನಾಕ್ಷಣಾರ್ಧದೊಳ್
ತ್ವರಿತದೊಳಾ ಶಿವೇಂದ್ರನುರು ವೇಣುಪುರಕ್ಕಣವೈದಿ ಸೋದರಂ
ವೆರಸು ಬರ್ದುಂಕನೊಲ್ದು ನಡೆಸುತ್ತಿರೆ ಸೇನೆದಿವಾನ ಪುಟ್ಟಣಂ
ಪರಿಕಿಸಿ ರಾಮಕೃಷ್ಣಪನುಮುನ್ಮದ ಕಾಶಿಯ ವೀರಯಾಖ್ಯನುಂ ೩೪

ಕಂ॥ ನೆರೆದಿನಿಬರ್ ಕುಹಕಿಗಳಂ
ದುರೆ ಬಲ್ಲಿದ ಬಾಲರಾವುತನ ಪರುವಪನಂ
ವರಸಿದ್ಧಪನಂ ಬೋಧಿಸು
ತಿರದವರುಮನೊಳಗುಮಾಡಿಕೊಂಡು ಬಳಿಕ್ಕಂ ೩೫

೩೧. ವೀರಭದ್ರನಾಯಕನು ಸುಂದರವಾದ ಹೊಸಂಗಡಿಯಲ್ಲಿದ್ದು, ಅನಂತರ ಕೊಲ್ಲೂರಿಗೆ ಹೋಗಿ ಆ ಮೇಲೆ ಕಂಡಲೂರಿಗೆ ತೆರಳಿದನು. ವ॥ ಈ ರೀತಿ ವೀರಭದ್ರನಾಯಕನು ಕಂಡಲೂರಿಗೆ ಹೋಗಿ ಕೋಟೆಯಲ್ಲಿ ಇರುತ್ತಿರುವ ಕಾಲದಲ್ಲಿ ೩೨. ಬಿದರೂರಿನಲ್ಲಿ ಸಂಸ್ಥಾನದ ಬದುಕಿಗೆ ಅರ್ಹರಾದವರನ್ನು ಒಬ್ಬರನ್ನೂ ಕಾಣದೆ ಅಲ್ಲಿನ ಹಳಬರಲ್ಲಿ ಬಲ್ಲಿದನಾದ ಬಾಲರಾಹುತನ ಪರುವಪ್ಪನೂ ೩೩. ಆ ಸಿದ್ದಪ್ಪನೂ ರಾಜನಿಗೆ ವಿಜ್ಞಾಪಿಸಿಕೊಳ್ಳಲು ವೀರಭದ್ರನಾಯಕನು ಚಂದಾವರದಿಂದ ಬಿದರೂರಿಗೆ ಬಂದು ಸಂಸ್ಥಾನದ ಎಲ್ಲಾ ಕಾರುಭಾರವನ್ನು ತೆಗೆದುಕೊಳ್ಳಬೇಕೆಂದು ಶಿವಪ್ಪನಾಯಕನು ಬಿದರೂರಿಗೆ ಬಂದು ಸಹೋದರನೊಂದಿಗೆ ರಾಜ್ಯಭಾರ ನಡೆಸುತ್ತಿರುವಾಗ ಸೇನೆ ದಿವಾನ ಪುಟ್ಟಣ್ಣನು, ರಾಮಕೃಷ್ಣಪ್ಪನೂ ಗರ್ವಿಷ್ಠನಾದ ಕಾಶಿಯ ವೀರಯ್ಯ ಎಂಬವನೂ ೩೫. ಇಷ್ಟು ಮಂದಿ ಸೇರಿಕೊಂಡು ಬಲ್ಲಿದನಾದ ಬಾಲರಾವುತನ ಪರುವಪ್ಪನಿಗೂ ಬೋಧಿಸಿ ಅವರನ್ನು ತಮ್ಮ

ಬಿಡದೆ ನೃಪಕಾರ್ಯಗಳುಮಂ
ನಡೆಯಿಸುವ ಶಿವೇಂದ್ರ ವೆಂಕಟಪನಾಯಕರಂ
ಪಿಡಿದು ನಿಗ್ರಹಿಸಬೇಕೆಂ
ದೆಡೆವಿಡದುರೆ ತೋಹನಿಕ್ಕಿ ಸಾಧಿಸುತಿರ್ದರ್ ೩೬

ವ|| ಇಂತು ಸಮಯಸಾಧನಂಗೈದೊಡಂ ಕೈಯೊಳಗಾಗದಿರಲೊಂದುದಿನವೆಂದಿನಂತೆ ಚಿಕ್ಕರಮನೆಯಿಂ ರಾಜಾಲಯಕ್ಕೈದಿದ ಶಿವಪ್ಪನಾಯಕ ವೆಂಕಟಪ್ಪನಾಯಕರಂ ಕಡಿತದ ಚಾವಡಿಯೊಳ್ ಕುಳ್ಳಿರಿಸಿ ಪೊರಗೈದದಂತೆ ಪರಿಸ್ತರಣಕವಾಟಂಗಳಂ ಬದ್ದಂಗೈಸಲಾ ಶಿವಪ್ಪನಾಯಕಂ ಸಹೋದರ ವೆಂಕಟಪ್ಪನಾಯಕಂವೆರಸು ಮಹಾಧೈರ್ಯಪರನಾಗುತುಮಾ ಕಡಿತದ ಚಾವಡಿಯೊಳೆಚ್ಚರಿನೊಳಿರ್ದಾರಾತ್ರೆಯಂ ಕಳೆದರುಣೋದಯಮಾಗಲೊಡನೆ ತಮ್ಮ ಸಮೀಪದೊಳಿರ್ದ ಹೊನ್ನೆನಾಯಕನ ವೆಂಕಟಯ್ಯ ಮುಂತಾದ ಮಂದಿಮಕ್ಕಳಂ ಕೂಡಿಕೊಂಡತ್ಯಂತಶೌರ್ಯದಿಂ ತಡೆದವರ್ಕಳ ಶಿರಶ್ಛೇದನಂಗೆಯ್ಯುತ್ತೈದಿ ಕೋಂಟೆಯ ಬಾಗಿಲಂ ತೆಗೆಸಿಕೊಳುತ್ತುಂ ಪೊರಟು ದುರಾಲೋಚನೆಗೊಳಗಾದ ಪರುವಪಂ ಸಿದ್ದಪಂ ಮುಂತಾದ ಕುಹಕಿಗಳಂ ಪಿಡಿದು ನಿಗ್ರಹಂಗೈದಾವುದರಲ್ಲಿಯುಮತಿಸಾವಧಾನಚಿತ್ತನಾಗಿಂತುವರ್ತಿಸುತ್ತುಮಿರಲ್ ವೀರಭದ್ರನಾಯಕನಾ ಶಿವಪ್ಪನಾಯಕನ ಮುಖದೊಳಖಿಲಕಾರ್ಯಂಗಳಂ ನಡೆಸುತ್ತುಂ ಕಂಡಲೂರೊಳ್ ನಿಶ್ಚಿಂತನಾಗಿರಲಾ ಪ್ರಸ್ತಾವದೊಳ್

ಮಾ|| ಮಿಸುಪ ವಿಜಾಪುರಾಧಿಪತಿಯಪ್ಪತಿಸಾಹಸಿ ಪಾತುಶಾಹನಂ
ದೆಸವ ವಜೀರರಂ ನೆರಪಿ ದಕ್ಷಿಣದತ್ತಣ ನಾಡನೈದೆ ಸಾ
ಧಿಸಿ ಮಲೆವಾಕೆವಾಳರೆನಿಸಿರ್ಪಳೆಯಾಣ್ಮರ ದರ್ಪಮಂ ನಿವಾ
ರಿಸಿಬಹುದೆಂದುಸಿರ್ದು ನಿಜಪುತ್ರನನೈದೆ ತೆರಳ್ಚೆ ಖಾತಿಯಿಂ ೩೭

ಕಡೆಗೆ ಮಾಡಿಕೊಂಡರು. ಆಮೇಲೆ ೩೬. ರಾಜಕಾರ್ಯಗಳನ್ನು ಬಿಡದೆ ಮಾಡುತ್ತಿರುವ ಶಿವಪ್ಪನಾಯಕ ಮತ್ತು ವೆಂಕಟಪ್ಪನಾಯಕರನ್ನು ಹಿಡಿದು ಕೊಲ್ಲಬೇಕೆಂದು ಎಡೆಬಿಡದೆ ಹೊಂಚು ಹೊಡಿ ಸಮಯ ಸಾಧಿಸುತ್ತಿದ್ದರು. ವ|| ಈ ರೀತಿ ಸಮಯವನ್ನು ಸಾಧಿಸುತ್ತಿರಲು ಒಂದಾನೊಂದು ದಿನ ಎಂದಿನಂತೆ ಚಿಕ್ಕ ಅರಮನೆಯಿಂದ ರಾಜಾಲಯಕ್ಕೆ (ದೊಡ್ಡ ಅರಮನೆಗೆ) ಹೋಗುತ್ತಿದ್ದ ಶಿವಪ್ಪನಾಯಕ ಹಾಗೂ ವೆಂಕಟಪ್ಪನಾಯಕರನ್ನು ಕಡಿತದ ಚಾವಡಿಯಲ್ಲಿ (Record Room) ಕುಳ್ಳಿರಿಸಿ ಹೊರಗೆ ಹೋಗದಂತೆ ಕೋಟೆಯ ಬಾಗಿಲುಗಳನ್ನು ಹಾಕಿ ಬಂಧನ ಮಾಡಿದರು. ಶಿವಪ್ಪ ನಾಯಕನೂ ಹಾಗೂ ಅವನ ಸಹೋದರನಾದ ವೆಂಕಟಪ್ಪನಾಯಕನೂ ಮಹಾಧೈರ್ಯದಿಂದ ಕೂಡಿ, ಕಡಿತದ ಚಾವಡಿಯಲ್ಲಿ ಆ ರಾತ್ರಿ ಇದ್ದು, ಸೂರ್ಯೋದಯವಾದ ಕೂಡಲೇ ತಮ್ಮ ಹತ್ತಿರವೇ ಇದ್ದ ಹೊನ್ನೆನಾಯಕನ ವೆಂಕಟಯ್ಯ ಮುಂತಾದವರನ್ನು ಕೂಡಿಕೊಂಡು ಹೊರಹೊರಟರು. ತಮ್ಮನ್ನು ತಡೆದವರ ತಲೆಯನ್ನು ಕಡಿದು ಹಾಕಿ, ಕೋಟೆಯ ಬಾಗಿಲನ್ನು ತೆಗೆಸಿಕೊಂಡು ಹೊರಟು ದುರಾಲೋಚನೆಗೆ ಒಳಗಾದ ಪರುವಪ್ಪ, ಸಿದ್ದಪ್ಪ ಮುಂತಾದ ಕುಮಾರ್ಗದವರನ್ನು ಹಿಡಿದು ನಿಗ್ರಹಿಸಿ ಎಚ್ಚರಿಕೆಯಿಂದಿದ್ದರು. ಹೀಗಿರಲು ವೀರಭದ್ರನಾಯಕನು ಶಿವಪ್ಪನಾಯಕನ ಮುಖಾಂತರ ಎಲ್ಲ ಕಾರ್ಯಗಳನ್ನೂ ನಡೆಸುತ್ತಾ ಕಂಡಲೂರಲ್ಲಿ ನಿಶ್ಚಿಂತೆಯಿಂದ ಇದ್ದನು. ಆ ಸಂದರ್ಭದಲ್ಲಿ -೩೭. ಶೋಭಿಸುವ ವಿಜಾಪುರದ ಒಡೆಯನೂ, ಅತಿ ಸಾಹಸಿಯೂ

ಕಂ|| ರುಸ್ತುಂಜಮಾನನೊಡನುರು
ಹಸ್ತ್ಯಶ್ವಪದಾತಿಸಹಿತಮಂಬರಖಾನಂ
ಶಸ್ತಮಹಮುದ್ದಖಾನಂ
ವಿಸ್ತರತನು ಕೂಬಕಾನನಂಕುಶಖಾನಂ ೩೮

ಮತ್ತಂ ಶಾಜೀಖಾನಂ
ಪತ್ತೇಖಾನಂ ಪರಾತಖಾನನೆನಿಪ್ಪು
ನ್ನತ್ತರಹ ಖಾನಖಾನರ್
ಪತ್ತಿಚಯಂವೆರಸು ತೆರಳ್ದು ಕದನೋತ್ಸಹದಿಂ ೩೯

ವ|| ಇಂತು ಪಾತುಶಾಹಂ ತಾನಾತ್ಮಪುತ್ರನೆನಿಪ ರುಸ್ತುಂಜಮಾನನೊಡನಪರಿಮಿತ ಸೈನ್ಯ ವಜೀರರ್ಕಳಂ ಕೂಡಿಸಿ ತೆರಳ್ಚಲವರ್ ದಾಳಿವರಿಯುತ್ತೈದಿ ಸಿಮೊಗ್ಗೆಯ ಕೋಂಟೆಯಂ ವೇಢೈಸಲ್ ವೀರಭದ್ರನಾಯಕನ ಪರಿಮಿತಸೇನಾಸಮೂಹಮಂ ಕೂಡಿಸಿ ಶಿವಪ್ಪನಾಯಕನಂ ತೆರಳ್ಚಲಾತಂ ತನ್ನನುಜ ವೆಂಕಟಪ್ಪನಾಯಕಂವೆರಸತ್ಯಂತಾಟೋಪದಿಂ ತೆರಳ್ದೈತಂದು ಯವನ ಸಮೂಹಕ್ಕಿದಿರ್ಚಿ ನಿಂದು ಕೈಗೈದು ಯುದ್ಧರಂಗದೊಳ್ ಅಂಬರಖಾನನ ಡೊಂಬಿಯಂ ನಿಲಿಸಿ ಮಹಮುದ್ದಖಾನನ ಬಹುಮದಮಂ ಕೆಡಿಸಿ ಕೂಬಖಾನನಂ ಕ್ಷೋಭೆವಡಿಸಿ ಅಂಕುಶಖಾನನ ಬಿಂಕಮಂ ಕಳಲ್ಚಿಸಿ ಶಾಜೀಖಾನನ ಫೌಜಂ ಮುರಿದು ಪತ್ತೆಶಖಾನನ ಕತ್ತಿಯಂ ನಿಲಿಸಿ ಪರಾತಖಾನನಂ ಪರಿಭವಂಗೈದಿಂತು ತುರುಷ್ಕಸೈನ್ಯಮಂ ಸದೆದೋಡಿಸಿ ಕೋಂಟೆಗಳ ಮುತ್ತಿಗೆದೆಗೆಸಿ ರುಸ್ತುಂಜಮಾನನಂ ಪಿಂದೆಗೆಸಲ್ ಪಾತುಶಾಹಂ ಕೇಳ್ದು ಕೆರಳ್ದು ಬಂಕಾಪುರಕ್ಕೈದಿ ನಿಂದು ಮುಸ್ತಾಪಖಾನನ ಕೂಡಪರಿಮಿತಸೈನ್ಯಮಂ ಕೂಡಿಸಿ ತೆರಳ್ಚಲವಂ ಪಡೆವೆರಸೆಳ್ತಂದು ಕಳವೂರ ಬಯಲ್ಗೈತಂದು ನಿಲಲ್ ಬಳಿಕಂ ನಿಯೋಗಿ

ಆದ ಬಾದಷಹನು ವಜೀರ (ಮಂತ್ರಿ)ಗಳನ್ನು ಸೋಲಿಸಿ' ದಕ್ಷಿಣ ರಾಜ್ಯವನ್ನು ವಶಪಡಿಸಿ, ಎದುರಾಗುವ ವೀರರಾದ ರಾಜರ ದರ್ಪವನ್ನು ಹೋಗಲಾಡಿಸಿ ಬರಬೇಕೆಂದು ಹೇಳಿ ತನ್ನ ಮಗನನ್ನು ಕೋಪದಿಂದ ಕಳುಹಿಸಿಕೊಟ್ಟನು. ೩೮. ರುಸ್ತುಂಜಮಾನ ಆನೆ, ಕುದುರೆ, ಕಾಲಾಳುಗಳಿಂದ ಕೂಡಿ ಅಂಬರಖಾನ, ಯೋಗ್ಯನಾದ ಮಹಮುದ್ದಖಾನ, ದೊಡ್ಡ ಶರೀರದ ಕೂಬಖಾನ ಮತ್ತು ಅಂಕುಶಖಾನ ೩೯. ಮತ್ತು ಶಾಜೀಖಾನ, ಪತ್ತೇಖಾನ, ಪರಾತಖಾನ ಎಂಬ ಉನ್ನತ್ತರಾದ ಖಾನಖಾನರು ಪದಾತಿಗಳ ಗುಂಪಿನೊಂದಿಗೆ ಯುದ್ಧೋತ್ಸಾಹದಿಂದ ಹೊರಟರು. ವ|| ಈ ರೀತಿಯಾಗಿ ಬಾದಷಹನು ತನ್ನ ಮಗನಾದ ರುಸ್ತುಂಜಮಾನನೊಡನೆ ಅಪಾರವಾದ ಸೈನ್ಯಗಳನ್ನು ಹಾಗೂ ಮಂತ್ರಿಸೇನಾ ನಾಯಕರೊಡನೆ ಕೂಡಿಸಿ, ಕಳುಹಿಸಿದನು. ಅವರು ಧಾಳಿ ಮಾಡುತ್ತಾ ಶಿವಮೊಗ್ಗೆಯ ಕೋಟೆಯನ್ನು ಆಕ್ರಮಿಸಿದರು. ವೀರಭದ್ರನಾಯಕನು ಅಪಾರವಾದ ಸೇನೆಯನ್ನು ಸಜ್ಜುಗೊಳಿಸಿ ಶಿವಪ್ಪನಾಯಕನೊಡನೆ ಹೊರಡಿಸಿದನು. ಆತನು ತನ್ನ ತಮ್ಮ ವೆಂಕಟಪ್ಪನಾಯಕನನ್ನು ಕೂಡಿಕೊಂಡು ಅತ್ಯಂತ ಕೋಪದಿಂದ ಬಂದು ತುರುಕ ಸೈನ್ಯಕ್ಕೆ ಇದಿರಾದನು. ಇಬ್ಬರಿಗೂ ಹೋರಾಟವಾಗಿ, ಈ ರಣರಂಗದಲ್ಲಿ ಅಂಬರಖಾನನ ಹೊಡೆದಾಟವನ್ನು ನಿಲ್ಲಿಸಿ, ಮಹಮುದ್ದಖಾನನ ಮದವನ್ನು ತಗ್ಗಿಸಿ, ಕೂಬಖಾನನನ್ನು ತಳಮಳಗೊಳಿಸಿ, ಅಂಕುಶಖಾನನ ಸೊಕ್ಕನ್ನು ನಿಗ್ರಹಿಸಿ, ಶಾಜೀಖಾನನ ಸೈನ್ಯವನ್ನು ಮುರಿದು, ಪತ್ತೇಖಾನನ

ಶರಜಾರಾಯನಂ ಪ್ರಯಾಣವನೊಡರ್ಚಿಸಿ ಕಳುಹಿ ಶಿವಪ್ಪನಾಯಕನ ಮುಖದಿಂ ಸಮರಸಂಧಾನವನೊಡರ್ಚಿಸಿ ಪಾತುಶಾಹನಂ ಪಿಂದೆಗೆಸಿ ರಾಜ್ಯಂಗೆಯ್ಯುತ್ತುಮಿರಲಾ ಪ್ರಸ್ತಾವದೊಳ್

ಕಂ॥ ವರವೀರಭದ್ರಧರಣೀ
ಶ್ವರನಂ ಬಿದುರೂರ್ಗೆ ಬರಿಸಬೇಕೆಂದೆನುತುಂ
ಧುರಧೀರ ಶಿವನರೇಂದ್ರಂ
ತ್ವರಿತದೊಳಂ ಘಟ್ಟವಿಳಿದು ಗುಳವಾಡಿಯೊಳಂ ೪೦

ನಿಂದಿರೆ ಕಾಶಿಯ ಭದ್ರಪ
ನಂದುರೆ ಸೇನಾದಿವಾನ ಪುಟ್ಟಣ ಮುಖ್ಯರ್
ಮಂದಿಕುದುರೆಗಳ ಕೂಡಿಸಿ
ನಿಂದೊಡ್ಡಂಬಲಿಸಿ ದೂಪಗಟ್ಟೆಯ ಬಳಿಯೊಳ್ ೪೧

ಯುದ್ಧವನೊಡರ್ಚಲಲ್ಲಿಯೆ
ಬಿದ್ದಳಿಯಲ್ಕಳಿಯಭದ್ರಪಂ ಕರ್ತರ್ ಕೇ
ಳ್ದುದ್ವೃತ್ತರ ದುರ್ಮಂತ್ರದ
ಗದ್ದಲಮಂ ನಿಲಿಸಿ ತಾವೆ ತೆರಳ್ದೈತರುತುಂ ೪೨

ಗುಳವಾಡಿಗೈದಿಯಂತಃ
ಕಲಹವನುರೆ ಬಿಡಿಸಿ ಶಿವನರೇಂದ್ರನ ಮನಮಂ
ತಿಳುಹಿ ತಕ್ಕೈಸಿಯಲ್ಲಿಂ
ಘಳಿಲನೆ ತಾಂ ತೆರಳ್ದು ಕಂಡಲೂರಂ ಪೊಕ್ಕಂ ೪೩

ಕತ್ತಿಯನ್ನು ತುಂಡುಮಾಡಿ ಪರಾತಖಾನನನ್ನು ಕೆಳದಿ ನಾಯಕರು ಸೋಲಿಸಿದರು. ಈ ರೀತಿ ಯಮನ ಸೈನ್ಯವನ್ನು ಪರಾಭವಗೊಳಿಸಿ, ಕೋಟೆಯ ಮುತ್ತಿಗೆಯನ್ನು ತೆಗೆಸಿ ರುಸ್ತುಂಜಮಾನನನ್ನು ಹಿಂದಕ್ಕಟ್ಟಿದರು. ಇದನ್ನು ಕೇಳಿದ ಬಾದಷಹನು ಕೆರಳಿ, ಸಿಟ್ಟುಗೊಂಡು ಬಂಕಾಪುರಕ್ಕೆ ಹೋಗಿ ಅಲ್ಲಿ ಮುಸ್ತಾಪಖಾನನ ಸಂಗಡ ಅಪರಿಮಿತವಾದ ಸೈನ್ಯವನ್ನು ಹೊರಡಿಸಿ, ಸೇನಾಸಮೇತನಾಗಿ ಕಳವೂರ ಬಯಲಿನಲ್ಲಿ ಬಂದು ನಿಂತನು. ಆಗ ವೀರಭದ್ರನಾಯಕನು ಶರಜಾರಾಯನನ್ನು ಪ್ರಯಾಣ ಮಾಡಲು ಕಳುಹಿಸಿ, ಶಿವಪ್ಪನಾಯಕನ ಮುಖಾಂತರ ಸಂಧಾನವನ್ನು ಏರ್ಪಡಿಸಿ ಬಾದಷಹನನ್ನು ಹಿಂದಿರುಗುವಂತೆ ಮಾಡಿ ,ರಾಜ್ಯವನ್ನು ಪಾಲಿಸುತ್ತಿದ್ದನು. ಆ ಸಂದರ್ಭದಲ್ಲಿ-೪೦. ವೀರಭದ್ರನಾಯಕನನ್ನು ಬಿದರೂರಿಗೆ ಬರಮಾಡಿಕೊಳ್ಳಬೇಕೆಂದು ರಣಧೀರನಾದ ಶಿವಪ್ಪನಾಯಕನು ಕೂಡಲೇ ಘಟ್ಟವನ್ನಿಳಿದು ಗುಳವಾಡಿಯಲ್ಲಿ, ೪೧. ನಿಂತಿರುವಾಗ ಕಾಶಿಯ ಭದ್ರಪ್ಪ, ಸೇನೆ ದಿವಾನ ಪುಟ್ಟಣ ಮುಂತಾದವರು ಸೈನಿಕರನ್ನು, ಕುದುರೆಗಳನ್ನು ಸೋಲಿಸಿ ದೂಪಗಟ್ಟೆಯ ಹತ್ತಿರ ಅಡ್ಡಗಟ್ಟಿದರು. ೪೨. ಆ ಯುದ್ಧದಲ್ಲಿ ಅಳಿಯ ಭದ್ರಪ್ಪನಾಯಕನು ಮಡಿಯಲಾಗಿ ವೀರಭದ್ರನಾಯಕನು ಈ ಕುಹಕಿಗಳ ಹಾಗೂ ದುರಾಲೋಚನೆಯವರ ಗದ್ದಲವನ್ನು ನಿಲ್ಲಿಸಿ ತಾನೇ ಹೊರಟು, ೪೩. ಗುಳವಾಡಿಗೆ

ವ|| ಇಂತು ವೀರಭದ್ರನಾಯಕರ್ ಗುಳವಾಡಿಯಿಂ ತೆರಳ್ದು ಕಂಡಲೂರಂ ಪೊಗಲನಂತರಂ

ಕಂ|| ಮರುದಿವಸಮನುಜಸಹಿತಂ
ಭರದಿಂದಲ್ಲಿಂ ತೆರಳ್ದು ಶಿವಭೂಪಾಲಂ
ವರಕಂಡಲೂರನುರೆ ಪೊ
ಕ್ಕರಸಿನ ಸಂದರ್ಶನವನಣಂ ವಿರಚಿಸಿದಂ ೪೪

ವ|| ಇಂತಾ ಶಿವಪ್ಪನಾಯಕಂ ಸಹೋದರ ವೆಂಕಟಪ್ಪನಾಯಕಂವೆರಸು ಗುಳವಾಡಿಯ ಪಾಳ್ಯದಿಂ ತೆರಳ್ದು ಕಂಡಲೂರಂ ಪೊಕ್ಕು ಕರ್ತರ ಸಂದರ್ಶನಂಗೈದು ನೀಂ ಮುನ್ನಿನಂತೆ ವೇಣುಪುರಕ್ಕೆ ಬಿಜಯಂಗೈದು ಸಂಸ್ಥಾನದ ಸಕಲಕಾರ್ಯಂಗಳಂ ವಹಿಸಿ ನಡೆಸಲ್ವೇಳ್ಕೆಂದು ಪಲಬಗೆಯೊಳೊಡವಡಿಸಿ ಕರೆಯಲಾವಿಲ್ಲಿಯೆ ನಿಂದಿರ್ದುಂಟಾದ ಸಂಸ್ಥಾನಕಾರ್ಯಂಗಳನೆಲ್ಲಮಂ ನಿನ್ನ ಮುಖದಲ್ಲಿಯೆ ನಡೆಸುವುದೆಮಗೆ ಭೂಷಣಮಾಗಿರ್ಪುದೆಂದು ನೀತಿಶಾಸ್ತ್ರಂಗಳಂ ಪೇಳ್ದೊಡವಡಿಸಿಯಾ ಶಿವಪ್ಪನಾಯಕರಂ ವೆಂಕಟಪ್ಪನಾಯಕರಂ ವೇಣುಪುರಕ್ಕೆ ಬೀಳ್ಕೊಟ್ಟು ತಾಂ ನಿಶ್ಚಿಂತೆಯಿಂ ಶಿವಾರ್ಚನಾದಿ ಸತ್ಕೃತ್ಯ ನಿತ್ಯನಿಯಮಂಗಳಂ ಲೋಪಮಾಗದಂತಾಚರಿಸಿ ನಡೆಸುತ್ತುಂ

ಬಂದು ಒಳಜಗಳವನ್ನು ಹೋಗಲಾಡಿಸಿ, ಶಿವಪ್ಪನಾಯಕನ ಮನಸ್ಸನ್ನು ಸಮಾಧಾನಪಡಿಸಿ, ಅಪ್ಪಿಕೊಂಡು ಅಲ್ಲಿಂದ ಕೂಡಲೇ ಹೊರಟು ಕಂಡಲೂರನ್ನು ಸೇರಿದನು. ವ|| ಈ ರೀತಿ ವೀರಭದ್ರನಾಯಕರು ಗುಳವಾಡಿಯಿಂದ ಹೊರಟು ಕಂಡಲೂರನ್ನು ಸೇರಿದ ಮೇಲೆ-೪೪. ಮಾರನೇದಿನ ಶಿವಪ್ಪನಾಯಕನು ತಮ್ಮನೊಂದಿಗೆ ಅಲ್ಲಿಂದ ಹೊರಟು ಕಂಡಲೂರಿಗೆ ಹೋಗಿ ಅರಸ ವೀರಭದ್ರನಾಯಕನ ದರ್ಶನವನ್ನು ಕೈಗೊಂಡನು. ವ|| ಈ ರೀತಿಯಾಗಿ ಶಿವಪ್ಪನಾಯಕನು ಹಾಗೂ ಸಹೋದರ ವೆಂಕಟಪ್ಪನಾಯಕನು ಕೂಡಿ ಗುಳವಾಡಿಯ ಪಾಳ್ಯದಿಂದ ತೆರಳಿ ಕಂಡಲೂರನ್ನು ಸೇರಿ ರಾಜನನ್ನು ಸಂದರ್ಶಿಸಿದರು. "ನೀವು ಹಿಂದಿನಂತೆ ವೇಣುಪುರಕ್ಕೆ (ಬಿದನೂರಿಗೆ) ದಯಮಾಡಿಸಿ ಸಂಸ್ಥಾನದ ಎಲ್ಲಾ ರಾಜಕಾರ್ಯಗಳನ್ನು ವಹಿಸಿಕೊಂಡು ನಡೆಸಿಕೊಡಬೇಕು" ಎಂಬುದಾಗಿ ನಾನಾವಿಧವಾಗಿ ಕೇಳಿಕೊಂಡರು. ಅದಕ್ಕೆ ರಾಜನು "ನಾವು ಇಲ್ಲಿಯೇ ಇದ್ದು ಸಂಸ್ಥಾನದ ಎಲ್ಲಾ ರಾಜಕಾರ್ಯಗಳನ್ನು ನಿನ್ನ ಮುಖಾಂತರವಾಗಿಯೇ ನಡೆಸುವುದು ನಮಗೆ ಭೂಷಣ" ಎಂಬುದಾಗಿ ನೀತಿಶಾಸ್ತ್ರಗಳ ಮುಖಾಂತರ ಅವರಿಗೆ ಒಡಂಬಡಿಸಿದನು. ಹೀಗೆ ಶಿವಪ್ಪನಾಯಕ ಹಾಗೂ ವೆಂಕಟಪ್ಪನಾಯಕರನ್ನು ವೇಣುಪುರಕ್ಕೆ ಕಳುಹಿಸಿ, ಅವರನ್ನು ಬೀಳ್ಕೊಟ್ಟು, ತಾನು ನಿಶ್ಚಿಂತೆಯಿಂದ ಶಿವಾರ್ಚನೆ, ಸತ್ಕಾರ್ಯಗಳು, ನಿತ್ಯ ನಿಯಮಗಳು ಮುಂತಾದವುಗಳಿಗೆ

ಕಂ॥ ಇಂತಾ ಭದ್ರಪಭೂಮಿ
ಕಾಂತನ ಸುತನೆನಿಪ ವೀರಭದ್ರಮಹೀಶಂ
ಕಂತುನಿಭರೂಪನತಿಬಲ
ವಂತಂ ಸದ್ಧರ್ಮದಿಂದಮಿಳೆಯಂ ಪೊರೆದಂ ೪೫

ವ॥ ಇಂತು ವೀರಭದ್ರನಾಯಕಂ ತನಗೆ ಪಟ್ಟಮಾದ ಶಾಲಿವಾಹನ ಶಕ ವರ್ಷ ೧೫೫೨ನೆಯ ಶುಕ್ಲನಾಮಸಂವತ್ಸರದ ಮಾರ್ಗಶಿರ ಶುದ್ದ ೧೧ಯವರೆಗೆ ವರ್ಷ ೧೬, ದಿವಸ ೧೨ರ ಪರ್ಯಂತಂ ಸುಖದಿಂ ರಾಜ್ಯಂಗೈದಂ.

ಲೋಪವಾಗದಂತೆ ಆಚರಿಸುತ್ತಾ ಕಾಲಯಾಪನೆ ಮಾಡುತ್ತಿದ್ದನು. ೪೫. ಹೀಗೆ ಆ ಭದ್ರನಾಯಕನ ಮಗನೂ, ಮನ್ಮಥನಂತೆ ರೂಪವಂತನೂ ಅತಿ ಬಲವಂತನೂ ಆದ ವೀರಭದ್ರನಾಯಕನು ಸದ್ಧರ್ಮದಿಂದ ಭೂಮಿಯನ್ನು ಕಾಪಾಡಿದನು. ವ॥ ಈ ರೀತಿ ವೀರಭದ್ರನಾಯಕರು ತಮಗೆ ರಾಜಪಟ್ಟವಾದ ಶಾಲಿವಾಹನ ಶಕವರ್ಷ ೧೫೫೨ನೆಯ ಶುಕ್ಲನಾಮ ಸಂವತ್ಸರದ ಮಾರ್ಗಶಿರ ಶುದ್ಧ ೧೧ ರವರೆಗೆ ವರ್ಷ ೧೬ ದಿವಸ ೧೨ ಪರಿಯಂತರವೂ ಸುಖದಿಂದ ರಾಜ್ಯವನ್ನು ಪಾಲಿಸಿದರು.

# ಸಪ್ತಮಾಶ್ವಾಸಂ

ವ|| ಆ ವೀರಭದ್ರನಾಯಕರ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೬೭ನೆಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ೧೨ಯಲ್ಲಿ ಚಿಕ್ಕ ಸಂಕಣನಾಯಕರ ಮಗ ಸಿದ್ದಪ್ಪನಾಯಕರ ಜ್ಯೇಷ್ಠಕುಮಾರರಾದ ಶಿವಪ್ಪನಾಯಕರ್ಗೆ ವೇಣುಪುರದ ಅರಮನೆಯಲ್ಲಿ ರಾಜಪಟ್ಟಂ

ಮ|| ಇಂತು ನೆಗಳ್ತೆವೆತ್ತ ಸಮುದಗ್ರಪರಾಕ್ರಮಿ ವೀರಭದ್ರಭೂ
ಕಾಂತನನಂತರಂ ರಿಪುಕನತ್ಕದಳೀವನ ಗಂಧಸಿಂಧುರಂ
ಪಿಂತಣ ರಾಯರಿಂ ಶತಗುಣಾಧಿಕಮಾದತಿ ಶೌರ್ಯದೇಳ್ಗೆಯಿಂ
ಸಂತರೊಡಂಬಡಲ್ ಧರೆಯನಾಳ್ದನುದಾರಶಿವಾವನೀಶ್ವರಂ ೧

ವ|| ಅದೆಂತೆನಲಾ ಶಿವಪ್ಪನಾಯಕರ್ ತಮ್ಮ ಪಿತಾಮಹನಾದ ಚಿಕ್ಕಸಂಕಣನಾಯಕರ ಅಗ್ರಜರಾದ ದೊಡ್ಡಸಂಕಣನಾಯಕರ ಪ್ರಪೌತ್ರರಾದ ವೀರಭದ್ರನಾಯಕರಾಳಿಬರುತಿರ್ದ ದೇಶಕೋಶ ಪ್ರಜೆ ಪರಿವಾರ ಪರಿಸ್ತರಣ ಪರಿಜನ ಪುರಜನ ಬಂಧುಜನ ಮಂತ್ರಿ ಸಾಮಾಜಿಕ ನಿಯೋಗಿಜನ ಸೇವಕಜನರ್ ಮುಂತಾದ ಸಮಸ್ತಜನರಂ ಪಾಲಿಸುತ್ತುಂ ತಮ್ಮನುಜ ವೆಂಕಟಪ್ಪನಾಯಕರಂ ಪ್ರೀತಿಯಿಂ ನಡೆಸಿಕೊಳುತ್ತುಂ ತಮ್ಮ ಸಹೋದರಿ ಪರಮೇಶ್ವರಮ್ಮನನ್ನು.... ವಿವಾಹಮಂ ರಚಿಸಿ ನಾಗಾಜಮ್ಮನೆಂಬನುಜೆಯಂ.....ಗಿತ್ತು ವಿವಾಹಮಂ ರಚಿಸಲಾ ಪೆಣ್ಮಣಿಯೊಳೊರ್ವ ಕುಮಾರನುದಿಸಲಾ

ವ|| ಆ ವೀರಭದ್ರನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀಮನ್ನೃಪಶಾಲಿ ವಾಹನ ಶಕವರ್ಷ ೧೫೬೭ನೆಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ೧೨ರಲ್ಲಿ ಚಿಕ್ಕ ಸಂಕಣ್ಣನಾಯಕರ ಮಗ ಸಿದ್ದಪ್ಪನಾಯಕರ ಜ್ಯೇಷ್ಠಕುಮಾರರಾದ ಶಿವಪ್ಪನಾಯಕರಿಗೆ ವೇಣುಪುರದ ಅರಮನೆಯಲ್ಲಿ ರಾಜ್ಯದ ಪಟ್ಟಾಭಿಷೇಕವಾಯಿತು. ೧. ಹೀಗೆ ಪ್ರಸಿದ್ಧಿ ಪಡೆದ ಹಾಗೂ ಅಧಿಕ ಪರಾಕ್ರಮಶಾಲಿಯಾದ ವೀರಭದ್ರನಾಯಕನ ತರುವಾಯ ಶತ್ರುಗಳೆಂಬ ಬಾಳೆಯ ತೋಟಕ್ಕೆ ಮದ್ದಾನೆಯಂತಿರುವ ಶಿವಪ್ಪನಾಯಕನು ತನ್ನ ಹಿಂದಿನ ದೊರೆಗಳಿಗಿಂತ ಮೂರು ಪಟ್ಟು ಹೆಚ್ಚಾದ ಪರಾಕ್ರಮಗಳ ಉನ್ನತಿಯಿಂದ ಸಜ್ಜನರು ಮೆಚ್ಚಿಕೊಳ್ಳುವ ಹಾಗೆ ರಾಜ್ಯವನ್ನಾಳಿದನು. ವ|| ಅದು ಯಾವ ರೀತಿ ಎಂದರೆ; ಶಿವಪ್ಪನಾಯಕನು ತನ್ನ ತಾತನಾದ ಚಿಕ್ಕಸಂಕಣನಾಯಕನ ಅಣ್ಣನಾದ ಯಾವ ದೊಡ್ಡಸಂಕಣ್ಣನಾಯಕನಿದ್ದನೋ ಆತನ ಮರಿಮಗನಾದ ವೀರಭದ್ರನಾಯಕನು ಆಳಿ ಬರುತ್ತಿದ್ದ ದೇಶ, ಕೋಶ, ಪ್ರಜೆಗಳು, ಪರಿವಾರದವರು, ಪುರಜನರು, ಬಂಧುಜನರು, ಮಂತ್ರಿಗಳು, ಸಾಮಾಜಿಕರು, ನಿಯೋಗಿಜನರು, ಸೇವಕರುಗಳು, ಮುಂತಾದ ಸಮಸ್ತ ಜನರನ್ನು ಪಾಲಿಸುತ್ತಾ, ತಮ್ಮ ತಮ್ಮನಾದ ವೆಂಕಟಪ್ಪನಾಯಕನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ತಮ್ಮ ಸಹೋದರಿ ಪರಮೇಶ್ವರಮ್ಮನನ್ನು..........ನಿಗೂ ಹಾಗೂ ನಾಗಾಜಮ್ಮಜನೆಂಬ ತಂಗಿಯನ್ನು........ನಿಗೂ ಇತ್ತು ವಿವಾಹವನ್ನೇರ್ಪಡಿಸಿದನು. ಇವಳಿಗೆ ಒಬ್ಬ ಮಗನು ಜನಿಸಿದನು. ಈತನಿಗೆ ಅಳಿಯ ಶಿವಲಿಂಗನಾಯಕನೆಂದು ನಾಮಕರಣ

**ಕುಮಾರಂಗೆ ಅಳಿಯ ಶಿವಲಿಂಗನಾಯಕನೆಂದು ನಾಮಕರಣಮಂ ರಚಿಸಿ ಪೋಷಿಸುತ್ತುಂ ಮತ್ತಂ ತಮ್ಮ ಕನಿಷ್ಠ ಸಹೋದರಿಯಾದ ಚನ್ನಮ್ಮನೆಂಬ ಪೆಣ್ಮಣಿಯಂ ಮೈದುನ ಕೆಂಚಣ್ಣಂಗಿತ್ತು ವಿವಾಹಮಂ ರಚಿಸಲಾ ಚನ್ನಮ್ಮನ ಗರ್ಭದೊಳ್ ಸಿದ್ಧಯ್ಯನೆಂಬ ಕುಮಾರನುಂ ಸಿದ್ಧಮ್ಮ ಗೌರಮ್ಮನೆಂಬಿರ್ವರ್ ಪೆಣ್ಮಣಿಗಳುದಿಸಲವರುಮಂ ಸಂರಕ್ಷಿಸುತ್ತುಮಾ ಶಿವಪ್ಪನಾಯಕರ್ ಮೊದಲ್ ವೆಂಕಟಪ್ಪನಾಯಕರ ಕಾಲದಲ್ಲಿ ತಾಂ ವಿವಾಹಮಾದ ದುರ್ಗದ ಪಟ್ಟಣಸೆಟ್ಟರ ಮಗಳು ಲಿಂಗಮ್ಮಾಜಿಯವರ ಗರ್ಭದೊಳೊರ್ವ ಕುಮಾರಿಯೊಗೆಯಲಾ ಪೆಣ್ಮಣಿಗೆ ಸಿದ್ಧಮ್ಮಾಜಿಯೆಂದು ಪೆಸರಿಟ್ಟು ಸಿದ್ಧಮ್ಮಾಜಿಯಂ ಸರಭೆಲ ಮಲ್ಲಿಕಾರ್ಜುನಯ್ಯಂಗೆ ವಿವಾಹವನೊಡಚಿಸಿ ಮತ್ತಂ ತಮ್ಮ ದ್ವಿತೀಯಪತ್ನಿ ಸೂರಿರಾಯನ ಬಸವಪ್ಪನ ಸಹೋದರಿಯರಾದ ಶಾಂತಮ್ಮಾಜಿಯವರ ಗರ್ಭದೊಳೊರ್ವ ಕುಮಾರನುದಿಸಲಾ ಕುಮಾರಂಗೆ ಭದ್ರಪನಾಯಕನೆಂದು ನಾಮಕರಣಮಂ ರಚಿಸಿ ಆ ಭದ್ರಪನಾಯಕಂಗೆ ಸೂರಿರಾಯನ ಕಲ್ಲಪ್ಪನ ಕುಮಾರಿ ಬೊಮ್ಮಮ್ಮಾಜಿ ಸೋದರಿಕೆಯಲ್ಲಿ ಮೈದುನ ಕೆಂಚಣ್ಣನ ಮಗಳು ಸಿದ್ಧಮ್ಮಾಜಿ ಇಂತಿರ್ವರ್ ಸ್ತ್ರೀಯರನತ್ಯಂತ ಸಂಭ್ರಮದಿಂ ವಿವಾಹಮಂ ರಚಿಯಿಸಿ ತಮಗೆ ಈ ರಾಜಪಟ್ಟಮಾದ ಮೇಲೆ ತಾವು ನಂಬಿಯಣ್ಣ ಸೆಟ್ಟರ ಮಗ ಚನ್ನಪ್ಪಸೆಟ್ಟರ ಪತ್ನಿ ಚನ್ನಮ್ಮನ ಸಹೋದರಿಯಾದ ಬಸವೂರ ಸೋಮಯ್ಯನ ಕುಮಾರಿ ಭದ್ರಮ್ಮಾಜಿ, ಬಾದಾವಿ ಲಿಂಗಪ್ಪಸೆಟ್ಟರ ಕುಮಾರಿ ಬಸವಲಿಂಗಮ್ಮಾಜಿ ಇಂತುಭಯ ಸ್ತ್ರೀಯರಂ ವಿವಾಹಮಾದರ್ ಬಸವಲಿಂಗಮ್ಮಾಜಿಯೆಂಬ ಪತ್ನಿಯೊಳೊರ್ವ ಕುಮಾರನುದ್ಭವಿಸಲಾ ಕುಮಾರಂಗೆ ಸೋಮಶೇಖರ ನಾಯಕನೆಂದು ನಾಮಕರಣಮಂ ರಚಿಯಿಸಿ, ಇಂತಾ ಶಿವಪ್ಪನಾಯಕರ್ ಸೋಮಶೇಖರನಾಯಕರ್ವೆರಸು ಸುಖಮಿರುತುಂ ನಾಲ್ದೆಸೆಯೊಳಿರ್ಪ ವರ್ತಕ ಪೈರುದಾರ ಗಂದಿಗ ಕೊಂಕಣಿಗರ್ ಮುಂತಾದ ಮಹಾನಾಡವರಂಬರಿಸಿ ವೇಣುಪುರವರದೊಳ್ ಸ್ಥಳನಿವೇಶನ ಪೇಟೆ ಸಾಲ ಕ್ಲುಪ್ತಿಗಳಂ ಮಾಡಿಸಿ ಸ್ಥಿರಲೇಖನಂಗಳಂ**

ಮಾಡಿದನು. ತನ್ನ ಕನಿಷ್ಠ ಸಹೋದರಿಯಾದ ಚನ್ನಮ್ಮನೆಂಬವಳನ್ನು ತನ್ನ ಮೈದುನ ಕೆಂಚಣ್ಣನಿಗಿತ್ತು ಮದುವೆ ಮಾಡಿದನು. ಈ ಚನ್ನಮ್ಮನ ಗರ್ಭದಲ್ಲಿ ಸಿದ್ಧಯ್ಯನೆಂಬ ಕುಮಾರನೂ, ಸಿದ್ಧಮ್ಮ ಹಾಗೂ ಗೌರಮ್ಮರೆಂಬ ಇಬ್ಬರು ಹೆಣ್ಣುಮಕ್ಕಳೂ ಜನಿಸಿದರು. ಇವರೆಲ್ಲರನ್ನೂ ನಾಯಕನು ಕಾಪಾಡುತ್ತಿದ್ದನು. ವೆಂಕಟಪ್ಪನಾಯಕನ ಕಾಲದಲ್ಲಿ ದುರ್ಗದ ಪಟ್ಟಣ ಶೆಟ್ಟರ ಮಗಳು ಲಿಂಗಮ್ಮಾಜಿಯನ್ನು ಶಿವಪ್ಪನಾಯಕನು ಮದುವೆಯಾಗಿದ್ದನು. ಇವಳ ಗರ್ಭದಲ್ಲಿ ಕುಮಾರಿಯೊಬ್ಬಳು ಜನಿಸಿದ್ದಳು. ಇವಳ ಹೆಸರು ಸಿದ್ದಮ್ಮಾಜಿ, ಈ ಸಿದ್ದಮ್ಮಾಜಿಯನ್ನು ಸರಭೆಲ ಮಲ್ಲಿಕಾರ್ಜುನಯ್ಯನಿಗೆ ಕೊಟ್ಟು ವಿವಾಹವನ್ನು ಮಾಡಿದನು. ತನ್ನ ದ್ವಿತೀಯ ಪತ್ನಿಯೂ ಸೂರಿರಾಯನ ಬಸವಪ್ಪನ ಸಹೋದರಿಯೂ ಆದ ಶಾಂತಮ್ಮಾಜಿಯವರ ಗರ್ಭದಲ್ಲಿ ಒಬ್ಬ ಮಗನು ಜನಿಸಿದ್ದನು. ಆತನಿಗೆ ಭದ್ರಪ್ಪನಾಯಕ ನೆಂದು ನಾಮಕರಣವಿತ್ತು. ಭದ್ರಪ್ಪನಾಯಕನಿಗೆ ಸೂರಿರಾಯನ ಕಲ್ಲಪ್ಪನ ಕುಮಾರಿ ಬೊಮ್ಮಮ್ಮಾಜಿ ಹಾಗೂ ಸೋದರಿಕೆಯಲ್ಲಿ ಮೈದುನನಾದ ಕೆಂಚಣ್ಣನ ಮಗಳು ಸಿದ್ಧಮ್ಮಾಜಿ ಎಂಬಿಬ್ಬರು ಕುಮಾರಿಯರನ್ನು ಇತ್ತು ಅತ್ಯಂತ ಸಂಭ್ರಮದಿಂದ ವಿವಾಹವನ್ನು ನಡೆಸಿದರು. ಶಿವಪ್ಪನಾಯಕನು ತನಗೆ ಪಟ್ಟವಾದ ಮೇಲೆ ನಂಬಿಯಣ್ಣಸೆಟ್ಟರ ಮಗ ಚೆನ್ನಪ್ಪಸೆಟ್ಟರ ಪತ್ನಿ ಚನ್ನಮ್ಮನ ಸಹೋದರಿಯೂ, ಬಸವೂರ ಸೋಮಯ್ಯನ ಕುಮಾರಿಯೂ ಆದ ಭದ್ರಮ್ಮಾಜಿಯನ್ನೂ ಮತ್ತು ಬಾದಾವಿ ಲಿಂಗಪ್ಪಸೆಟ್ಟರ ಕುಮಾರಿಯಾದ ಬಸವಲಿಂಗಮ್ಮಾಜಿ ಎಂಬ ಇಬ್ಬರು ಕುಮಾರಿಯರನ್ನೂ ವಿವಾಹವಾದನು. ಬಸವಲಿಂಗಮ್ಮಾಜಿಯಲ್ಲಿ

ಬರೆಸಿತ್ತು ಮತ್ತಮದಲ್ಲದೆ ಚಿತ್ರಕ ಶಿಲ್ಪಕ ವರ್ಣಕ ಕಾಂಸ್ಯಕಾರ ತೈಲಯಂತ್ರಿಕ ಕುಂಭಕಾರ ಸ್ವರ್ಣಕಾರ ವರ್ಧಕಿ ಕಾರುಕ ವಸ್ತ್ರಶೋಧಕ ದಿವಾಕೀರ್ತಿಕ (ಮುಂತಾದ) ನಾನಾ ಕೈವಾಡ ಕರಣಚಮತ್ಕಾರವಿಶಾರದರಾದ ನಾನಾವಿಧ ಜಾತಿಜನರ್ಗಾಸ್ಪದ ನಿವೇಶನಂಗಳಂ ಕಲ್ಪಿಸಿಯವರ್ಗಳಂ ಸ್ಥಾಯಿಗಳಾಗಿ ನಿಲಿಸಿ ಈ ಪ್ರಕಾರದಿಂ ವೇಣುಪುರಮಂ ಬಹುವಿಧ ರಚನೆಗಳಿಂ ವಿಸ್ತಾರಂಗೈಸಿ ಬ್ರಹ್ಮಕ್ಷತ್ರಿಯಾದಿ ವರ್ಣಾಶ್ರಮಾಚಾರ ಧರ್ಮಕರ್ಮಂಗಳಂ ಶ್ರುತಿ ಸ್ಮೃತ್ಯುಕ್ತ ಮಾರ್ಗೋಲ್ಲಂಘನಮಾಗದಂತು ನಡೆಯಿಸಿ ಶೈವ ವೈಷ್ಣವಾದಿ ಷಡ್ದರ್ಶನವರ್ತಿಗಳಂ ತತ್ತದುಕ್ತಮಾರ್ಗದೊಳ್ ನಡೆವಂತು ನಿಯಾಮಕಂಗೈಸಿ ಸ್ವರಾಷ್ಟ್ರಸ್ಥಿತ ಸಮಸ್ತ ಜನರೊಳ್ ಜಾತಿಸಂಕರಮಾಗಿ ನಡೆಯದಂತಾಜ್ಞಾಪಿಸಿ ತಾಂ ಧರ್ಮದಿಂ ರಾಜ್ಯಭಾರವಿಚಾರತತ್ಪರರಾಗಿ ರಾಜಧರ್ಮದಿಂ ವರ್ತಿಸುತ್ತುಮಿರ್ದು ಕತಿಪಯದಿನಂಗಳ್ ಪೋಗಲೊಡನೆ

ಕಂ|| ವಸುಧಾರೆಯ ಕೋಂಟೆಯನಾ
ವಸುಧೀಶಂ[೧] ಕೊಂಡು ಸಕ್ಕರೆಯಪಟ್ಟಣಮಂ
ಮಿಸುಗುವ ಹಾಸನ ಬೇಲೂ
ರಸದೃಶಕೋಂಟೆಗಳನಾ ನೃಪಂ ವಶಗೈದಂ ೨

ಸೋಮಶೇಖರನಾಯಕನೆಂಬ ಮಗನು ಜನಿಸಿದನು. ಈ ರೀತಿ ಶಿವಪ್ಪನಾಯಕನು ಸೋಮಶೇಖರನಾಯಕನೊಡನೆ ಅರಮನೆಯಲ್ಲಿ ಸುಖದಿಂದಿರುತ್ತಿದ್ದನು. ರಾಜಧಾನಿಯ ವೈಭವವನ್ನು ಅಭಿವೃದ್ಧಿಪಡಿಸಲು ನಾಲ್ಕು ದಿಕ್ಕಿನಲ್ಲೂ ಇರುವ ವರ್ತಕರು, ರೈತರು, ಸುಗಂಧ ದ್ರವ್ಯಗಳನ್ನು ಮಾರುವವರು ಹಾಗೂ ಕೊಂಕಣಿಗರು ಮುಂತಾದ ಗೌರವಸ್ಥ ಜನಗಳನ್ನು ಬರಮಾಡಿಕೊಂಡು ವೇಣುಪುರದಲ್ಲಿ ಸ್ಥಳ ನಿವೇಶನ ಪೇಟೆಗಳನ್ನೂ, ಸಾಲು ಬೀದಿಗಳನ್ನೂ ನಿಯಮಕ್ಕೆ ಅನುಸಾರವಾಗಿ ರಚಿಸಿ ಸ್ಥಿರವಾದ (ಶಾಶ್ವತವಾದ) ಶಾಸನವನ್ನು ಬರೆಸಿದನು. ಮತ್ತು ಅಲ್ಲದೆ ಚಿತ್ರಕಾರರು, ಶಿಲ್ಪಿಗಳು, ಕಂಚುಗಾರರು, ಗಾಣಿಗರು, ಕುಂಬಾರರು, ಅಕ್ಕಸಾಲಿಗರು, ಬಡಗಿಯವರು, ಶಿಲ್ಪಿಗಳು, ಅಗಸರು, ನಾಪಿತರು-ಮುಂತಾದ ನಾನಾ ವಿಧವಾದ ಕುಶಲಕರ್ಮಿಗಳನ್ನು, ಆಯಾಜಾತಿ ಧರ್ಮಗಳಿಗೆ ಆಸ್ಪದವಾಗುವಂತೆ ನಿವೇಶನಗಳನ್ನೂ ಏರ್ಪಡಿಸಿ, ಅವರು ಶಾಶ್ವತವಾಗಿ ನಿಲ್ಲುವಂತೆ ಮಾಡಿದನು. ಈ ವಿಧವಾಗಿ ವೇಣುಪುರವನ್ನು ವಿವಿಧ ರಚನೆಗಳಿಂದ ಮಾರ್ಪಡಿಸಿ ರಾಜಧಾನಿಯನ್ನು ಕಳೆಗೂಡುವಂತೆ ಮಾಡಿದನು. ಬ್ರಹ್ಮ ಕ್ಷತ್ರಿಯಾದಿ ವರ್ಣಾಶ್ರಮ ಧರ್ಮಗಳು ಶ್ರುತಿ ಸ್ಮೃತಿಗಳಿಗೆ ಅನುಸಾರವಾಗಿ ನಡೆಯುವಂತೆ ಕಟ್ಟುಪಾಡು ಮಾಡಿದನು. ಶೈವ-ವೈಷ್ಣವ ಮುಂತಾದ ಆರುದರ್ಶನದವರಿಗೆ ಆಯಾ ಶಾಸ್ತ್ರಗಳಿಗೆ ಹೇಳಿದಂತೆ ನಡೆಯತಕ್ಕದ್ದೆಂದು ಆ ಪಂಥದವರಿಗೆ ನಿಯಮಿಸಿದನು. ಹೀಗೆ ತನ್ನ ರಾಷ್ಟ್ರದಲ್ಲಿರುವ ಸಮಸ್ತ ಜನಗಳಿಗೂ ಜಾತಿ ಸಂಕರವಾಗದಂತೆ ಆಜ್ಞಾಪಿಸಿ ಧರ್ಮದಿಂದ ರಾಜ್ಯಭಾರ ನಡೆಯುವಂತೆ ಮಾಡಿ, ಶ್ರೇಷ್ಠ ರಾಜಧರ್ಮದಿಂದ ಇದ್ದು ರಾಜ್ಯವನ್ನು ಪಾಲಿಸಿದನು. ಹೀಗಿರಲು ಹಲವು ದಿವಸಗಳು ಕಳೆದ ಮೇಲೆ-೨. ಆ ಶಿವಪ್ಪನಾಯಕನು ವಸುಧಾರೆಯ ಕೋಟೆಯನ್ನು ವಶಪಡಿಸಿ, ಸಕ್ಕರೆಪಟ್ಟಣ, ಹಾಸನ ಮತ್ತು ಬೇಲೂರಿನ ಅಸಮಾನವಾದ ಕೋಟೆಗಳನ್ನು

---

೧. ವಸುಧೇಶಂ ಎಂದು ಮೂಲಪಾಠವಿರಬಹುದು-ಅಧ್ಯಕ್ಷ

ಮಾಯಾವಾದಿಗಳಧಿಕ ಸ
ಹಾಯದೆ ಬಹುಸೈನ್ಯ ಸಹಿತಿದಿರ್ಚಿದ ರಣಗಾಂ
ಗೇಯ ಬೇಲೂರಕೃಷ್ಣಪ
ನಾಯಕನಂ ಯುದ್ಧರಂಗದೊಳ್ ಸೋಲಿಸಿದಂ ೩

ಮಗುಳಾ ಕೃಷ್ಣಪರಾಯನ
ಮಗನೆನಿಸುವ ವೆಂಕಟಾದ್ರಿನಾಯಕನುರ್ವಿಂ
ಮಿಗೆ ಕೈಗೈಯಲ್ಕಂ ಪಿಡಿ
ದಗಣಿತ ತತ್ಸೈನ್ಯಜಾಲಮಮಂ ನೋಯಿಸಿದಂ ೪

ವ|| ಇಂತರ್ಕಲಗೋಡ ಕೃಷ್ಣಪ್ಪನಾಯಕನದಟಂ ಮುಂದಾತನ ತನೂಜ ವೆಂಕಟಾದ್ರಿ ನಾಯಕನಂ ಯುದ್ಧರಂಗದೊಳ್ ಪಿಡಿದು ಕೈಗಾಯ್ದು ಕಳುಹಿದನಂತುಮಲ್ಲದೆಯುಂ

ಕಂ|| ಕರೆಯವನಿಗೆ ಬಾಧಕರಾ
ಗಿರುವ ಪರಂಗಿಗಳ ಬಲವನುಡುಗಿಸಿ ಕುಂದಾ
ಪುರ ಗಂಗುವಳ್ಳಿ ಹೊನ್ನಾ
ವರಗಳ ಕೋಂಟೆಗಳನಾ ನೃಪಂ ವಶಗೈದಂ ೫

ಕಂಗೊಳಿಪ ಮಂಗಲೂರು
ತ್ತುಂಗ ಪರಿಸ್ತರಣಮಂ ವಶಂಗೈದು ಬಳಿ
ಕ್ಕಿಂಗರೀಜಾದ್ಯರಾಗಮ
ನಂಗಳುಮಂ ತವಿಸಿ ರಾಜ್ಯಮಂ ಬಾಳಿಸಿದಂ ೬

ವಶಪಡಿಸಿಕೊಂಡನು. ೩. ಮಾಯಾವಾದಿಗಳ ಹೆಚ್ಚಿನ ಸಹಾಯದಿಂದ ಹೇರಳ ಸೈನ್ಯವನ್ನು ಕೂಡಿಕೊಂಡು ಎದುರಾಗಿ ಬಂದ ರಣರಂಗ ಭೀಷ್ಮನೆನ್ನಿಸಿದ ಬೇಲೂರ ಕೃಷ್ಣಪ್ಪನಾಯಕನನ್ನು ಯುದ್ಧರಂಗದಲ್ಲಿ ಸೋಲಿಸಿದನು. ೪. ಆಮೇಲೆ ಆ ಕೃಷ್ಣಪ್ಪನಾಯಕನ ಮಗನಾದ ವೆಂಕಟಾದ್ರಿನಾಯಕನು ಗರ್ವದಿಂದ ಕೈಮಾಡಿದಾಗ ಅವನನ್ನು ಹಿಡಿದು ಲೆಖ್ಖವಿಲ್ಲದಷ್ಟಿರುವ ಅವನ ಸೈನ್ಯ ಸಮೂಹವನ್ನು ನೋಯಿಸಿದನು. ವ|| ಈ ರೀತಿಯಾಗಿ ಅರಕಲಗೂಡು ಕೃಷ್ಣಪ್ಪ ನಾಯಕನ ಪರಾಕ್ರಮವನ್ನು ಮುರಿದು ಆತನ ಮಗ ವೆಂಕಟಾದ್ರಿನಾಯಕನನ್ನು ಯುದ್ಧ ರಂಗದಲ್ಲಿ ಹಿಡಿದು ರಕ್ಷಿಸಿ ಕಳುಹಿಸಿದನು. ಅಂತೂ ಅಲ್ಲದೆ ೫. ಕರಾವಳಿಯವರೆಗೆ ಬಾಧೆ ಕೊಡುತ್ತಿದ್ದ ಪರಂಗಿಗಳ (ಪೋರ್ಚುಗೀಸರ) ಬಲವನ್ನು ಕುಗ್ಗಿಸಿ, ಕುಂದಾಪುರ ಗಂಗುವಳ್ಳಿ (ಗಂಗೊಳ್ಳಿ) ಮತ್ತು ಹೊನ್ನಾವರದ ಕೋಟೆಗಳನ್ನು ಆ ರಾಜನು ವಶಪಡಿಸಿಕೊಂಡನು. ೬. ಕಂಗೊಳಿಸುತ್ತಿದ್ದ ಮಂಗಳೂರಿನ ಎತ್ತರವಾದ ಕೋಟೆಯನ್ನು ವಶಮಾಡಿಕೊಂಡು ನಂತರ ಇಂಗ್ಲೀಷರು ಮುಂತಾದವರ ಆಗಮನಗಳನ್ನು ತಗ್ಗಿಸಿ

ವ|| ಇಂತು ಮಂಗಲೂರ ಕೋಂಟೆಯಂ ಕೊಂಡನಂತರಮಳವೆಯಂ ಕಟ್ಟೆಕೀಳೂರಂ ಸಾಧಿಸಿ ಬೇಕಲ ಚಿತ್ತಾರಿಗಳೆಂಬ ಕೋಂಟೆಗಳುಮಂ ಮತ್ತಂ ಚಂದ್ರಗಿರಿ ಮುಂತಾದ ಕೋಂಟೆಗಳುಮಂ ಬಲುಗೈಸಿದನಂತುಮಲ್ಲದೆಯುಂ

ಕಂ|| ಬಳಿಕುರುನೀಲೇಶ್ವರದು
ಜ್ಜ್ವಳಿಪಿಳೆಯಂ ಕೊಂಡು ನಾಯಿಮಾರರ ನೆಲದೊಳ್
ತೊಲಗದ ಕಂಬವನನುವಿಂ
ನಿಲಿಸಿ ಮಹಾದ್ಭುತಪರಾಕ್ರಮವನುರೆ ಮೆರೆದಂ ೭

ವ|| ಇಂತು ನೀಲೇಶ್ವರದ ಗಡಿಮುಖದೊಳ್ ತೊಲಗದ ಕಂಬಮಂ ನಿಲಿಸಿ ನಾಯಿಮಾರರಂ ವಶಗೈದು ಪಣಮಣಿಹಂಗಳಂ ಕೊಂಡನಂತರಂ ಕೊಲ್ಲಂತಮಾಪಳರ್ ಮುಂತಾದ ಕೇರಳ ಮಂಡಲದ ಮನ್ನೆಯರ್ಕಳನೆರ್ದೆಗೆಡಿಸಿ ಮರಳ್ದನಂತುಮಲ್ಲದೆಯುಂ

ಕಂ|| ರಂಜಿಸುವಲತ್ತನಾಡಂ
ಮಂಜುಳಮೆನಿಸಿರ್ಪ ಪಡುವನಾಡನಿಳಾಭೃ
ತ್ಕುಂಜರನುನ್ಮೂಲಿತರಿಪು
ಪುಂಜಂ ಶಿವನೃಪತಿ ಶೌರ್ಯದಿಂ ಸಾಧಿಸಿದಂ ೮

ವ|| ಮತ್ತಮಾ ಶಿವಪ್ಪನಾಯಕಂ ದುರ್ಮುಖಿ ಸಂವತ್ಸರದಲ್ಲಿ ವಿಜಾಪುರದ ಪಾತುಶಾಹಂ ಮೃತನಾದನೆಂಬ ವರ್ತಮಾನಂ ಕೇಳ್ದು ತಾಮ್ರಮುಖರ್ ಕಟ್ಟಿಕೊಂಡ ಇಕ್ಕೇರಿ ಸೊರಬ ವುಡುಗಣಿ ಮಹಾದೇವಪುರ ಅಂಬಲಿಗೊಳ್ಳ ಮುಂತಾದ ಕೋಂಟೆಗಳಂ ಸಾಧಿಸಿ ಬಳಿಕ್ಕಂ ಸೋದೆಯವರ್

ರಾಜ್ಯವನ್ನು ರಕ್ಷಿಸಿದನು. ವ|| ಈ ರೀತಿ ಮಂಗಳೂರು ಕೋಟೆಯನ್ನು ಸಾಧಿಸಿದ ನಂತರ ಮಳವೆ, ಕಟ್ಟೆಕೀಳೂರುಗಳನ್ನು ವಶಪಡಿಸಿ, ಬೇಕಲ, ಚಿತ್ತಾರಿಗಳೆಂಬ ಕೋಟೆಗಳನ್ನೂ ಮತ್ತು ಚಂದ್ರಗಿರಿಯೇ ಮುಂತಾದ ಕೋಟೆಗಳನ್ನೂ ಬಲಪಡಿಸಿದನು. ೭. ಆಮೇಲೆ ನೀಲೇಶ್ವರದ ಉತ್ತಮವಾದ ಭೂಮಿಯನ್ನು ಸಾಧಿಸಿ, ನಾಯಿಮಾರರ ನೆಲದಲ್ಲಿ ಶಾಶ್ವತವಾದ ವಿಜಯಸ್ತಂಭವನ್ನು ನಿಲ್ಲಿಸಿ ಅದ್ಭುತ ಪರಾಕ್ರಮವನ್ನು ತೋರ್ಪಡಿಸಿದನು. ವ|| ಈ ರೀತಿ ನೀಲೇಶ್ವರದ ಗಡಿಗೆ ಅಭಿಮುಖವಾಗಿ ವಿಜಯಸ್ತಂಭವನ್ನು ಸ್ಥಾಪಿಸಿ, ನಾಯಿಮಾರರನ್ನು ಗೆದ್ದನಂತರ, ಅವರಿಂದ ಕಪ್ಪಕಾಣಿಕೆಗಳನ್ನು ಪಡೆದು, ಕೊಲ್ಲಂತ ಹಾಗೂ ಮಾಪಿಳ್ಳೆಯವರೇ ಮುಂತಾದ ಕೇರಳದ ಸಾಮಂತರನ್ನು ಧೈರ್ಯಗೆಡಿಸಿ ಹಿಂತಿರುಗಿದನು. ಅಂತೂ ಅಲ್ಲದೆ ೮. ರಾಜಶ್ರೇಷ್ಠನಾದ ಹಾಗೂ ಶತ್ರು ಸಮೂಹವನ್ನು ನಾಶಪಡಿಸುವ ಶಿವಪ್ಪನಾಯಕನು ಶೋಭಿಸುವ ಅಲತ್ತನಾಡನ್ನು ಹಾಗೂ ಸುಂದರವಾದ ಪಡುವನಾಡನ್ನೂ ಪರಾಕ್ರಮದಿಂದ ಪಡೆದುಕೊಂಡನು. ವ|| ಮತ್ತೆ ಆ ಶಿವಪ್ಪನಾಯಕನು ದುರ್ಮುಖಿ ಸಂವತ್ಸರದಲ್ಲಿ ಬಿಜಾಪುರದ ಬಾದಷಹನು ಮೃತಪಟ್ಟ ವಾರ್ತೆಯನ್ನು ಕೇಳಿ ತಿಳಿದು ಕೆಂಪುಮುಖದವರು ಸ್ವಾಧೀನ ಮಾಡಿಕೊಂಡು ಇಕ್ಕೇರಿ, ಸೊರಬ, ಉಡುಗಣಿ, ಮಹಾದೇವಪುರ, ಅಂಬಲಿಗೊಳ್ಳ ಮುಂತಾದ ಕೋಟೆಗಳನ್ನು ಸಾಧಿಸಿದ ಬಳಿಕ ಸೋದೆಯವರು ಸೊಕ್ಕಿನಿಂದ ಇದಿರು ನಿಲ್ಲಲು, ಅವರು ಆಳುತ್ತಿದ್ದ ನಾಡಿನ ಶಿರಸೆ,

ಮಾರ್ಮಲೆತಿದಿರ್ಚ ನಿಲಲವರಾಳ್ವ ನಾಡೊಳಗಣ ಸಿರಸೆ ಹೇರೂರ್ ಬೋಳೂರ್ ಪುಲಿಯಕಣ್ ಕರುವೂರ್ ಬನವಸೆ ಬದನಗೋಡು ಮುಂತಾದ ಸೀಮೆಗಳಂ ಸ್ವಾಧೀನಂಗೈದನಂತುಮಲ್ಲದೆಯುಂ

ಕಂ|| ಸಿರಸೆಯ ಕೋಂಟೆಯುಮಂ ಸಂ
ಗರದೊಳ್ ಕೊಂಡುರುಸುಧಾಪುರಾಧಿಪನೆನಿಪಾ
ಗರುವ ಮಧುಲಿಂಗನಾಯಕ
ನುರೆ ಪುಗೆ ಕೊಂಡಖಿಳರಾಜ್ಯಮಂ ಮಗುಳಿತ್ತಂ ೯

ವ|| ಇಂತಾ ಶಿವಪ್ಪನಾಯಕಂ ಸೋದೆಯರಾಳ್ವ ರಾಜ್ಯ ರಾಷ್ಟ್ರ ಪರಿಸ್ತರಣಂಗಳಂ ಸ್ವಾಧೀನಂಗೈದನಂತರಂ ಸಂಧಿಮುಖದೊಳಾ ಸೋದೆಯ ಮಧುಲಿಂಗನಾಯಕಂ ಬೇಡಿಕೊಳಲ್ ತದ್ದೈನ್ಯೋಕ್ತಿಗಳಂ ಲಾಲಿಸಿ ಮಗುಳ್ದವರ ರಾಜ್ಯಪರಿಸ್ತರಣಂಗಳನವರ್ಗಿತ್ತು ಮನ್ನಿಸಿ ಬೀಳ್ಕೊಟ್ಟತ್ಯಂತ ಭುಜಬಲಪರಾಕ್ರಮದಿಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ

ಕಂ|| ಭೀಕರಬಲ ಶಿವಭೂಪನ
ಡಾಕಿಂಗಗಿದಖಿಳ ರಾಜರಗಣಿತ ಧನಮಂ
ಬೇಕಾದ ವಸ್ತುಚಯವನ
ನೇಕವನಿತ್ತೆರಗಿ ತದನುಚರರಾಗಿರ್ದರ್ ೧೦

ವ|| ಇಂತು ವರ್ತಿಸುತ್ತುಮಿರಲ್

ಕಂ|| ಸಸಿಯಂ ಶಿವಮೌಳಿಯನ್ನೆ
ದಿಸಿ ಕಡಲಂ ಪುಗಿಸಿ ಬಾಂಬೊಳೆಯನಹಿಪತಿಯಂ
ರಸೆಯಡಿಗಲ್ದಿ ಶಿವೇಂದ್ರನ
ಜಸಮೆಸಕದಿನುರ್ವಿ ಪರ್ವಿದುದು ಮೂಜಗಮಂ ೧೧

ಹೇರೂರು, ಬೋಳೂರು, ಪುಲಿಯಕಣ್, ಕರೂರು, ಬನವಾಸೆ, ಬದನಗೋಡು ಮುಂತಾದ ಸೀಮೆಗಳನ್ನು ಸ್ವಾಧೀನ ಪಡಿಸಿಕೊಂಡನು. ಅಂತೂ ಅಲ್ಲದೆ. ೯. ಶಿರಸಿಯ ಕೋಟೆಯನ್ನು ಯುದ್ಧದಲ್ಲಿ ವಶಪಡಿಸಿಕೊಂಡು ಸುಧಾಪುರದ (ಸೋದೆಯ) ಒಡೆಯನಾದ ಮಧುಲಿಂಗನಾಯಕನನ್ನು ಸೆರೆಹಿಡಿದು ಪುನಹ ಅವನಿಗೆ ಎಲ್ಲಾ ರಾಜ್ಯವನ್ನು ಕೊಟ್ಟನು. ವ|| ಈ ರೀತಿ ಶಿವಪ್ಪನಾಯಕನು ಸೋದೆಯರಾಳುತ್ತಿದ್ದ ರಾಜ್ಯ ರಾಷ್ಟ್ರ ಹಾಗೂ ಕೋಟೆಗಳನ್ನು ಸ್ವಾಧೀನ ಪಡಿಸಿಕೊಂಡನು. ಬಳಿಕ ಸೋದೆಯ ಮಧುಲಿಂಗನಾಯಕನು ದೈನ್ಯದಿಂದ ಬೇಡಿಕೊಳ್ಳಲು ಮರುಗಿ ಅವರ ರಾಜ್ಯ ಹಾಗೂ ಕೋಟೆಗಳನ್ನು ಅವರಿಗೇ ಕೊಟ್ಟು ಅವರನ್ನು ಮನ್ನಿಸಿ ಬೀಳ್ಕೊಟ್ಟನು. ಹೀಗೆ ಅತ್ಯಂತ ಭುಜಬಲದಿಂದಲೂ, ಪರಾಕ್ರಮದಿಂದಲೂ ರಾಜ್ಯವನ್ನು ರಕ್ಷಿಸುತ್ತಿದ್ದನು. ಅಂತೂ ಅಲ್ಲದೆ ೧೦. ಭಯಂಕರ ಬಲಶಾಲಿಯಾದ ಶಿವಪ್ಪ ನಾಯಕನ ದರ್ಪಕ್ಕೆ ಹೆದರಿ ಎಲ್ಲಾ ರಾಜರೂ ಲೆಕ್ಕವಿಲ್ಲದಷ್ಟು ಧನವನ್ನೂ ಬೇಕಾದ ವಸ್ತು ಸಮೂಹವನ್ನೂ ಅವನಿಗೆ ಕೊಟ್ಟು ನಮಸ್ಕರಿಸಿ ಅವನ ಅನುಚರರಾಗಿ ಇದ್ದರು. ವ|| ಈ ರೀತಿ ಇರುತ್ತಿರಲು ೧೧. ಶಿವಪ್ಪನಾಯಕನ ಕೀರ್ತಿಯು ಚಂದ್ರನನ್ನು ಶಿವನ ತಲೆಯನ್ನೇರಿಸಿ, ಗಂಗಾನದಿಯನ್ನು ಸಮುದ್ರಕ್ಕೆ ಸೇರಿಸಿ, ಆದಿಶೇಷನನ್ನು ಪಾತಾಳದಲ್ಲಿ ಮುಳುಗಿಸಿ ಮೂರು ಲೋಕವನ್ನೂ ಹಬ್ಬಿತು! ಮತ್ತೂ ಅಲ್ಲದೆ

ವ|| ಮತ್ತಮದಲ್ಲದೆ

ಕಂ|| ಆಗಸಕೆ ಸಂಜೆಗೆಂಪೀ
ಭೂಗೆಳೆವಿಸಿಲಾ ರಸಾತಳಕ್ಕಹಿಪ ಫಣಾ
ರಾಗರತ್ನಪ್ರಭಾಮಯ
ಮಾಗೆಸೆದುದು ಸತ್ಪ್ರತಾಪಮಾ ಶಿವನೃಪನಾ ೧೨

ವ|| ಇಂತೆಸೆವ ಕೀರ್ತಿಪ್ರತಾಪಂಗಳ್ ಮೂಜಗಮಂ ಮುಸುಂಕಲ್ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತಿರ್ದನಂತುಮಲ್ಲದೆಯುಂ

ಕಂ|| ವರವೆಂಕಟಾವನೀಶಂ
ಧುರದೊಳ್ ಸಾಧಿಸಿದ ಸರ್ವಪೃಥ್ವಿತಳಮುಂ
ಸ್ಥಿರಮಾಗಿ ಬಾಳ್ವ ಪರಿಯಂ
ವಿರಚಿಸಿದಂ ಶಿವನೃಪಾಲನರಿಹೃಚ್ಛೂಲಂ ೧೩

ವ|| ಮತ್ತಮದಲ್ಲದಾ ಶಿವಪ್ಪನಾಯಕಂ ತೀರ್ಥರಾಜಪುರೀ ಕ್ಷೇತ್ರದೊಳ್ ತುಂಗಭದ್ರಾನದೀತೀರದೊಳ್ ಶ್ರೋತ್ರಿಯ ಬ್ರಾಹ್ಮಣರ್ಗೆ ಕಾಲಪುರುಷದಾನ ತುಲಾಪುರುಷದಾನ ಸಹಸ್ರಗೋಪ್ರದಾನಂಗಳಂ ರಚಿಸಿ ಕಾಶೀಕ್ಷೇತ್ರದೊಳನೇಕ ದಾನಧರ್ಮಪೂಜೆಗಳ್ ನಡೆವಂತು ನಿಯಾಮಕಂಗೈಸಿ ತಾಂ ಸೋಮವಾರವ್ರತನಿರತನೆನಿಸಿ ರಾಜಮುದ್ರಾಜ್ಞಾಶಕ್ತಿಯಿಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೈದನಂತುಮಲ್ಲದೆಯುಂ

ಚಂ||ಮಾ|| ಪ್ರಜೆಗಳುಸಿರ್ವ ಬಿನ್ನಪವನಾಲಿಸಿಯೊಳ್ಗೆರೆ ಕಾಳ್ವುರಂಗಳಂ
ಸೃಜಿಯಿಸಿ ಮೇಣವರ್ಗೆ ಕರಮೂಲಧನಂಗಳನಿತ್ತು ಬಿತ್ತುಮಂ
ನಿಜಮೆನಲಿತ್ತು ಗೋಷ್ಪದದನಿತ್ತಿಳೆಯಂ ಮಿಗೆ ಬೀಳಲೀಯದಾ
ದ್ವಿಜಸುರಪಾದಪಂ ಶಿವನೃಪಂ ಮಿಗೆ ಗೈಮೆಗೆ ತಂದನಳ್ತಿಯಿಂ ೧೪

೧೨. ಶಿವಪ್ಪನಾಯಕನ ಪ್ರತಾಪವು ಆಕಾಶಕ್ಕೆ ಸಂಜೆಗೆಂಪಾಗಿ, ಭೂಮಿಗೆ ಎಳೆಬಿಸಿಲಾಗಿ, ಪಾತಾಳಕ್ಕೆ ಸರ್ಪರಾಜನ ಹೆಡೆಯ ಮೇಲಿನ ರತ್ನದ ಪ್ರಕಾಶವಾಗಿ ಶೋಭಿಸಿತು. ವ|| ಈ ರೀತಿ ಶೋಭಿಸುವ ಕೀರ್ತಿ ಮತ್ತು ಪರಾಕ್ರಮಗಳು ಮೂರು ಜಗತ್ತಿಗೂ ಹರಡಲು ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು ಅಂತೂ ಅಲ್ಲದೆ. ೧೩. ವೆಂಕಟಪ್ಪನಾಯಕನು ಯುದ್ಧದಲ್ಲಿ ಸಾಧಿಸಿದ ಎಲ್ಲಾ ಭೂಭಾಗವನ್ನೂ ಸ್ಥಿರವಾಗಿ ಬಾಳುವ ರೀತಿಯಲ್ಲಿ ಶತ್ರುಗಳ ಹೃದಯಕ್ಕೆ ಶೂಲದಂತಿರುವ ಶಿವಪ್ಪನಾಯಕನು ಮಾಡಿದನು. ವ|| ಮತ್ತೆ ಅದಲ್ಲದೆ ಶಿವಪ್ಪನಾಯಕನು ತೀರ್ಥರಾಜಪುರಕ್ಷೇತ್ರದಲ್ಲಿರುವ (ತೀರ್ಥಹಳ್ಳಿ) ತುಂಗಭದ್ರಾನದೀ ತೀರದಲ್ಲಿ ಶ್ರೋತ್ರಿಯ ಬ್ರಾಹ್ಮಣರಿಗೆ ಕಾಲಪುರುಷದಾನ, ತುಲಾಪುರುಷದಾನ, ಸಹಸ್ರಗೋದಾನಗಳನ್ನು ಏರ್ಪಡಿಸಿ, ಕಾಶೀಕ್ಷೇತ್ರದಲ್ಲಿ ದಾನ-ಧರ್ಮ ಪೂಜಾದಿಗಳು ನಡೆಯುವ ಹಾಗೆ ಕಟ್ಟುಪಾಡು ಮಾಡಿದನು. ತಾನು ಯಾವಾಗಲೂ ಸೋಮವಾರವ್ರತನಿಷ್ಠನಾಗಿ ರಾಜಮುದ್ರೆಯಿಂದಲೂ, ಆಜ್ಞಾಶಕ್ತಿಯಿಂದಲೂ ಸದ್ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಾ ಇದ್ದನು. ೧೪. ಪ್ರಜೆಗಳು ಹೇಳಿದ ಬಿನ್ನಹವನ್ನು ಕೇಳಿ ಒಳ್ಳೆಯ ಕೆರೆ ಕಾಲುವೆಗಳನ್ನು ನಿರ್ಮಿಸಿ, ಅವರಿಗೆ ಕಂದಾಯದಿಂದ ಸಿಗಬಹುದಾದ

ವII ಅಂತುಮಲ್ಲದೆ

ಚಂIIಮಾII ಕಡುಗಿ ದುರಾಸೆಯಿಂ ಪ್ರಜೆಗಳಂ ನೆರೆನೋಯಿಸದಾ ನೃಪಾರ್ಥಮಂ
ಬಿಡದೆ ತದೀಯ ಸೌಮ್ಯಸುಪದಾರ್ಥಗಳಂ ಲವಮಾತ್ರಮಾದೊಡಂ
ಪೊಡವಿಯನೈದೆ ಪಾಳ್ಗೆಡಲೀಯದೆ ಬಲ್ಪಿಡಿದಂಕೆಝುಂಕೆಯಿಂ
ನಡೆಯಿಪನಿಂತು ನಾಡಿನಧಿಕಾರವನೇಳ್ಗೆಗೆ ತಂದನುರ್ವಿಯಂ ೧೫

ಕಂII ಕಂಡು ಪಣವಿತ್ತು ನಡೆಯದೆ
ಚಂಡಿಸಿ ಪುಂಡೆದ್ದು ಪರಿವ ದುಷ್ಟ್ರಜೆಗಳುಮಂ
ದಂಡಿಸಿಯುಳ್ಳರ್ಥವನೀ
ಳ್ದುಂಡಿಗೆಗೆಡೆಗೈಸಿ ತೆತ್ತರಂ ರಕ್ಷಿಸಿದಂ ೧೬

ಕೂಟವನೊಡರಿಪರಂ ಬ
ಲ್ಕೋಟೆಗಳೊಳ್ ಬಂದಿಗಿಕ್ಕಿ ತುಂಟರ್ಕಳ ಕಾ
ಲಾಟವನುಡುಗಿಸಿ ಧೂರ್ತರ
ಗೋಟುಗಳಂ ಕೊಂಡು ರಾಜ್ಯಮಂ ಪಾಲಿಸಿದಂ ೧೭

ನೆರೆವರಿ ವರಾಡ ಕಡ ಮಸ
ವರಿ ವಂಚನೆ ವಟ್ಟ ಲಂಚ ಹೊರನಿಲ ಹಸ್ತಾಂ
ತರ ಸಂಜಾಯಿತನಿಲಗಳ
ಪರಿವಿಡಿಯಂ ನಿಲಿಸಿ ಸೀಮೆಯಂ ರಕ್ಷಿಸಿದಂ ೧೮

ಹಣವನ್ನೂ (ಬಕ್ಷೀಸು), ಹಾಗೂ ಮೇಲುವೆಚ್ಚಕ್ಕೆ ಸರಕಾರದ ಖಜಾನೆಯಿಂದ ಹಣವನ್ನೂ ಕೊಡಿಸಿ, ಬಿತ್ತನೆಗೆ ಬೀಜವನ್ನೂ, ಗೋಮಾಳ ಹಾಗೂ ಎತ್ತುಗಳನ್ನೂ ಕೊಟ್ಟು ಆ ಭೂಮಿಯು ಬಂಜರು ಬೀಳದಂತೆ ಬ್ರಾಹ್ಮಣರಿಗೆ ಕಲ್ಪವೃಕ್ಷದಂತಿರುವ ಶಿವಪ್ಪನಾಯಕನು ಪ್ರೀತಿಯಿಂದ ವ್ಯವಸಾಯಕ್ಕೆ ಅನುಕೂಲಗೊಳಿಸಿದನು. ಅಂತೂ ಅಲ್ಲದೆ-೧೫. ಆ ಶಿವಪ್ಪನಾಯಕನು ದುರಾಸೆಗೆ ಒಳಗಾಗಿ ಪ್ರಜೆಗಳನ್ನು ಎಂದೂ ನೋಯಿಸಲಿಲ್ಲ; ಹಾಗೆಂದು ರಾಜಸ್ವವನ್ನೂ ಬಿಟ್ಟುಕೊಡಲಿಲ್ಲ. ಒಂದಿಷ್ಟು ಭೂಮಿಯೂ ಹಾಳು ಬೀಳಲು ಬಿಡದೆ ಅಂಕೆ ಮತ್ತು ಕಟ್ಟಾಜ್ಞೆಗಳಿಂದ ನಾಡಿನ ಅಧಿಕಾರವನ್ನು ನಡೆಸುತ್ತಾ ರಾಜ್ಯವನ್ನು ಅಭಿವೃದ್ಧಿಗೊಳಿಸಿದನು. ೧೬. ಕಪ್ಪಕಾಣಿಕೆಗಳನ್ನು ಒಪ್ಪಿಸದೇ ಹಟದಿಂದ ಪುಂಡಾಟ ನಡೆಸಿದ ಕೆಟ್ಟ ಪ್ರಜೆಗಳನ್ನು ಶಿಕ್ಷಿಸಿ, ಅವರ ಸೊತ್ತುಗಳನ್ನು ವಶಪಡಿಸಿಕೊಂಡನು. ಆಗಾಗ ದರ್ಶನಕ್ಕೆ ಬಂದು ಕಪ್ಪ-ಕಾಣಿಕೆಗಳನ್ನು ಕೊಟ್ಟವರನ್ನು ಕಾಪಾಡಿದನು. ೧೭. ಒಳಸಂಚಿಗಾಗಿ ಕೂಟ ನಡೆಸಿದವರನ್ನು ಕೋಟೆಗಳಲ್ಲಿ ಸೆರೆಯಲ್ಲಿಟ್ಟನು. ತುಂಟರ ಹಾವಳಿಯನ್ನು ಅಡಗಿಸಿದನು. ವಂಚಕರ ನೆಲೆಗಳನ್ನು ವಶಪಡಿಸಿ ರಾಜ್ಯವನ್ನು ಪಾಲಿಸಿದನು. ೧೮. (ಅರ್ಥ ಸ್ಫುಟವಾಗಿಲ್ಲ) ಒತ್ತುವರಿ, ವರಾತ, ಸಾಲ, ಮೋಸ, ಲಂಚ ಮುಂತಾದವನ್ನು ನಿಲ್ಲಿಸಿ ರಾಜ್ಯವನ್ನು

ಕಂ॥ ಕಳೆದುಳಿದ ಲೆಕ್ಕಗುತ್ತಿಗೆ
ಗಳ ನಿಲಹದ ನಾಮಿಯಡ್ಡವಂತಿಕೆ ನಾನಾ
ಸುಲಿಗೆ ಲಾವಣಿಗೆಯೆಂಬೀ
ಗಳಬಳಮಂ ನಿಲಿಸಿ ಸುಂಕಮಂ ಬಾಳಿಸಿದಂ ೧೯

ಕಟ್ಟುಕೈವಾಲೆ ಸಮಯಂ
ತಟ್ಟನ ಮೆರೆವಣಿಗೆ ಪೊಮ್ಮು ಕೈದುಡುಕುಗಳಂ
ಪುಟ್ಟಿಸಿ ಪೊಣರ್ವ ಸೆಟ್ಟಿಗ
ಳಟ್ಟುಳಿಯಂ ನಿಲಿಸಿ ಸುಂಕಮಂ ಬಾಳಿಸಿದಂ ೨೦

ಪುಸಿ ಠಕ್ಕು ಠೌಳಿ ಚೌರ್ಯಂ
ಪಿಸುಣನ್ಯಾಯಂ ವಿರೋಧಮಪಹೃತಿ ಭಯಮು
ಬ್ಬಸ ಮೋಸ ಪಾದರಂಗಳ
ಪೆಸರುಸಿರಲ್ಕಿಲ್ಲಮೆನಿಸಿ ಪೊರೆದಂ ಧರೆಯಂ ೨೧

ಕರಣಿಕೆಯನಿತ್ತು ಸಿಸ್ತಿನ
ಬರಹಗಳಿಂದಾಯಬೀಯಮಂ ಬಣಿತೆಗೆ ತಂ
ದುರುದುರ್ವ್ಯಯಂಗಂಳಂ ತಾಂ
ವಿರಚಿಸಿದಾರ್ಜಿಸಿದನೊಪ್ಪುವಗಣಿತಧನಮಂ ೨೨

ದುಷ್ಟಜನರ್ಕಳ ಶಿಕ್ಷಿಸಿ
ಶಿಷ್ಟರನುರೆ ಪೊರೆದು ಸಂತತಂ ಶಿವಪೂಜಾ
ನಿಷ್ಠನೆಂದೆನಿಸಿ ಲೋಗರ
ರಿಷ್ಟಗಳಂ ತವಿಸಿ ಪೊಡವಿಯಂ ಪಾಲಿಸಿದಂ ೨೩

ಪರಿವಹಿಯಂ ನಿಲಿಸಿದನಾ
ದೊರೆ ತನ್ನಯ ಮೇಲಣಾಣೆ ಘೋಷಣೆಯಿಂದಂ
ಪರವಸ್ತುವನೊಯ್ದಡಗಿದ
ನರಿಯಂ ಪಿಡಿತರಿಸಿ ಶಾಸ್ತಿಯಂ ಮಾಡಿಸಿದಂ ೨೪

ರಕ್ಷಿಸಿದನು. ೧೯. (ಅರ್ಥ ಸ್ಫುಟವಾಗಿಲ್ಲ) ಮೋಸದ ಲೆಕ್ಕ ಮುಂತಾದವನ್ನು ನಿಲ್ಲಿಸಿ ಸುಂಕವನ್ನು ವಸೂಲುಮಾಡಿ ಉಳಿಸಿದನು. ೨೦. (ಅರ್ಥ ಸ್ಫುಟವಿಲ್ಲ) ಕೊಬ್ಬಿದ ವರ್ತಕರ ಕಿರುಕುಳವನ್ನು ನಿಲ್ಲಿಸಿ, ಸುಂಕವನ್ನು ವಸೂಲುಮಾಡಿ ಉಳಿಸಿದನು ೨೧. ಸುಳ್ಳು, ಠಕ್ಕು, ಠೌಳಿ, ಕಳ್ಳತನ, ಚಾಡಿ, ಅನ್ಯಾಯ, ವಿರೋಧ, ಅಪಹರಣ, ಭಯ, ಉಬ್ಬಸ, ಮೋಸ, ಹಾದರಗಳ ಹೆಸರೇ ಇಲ್ಲದಂತೆ ಮಾಡಿ ಭೂಮಿಯನ್ನು ಕಾಪಾಡಿದನು. ೨೨. ಲೆಖ್ಖಪತ್ರಗಳನ್ನು ಬರೆಯುವ ಪದ್ಧತಿಯನ್ನಿಟ್ಟು, ಕ್ರಮಬದ್ಧವಾದ ಬರೆವಣಿಗೆಯ ಮೂಲಕ, ಆಯ-ವ್ಯಯಗಳನ್ನು ಪರಿಶೀಲಿಸಿ, ದುರ್ವ್ಯಯಗಳನ್ನು ಕಡಿಮೆ ಮಾಡಿ, ಲೆಕ್ಕವಿಲ್ಲದಷ್ಟು ಧನವನ್ನು ಸಂಪಾದಿಸಿದನು. ೨೩. ದುಷ್ಟಜನರನ್ನು ಶಿಕ್ಷಿಸಿ, ಸಜ್ಜನರನ್ನು ಕಾಪಾಡಿ ಯಾವಾಗಲೂ ಶಿವಪೂಜಾಸಕ್ತನಾಗಿ ಜನರ ಕಷ್ಟಗಳನ್ನು ಹೋಗಲಾಡಿಸಿ ಭೂಮಿಯನ್ನು ಕಾಪಾಡಿದನು. ೨೪. ತನ್ನ ಮೇಲಿನ ಆಣೆ-ಘೋಷಣೆಗಳಿಂದ ಪರಿವಹಿಯನ್ನು ನಿಲ್ಲಿಸಿದನು.

ಪಲವುಕ್ತಿಗಳಿಂದೇಂ ರಿಪು
ಕುಲಭೈರವಶಿವನೃಪಾಲಗೆಣೆಯಹ ನೃಪರೀ
ಕಲಿಯುಗದೊಳಿಲ್ಲಮವನಿಪ
ಕುಲಕಂ ತಾಂ ತಿಲಕನೆನಿಸಿ ರಾರಾಜಿಸಿದಂ ೨೫

ವ|| ಇಂತು ನೆಗಳ್ತೆವೆತ್ತ ಭುಜಬಲಪ್ರತಾಪಾತಿಶಯದಿಂ ಸದ್ಧರ್ಮದಿಂ ರಾಜ್ಯವನಾಳುತಿರ್ದಾ ಶಿವಪ್ಪನಾಯಕಂ ವಿಕಾರಿಸಂವತ್ಸರದಲ್ಲಿ ರಾಯಸಂಸ್ಥಾನವನುದ್ಧರಿಸಲ್ವೇಳ್ಕೆಂದು ಮನಂದಂದು ಸೋದೆ ಬಿಳಿಗೆ ತರಿಕೆರೆ ಹರಪುರ ಮುಂತಾದ ನಾಡದೊರೆಗಳ ಸೈನ್ಯ ಸ್ವಸೈನ್ಯಂವೆರಸು ತೆರಳ್ದು ಬೇಲೂರಂ ತೆಗೆದುಕೊಂಡು ಶ್ರೀರಂಗರಾಯರ್ಗಿತ್ತು ರಾಯಸಂಸ್ಥಾನಮಂ ನೆಲೆಗೊಳಿಸಿ ನಿಲಿಸಿ ತದ್ರಾಯರಿಂ ಶಂಖಚಕ್ರ ಸ್ಥೂಲನೀಲಪರಿಶೋಭಿತ ವಜ್ರಖಚಿತ ಕರ್ಣಾಭರಣಂ ಮುಂತಾದ ಬಿರುದುಗಳಂ ಪಡೆದು ರಾಮಬಾಣನೆಂಬಾನೆಯಂ ಕೊಡಲದಂ ಪರಿಗ್ರಹಿಸಿ ನಿಲಿಸಿ ಪಟ್ಟಣದ ಮುಖಕ್ಕೆ ದಂಡಂ ತೆರಳ್ಚೈದಿ ಗ್ರಾಮದ ಸಮೀಪಮಂ ಸಾರ್ದು ಪಾಳಯವನಿಳಿದಿರಲಾ ಪ್ರಸ್ತಾವದೊಳ್

ಮಾ|| ಘನತರದುರ್ಮದಾಂಧ ಮಹಿಸೂರಮಹೀಪನ ನೇಮದಿಂ ಮಹಾ
ವನಧಿ ಯುಗಾಂತದೊಳ್ ಕವಿವವೊಲ್ ಬಹುಸೈನ್ಯ ಸಮೇತನಾಗಿ ಭೋಂ
ಕನೊದವಿ ತನ್ನವಂ ಪಿಡಿಯಲ್ಪೈದಿದ ತದ್ದಳವಾಯಿ ಹಂಪವ
ರ್ಯನನೆಸೆವಾಜಿಯೊಳ್ ಪಿಡಿದು ತಾಂ ಜಯಲಕ್ಷ್ಮಿಯನಾಂತನಾ ನೃಪಂ ೨೬

ಪರರ ವಸ್ತುಗಳನ್ನು ಅಪಹರಿಸಿ ಅಡಗಿ ನರಿಯಂತಹವರನ್ನು ಹಿಡಿದು ತರಿಸಿ ಶಿಕ್ಷೆಮಾಡಿದನು. ೨೫. ಹೆಚ್ಚು ಮಾತುಗಳಿಂದ ಏನು? ಶತ್ರುವಂಶಕ್ಕೆ ಭೈರವನೆನಿಸಿದ ಶಿವಪ್ಪನಾಯಕನಿಗೆ ಸಮಾನರಾದ ಅರಸರು ಈ ಕಲಿಯುಗದಲ್ಲಿ ಯಾರೂ ಇಲ್ಲ. ರಾಜಶ್ರೇಷ್ಠನಾದ ಆತನು ರಾಜರ ತಿಲಕನೆನಿಸಿ ಕಂಗೊಳಿಸಿದನು. ವ|| ಈ ರೀತಿ ಪ್ರಸಿದ್ಧಿಪಡೆದ ಭುಜಬಲ ಪರಾಕ್ರಮಗಳಿಂದಲೂ ಹಾಗೂ ಸದ್ಧರ್ಮಗಳಿಂದಲೂ ರಾಜ್ಯವನ್ನಾಳುತ್ತಿದ್ದ ಶಿವಪ್ಪನಾಯಕನು ವಿಕಾರಿ ಸಂವತ್ಸರದಲ್ಲಿ ರಾಯರ ಸಂಸ್ಥಾನವನ್ನು ಉದ್ಧಾರಮಾಡಬೇಕೆಂದು ಮನಸ್ಸುಮಾಡಿದನು. ಸೋದೆ, ಬಿಳಿಗೆ, ತರೀಕೆರೆ, ಹರಪುರ ಮುಂತಾದ ನಾಡ ದೊರೆಗಳ ಸೈನ್ಯಗಳನ್ನೂ ಹಾಗೂ ತನ್ನ ಸ್ವಂತ ಸೈನ್ಯವನ್ನೂ ಕೂಡಿಕೊಂಡು ತೆರಳಿ ಬೇಲೂರನ್ನು ವಶಪಡಿಸಿಕೊಂಡನು. ಅದನ್ನು ಶ್ರೀರಂಗರಾಯನಿಗೆ ಕೊಟ್ಟು ರಾಯರ ಸಂಸ್ಥಾನವನ್ನು ಪುನರುಜ್ಜೀವನಗೊಳಿಸಿದನು. ರಾಯರಿಂದ ಶಂಖ, ಚಕ್ರ, ದಪ್ಪವಾದ ನೀಲಗಳಿಂದ ಕೂಡಿದ ವಜ್ರಖಚಿತ ಕರ್ಣಾಭರಣಗಳು, ಬಿರುದುಗಳು, ರಾಮಬಾಣನೆಂಬ ಆನೆಗಳನ್ನು ಬಳುವಳಿಯಾಗಿ ಪರಿಗ್ರಹಿಸಿದನು. ಶ್ರೀರಂಗಪಟ್ಟಣದ ಅಭಿಮುಖವಾಗಿ ಹೊರಟು ಗ್ರಾಮದ ಸಮೀಪಕ್ಕೆ ಬಂದು ಪಾಳೆಯವನ್ನು ಇಳಿಸಿದನು. ಆ ಸಂದರ್ಭದಲ್ಲಿ- ೨೬. ಅತಿ ಹೆಚ್ಚಿನ ದುರ್ಮದದಿಂದ ಕುರುಡನಾದ ಮೈಸೂರಿನಲ್ಲಿ ಅರಸನ ಅಪ್ಪಣೆಯಿಂದ ಸಮುದ್ರವು ಪ್ರಳಯ ಕಾಲದಲ್ಲಿ ಉಕ್ಕಿ ಹರಿಯುವ ಹಾಗೆ ಬಹು ಸೈನ್ಯಸಮೇತನಾಗಿ ಮುನ್ನುಗ್ಗಿ ಬಂದು, ತನ್ನನ್ನು ಸೆರೆಹಿಡಿಯಲು ಬಂದ ಮೈಸೂರರಸನ ದಳವಾಯಿ ಹಾಗೂ ಸೇನಾಧಿಪತಿ ಹಂಪನಾಯಕನನ್ನು ಯುದ್ಧರಂಗದಲ್ಲಿ ಸೆರೆಹಿಡಿದು ಆ ಶಿವಪ್ಪನಾಯಕನು ಜಯಲಕ್ಷ್ಮಿಯನ್ನು

ಕಂ|| ಆ ರಣದೊಳೊದವಿದುರುಮದ
ವಾರಣಗಳನಶ್ವಚಯವ ಷೋಡಶಸಂಖ್ಯಾ
ಧೀರ ಗುರಿಕಾರರಂ ಬಹು
ವೀರರ್ಕಳನಾಕ್ಷಣದೊಳ್ ಕೈಸೆರೆವಿಡಿದಂ ೨೭

ಜವನ ಗಡಾವಣೆ ಲಯಮೃ
ತ್ಯುವಿನುರವಣೆ ಕಾಲರುದ್ರನತ್ಯಾಟೋಪಂ
ಶಿವಭೂಪನ ಕೋಪದ ಪವ
ಣಿವರಿಂಬಲ್ಪಂಕದೆಡೆಯೊಳಿನ್ನೇನುಸಿರ್ವೆಂ ೨೮

ಮಿಗವಿಂಡುಗಳಂ ಪೆರ್ಬುಲಿ
ಯುಗಿವಂತಿಭಚಯವನಲೆವ ಕೇಸರಿಯೆನೆ ಪೊ
ಕ್ಕುಗಿಬಗಿದರಿಗಳ ಶಿರಗಳ
ಜಗತಿಯನೊಟ್ಟಿಸಿದನಾಜಿಯೊಳ್ ಶಿವಭೂಪಂ ೨೯

ವ|| ಇಂತವರೀ ಜಗತಿಯಗ್ರದೊಳೆಸೆವ ಸಿಂಹಾಸನದೊಳ್ ಕುಳ್ಳಿರ್ದ ಸೇನಾಸಮೂಹಗಳಿಂ ಸಲಾಮುಗಳಂ ಕೈಕೊಂಡು ಧರ್ಮಗಹಳೆಯಂ ಪಿಡಿಸಿಯನಂತರಂ

ಕಂ|| ಗ್ರಾಮದ ಮಸಲತಿಯೊಳ್ ನಿ
ಸ್ಸೀಮಪ್ರತಿಭಟರನಲೆದು ತತ್ಕೋಂಟೆಯುಮಂ
ಭೂಮಿಪತಿಲಕಂ ರಿಪುಕುಲ
ಭೀಮಂ ಶಿವಭೂಪನಾಜಿಯೊಳ್ ಸಾಧಿಸಿದಂ ೩೦

ವ|| ಮತ್ತಮದಲ್ಲದೆ

ಪಡೆದನು. ೨೭. ಆ ಯುದ್ಧದಲ್ಲಿ ಒದಗಿಬಂದ ಮದ್ದಾನೆಗಳನ್ನೂ, ಕುದುರೆಗಳನ್ನೂ, ಹದಿನಾರು ಮಂದಿ ಧೀರರಾದ ಗುರಿಕಾರರನ್ನೂ ಹಾಗೂ ಇನ್ನೂ ಅನೇಕ ವೀರರನ್ನೂ ಆಕ್ಷಣವೇ ಕೈಸೆರೆ ಹಿಡಿದನು. ೨೮. ಯಮನ ಗರ್ಜನೆ, ಪ್ರಳಯ ಭೈರವನ ಮುನ್ನಡೆ, ಕಾಲರುದ್ರನ ಅಬ್ಬರ ಇವುಗಳಿಗಿಂತ ಶಿವಪ್ಪನಾಯಕನ ಕೋಪದ ಪ್ರಮಾಣವು ಯುದ್ಧದಲ್ಲಿ ಹೆಚ್ಚು ಎಂದಾಗ ಇನ್ನೇನು ಹೇಳಲಿ? ೨೯. ಮೃಗಸಮೂಹವನ್ನು ಹೆಬ್ಬುಲಿಯೂ, ಆನೆಗಳ ಹಿಂಡನ್ನು ಸಿಂಹವೂ ನುಗ್ಗುವಂತೆ, ವೈರಿಸೇನೆಯ ಒಳಹೊಕ್ಕು ಸದೆಬಡಿದು ಶತ್ರುಗಳ ತಲೆಗಳನ್ನು ಶಿವಪ್ಪನಾಯಕನು ಯುದ್ಧರಂಗದಲ್ಲಿ ರಾಶಿಹಾಕಿದನು. ಈ ರೀತಿ ಶಿವಪ್ಪನಾಯಕನು ಲೋಕೋತ್ತರವಾದ ಸಿಂಹಾಸನದಲ್ಲಿ ಕುಳಿತುಕೊಂಡು ಸೇನಾಸಮೂಹಗಳಿಂದ ನಮಸ್ಕರಿಸಲ್ಪಡುತ್ತಾ ಧರ್ಮದ ಕಹಳೆಯನ್ನು ಊದಿಸಿದನು. ಅನಂತರ ೩೦. ಗ್ರಾಮಗಳಲ್ಲಿ ಮಸಲತ್ತು ನಡೆಸುವ ಪ್ರಬಲವಾದ ವಿರೋಧಿಗಳನ್ನು ಹಿಡಿದು ಅವರ ಕೋಟೆಯನ್ನು ಅರಸರಲ್ಲಿ ಶ್ರೇಷ್ಠನೂ, ಶತ್ರುಗಳಿಗೆ ಭಯಂಕರನೂ ಆದ ಶಿವಪ್ಪನಾಯಕನು ಯುದ್ಧರಂಗದಲ್ಲಿ ಸಾಧಿಸಿದನು. ವ|| ಮತ್ತೂ ಅಲ್ಲದೆ

ಕಂ॥ ಧಾರಿಣಿಗಪ್ರತಿಯಹ ಕಾ
ವೇರಿಯ ಪೆರ್ಬೊಳೆಗೆ ಸೇತುವಂ ವಿರಚಿ ತ
ದ್ಧೀರ ಶಿವಾವನಿಪಂ ಮೈ
ಸೂರರಸನ ಗಾಢಗರ್ವಮಂ ಮಗ್ಗಿಸಿದಂ ೩೧

ವ॥ ಇಂತಾ ಶಿವಪ್ಪನಾಯಕಂ ಕಾವೇರೀನದಿಗೆ ಸೇತುವಂ ಕಟ್ಟಿಸಿ ನಿಜಸೈನ್ಯಸಮೂಹಮಂ ತೆರಳ್ಚಿ ಪಾಳೆಯವನಿಳಿದು ಪಟ್ಟಣದ ಕೋಂಟೆಯಂ ವೇಷ್ಟೈಸಲವರ್ ಯುದ್ಧಮುಖ ದೊಳ್ ನಿತ್ತರಿಸಲಮ್ಮದೆ ತಮ್ಮ ಸಹಾಯಕ್ಕೆ ವಿಜಾಪುರದಿಂ ಸೈನ್ಯಂವೆರಸು ಬಲೂಲಖಾನನಂ ತೆರಳ್ಚಿತರಲ್ ಮಂತ್ರಮುಖದಿಂದಾ ಬಲೂಲಖಾನನಂ ಪಿಂದೆಗೆಸಿ ಕೋಂಟೆಯಂ ವಶಂಗೈವನಿತರೊಳವರ್ ಕಂಗೆಟ್ಟು ಕೋಂಟೆಯಂ ವೇಷ್ಟೈಸಿದ ಗುರಿಮಾನಿಸರ್ಗಂ ಮತ್ತಂ ಕೆಲಂಬರ್ ನಿಯೋಗಿಗಳ್ಗಂ ಪರಿದಾನವನಿತ್ತಂತುಮಲ್ಲದಾಭಿಚಾರ ಹೋಮ ಮುಂತಾದ ದುಷ್ಕೃತ್ಯಂಗಳ ನೊಡರ್ಚಲ್ ದೇಹದೊಳಾಯಾಸಂ ಪುಟ್ಟಲಿಂತಪ್ಪ ಕಾಲದೊಳ್ ಶತ್ರುಸೀಮಾ ಸನ್ನಿವೇಶದೊಳಾವಿಲ್ಲಿರ್ಪುದ ನುಚಿತಮೆಂದು ಬಗೆದಾ ಶಿವಪ್ಪನಾಯಕಂ ಮುತ್ತಿಗೆದೆಗೆಸಿ ಮಾರಳ್ದು ಸ್ವಸೈನ್ಯಂವೆರಸು ವೇಣುಪುರವರಮಂ ಸಾರ್ದಿರುತ್ತುಮಿರ್ದುಂ

ಕಂ॥ ರಾಜಾಧಿರಾಜನಾ ಶಿವ
ರಾಜಂ ಸದಸತ್ಪ್ರಪಾಲನಾಜ್ಞಾಬಲದಿಂ
ರಾಜಮುದ್ರಾಧಿಕಾರದ
ತೇಜವನುಡುಗಿಸದೆ ಪೊರೆದನವನೀತಳಮಂ ೩೨

ವ॥ ಇಂತಾ ಶಿವಪ್ಪನಾಯಕಂ ತನಗೆ ರಾಜಪಟ್ಟಮಾದ ಶಾಲಿವಾಹನ ಶಕ ವರ್ಷ

೩೧. ಭೂಮಿಯಲ್ಲೇ ಅಸಮಾನವಾದ ಕಾವೇರೀ ನದಿಗೆ ಸೇತುವೆಯನ್ನು ರಚಿಸಿ, ಆ ಧೀರನಾದ ಶಿವಪ್ಪನಾಯಕನು ಮೈಸೂರ ಅರಸನ ಗರ್ವವನ್ನು ತಗ್ಗಿಸಿದನು. ವ॥ ಈ ರೀತಿ ಶಿವಪ್ಪನಾಯಕನು ಕಾವೇರೀನದಿಗೆ ಸೇತುವೆಯನ್ನು ನಿರ್ಮಿಸಿ, ತನ್ನ ಸೈನ್ಯ ಸಮೂಹವನ್ನು ತೆರಳಿಸಿ ಪಾಳೆಯದಿಂದ ಇಳಿದು ಪಟ್ಟಣದ (ಶ್ರೀರಂಗಪಟ್ಟಣದ) ಕೋಟೆಯನ್ನು ಆಕ್ರಮಿಸಿದನು. ಅವರು (ಪ್ರತಿರೋಧಿಗಳು) ಈ ರಣರಂಗದಲ್ಲಿ ನಿಲ್ಲಲಾರದೆ ತನ್ನ ಸಹಾಯಕ್ಕೆ ವಿಜಾಪುರದ ಬಲೂಲಖಾನನನ್ನು ಬರಲು ಪ್ರಾರ್ಥಿಸಿಕೊಂಡರು. ಈ ರೀತಿ ಎರಗಿಬಂದ ಬಲೂಲಖಾನನ ಸೈನ್ಯವನ್ನು ಮಂತ್ರಾಲೋಚನೆಯಿಂದ ನಾಯಕನ ಸೈನ್ಯವು ಹಿಂದಕ್ಕಟ್ಟಿ ಕೋಟೆಯನ್ನು ಆಕ್ರಮಿಸಿತು. ಅಷ್ಟರಲ್ಲಿ ಕೋಟೆಯನ್ನು ಆಕ್ರಮಿಸಿದ ಗುರಿಕಾರರು, ಮತ್ತೆ ಕೆಲವರು ನಿಯೋಗಿಗಳು ಮುಂತಾದವರಿಗೆ ಉಡುಗೊರೆಯನ್ನಿತ್ತು ಪ್ರತಿರೋಧಿಗಳು ಅಭಿಚಾರ (ಮಾಯಮಂತ್ರ) ಕ್ರಿಯೆಗಳನ್ನು ಹಾಗೂ ಹೋಮಗಳನ್ನು ನಡೆಸಲು, ಇದರಿಂದ ಉಂಟಾದ ದೇಹಾಯಾಸದಲ್ಲಿ, ತಾನು ಈ ಕಾಲದಲ್ಲಿ ಇಲ್ಲಿರುವುದು ಉಚಿತವಲ್ಲವೆಂದು ಭಾವಿಸಿ ಶಿವಪ್ಪನಾಯಕನು ಮುತ್ತಿಗೆಯನ್ನು ತೆಗೆಸಿದನು. ವೇಣುಪುರಕ್ಕೆ ತನ್ನ ಸೈನ್ಯ ಸಹಿತನಾಗಿ ಹೊರಟು ಹಿಂದಿರುಗಿದನು. ೩೨. ರಾಜಾಧಿರಾಜನಾದ ಶಿವಪ್ಪನಾಯಕನು ಸಜ್ಜನರನ್ನೂ ಹಾಗೂ ದುರ್ಜನರನ್ನೂ ಆಜ್ಞಾಬಲದಿಂದ ಪಾಲಿಸಬಲ್ಲವನಾಗಿ ರಾಜಮುದ್ರಾಧಿಕಾರದ ತೇಜಸ್ಸನ್ನು ಕುಗ್ಗಿಸದೆ ಭೂಮಂಡಲವನ್ನು ಪಾಲಿಸಿದನು. ವ॥ ಈ ರೀತಿ ಶಿವಪ್ಪನಾಯಕನು ತನಗೆ ರಾಜ್ಯಾಭಿಷೇಕವಾದ ಶಾಲಿವಾಹನ ಶಕ ವರ್ಷ ೧೫೭೮ನೆಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ದ್ವಾದಶಿಯಿಂದ

೧೫೭೮ ನೆಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ದ್ವಾದಶಿಯಾರಭ್ಯ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧೧ರ ವರೆಗೆ ವರ್ಷ ೧೪ ತಿಂಗಳು ೯ ದಿನ ೨೦ ಪರ್ಯಂತಂ ಸದ್ಧರ್ಮದಿಂ ರಾಜ್ಯಪರಿಪಾಲನಂಗೈದು ಶಿವಸಾಯುಜ್ಯಮಂ ಪಡದನಂತರಂ

ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲಿವಾಹನಶಕ ವರ್ಷ ೧೫೮೨ನೆಯ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧ ಯಲ್ಲಿ ಆ ಶಿವಪ್ಪನಾಯಕರನುಜರಾದ ವೆಂಕಟಪ್ಪನಾಯಕರ್ಗೆ ವೇಣುಪುರದರಮನೆಯೊಳ್ ರಾಜಪಟ್ಟಂ

ಕಂ|| ಅರಿಭೀಕರ ಶಿವಭೂಪನ
ತರುವಾಯಿಯೊಳಾತನನುಜ ವೆಂಕಟಭೂಭು
ದ್ವರನಾಳ್ದಂ ಧರೆಯಂ ಸು
ಸ್ಥಿರೆಯಂ ವಿಬುಧಾಳಿ ಮೆಚ್ಚೆ ಕತಿಪಯದಿವಸಂ ೩೩

ವ|| ಆ ಚಿಕ್ಕವೆಂಕಟಪ್ಪನಾಯಕಂ ತನ್ನಗ್ರಜನಾದ ಶಿವಪ್ಪನಾಯಕರಾಳ್ದ ದೇಶ ಕೋಶ ಪ್ರಜೆ ಪರಿವಾರಂಗಳಂ ಪ್ರತಿಪಾಲಿಸುತ್ತುಂ ಶಿವಪ್ಪನಾಯಕರ ಕುಮಾರರಾದ ಭದ್ರಪ್ಪನಾಯಕರಂ ಪ್ರೀತಿಯಿಂ ಪೋಷಿಸುತ್ತುಂ ತಮ್ಮ ಸಹೋದರಿಯರಾದ ಪರಮೇಶ್ವರಮ್ಮ ನಾಗಾಜಮ್ಮ ಚನ್ನಾಜಮ್ಮ ನವರನತ್ಯಂತ ಪ್ರೇಮಾತಿಶಯದಿಂ ನಡೆಸಿಕೊಳುತ್ತುಂ ಪಟ್ಟಣದವರ್ ಮೇರೆವರಿದೆಡೆಯಾಡದಂತು ಶ್ರೀರಂಗರಾಯರ ಸಮೀಪದೊಳ್ ಗಡಿಮುಖದೊಳ್ ಸೈನ್ಯಸಹಿತ ಮಳಿಯ ಶಿವಲಿಂಗನಾಯಕನಂ

ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧೧ರವರೆಗೆ ೧೪ ವರ್ಷ ೯ ತಿಂಗಳು ೨೦ ದಿನಗಳವರೆಗೂ ಸದ್ಧರ್ಮದಿಂದ ರಾಜ್ಯವನ್ನಾಳುತ್ತಾ ಶಿವಸಾಯುಜ್ಯವನ್ನು ಹೊಂದಿದನು. ಅನಂತರ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೫೮೨ನೆಯ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧ ರಲ್ಲಿ ಆ ಶಿವಪ್ಪನಾಯಕರ ಅನುಜರಾದ ವೆಂಕಟಪ್ಪನಾಯಕರಿಗೆ ವೇಣುಪುರದ ಅರಮನೆಯಲ್ಲಿ ರಾಜ್ಯಾಭಿಷೇಕವಾಯಿತು. ೩೩. ಶತ್ರುಗಳಿಗೆ ಭಯಂಕರನಾದ ಶಿವಪ್ಪನಾಯಕನ ಅನಂತರ ಅವನ ತಮ್ಮನಾದ ವೆಂಕಟಪ್ಪನಾಯಕನು ದೇವತೆಗಳೂ ಮೆಚ್ಚುವ ಹಾಗೆ ಕೆಲವು ಕಾಲ ರಾಜ್ಯವನ್ನಾಳಿದನು. ವ|| ಆ ಚಿಕ್ಕವೆಂಕಟಪ್ಪನಾಯಕನು ತನ್ನ ಅಣ್ಣನಾದ ಶಿವಪ್ಪನಾಯಕರು ಆಳಿದ ದೇಶ, ಕೋಶ, ಪ್ರಜೆ ಹಾಗೂ ಪರಿವಾರಗಳನ್ನು ಕಾಪಾಡುತ್ತಾ ಶಿವಪ್ಪನಾಯಕರ ಕುಮಾರರಾದ ಭದ್ರಪ್ಪನಾಯಕರನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ತಮ್ಮ ಸಹೋದರಿಯರಾದ ಪರಮೇಶ್ವರಮ್ಮ ನಾಗಾಜಮ್ಮ ಹಾಗೂ ಚನ್ನಾಜಮ್ಮನವರನ್ನು ಪ್ರೇಮದಿಂದ ಕಾಪಾಡುತ್ತಾ ಪೋಷಿಸುತ್ತಿದ್ದರು. ಶ್ರೀರಂಗಪಟ್ಟಣದವರು ಗಡಿ ದಾಟಿ ಶ್ರೀರಂಗರಾಯರ ಸೀಮೆಗೆ ಬಾರದ ಹಾಗೆ ಅಳಿಯ ಶಿವಲಿಂಗನಾಯಕನೊಡನೆ ಸೇನೆಯನ್ನು ಕೂಡಿಸಿ ಕಾವಲಿರಿಸಿದ್ದನು.

ನಿಲಿಸಿ ಪರಾಕ್ರಮಾತಿಶಯದಿಂ ರಾಜ್ಯಂಗೆಯ್ಯುತಿರ್ದನಂತುಮಲ್ಲದೆಯುಂ

ಮ॥ ಗಡಿಗಳೊಳ್ಬೆದೆ ಬಾಧಿಪ ತುರುಷ್ಕರ ಸೈನ್ಯವನ್ನೆದೆ ನುಗ್ಗಿಸು
ತ್ತೆಡವಲದುರ್ವಿಪಾಲಕರೊಳುನ್ನತತೇಜವನಾಂತು ದುಷ್ಟರಿಂ
ಗೆಡೆಗುಡದುತ್ತಮೋತ್ತಮರನೋವುತಧರ್ಮವನೊತ್ತಿ ಧರ್ಮದಿಂ
ಪೊಡವಿಯನಾಳ್ದನಾ ಶಿವನೃಪಾಲಸಹೋದರನರ್ಕಭಾಸುರಂ ೩೪

ವ॥ ಇಂತೀ ಚಿಕ್ಕವೆಂಕಟಪ್ಪನಾಯಕಂ ತನಗೆ ರಾಜಪಟ್ಟಮಾದ ಶಾಲಿವಾಹನಶಕ ವರ್ಷ ೧೫೮೩ನೆಯ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧ ಯಾರಭ್ಯ ಪ್ಲವ ಸಂವತ್ಸರದ ಭಾದ್ರಪದ ಶುದ್ಧ ೧೪ವರೆಗೆ ತಿಂಗಳು ೧೧ ದಿವಸ ೧೪ ಪರ್ಯಂತಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ದಂ

ಈ ರೀತಿ ಪರಾಕ್ರಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ೩೪. ಗಡಿಗಳಲ್ಲಿ ಬಾಧಿಸುತ್ತಿದ್ದ ತುರುಕರ ಸೈನ್ಯವನ್ನು ಸೋಲಿಸುತ್ತಲೂ, ಎಡಬಲದ ಅರಸರಿಗಿಂತ ಹೆಚ್ಚಿನ ತೇಜಸ್ಸನ್ನು ಪಡೆಯುತ್ತಲೂ ದುಷ್ಟರಿಗೆ ಅವಕಾಶ ಕೊಡದೆ ಉತ್ತಮರನ್ನು ಕಾಪಾಡುತ್ತಿದ್ದನು. ಅಧರ್ಮವನ್ನು ಹೋಗಲಾಡಿಸಿ, ಧರ್ಮದಿಂದ ಶಿವಪ್ಪನಾಯಕನ ಸಹೋದರನಾದ ಚಿಕ್ಕವೆಂಕಪ್ಪನಾಯಕನು ಸೂರ್ಯನಂತೆ ತೇಜಸ್ವಿಯಾಗಿ ಭೂಮಿಯನ್ನು ಆಳಿದನು. ವ॥ ಈ ರೀತಿ ಚಿಕ್ಕವೆಂಕಟಪ್ಪನಾಯಕನು ತನಗೆ ರಾಜ್ಯಾಭಿಷೇಕವಾದ ಶಾಲಿವಾಹನ ಶಕ ವರ್ಷ ೧೫೮೩ನೆಯ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ೧ ರಿಂದ ಪ್ಲವ ಸಂವತ್ಸರದ ಭಾದ್ರಪದ ಶುದ್ಧ ೧೪ರ ವರೆಗೆ ೧೧ ತಿಂಗಳು ಮತ್ತು ೧೪ ದಿನಗಳ ಪರಿಯಂತ ಸದ್ಧರ್ಮದಿಂದ ರಾಜ್ಯವನ್ನು ಕಾಪಾಡಿದನು.

# ಅಷ್ಟಮಾಶ್ವಾಸಂ

ವII ಚಿಕ್ಕವೆಂಕಟಪ್ಪನಾಯಕರ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೫೮೮ನೆಯ ಪ್ಲವ ಸಂವತ್ಸರದ ಭಾದ್ರಪದ ಶುದ್ಧ ೧೫ಯಲ್ಲಿ ಶಿವಪ್ಪನಾಯಕರ ಜ್ಯೇಷ್ಠಪುತ್ರರಾದ ಭದ್ರಪ್ಪನಾಯಕರ್ಗೆ ವೇಣುಪುರದ ಅರಮನೆಯಲ್ಲಿ ರಾಜಪಟ್ಟಂ

ಕಂII ಭಾವಿಸಲಾ ವೆಂಕಟಧರ
ಣೀವಿಭುವಿನನಂತರಂ ತದಗ್ರಜನಹ ಶೋ
ಭಾವಹ ಶಿವನೃಪನಾತ್ಮಜ
ನೀ ವಸುಧೆಯನಾಳ್ದನೆಸೆವ ಭದ್ರಪಂ ಭೂಪಂ ೧

ವII ಅದೆಂತೆಂದೊಡಾ ಭದ್ರಪ್ಪನಾಯಕಂ ತಮ್ಮ ತಂದೆ ಶಿವಪ್ಪನಾಯಕರಾಳಿಬರುತ್ತಿರ್ದ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪರಿಜನ ಪುರಜನ ಸೇವಕರ್ಗಳಂ ಸಂರಕ್ಷಿಸುತ್ತುಂ ತಮ್ಮನುಜ ಸೋಮಶೇಖರನಾಯಕರಂ ಸೋದರತ್ತೆಯಾದ ಪರಮೇಶ್ವರಮ್ಮ ನಾಗಾಜಮ್ಮನವರುಮಂ ಅಕ್ಕ ಸಿದ್ಧಮ್ಮನುಮಂ ಪರಮಪ್ರೀತಿಯಿಂ ನಡೆಸಿಕೊಳುತ್ತುಂ ಸದ್ಧರ್ಮದಿಂ ರಾಜ್ಯಪರಿಪಾಲನಂಗೆಯುತುಂ ವರ್ತಿಸುತ್ತುಮಿರ್ದಾ ಕಾಲದೊಳ್ ಮಾಯಾವಿಗಳ ಮೇಲಣ ರಾಜಕಾರ್ಯಾರ್ಥಂ ಅಳಿಯ ಶಿವಲಿಂಗಯ್ಯನಂ ಸೈನ್ಯಸಹಿತಂ ಪ್ರಯಾಣವನೊಡರ್ಚಿಸಲಾತಂ ತೆರಳ್ದು ಬೇಲೂರ್ಗೈದಿ ರಾಯರುತಂ ಸಂಧಿಸಿ ತತ್ಸೈನ್ಯಂವೆರಸು ಮುಂತೆರಳ್ದು ಮಾಯಾವಿಗಳ್ ವೇಢೈಸಿದ ಹೆಬ್ಬಾಳೆಕೋಂಟೆಯುಂ ಮುತ್ತಿಗೆದೆಗೆಸಿ ಮುಂತೈದಿ ನರಸಿಂಹಪುರಕ್ಕೆ ಮುತ್ತಿಗೆಯಿಕ್ಕಲವರ್ಯ್ತಂದು ಕೊಣನೂರು ಕೋಂಟೆಯುಂ

ಆ ಚಿಕ್ಕವೆಂಕಟಪ್ಪನಾಯಕರ ಅನಂತರ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀಮನ್ನೃಪ ಶಾಲಿವಾಹನ ಶಕ ವರ್ಷ ೧೫೮೮ನೆಯ ಪ್ಲವನಾಮ ಸಂವತ್ಸರದ ಭಾದ್ರಪದ ಶುದ್ಧ ೧೫ರಲ್ಲಿ ಶಿವಪ್ಪನಾಯಕರ ಜ್ಯೇಷ್ಠಪುತ್ರರಾದ ಭದ್ರಪ್ಪನಾಯಕರಿಗೆ ವೇಣುಪುರದ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ೧. ವೆಂಕಟಪ್ಪನಾಯಕನ ಬಳಿಕ ಅವನ ಅಣ್ಣನಾದ ಶಿವಪ್ಪನಾಯಕನ ಪುತ್ರ ಭದ್ರಪ್ಪನಾಯಕನು ಈ ಭೂಮಿಯನ್ನು ಆಳಿದನು. ವII ಅದು ಯಾವ ರೀತಿ ಎಂದರೆ ಭದ್ರಪ್ಪನಾಯಕನು ತಮ್ಮ ತಂದೆ ಶಿವಪ್ಪನಾಯಕರು ಆಳಿಕೊಂಡು ಬರುತ್ತಿದ್ದ ದೇಶ, ಕೋಶ, ಪ್ರಜೆಗಳು, ಪರಿವಾರಗಳು, ಕೋಟೆಗಳು, ಪರಿಜನರು, ಬಂಧುಗಳು, ಪಟ್ಟಣದ ಜನಗಳು, ಸೇವಕಜನಗಳು ಮುಂತಾದವರನ್ನು ಕಾಪಾಡುತ್ತಿದ್ದನು. ತಮ್ಮ ಸಹೋದರ ಸೋಮಶೇಖರನಾಯಕರ ಸೋದರತ್ತೆಯಾದ ಪರಮೇಶ್ವರಮ್ಮ ನಾಗಾಜಮ್ಮ ಇವರುಗಳನ್ನೂ ಹಾಗೂ ಅಕ್ಕ ಸಿದ್ದಮ್ಮನನ್ನೂ ಪರಮ ಪ್ರೀತಿಯಿಂದ ನೋಡಿಕೊಳ್ಳುತ್ತಾ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು, ಹೀಗಿರಲಾಗಿ ಮಾಯಾವಿಗಳ (ಮೈಸೂರಿನವರ) ಮೇಲೆ ರಾಜಕಾರ್ಯಾರ್ಥವಾಗಿ ಅಳಿಯ ಶಿವಲಿಂಗಯ್ಯನೊಡನೆ ಸೈನ್ಯವನ್ನು ಕೊಟ್ಟು ಕಳುಹಿಸಿ ಪ್ರಯಾಣಕ್ಕೆ ಏರ್ಪಾಡು ಮಾಡಲಾಯಿತು. ಈತನು ಬೇಲೂರಿಗೆ ಹೋಗಿ ರಾಯರನ್ನು ಭೇಟಿಮಾಡಿದನು, ಅವನ ಸೈನ್ಯವನ್ನು ಕೂಡಿಕೊಂಡು ಮುಂದೆ ಹೋಗಿ ಮಾಯಾವಿಗಳು ಆಕ್ರಮಿಸಿದ ಹೆಬ್ಬಾಳೆ ಕೋಟೆಯ ಮುತ್ತಿಗೆಯನ್ನು ತೆಗೆಸಿದನು. ಮುಂದೆ ಹೋಗಿ ನರಸಿಂಹಪುರಕ್ಕೆ ಮುತ್ತಿಗೆ

ತೆಗೆಮುಕೊಳಲಿವರತಿತ್ವರಿತದಿಂದಲ್ಲಿಗೈದಿ ತಳಿಸುರಂಗಗಳಂ ನಡೆಸುತ್ತುಮಿರಲಾ ವೇಳೆಯೊಳ್ ಮೈಸೂರ ಮಹೀಪತಿಯನುಜ್ಞೆಯಿಂ

ಕಂ॥ ತಳತಂತ್ರಸಹಿತಮಲ್ಲಿಗೆ
ಕಳಿಲೆಯ ಕಾಂತಯ್ಯನೆಂಬ ಸೇನಾಧೀಶಂ
ಘಳಿಲನೈತಂದು ಕಣಗಾ
ಲಿಳೆಯೊಳ್ ಪಾಳೆಯವನಿಳಿಯಲಂದವರ್ಗಿವರ್ಗಂ ೨

ಯುದ್ಧಂ ಪಣ್ಣಲ್ ಶೌರ್ಯ ಸ
ಮುದ್ರಂ ಶಿವಲಿಂಗನಾಯಕಂ ಕೈಗೈದ
ತ್ಯುದ್ಧತರಿಪುಸುಭಟಾಸ್ಯ
ಗ್ದಬ್ಧಾಸಿಕರಾಬ್ಜನೆನಿಸಿ ರಾರಾಜಿಸಿದಂ ೩

ಕೊಳುಗುಳದೊಳಾಂತ ಸುಭಟರ
ತಲೆಗಳನುರೆ ಕೇಣಿಗೊಂಡಿದಿರ್ಚಿದ ಬಲವತ್
ಕಳಿಲೆಯ ಕಾಂತಯ್ಯನ ಕೈ
ಚಳಕಮನುರೆ ನಿಲಿಸಿ ಧುರದೆ ಮುರಿದೋಡಿಸಿದಂ ೪

ವ॥ ಇಂತು ಪಣ್ಣಿದ ಯುದ್ಧರಂಗದೊಳಾ ಶಿವಲಿಂಗನಾಯಕಂ ಕಳಿಲೆಯ ಕಾಂತಯ್ಯನದಟಂ ಮುರಿದು ಪಲಾಯನಂಗೊಳಿಸಲಾ ವೇಳೆಯೊಳ್ ವಿಧಿವಶದಿಂ ಶತ್ರುಸೈನ್ಯದ ಬಾಣಮಪಾಯಸ್ಥಳಕಂ ತಾಗಿ ಶಿವಲಿಂಗನಾಯಕನಲ್ಲಿಯೇ ಶಿವಲೋಕಮಂ ಪಡೆಯಲಾ ವಾರ್ತೆಯಂ ಕೇಳ್ದು ಭದ್ರಪ್ಪನಾಯಕಂ ಪಡೆವೆರಸತಿತ್ವರೆಯಿಂ ದಾಳಿವರಿದಾ ಮಾಯಾವಿಗಳ ನಾಡೊಳಗಣ ಹೊನ್ನವಳ್ಳಿ ಚಿಕ್ಕನಾಯಕನಹಳ್ಳಿ

ಹಾಕಲು ಅವರು ಕೂಡಲೇ ಬಂದು ಕೋಣನೂರು ಕೋಟೆಯನ್ನು ತೆಗೆದುಕೊಳ್ಳಲು ಉದ್ಯುಕ್ತರಾಗಲು, ಅತಿ ಬೇಗನೆ ಅಲ್ಲಿಂದ ಹೋಗಿ ತಳಿಸುರಂಗಗಳನ್ನು ನಡೆಸುತ್ತಾ ಇದ್ದನು, ಆ ಸಮಯದಲ್ಲಿ ಮೈಸೂರಿನ ಅಧಿಪತಿಯ ಆಜ್ಞೆಯಿಂದ-೨. ಅಲ್ಲಿಗೆ ಕಳಿಲೆಯ ಕಾಂತಯ್ಯನೆಂಬ ಸೇನಾಧಿಪತಿಯು ಸೈನ್ಯದೊಂದಿಗೆ ಕೂಡಲೇ ಬಂದು ಕಣಗಾಲ ಭೂಮಿಯಲ್ಲಿ ಬೀಡುಬಿಟ್ಟಾಗ ಅವರಿಗೂ ಇವರಿಗೂ ೩. ಯುದ್ಧವುಂಟಾಗಲು ಶೌರ್ಯ ಸಮುದ್ರನಾದ ಶಿವಲಿಂಗನಾಯಕನು ಕೈಮಾಡಿ ಅತ್ಯಂತ ಉದ್ಧಟರಾದ ಶತ್ರು ಸೈನಿಕರ ರಕ್ತದಿಂದ ಕೂಡಿದ ಕತ್ತಿಯನ್ನು ಕರಕಮಲದಲ್ಲಿ ಧರಿಸಿ ಶೋಭಿಸಿದನು. ೪. ಯುದ್ಧದಲ್ಲಿ ಎದುರಾದ ವೀರರ ತಲೆಗಳನ್ನು ಬಲಿ ತೆಗೆದುಕೊಂಡು ಎದುರಿಸಿದ ಬಲಶಾಲಿಯಾದ ಕಳಿಲೆಯ ಕಾಂತಯ್ಯನ ಕೈಚಳಕವನ್ನು ನಿಲ್ಲಿಸಿ ಯುದ್ಧದಲ್ಲಿ ಸೋಲಿಸಿ ಓಡಿಸಿದನು. ವ॥ ಈ ರೀತಿ ಉಂಟಾದ ಯುದ್ಧದಲ್ಲಿ ಶಿವಲಿಂಗನಾಯಕನು ಕಳಿಲೆಯ ಕಾಂತಯ್ಯನ ಪರಾಕ್ರಮವನ್ನು ಮುರಿದು ಪಲಾಯನಗೊಳಿಸಿದನು. ಪ್ರಮಾದವಶಾತ್ ಆ ಸಮಯದಲ್ಲಿ ಶತ್ರು ಸೈನ್ಯದ ಬಾಣವೊಂದು ಅಪಾಯ ಸ್ಥಳಕ್ಕೆ ತಾಗಿ ಶಿವಲಿಂಗನಾಯಕನು ಅಲ್ಲಿಯೇ ಶಿವಲೋಕವನ್ನು ಪಡೆದನು, ಈ ಸಮಾಚಾರವನ್ನು ಕೇಳಿ ಭದ್ರಪ್ಪ ನಾಯಕನು ಸೈನ್ಯ ಸಹಿತ ಕೂಡಲೇ ಹೊರಟು ದಾಳಿ ನಡೆಸಿ ಮಾಯಾವಿಗಳ ನಾಡಿಗೆ ಸೇರಿದ್ದ ಹೊನ್ನವಳ್ಳಿ, ಚಿಕ್ಕನಾಯಕನ ಹಳ್ಳಿ, ಕಂದುಗೆರೆ, ಬೂದಿವಾಳ ಮುಂತಾದ ಸೀಮೆಗಳನ್ನು

ಕಂದುಗೆರೆ ಬೂದಿವಾಳ ಮುಂತಾದ ಸೀಮೆಗಳಂ ಕೊಂಡವರ ರಾಜ್ಯರಾಷ್ಟ್ರಮಂ ಪುಡಿಗೈಸಿ ಮರಳ್ಚಿ ತಂದು ಸುಧಾಪುರದವರ ಗರ್ವೋದ್ರೇಕಮಂ ಮಗ್ಗಿಸಿ ತದ್ರಾಜ್ಯರಾಷ್ಟ್ರಂಗಳನೀಳ್ಕು ಸೈನ್ಯಂವೆರಸು ಸಬ್ಬುನೀಸ ಕೂಸಪ್ಪಯ್ಯನಂ ತೆರಳ್ಚಿ ದಿವಾಣದ ವಕೀಲಿತಿಯಿಂದ ಸೀರೆಡೆಕೋಂಟೆಗೆ ಮುತ್ತಿಗೆಗೈಸಲಾ ಪ್ರಸ್ತಾವದೊಳ್

ಕಂ|| ಸೋದೆಯವರ್ಕಳುಸಿರ್ದ ಫಿ
ರ್ಯಾದಿಯನುರೆ ಕೇಳ್ದು ವಿಜಯಪುರದಧಿನಾಥಂ
ಏದುಲಶಾಹಂ ಪಡೆವೆರ
ಸೈದಿ ಕರಂ ತಾನೆ ನಿಂದು ಗಡಿಯೊಳ್ ಖತಿಯಿಂ ೫

ಕರಿತುರಗಪತ್ತಿಸಹಿತಂ
ವರಶಾಹಿ ಬಲೂಲಖಾನ ಸೈದವಿಲಾಸಂ
ವೆರಸಿದ ಶರಜಾಖಾನನ
ನಿರದಲ್ಲಿಂದಂ ತೆರಳ್ಚೆ ಕೇಳ್ದೀ ಹದನಂ ೬

ಶಿವಭೂಪತಿಯ ತನೂಜಂ
ಸುವಿವೇಕಿಯೆನಿಪ್ಪ ಜಾತಪನ ಭದ್ರಪನಂ
ಜವದೆ ತೆರಳ್ಚಿಸಿಯವನೊಡ
ನವಿರಳಸೇನಾಸಮೂಹಮಂ ಬೀಳ್ಕೊಟ್ಟಂ ೭

ವ|| ಇಂತಾ ಭದ್ರಪ್ಪನಾಯಕಂ ಜಾತಪನ ಭದ್ರಪನೊಡನಗಣಿತಸೇನಾಸಮೂಹಮಂ ತೆರಳ್ಚಿ ಬೀಳ್ಕೊಟ್ಟು ತಾಂ ಭುವನಗಿರಿಯ ದುರ್ಗದೊಳ್ ನಿಲಲಂಬಲಿಗೊಳ್ಳದ ಬಳಿಯೊಳು ಭಯಸೈನ್ಯಕ್ಕಂ ಕೈಗಲಿಸಿ ಮಹಾದ್ಭುತಮಾದ ಯುದ್ಧಂ ಪಣ್ಣಲಾ ವೇಳೆಯೊಳ್ ಜಾತಪನ ಭದ್ರಪನಂ

ವಶಮಾಡಿಕೊಂಡು ಅವರ ರಾಜ್ಯವನ್ನು ತಲ್ಲಣಗೊಳಿಸಿದನು, ತಿರುಗಿ ಸೋದೆಗೆ ಬಂದು ಅವರ ಅಹಂಕಾರವನ್ನು ತಗ್ಗಿಸಿ ಅವರ ರಾಷ್ಟ್ರಗಳನ್ನು ಸಾಧಿಸಿದನು. ಹಾಗೂ ಸೈನ್ಯವನ್ನು ಕೂಡಿಕೊಂಡು ಸಬ್ಬುನೀಸ ಕೂಸಪ್ಪಯ್ಯನೊಡನೆ, ಹೊರಟು ದಿವಾಣದ ವಕೀಲಿತಿಯಾದ ಸೀರೆಡೆ ಕೋಟೆಗೆ ಮುತ್ತಿಗೆ ಹಾಕಿದನು. ಆ ಸಂದರ್ಭದಲ್ಲಿ-೫. ಸೋದೆಯವರು ಕಳುಹಿಸಿದ ಫಿರ್ಯಾದಿ (ದೂರು)ಯನ್ನು ಕೇಳಿ ಬಿಜಾಪುರದ ಒಡೆಯನಾದ ಏದುಲಶಾಹನು ಸೈನ್ಯ ಸಹಿತನಾಗಿ ಹೋಗಿ ತಾನೇ ಗಡಿಯಲ್ಲಿ ಕೋಪದಿಂದ ನಿಂತು. ೬. ಆನೆ, ಕುದುರೆ, ಕಾಲಾಳು ಸಹಿತ ಷಾಜಿ, ಬಲೂಲಖಾನ, ಸೈಯದ್‌ವಿಲಾಸ್ ಸಹಿತನಾದ ಶರಜಾಖಾನನನ್ನು ಅಲ್ಲಿಂದ ಮುಂದೆ ಕಳುಹಿಸಿದನು. ಈ ವಿಷಯವನ್ನು ಕೇಳಿ, ೭. ಶಿವಪ್ಪನಾಯಕನ ಮಗನಾದ ಭದ್ರಪ್ಪನಾಯಕನು ವಿವೇಕಿಯಾದ ಜಾತಪ್ಪನ ಭದ್ರಪ್ಪನನ್ನು ಶೀಘ್ರವಾಗಿ ಕಳುಹಿಸಿ, ಅವನೊಂದಿಗೆ ಹೆಚ್ಚಿನ ಸೇನಾ ಸಮೂಹವನ್ನು ಕಳುಹಿಸಿಕೊಟ್ಟನು. ವ|| ಈ ರೀತಿ ಭದ್ರಪ್ಪನಾಯಕನು ಜಾತಪ್ಪನ ಭದ್ರಪ್ಪನೊಡನೆ ಅಗಣಿತಸೇನಾ ಸಮೂಹವನ್ನು ಬೀಳ್ಕೊಟ್ಟನು, ತಾನು ಭುವನಗಿರಿಯ ದುರ್ಗದಲ್ಲಿ ನಿಲ್ಲಲು ಅಂಬಲಿಗೊಳದ ಸಮೀಪದಲ್ಲಿ ಉಭಯ ಸೈನ್ಯಕ್ಕೂ ಅದ್ಭುತವಾದ ಯುದ್ಧವುಂಟಾಗಿ ಹೋರಾಟ ನಡೆಯಿತು. ತುರುಕರ ಸೈನ್ಯವು ಅತಿ ವೇಗದಿಂದ ಧಾಳಿ ಮಾಡುತ್ತಾ ಬಿಲುಸಾಗರದ ಕಣಿವೆಯ

**ಮುರಿದಾ ತುರುಷ್ಕಸೈನ್ಯಮತಿ ತೀವ್ರಗತಿಯಿಂ ದಾಳಿವರಿಯುತ್ತೈದಿ ಬಿಲುಸಾಗರದ ಕಣಿವೆಯ ಮಾರ್ಗವಿಡಿದೈತಂದೊಳಪೊಕ್ಕು ತೊಡಿಸಿ ಹೊಳೆ ಪ್ರಾಂತದೊಳ್ ಪಾಳೆಯವನಿಳಿದು ಬಳಿಕಂ ವೇಣುಪುರದ ಪರಿಸ್ತರಣಕ್ಕೆ ಮುತ್ತಿಗೆಯನಿಕ್ಕಿ ತತ್ಪರಿಸ್ತರಣಮಂ ಕೊಳಲ್ ಪಿಂತಣಿಂ ಪಾತುಶಾಹನೈತಂದು ಶೋಭಕೃತ್ ಸಂವತ್ಸರದ ಕಾರ್ತಿಕ ಬಹುಳದಲ್ಲಿ ವೇಣುಪುರದ ಕೋಂಟೆಯರಮನೆಯೊಳಿಳಿದು ಬಳಿಕ್ಕಂ ಶಾಜಿ ಸೈದವಿಲಾಸ ಶರ್ಜಾಖಾನ ಮುಂತಾದ ವಜೀರರಂ ಸೈನ್ಯಂವೆರಸು ತೆರಳ್ದಲವರ್ಗಳೈತಂದು ಭುವನಗಿರಿಯ ದುರ್ಗಮಂ ವೇಢೈಸಲ್ ಭದ್ರಪ್ಪನಾಯಕಂ ಧೈರ್ಯಗುಂದದೆ ನಿತ್ತರಿಸಿ ನಿಂದು ಹೇರಳಮಾದ ಸೇನಾಸಮೂಹಂ ನೆರಹಿ ಪಥಪ್ರೈಕ ಕಂಡಿ ಕಣಿವೆಗಳಂ ಕಟ್ಟಿ ಕೈಗೆಯ್ದು ಮಹಾದ್ಭುತಮಾದ ಯುದ್ಧಮಂ ರಚಿಸಿ ಯವನ ಸೈನ್ಯಮಂ ಪುಡಿಗೈಸಿ ಮತ್ತಂ ತೋಪುಖಾನಿ ಸನ್ನಾಹತಂತ್ರಪ್ರಯೋಗ ಮುಖದಿಂ ಫೌಜಂ ಮೆದೆಗೆಡಹಿ ಪೆಣಂಗಳಂ ಹರಹಿ ತಚ್ಛರಜಾಖಾನ ಸೈದವಿಲಾಸ ಶಾಜಿ ಮುಂತಾದವರಂ ಪಿಂದೆಗೆಸಿ ಪಲಾಯನಂಗೊಳಿಸಿ ಬಳಿಕ್ಕಂ ಹೂವಯ್ಯ ಮುಂತಾದ ನಿಯೋಗಿಗಳಂ ಕಳುಹಿ ಸಂಧಾನವನೊಡರ್ಚಿಸಿ ಇಂತು ಸಮರ ಸಂಧಾನಮುಖದಿಂ ಪಾತುಶಾಹನಂ ಪಿಂದೆಗೆಸಿ ಪರಮಪ್ರಖ್ಯಾತಿಯಂ ಪಡೆದು ಬಳಿಕ್ಕಂ ಭುವನಗಿರಿಯ ದುರ್ಗದಿಂದೆಳ್ತಂದು ವೇಣುಪುರವರಮಂ ಸಾರ್ದು ಭುಜಬಲಪರಾಕ್ರಮಾತಿಶಯದಿಂ ರಾಜ್ಯಂಗೈಯ್ಯುತಿರ್ದನಂತುಮಲ್ಲದೆಯುಂ**

**ಕಂ॥ ವರತೀರ್ಥವಳ್ಳಿಯೊಳ್ ಭಾ
ಸುರ ತುಂಗಾತಟದೊಳೆಸೆವ ಭದ್ರಪಭೂಮೀ
ಶ್ವರನುರೆ ಸದ್ಬ್ರಾಹ್ಮಣ್ಯಾ
ಕ್ಕುರುತರ ಬಹುದಾನಧರ್ಮಮಂ ವಿರಚಿಸಿದಂ ೮**

ಮಾರ್ಗವನ್ನು ಆಕ್ರಮಿಸಿಕೊಂಡಿತು ಹಾಗೂ ಜಾತಪ್ಪನ ಭದ್ರಪ್ಪನನ್ನು ಸೋಲಿಸಿ ಹೊಳೆಯ ದಡದಲ್ಲಿ ಪಾಳೆಯವನ್ನು ಇಳಿಸಿ ವೇಣುಪುರದ ಕೋಟೆಗೆ ಮುತ್ತಿಗೆ ಹಾಕಿತು. ಹಿಂದಿನಿಂದ ಪಾತುಶಾಹನು ಬಂದು ಶೋಭಕೃತು ಸಂವತ್ಸರದ ಕಾರ್ತೀಕ ಬಹುಳದಲ್ಲಿ ವೇಣುಪುರದ ಅರಮನೆಯಲ್ಲಿ ಇಳಿದನು. ಅನಂತರ ಶಾಜಿ (ಷಾಜಿ), ಸೈಯದ್ ವಿಲಾಸ್, ಶರ್ಜಾಖಾನ್, (ಶರಜಾಖಾನ) ಮುಂತಾದ ಸೇನಾನಾಯಕರುಗಳು ಸೈನ್ಯವನ್ನು ಕೂಡಿಕೊಂಡು ಬಂದು ಭುವನಗಿರಿ ದುರ್ಗವನ್ನು (ಕೌಲೆದುರ್ಗವನ್ನು) ಆಕ್ರಮಿಸಿದರು. ಭದ್ರಪ್ಪನಾಯಕನು ಧೈರ್ಯಗೆಡದೆ ಹೇರಳವಾದ ಸೈನ್ಯವನ್ನು ಸೇರಿಸಿ, ಶತ್ರುಗಳು ಒಳ ನುಗ್ಗದಂತೆ ಒಳದಾರಿ, ಕಾಲುದಾರಿ, ಸಂದುಗಳು, ಕಣಿವೆಗಳು ಮುಂತಾದ ಮಾರ್ಗಗಳನ್ನು ಬಂದು ಮಾಡಿಸಿದನು. ಪ್ರಚಂಡ ಯುದ್ಧವನ್ನು ಕೈಗೊಂಡು ತುರುಕರ ಸೈನ್ಯವನ್ನು ಸೋಲಿಸಿದನು, ಫಿರಂಗಿಗಳು ತೋಪುಗಳು ಮುಂತಾದ ಮದ್ದು ಗುಂಡುಗಳ ಮಾರಕಾಸ್ತ್ರಗಳಿಂದಲೂ ಹಾಗೂ ಸಮರ ಸನ್ನಾಹಗಳಿಂದಲೂ, ತಂತ್ರ ಪ್ರಯೋಗಗಳಿಂದಲೂ ಸೈನಿಕರನ್ನು ಕೊಂದು ಹೆಣಗಳ ರಾಶಿ ಹಾಕಿದನು. ಆ ಶರಜಾಖಾನ್, ಸೈಯದ್ ವಿಲಾಸ್, ಶಾಜಿ ಮುಂತಾದವರನ್ನು ಹಿಂದಕ್ಕಟ್ಟಿ ಪಲಾಯನಗೊಳಿಸಿದನು. ಅನಂತರ ಹೂವಯ್ಯ ಮುಂತಾದ ನಿಯೋಗಿಗಳನ್ನು ಕಳುಹಿಸಿ ಸಂಧಾನವನ್ನು ನಡೆಸಿದನು, ಹೀಗೆ ನಾನಾ ಮುಖಗಳಿಂದ ಬಾದಷಹನನ್ನು ಹಿಂದಕ್ಕೆ ಹೋಗುವಂತೆ ಮಾಡಿ ಪರಮ ಪ್ರಖ್ಯಾತಿಯನ್ನು ಹೊಂದಿದನು, ಅನಂತರ ಭುವನಗಿರಿ ದುರ್ಗಕ್ಕೆ ಹೋಗಿ ಅಲ್ಲಿಂದ ವೇಣುಪುರಕ್ಕೆ ಬಂದನು, ಈ ರೀತಿ ಭುಜಬಲಪರಾಕ್ರಮಗಳಿಂದ ರಾಜ್ಯವನ್ನು ರಕ್ಷಿಸಿ ಕಾಪಾಡಿದನು. ಅಂತೂ ಅಲ್ಲದೆ-೮. ಶ್ರೇಷ್ಠವಾದ ತೀರ್ಥಹಳ್ಳಿಯಲ್ಲಿ

ಅವಿರಳತುಲಾಪುರುಷದಾ
ನವನೆಸೆವ ಹಿರಣ್ಯಗರ್ಭದಾನಪನೊಲವಿಂ
ಶಿವಭೂಪನ ಸುಕುಮಾರಂ
ತವೆ ವಿರಚಿಸಿ ಪರಮಸುಕೃತಗಳನಾರ್ಜಿಸಿದಂ ೯

ಕರಿ ತುರಗ ಗೋ ಹಿರಣ್ಯಾಂ
ಬರರಜತಸುರತ್ನಧಾನ್ಯ ಭೂ ಕನ್ಯಾಮಂ
ದಿರಮುಖ್ಯಮಾದ ನಾನಾ
ಸುರುಚಿರದಾನಗಳನಾ ನೃಪಂ ವಿರಚಿಸಿದಂ ೧೦

ಉಪನಯನಾದಿ ಸುದಾನವ
ನಪರಿಮಿತಾನ್ನಪ್ರದಾನಮಂ ಸಂತಸದಿಂ
ದುಪಮಾತೀತಂ ಶಿವಭೂ
ಮಿಪನ ಸುತಂ ರಚಿಸಿ ಪಡೆದನತಿಶಯ ಯಶಮಂ ೧೧

ಅವನೀಶ್ವರಕುಲತಿಲಕಂ
ಶಿವಭೂಪನ ಪುಣ್ಯಪುತ್ರ ಭದ್ರಪಭೂಪಂ
ತವೆ ದೇಶಕೋಶದರ್ಥಂ
ಸವೆವನ್ನಂ ದಾನಧರ್ಮಮಂ ವಿರಚಿಸಿದಂ ೧೨

ತರಣಿಜನಿಂ ಶಿಬಿ ಶಿಬಿಯಿಂ
ದುರುಬಲಿ ಬಲಿಯಿಂ ದಧೀಚಿಮುನಿಯಾ ಮುನಿಯಿಂ
ಕರಮೀವರೊಳಂ ಭದ್ರಪ
ಧರಣೀಶ್ವರನಧಿಕನೆನಿಸಿ ರಾರಾಜಿಸಿದಂ ೧೩

ಪ್ರಕಾಶಿಸುವ ತುಂಗಾತೀರದಲ್ಲಿ ಭದ್ರಪ್ಪನಾಯಕನು ಬ್ರಾಹ್ಮಣ ಸಮೂಹಕ್ಕೆ ಅನೇಕ ವಿಧವಾದ ದಾನಧರ್ಮಗಳನ್ನು ಮಾಡಿದನು. ೯. ಅತಿ ಹೆಚ್ಚಿನ ತುಲಾಪುರುಷದಾನವನ್ನೂ, ಹಿರಣ್ಯಗರ್ಭದಾನವನ್ನೂ ಶಿವಪ್ಪನಾಯಕನ ಮಗನಾದ ಭದ್ರಪ್ಪನಾಯಕನು ಪ್ರೀತಿಯಿಂದ ಮಾಡಿ ಹೆಚ್ಚಿನ ಪುಣ್ಯವನ್ನು ಸಂಪಾದಿಸಿದನು. ೧೦. ಆನೆ, ಕುದುರೆ, ಗೋವುಗಳು, ಚಿನ್ನ, ಬಟ್ಟೆ, ಬೆಳ್ಳಿ, ರತ್ನ, ಧಾನ್ಯ, ಭೂಮಿ, ಕನ್ಯೆ, ಮಂದಿರ (ಗೃಹ) ಮುಂತಾದ ನಾನಾ ವಿಧವಾದ ದಾನಗಳನ್ನು ರಾಜನು ಮಾಡಿಸಿದನು. ೧೧. ಉಪನಯನ ಮುಂತಾದ ಒಳ್ಳೆಯ ದಾನವನ್ನೂ, ಅಪರಿಮಿತವಾದ ಅನ್ನದಾನವನ್ನೂ, ಅಸಮಾನನಾದ ಶಿವಪ್ಪ ನಾಯಕನ ಮಗನು ಸಂತೋಷದಿಂದ ಮಾಡಿ ಹೆಚ್ಚಿನ ಕೀರ್ತಿಯನ್ನು ಪಡೆದನು. ೧೨. ರಾಜವಂಶದಲ್ಲಿ ತಿಲಕಪ್ರಾಯನೂ, ಶಿವಪ್ಪನಾಯಕನ ಪುಣ್ಯಪುತ್ರನೂ ಆದ ಭದ್ರಪ್ಪನಾಯಕನು ದೇಶ-ಕೋಶದ ಸಂಪತ್ತು ಸವೆಯುವವರೆಗೂ (ಇರುವವರೆಗೂ) ದಾನ-ಧರ್ಮವನ್ನು ಮಾಡಿದನು. ೧೩. ಕರ್ಣನಿಗಿಂತ ಶಿಬಿ ಚಕ್ರವರ್ತಿ, ಶಿಬಿ ಚಕ್ರವರ್ತಿಗಿಂತ ಬಲಿಚಕ್ರವರ್ತಿ, ಬಲಿಚಕ್ರವರ್ತಿಗಿಂತ ದಧೀಚಿಮುನಿ, ಆ ಮುನಿಗಿಂತ ಭದ್ರಪ್ಪನಾಯಕನು ದಾನಿಗಳಲ್ಲಿ

ವ|| ಮತ್ತಮದಲ್ಲದೆ

ಕಂ|| ಪರಮಶ್ರೋತ್ರಿಯರಹ ಭೂ
ಸುರರ್ಗಂ ಸುಕ್ಷೇತ್ರವೃತ್ತಿಗಳನಿತ್ತತಿಭಾ
ಸುರ ಭದ್ರರಾಜಪುರಮೆಂ
ಬುರುತರವಿತತಾಗ್ರಹಾರಮಮಂ ವಿರಚಿಸಿದಂ ೧೪

ವ|| ಮತ್ತಮದಲ್ಲದಾ ಭದ್ರಪ್ಪನಾಯಕಂ ಸ್ವಪಿತೃ ಶಿವಪ್ಪನಾಯಕನ ಪೆಸರೊಳ್ ಶಿವರಾಜಪುರಮೆಂಬಗ್ರಹಾರಮುಮಂ ಕನಿಷ್ಠಪಿತೃ ವೆಂಕಟಪ್ಪನಾಯಕನ ಪೆಸರೊಳ್ ವೆಂಕಟಪುರ ಮೆಂಬಗ್ರಹಾರಮಂ ವಿರಚಿಸಿ ವೃತ್ತಿಕ್ಷೇತ್ರಂಗಳಂ ಕಲ್ಪಿಸಿ ಭೂಸುರರ್ಗೆ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಮತ್ತಂ ಮುಳುವಾಗಿಲ ಕೃಷ್ಣಾನಂದಸ್ವಾಮಿಗಳ ಮಠಕ್ಕಂ ಹೇರಳವಾದ ಭೂಸ್ವಾಸ್ಥೆಯಂ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತತಿಶಯ ಸುಕೃತವಿಶೇಷಂಗಳನುಪಾರ್ಜಿಸಿದ ನಂತುಮಲ್ಲದೆಯುಂ

ಕಂ|| ನಾಶಂಬೊಂದದವೊಲ್ ವ
ರ್ಷಾಶನಮಂ ಬ್ರಾಹ್ಮಣೋತ್ತಮರ್ಗಾಗಿಸಿ ಮೇ
ಣಾ ಶಿವನೃಪನ ತನೂಜಂ
ಕಾಶೀಧರ್ಮವ ಸುಸಾಂಗಮೆನೆ ವಿರಚಿಸಿದಂ ೧೫

ವ|| ಮತ್ತಮದಲ್ಲದಾ ಭದ್ರಪ್ಪನಾಯಕನುಚಿತಮಾದ ಸ್ಥಳಂಗಳೊಳ್ ಮಹತ್ತಿನಮಠಂಗಳಂ ಕಟ್ಟಿಸಿ ಶಿವಜಂಗಮಧರ್ಮಾರ್ಥಂ ಭೂಸ್ವಾಸ್ಥೆಗಳಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ವಿಶೇಷಮಾಗಿ ಕಾಶೀಧರ್ಮಂಗಳ್ ನಡೆವಂತು ಕಟ್ಟಳೆಯಂ ರಚಿಸಿ ಪೂರ್ವಧರ್ಮಂಗಳಂ ಸಾಂಗಮಾಗಿ ನಡೆಸಿ ಕೊಲ್ಲೂರ ಮೂಕಾಂಬಿಕೆಯಮ್ಮನವರ ಪೂಜಾರ್ಥಂ ಹೇರಳಮಾದ ಭೂಸ್ವಾಸ್ಥೆಯಂ

ಶ್ರೇಷ್ಠನೆಂಬಂತೆ ಮೆರೆದನು. ವ|| ಮತ್ತು ಅದಲ್ಲದೆ ೧೪. ಶ್ರೋತ್ರಿಯರಾದ ಬ್ರಾಹ್ಮಣರಿಗೆ ಕ್ಷೇತ್ರವೃತ್ತಿಗಳನ್ನು ಕೊಟ್ಟು ಪ್ರಕಾಶಮಾನವಾದ ಭದ್ರರಾಜಪುರವೆಂಬ ವಿಶಾಲವಾದ ಅಗ್ರಹಾರವನ್ನು ನಿರ್ಮಿಸಿದನು. ವ|| ಮತ್ತೂ ಅಲ್ಲದೆ ಭದ್ರಪ್ಪನಾಯಕನು ತನ್ನ ತಂದೆ ಶಿವಪ್ಪನಾಯಕನ ಹೆಸರಿನಲ್ಲಿ ಶಿವರಾಜಪುರವೆಂಬ ಅಗ್ರಹಾರವನ್ನೂ, ಚಿಕ್ಕಪ್ಪ ವೆಂಕಟಪ್ಪನಾಯಕನ ಹೆಸರಿನಲ್ಲಿ ವೆಂಕಟಪುರವೆಂಬ ಅಗ್ರಹಾರವನ್ನೂ ನಿರ್ಮಿಸಿದನು. ಅಲ್ಲಿ ಉದ್ಯೋಗ ಮತ್ತು ಕ್ಷೇತ್ರಗಳನ್ನು ಕಲ್ಪಿಸಿಕೊಟ್ಟು ಬ್ರಾಹ್ಮಣರಿಗೆ ಶಿವಾರ್ಪಿತವಾಗಿ ಧಾರೆಯನ್ನೆರೆದು ಸ್ಥಿರವಾದ ಶಾಸನವನ್ನು ಬರೆಸಿದನು. ಮತ್ತು ಮುಳಬಾಗಿಲಲ್ಲಿರುವ ಕೃಷ್ಣಾನಂದ ಸ್ವಾಮಿಗಳ ಮಠಕ್ಕೆ ಹೇರಳವಾದ ಭೂಸ್ವಾಸ್ಥೆಯನ್ನು ಧಾರೆಯನ್ನೆರೆದು ಶಾಶ್ವತವಾದ ಶಾಸನವನ್ನು ಬರೆಸಿ ಅತಿಶಯ ಪುಣ್ಯವಿಶೇಷಗಳನ್ನು ಸಂಪಾದಿಸಿದನು. ಅಂತೂ ಅಲ್ಲದೆ ೧೫. ಬ್ರಾಹ್ಮಣೋತ್ತಮರಿಗೆ ಎಂದೆಂದೂ ನಾಶವಾಗದ ಹಾಗೆ ವರ್ಷಾಶನವನ್ನು ನಿಯಮಿಸಿ, ಆ ಶಿವಪ್ಪನಾಯಕನ ಮಗನು ಕಾಶೀಧರ್ಮವನ್ನು ಸಾಂಗವಾಗಿ ಮಾಡಿದನು ವ|| ಮತ್ತೂ ಅಲ್ಲದೆ ಭದ್ರಪ್ಪ ನಾಯಕನು ಉಚಿತವಾದ ಸ್ಥಳಗಳಲ್ಲಿ ಮಹತ್ತಿನ ಮಠಗಳನ್ನು ಕಟ್ಟಿಸಿ, ಶಿವಜಂಗಮ ಧರ್ಮಾರ್ಥವಾಗಿ ಭೂಸ್ವಾಸ್ಥೆಗಳನ್ನು ಶಿವಾರ್ಪಿತವಾಗಿ ಧಾರೆಯನ್ನೆರೆದನು, ಶಾಶ್ವತವಾಗಿರಲು ಶಾಸನವನ್ನು ಬರೆಸಿ, ವಿಶೇಷವಾಗಿ

ಕಂ॥ ಉರುತರ ಗರ್ವೋದ್ರೇಕದ
ಭರದಿಂ ಬೆರೆತಿರ್ಪ ತುಳುವಮನ್ನೆಯರದಟಂ
ಮುರಿದು ಪಣಗೊಂಡು ಮಾರ್ಮಲೆ
ತರಿಗಳ ನಿಗ್ರಹಿಸಿ ಬಾಹುಬಲಮಂ ಮೆರೆದಂ ೨೨

ವರರಾಜನೀತಿಮಾರ್ಗದ
ನಿರುಗೆಯನತಿಗಳೆಯದಿಂತು ತೇಜೋಬಲದಿಂ
ಧುರಧೀರ ಸೋಮಶೇಖರ
ಧರಣೀಶಂ ಧರ್ಮದಿಂದಮಿಳೆಯಂ ಪೊರೆದಂ ೨೩

ವ॥ ಇಂತಾ ಸೋಮಶೇಖರನಾಯಕಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತ್ತುಂ ಸುಖಮಿರ್ಪ ಕಾಲದೊಳ್ ಬರಮೆಮಾವುತನೆಂಬೊರ್ವ ಕ್ಷುಲ್ಲಕಂ ನೀವಾನೆಯ ಮದಮಂ ಸೇವಿಸಲ್ ಶರೀರದೊಳಾವುದರಲ್ಲಿಯುಂ ಬಲಕರವಾಗಿರ್ಪುದೆಂದೊಡವಡಿಸಲ್ ದೈವವಶದಿಂದಾ ದುರ್ಬೋಧೆಗೊಡವಟ್ಟು ಸೋಮಶೇಖರನಾಯಕನಾನೆಯ ಮದಮಂ ಸೇವಿಸಿ ತನ್ಮೂಲ ದಿಂದೊಗೆದುನ್ಮಾದಾವಸ್ಥೆಯಿಂ ಭ್ರಮಿತನುಂ ನಿತ್ಯಮವ್ಯವಸ್ಥಿತಚಿತ್ತನುಮಾಗಿ ಕ್ಷುದ್ರಜನರೊಡನೆ ಖೇಳಮೇಳದಿಂ ಸ್ವೇಚ್ಛಾವ್ಯಾಪಾರದಿಂ ಮನಂಬಂದಂತೆ ವರ್ತಿಸುತ್ತುಮಿರಲಾ ಪ್ರಸ್ತಾವದೊಳ್ ನಿಜಸಂಸ್ಥಾನದೊಳಿರ್ಪ ಕುಹಕಿನಿಯೋಗಿಗಳೊಡರ್ಚಿದ ಪಿತೂರಿಯಿಂ

ಕಂ॥ ವಿಜಯಪುರವರ್ತಿಯೆನಿಸುವ
ಮುಜಬರಖಾನಂ ತೆರಳ್ದಿ ಜಿನ್ನೋಪಂತಂ
ನಿಜಸೈನ್ಯಂವೆರಸೈತಂ
ದು ಜವದೆ ಮಹನವಮಿವಯಲೊಳಂ ತಾನಿರುತುಂ ೨೪

ನಾಯಕನಿಗೆ ಕೊಟ್ಟು ಆ ರಾಜ್ಯವನ್ನು ಸುಸ್ಥಿತಿಗೆ ನಿಲ್ಲಿಸಿದನು. ಹನುಮಪ್ಪನಾಯಕನನ್ನು ವೇಣುಪುರಕ್ಕೆ ಕರೆದುಕೊಂಡು ಹೋಗಿ ರಕ್ಷಿಸುತ್ತಾ ತರೀಕೆರೆ ಸಂಸ್ಥಾನವನ್ನು ಉದ್ಧರಿಸಿದನು. ಹೀಗೆ ಕೀರ್ತಿಯನ್ನು ಹೊಂದಿ ಶೋಭಿಸುತ್ತಿದ್ದನು. ಅಂತೂ ಅಲ್ಲದೆ ೨೨. ಹೆಚ್ಚಿನ ಅಹಂಕಾರದಿಂದ ಕೂಡಿದ್ದ ತುಳುವ ರಾಜರ ಪರಾಕ್ರಮವನ್ನು ಮುರಿದು ಅವರಿಂದ ಕಾಣಿಕೆಗಳನ್ನು ಪಡೆದು ಎದುರಾದ ಶತ್ರುಗಳನ್ನು ಸ್ಥೋಲಿಸಿ ಬಾಹುಬಲವನ್ನು ಮೆರೆದನು. ೨೩. ರಾಜರ ನೀತಿಮಾರ್ಗದ ವ್ಯವಸ್ಥೆಯನ್ನು ಮೀರದೆ, ಹೀಗೆ ತೇಜಸ್ಸಿನಿಂದ ರಣಧೀರನಾದ ಸೋಮಶೇಖರನಾಯಕನು ಭೂಮಿಯನ್ನು ಧರ್ಮದಿಂದ ಪಾಲಿಸಿದನು. ವ॥ ಈ ರೀತಿ ಸೋಮಶೇಖರನಾಯಕನು ಭೂಮಿಯನ್ನು ರಾಜ್ಯವನ್ನು ಪರಿಪಾಲಿಸುತ್ತಾ ಸುಖದಿಂದಿರುತ್ತಿರಲು, ಬರಮೆಮಾವುತನೆಂಬ ಕ್ಷುಲ್ಲಕನೊಬ್ಬನು ನಾಯಕನಿಗೆ ದುರ್ಬೋಧೆ ಮಾಡುತ್ತಾ ಆನೆಯ ಮದೋದಕವನ್ನು ಸೇವಿಸಿದರೆ ದೇಹದ ಎಲ್ಲ ಭಾಗಕ್ಕೂ ಬಲವು ಬರುವುದೆಂದು ಹೇಳಿ ಸೇವಿಸಲು ಒಡಂಬಡಿಸಿದನು. ದುರ್ದೈವವಶಾತ್ ಈ ದುರ್ಬೋಧೆಗೆ ಕಿವಿಗೊಟ್ಟು ಸೋಮಶೇಖರ ನಾಯಕನು ಆನೆಯ ಮದವನ್ನು ಸೇವಿಸಿ, ಇದರಿಂದ ಉಂಟಾದ ಉನ್ಮಾದಾವಸ್ಥೆಯಿಂದ ಭ್ರಮಿತನಾಗಿ, ಪ್ರತಿದಿನವೂ ಅವ್ಯವಸ್ಥಿತ ರೀತಿಯಲ್ಲಿ ಮನಸ್ಸುಳ್ಳವನಾಗಿ, ಕೀಳುಜನರೊಡನೆ ಓಡಾಡುತ್ತಿದ್ದನು. ಈ ರೀತಿ ದುರಾಚಾರದಿಂದ ಕೂಡಿ ಮನಸ್ಸಿಗೆ ಬಂದಂತೆ ವರ್ತಿಸುತ್ತಿರುವ ಸಂದರ್ಭದಲ್ಲಿ, ತನ್ನ ಸಂಸ್ಥಾನದಲ್ಲಿದ್ದ ಕುಹಕಿಗಳಾದ ನಿಯೋಗಿಗಳು ಹೂಡಿದ ಪಿತೂರಿ ಯಿಂದ-೨೪.

ಈ ಪರಿಯೊಳ್ ವರಭದ್ರಪ
ಭೂಪಂ ಭೂಪರ್ಗಧೀಶನೆಂದೆನಿಸಿ ಕರಂ
ವ್ಯಾಪಿಸೆ ಕೀರ್ತಿ ದಿಗಂತವ
ನಾ ಪುಣ್ಯಶ್ಲೋಕನಾಳ್ದನುರ್ವೀತಳಮಂ ೧೯

ವ|| ಈ ಭದ್ರಪ್ಪನಾಯಕರ್ ತಮಗೆ ಪಟ್ಟಮಾದ ಶಾಲಿವಾಹನ ಶಕ ವರ್ಷ ೧೫೮೪ನೆಯ ಪ್ಲವ ಸಂವತ್ಸರದ ಭಾದ್ರಪದ ಶುದ್ಧ ೧೫ ಯಾರಭ್ಯ ಶೋಭಕೃತ್ ಸಂವತ್ಸರದ ಫಾಲ್ಗುಣ ಶುದ್ಧ ೯ ವರ್ಷ ೨ ತಿಂಗಳು ೫ ದಿನ ೨೪ ಪರ್ಯಂತಂ ರಾಜ್ಯವಾಳಿ ಐಕ್ಯವಾದರ್.

ಭದ್ರಪ್ಪನಾಯಕಂ ರಾಜ್ಯಮಾಳ್ದ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷ ೧೫೮೬ನೆಯ ಶೋಭಕೃತ್ ಸಂವತ್ಸರದ ಫಾಲ್ಗುಣ ಶುದ್ಧ ೧೦ಯಲ್ಲಿ ಶಿವಪ್ಪನಾಯಕರ ಕನಿಷ್ಠಪುತ್ರರಾದ ಭದ್ರಪ್ಪನಾಯಕರ ಸಹೋದರರಾದ ಹಿರಿಯಾ ಸೋಮಶೇಖರನಾಯಕರ್ಗೆ ವೇಣುಪುರದರಮನೆಯಲ್ಲಿ ರಾಜಪಟ್ಟಂ ಆ ಸೋಮಶೇಖರನಾಯಕರ್ ತಮಗೆ ಪಟ್ಟಮಾದ ಶೋಭಕೃನ್ನಾಮ ಸಂವತ್ಸರದ ಫಾಲ್ಗುಣ ಶುದ್ಧ ೧೦ ಯಾರಭ್ಯ ವಿರೋಧಿಕೃತ್ ಸಂವತ್ಸರದ ಮಾರ್ಗಶಿರ ಶುದ್ಧ ೧೧ಯವರೆಗೆ ವರ್ಷ ೭ ತಿಂಗಳು ೯ ಪರ್ಯಂತಂ ಸದ್ಧರ್ಮದಿಂ ರಾಜ್ಯ ಪ್ರತಿಪಾಲನಂಗೈದರಾ ವಿವರಣಮಂ ಪದ್ಯರೂಪದಿಂ ಪೇಳ್ವೆನದೆಂತೆಂದೊಡೆ

ಕಂ|| ನಿರಪಮ ಭದ್ರಪ ಭೂಪನ
ತರುವಾಯಿಯೊಳಾತನನುಜನತಿಶಯತೇಜಂ
ವರಸೋಮಶೇಖರೇಂದ್ರಂ
ಸುರುಚಿರಗುಣಸಾಂದ್ರನಾಳ್ದನವನೀತಳಮಂ ೨೦

ಸಜ್ಜನರನ್ನು ಕಾಪಾಡುತ್ತಾ ಎಡಬಲದ ಅರಸರಲ್ಲಿ ಶ್ರೇಷ್ಠನಾಗಿ ಆ ರಾಜಶ್ರೇಷ್ಠನು ಮೆರೆದನು. ೧೯. ಈ ರೀತಿ ಭದ್ರಪ್ಪನಾಯಕನು ರಾಜರಿಗೆಲ್ಲ ಅಧೀಶನಾಗಿ ಕೀರ್ತಿಯು ದಿಗಂತವನ್ನು ವ್ಯಾಪಿಸಲು ಪುಣ್ಯಶ್ಲೋಕನಾಗಿ ಭೂಮಂಡಲವನ್ನು ಆಳಿದನು. ವ|| ಈ ಭದ್ರಪ್ಪನಾಯಕನು ತಮಗೆ ಪಟ್ಟಾಭಿಷೇಕವಾದ ಶಾಲಿವಾಹನ ಶಕ ವರ್ಷ ೧೫೮೪ನೆಯ ಪ್ಲವಸಂವತ್ಸರದ ಭಾದ್ರಪದ ಶುದ್ಧ ೧೫ ರಿಂದ ಶೋಭಕೃತು ಸಂವತ್ಸರದ ಫಾಲ್ಗುಣ ಶುದ್ಧ ೯ರವರೆಗೆ ವರ್ಷ ೨, ತಿಂಗಳು ೫ ದಿನ ೨೪ ಪರಿಯಂತರ ರಾಜ್ಯಭಾರ ಮಾಡಿ ಪರಂಧಾಮ ಹೊಂದಿದನು. ವ|| ಭದ್ರಪ್ಪನಾಯಕನು ರಾಜ್ಯವಾಳಿದ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೮೬ನೆಯ ಶೋಭಕೃತು ಸಂವತ್ಸರದ ಫಾಲ್ಗುಣ ಶುದ್ಧ೧೦ರಲ್ಲಿ ಶಿವಪ್ಪನಾಯಕರ ಕಿರಿಯ ಪುತ್ರನಾದ ಹಾಗೂ ಭದ್ರಪ್ಪನಾಯಕನ ಸಹೋದರನಾದ ಹಿರಿಯ ಸೋಮಶೇಖರನಾಯಕನಿಗೆ ವೇಣುಪುರದ (ಬಿದನೂರು) ಅರಮನೆಯಲ್ಲಿ ರಾಜ್ಯದ ಪಟ್ಟಾಭಿಷೇಕವಾಯಿತು. ಆ ಸೋಮಶೇಖರ ನಾಯಕನು ತನಗೆ ಪಟ್ಟವಾದ ಶೋಭಕೃತುನಾಮ ಸಂವತ್ಸರದ ಫಾಲ್ಗುಣ ಶುದ್ಧ ೧೦ ರಿಂದ ವಿರೋಧಿಕೃತು ಸಂವತ್ಸರದ ಮಾರ್ಗಶಿರ ಶುದ್ಧ ೧೧ರವರೆಗೆ ೭ ವರ್ಷ ಮತ್ತು ೯ ತಿಂಗಳವರೆಗೂ ಧರ್ಮದಿಂದ ರಾಜ್ಯವನ್ನು ಕಾಪಾಡಿದನು. ಆ ಸಂಗತಿಯ ವಿವರಣೆಯನ್ನು ಪದ್ಯರೂಪದಿಂದ ಹೇಳುವೆನು. ಅದು ಯಾವ ರೀತಿ ಎಂದರೆ ೨೦. ಅಸಮಾನನಾದ ಭದ್ರಪ್ಪನಾಯಕನ ತರುವಾಯ ಆತನ ತಮ್ಮನೂ ಹೆಚ್ಚಿನ ತೇಜಸ್ವಿಯೂ ಆದ

ಬಿಡಿಸಿ ಶಾಶ್ವತಮಾದ ಧರ್ಮಕೀರ್ತಿಸುಕೃತಂಗಳನುಪಾರ್ಜಿಸಿ ಮತ್ತಂ ದೇವತಾಯಾತ್ರೆಯಂ ರಚಿಸಲ್ವೇಳ್ಕೆಂದು ಮನಂದಂದು

ಕಂ॥ ವೇಣುಪುರದಿಂ ತೆರಳ್ದ
ಕ್ಷೀಣಬಲಂ ಭದ್ರಭೂಮಿಪಂ ಕೊಲ್ಲೂರಂ
ಮಾಣದೆ ಪೊರ್ದಿ ಬಳಿಕ್ಕಾ
ಕ್ಷೋಣೀಶ್ವರನೆಸೆವ ವಸುಪುರವನುರೆ ಸಾರ್ದಂ ೧೬

ಕ್ರೋಡಪುರವರಮನಾ ನೃಪ
ಚೂಡಾಮಣಿಯೆಯ್ದಿ ಸಾರ್ದು ಕೋಟೀಶ್ವರಮಂ
ನೀಡುಮಲ್ಲಿಂ ತೆರಳ್ದೊಳ್
ನಾಡೊಳಧಿಕಮೆನಿಪ ಶೃಂಗಪುರಮಂ ಪೊಕ್ಕಂ ೧೭

ವ॥ ಮತ್ತಮದಲ್ಲದಾ ಭದ್ರಪ್ಪನಾಯಕಂ ಶೃಂಗಪುರದಿಂ ತೆರಳ್ದು ಕಿಗ್ಗಮಂ ಸಾರ್ದು ಶೃಂಗೇಶ್ವರಸ್ವಾಮಿಯ ಸಂದರ್ಶನಂಗೈದಿಂತು ದೇವತಾಯಾತ್ರೆಯಂ ವಿರಚಿಸುತ್ತುಂ ತತ್ತದ್ದೇವತಾ ಸಂದರ್ಶನಂಗೈದು ತತ್ತತ್ಪೂಜಾರ್ಥಂ ಭೂಸ್ವಾಸ್ಥೆಗಳಂ ಬಿಡಿಸಿ ಲೋಪಮಾಗದಂತು ಪೂಜಾವಿಭವಗಳ್ ನಡೆವಂತು ನಿಯಾಮಕಂಗೈದು ಮರಳ್ದು ವೇಣುಪುರಮಂ ಸಾರ್ದನಂತರಂ

ಕಂ॥ ಪಲಬಗೆಯ ದಾನಧರ್ಮಂ
ಗಳನನುವಿಂ ರಚಿಸಿ ಖಳರನಲೆದುತ್ತಮರಂ
ಸಲಹುತ್ತೆಡಬಲದ ನೃಪತಿ
ಗಳೊಳಗ್ಗಳನೆನಿಸಿ ಮೆರೆದನಾ ನೃಪತಿಲಕಂ ೧೮

ಕಾಶೀಧರ್ಮಗಳು ನಡೆಯುವ ಹಾಗೆ ಕಟ್ಟಪ್ಪಣೆ ಮಾಡಿದನು. ಹಿಂದಿನ ಧರ್ಮಗಳನ್ನು ಸಾಂಗವಾಗಿ ನಡೆಸಿ ಶ್ರೀ ಕೊಲ್ಲೂರು ಮೂಕಾಂಬಿಕಾ ಅಮ್ಮನವರಿಗೆ ಪೂಜೆಗೋಸ್ಕರ ಹೇರಳವಾದ ಭೂಸ್ವಾಸ್ಥೆಯನ್ನು ಬಿಡಿಸಿದನು. ಶಾಶ್ವತವಾದ ಧರ್ಮ, ಕೀರ್ತಿ ಹಾಗೂ ಪುಣ್ಯಗಳನ್ನು ಸಂಪಾದಿಸಿ ಮತ್ತು ದೇವತಾಯಾತ್ರೆಯನ್ನು ಮಾಡಬೇಕೆಂದು ಮನದಲ್ಲಿ ಆಲೋಚಿಸಿ ೧೬. ಬಿದನೂರಿನಿಂದ ಹೊರಟು ಹೆಚ್ಚಿನ ಬಲಶಾಲಿಯಾದ ಭದ್ರಪ್ಪ ನಾಯಕನು ಕೊಲ್ಲೂರನ್ನು ಬಿಡದೆ ಸೇರಿ ಬಳಿಕ ಆ ರಾಜನು ಶೋಭಿಸುವ ವಸುಪುರವನ್ನು (ಬಸರೂರು) ಸೇರಿದನು. ೧೭. ರಾಜಶ್ರೇಷ್ಠನಾದ ಭದ್ರಪ್ಪನಾಯಕನು ಕ್ರೋಡಪುರವನ್ನು (ಕುಂದಾಪುರ) ಸೇರಿ, ಅಲ್ಲಿಂದ ಕೋಟೀಶ್ವರ (ಕೋಟೇಶ್ವರ)ವನ್ನು, ತಲುಪಿ, ಅಲ್ಲಿಂದ ನಾಡಿನಲ್ಲೇ ಶ್ರೇಷ್ಠವಾದ ಶೃಂಗಪುರವನ್ನು (ಶೃಂಗೇರಿ) ಸೇರಿದನು. ವ॥ ಮತ್ತೂ ಅಲ್ಲದೆ ಭದ್ರಪ್ಪನಾಯಕನು ಶೃಂಗಪುರಕ್ಕೆ ಹೊರಟು ಕಿಗ್ಗವನ್ನು ಸೇರಿ ಶೃಂಗೇಶ್ವರಸ್ವಾಮಿಯ ಸಂದರ್ಶನ ಮಾಡಿದನು. ಹೀಗೆ ತೀರ್ಥಯಾತ್ರೆ ಹಾಗೂ ಆಯಾ ದೇವತಾಸಂದರ್ಶನವನ್ನು ಕೈಗೊಳ್ಳುತ್ತಾ, ಆಯಾ ದೇವತೆಗಳ ಪೂಜೆಗಳಿಗೆ ಭೂಸ್ವಾಸ್ಥೆಗಳನ್ನು ನೀಡುತ್ತಾ, ಪೂಜೆಗಳಿಗೆ ಲೋಪವಾಗ ದಂತೆ ವೈಭವದಿಂದ ನಡೆಯಲು ಏರ್ಪಾಟುಮಾಡಿ ಮರಳಿ ವೇಣುಪುರವನ್ನು ಸೇರಿದನು ಅನಂತರ ೧೮. ಅನೇಕ ವಿಧವಾದ ದಾನಧರ್ಮಗಳನ್ನು ಮಾಡಿ ದುಷ್ಟರನ್ನು ಓಡಿಸಿ,

ಕಂ॥ ಉರುತರ ಗರ್ವೋದ್ರೇಕದ
ಭರದಿಂ ಬೆರೆತಿರ್ಪ ತುಳುವಮನ್ನೆಯರದಟಂ
ಮುರಿದು ಪಣಗೊಂಡು ಮಾರ್ಮಲೆ
ತರಿಗಳ ನಿಗ್ರಹಿಸಿ ಬಾಹುಬಲಮಂ ಮೆರೆದಂ ೨೨

ವರರಾಜನೀತಿಮಾರ್ಗದ
ನಿರುಗೆಯನತಿಗಳೆಯದಿಂತು ತೇಜೋಬಲದಿಂ
ಧುರಧೀರ ಸೋಮಶೇಖರ
ಧರಣೀಶಂ ಧರ್ಮದಿಂದಮಿಳೆಯಂ ಪೊರೆದಂ ೨೩

ವ॥ ಇಂತಾ ಸೋಮಶೇಖರನಾಯಕಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತ್ತುಂ ಸುಖಮಿರ್ಪ ಕಾಲದೊಳ್ ಬರಮೆಮಾವುತನೆಂಬೊರ್ವ ಕ್ಷುಲ್ಲಕಂ ನೀವಾನೆಯ ಮದಮಂ ಸೇವಿಸಲ್ ಶರೀರದೊಳಾವುದರಲ್ಲಿಯುಂ ಬಲಕರವಾಗಿರ್ಪುದೆಂದೊಡವಡಿಸಲ್ ದೈವವಶದಿಂದಾ ದುರ್ಬೋಧೆಗೊಡವಟ್ಟು ಸೋಮಶೇಖರನಾಯಕನಾನೆಯ ಮದಮಂ ಸೇವಿಸಿ ತನ್ಮೂಲ ದಿಂದೊಗೆದುನ್ಮಾದಾವಸ್ಥೆಯಿಂ ಭ್ರಮಿತನುಂ ನಿತ್ಯಮುವ್ಯವಸ್ಥಿತಚಿತ್ತನುಮಾಗಿ ಕ್ಷುದ್ರಜನರೊಡನೆ ಖೇಳಮೇಳದಿಂ ಸ್ವೇಚ್ಛಾವ್ಯಾಪಾರದಿಂ ಮನಂಬಂದಂತೆ ವರ್ತಿಸುತ್ತುಮಿರಲಾ ಪ್ರಸ್ತಾವದೊಳ್ ನಿಜಸಂಸ್ಥಾನದೊಳಿರ್ಪ ಕುಹಕಿನಿಯೋಗಿಗಳೊಡರ್ಚಿದ ಪಿತೂರಿಯಿಂ

ಕಂ॥ ವಿಜಯಪುರವರ್ತಿಯೆನಿಸುವ
ಮುಜಬರಖಾನಂ ತೆರಳ್ದಿ ಜಿನ್ನೋಪಂತಂ
ನಿಜಸೈನ್ಯಂವೆರಸೈತಂ
ದು ಜವದೆ ಮಹನವಮಿವಯಲೊಳಂ ತಾನಿರುತುಂ ೨೪

ನಾಯಕನಿಗೆ ಕೊಟ್ಟು ಆ ರಾಜ್ಯವನ್ನು ಸುಸ್ಥಿತಿಗೆ ನಿಲ್ಲಿಸಿದನು. ಹನುಮಪ್ಪನಾಯಕನನ್ನು ವೇಣುಪುರಕ್ಕೆ ಕರೆದುಕೊಂಡು ಹೋಗಿ ರಕ್ಷಿಸುತ್ತಾ ತರೀಕೆರೆ ಸಂಸ್ಥಾನವನ್ನು ಉದ್ಧರಿಸಿದನು. ಹೀಗೆ ಕೀರ್ತಿಯನ್ನು ಹೊಂದಿ ಶೋಭಿಸುತ್ತಿದ್ದನು. ಅಂತೂ ಅಲ್ಲದೆ ೨೨. ಹೆಚ್ಚಿನ ಅಹಂಕಾರದಿಂದ ಕೂಡಿದ್ದ ತುಳುವ ರಾಜರ ಪರಾಕ್ರಮವನ್ನು ಮುರಿದು ಅವರಿಂದ ಕಾಣಿಕೆಗಳನ್ನು ಪಡೆದು ಎದುರಾದ ಶತ್ರುಗಳನ್ನು ಸೋಲಿಸಿ ಬಾಹುಬಲವನ್ನು ಮೆರೆದನು. ೨೩. ರಾಜರ ನೀತಿಮಾರ್ಗದ ವ್ಯವಸ್ಥೆಯನ್ನು ಮೀರದೆ, ಹೀಗೆ ತೇಜಸ್ಸಿನಿಂದ ರಣಧೀರನಾದ ಸೋಮಶೇಖರನಾಯಕನು ಭೂಮಿಯನ್ನು ಧರ್ಮದಿಂದ ಪಾಲಿಸಿದನು. ವ॥ ಈ ರೀತಿ ಸೋಮಶೇಖರನಾಯಕನು ಭೂಮಿಯನ್ನು ರಾಜ್ಯವನ್ನು ಪರಿಪಾಲಿಸುತ್ತಾ ಸುಖದಿಂದಿರುತ್ತಿರಲು, ಬರಮೆಮಾವುತನೆಂಬ ಕ್ಷುಲ್ಲಕನೊಬ್ಬನು ನಾಯಕನಿಗೆ ದುರ್ಬೋಧೆ ಮಾಡುತ್ತಾ ಆನೆಯ ಮದೋದಕವನ್ನು ಸೇವಿಸಿದರೆ ದೇಹದ ಎಲ್ಲ ಭಾಗಕ್ಕೂ ಬಲವು ಬರುವುದೆಂದು ಹೇಳಿ ಸೇವಿಸಲು ಒಡಂಬಡಿಸಿದನು. ದುರ್ದೈವವಶಾತ್ ಈ ದುರ್ಬೋಧೆಗೆ ಕಿವಿಗೊಟ್ಟು ಸೋಮಶೇಖರ ನಾಯಕನು ಆನೆಯ ಮದವನ್ನು ಸೇವಿಸಿ, ಇದರಿಂದ ಉಂಟಾದ ಉನ್ಮಾದಾವಸ್ಥೆಯಿಂದ ಭ್ರಮಿತನಾಗಿ, ಪ್ರತಿದಿನವೂ ಅವ್ಯವಸ್ಥಿತ ರೀತಿಯಲ್ಲಿ ಮನಸ್ಸುಳ್ಳವನಾಗಿ, ಕೀಳುಜನರೊಡನೆ ಓಡಾಡುತ್ತಿದ್ದನು. ಈ ರೀತಿ ದುರಾಚಾರದಿಂದ ಕೂಡಿ ಮನಸ್ಸಿಗೆ ಬಂದಂತೆ ವರ್ತಿಸುತ್ತಿರುವ ಸಂದರ್ಭದಲ್ಲಿ, ತನ್ನ ಸಂಸ್ಥಾನದಲ್ಲಿದ್ದ ಕುಹಕಿಗಳಾದ ನಿಯೋಗಿಗಳು ಹೂಡಿದ ಪಿತೂರಿ ಯಿಂದ-೨೪.

ವ|| ತತ್ ಸೋಮಶೇಖರನಾಯಕಂ ತನ್ನಗ್ರಜ ಭದ್ರಪ್ಪನಾಳಿ ಬರುತಿರ್ದ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪರಿಜನ ಸೇವಕ ಜನರಂ ಪ್ರತಿಪಾಲನಂಗೆಯ್ಯುತ್ತಂ ಕೊಟ್ಟಪುರದ ಸಿದ್ದಪ್ಪಶೆಟ್ಟರ ಕುಮಾರಿ ಚೆನ್ನಮ್ಮಾಜಿಯೆಂಬ ಪೆಣ್ಮಣಿಯನತ್ಯಂತ ಸಂಭ್ರಮದಿಂ ವಿವಾಹಮಾಗಿ ತಮ್ಮ ಸೋದರತ್ತೆಗಳಾದ ಪರಮೇಶ್ವರಮ್ಮ ನಾಗಾಜಮ್ಮ ಭಗಿನಿ ಸಿದ್ದಮ್ಮ ದಾದಿ ಚನ್ನಮ್ಮನವರನತ್ಯಂತ ಪ್ರೀತಿಯಿಂ ನಡೆಸಿಕೊಳುತ್ತುಂ ಸುಖದಿಂ ರಾಜ್ಯಂಗೆಯುತ್ತುಮಿರ್ದು ಮೈಸೂರವರ ಮದೋದ್ರೇಕಂ ಮಗ್ಗಿಸಲ್ವೇಳ್ಕೆಂದು ಮನಂದಂದು ಸೈನ್ಯವೆರಸು ತೆರಳ್ದವರ ರಾಜ್ಯಮಂ ನಿಪಾತಮಂ ಗೈದನಂತರಂ

ಕಂ|| ಬೆಕ್ಕೋಡಂ ಬೆಳಗೋಡಂ
ಮಿಕ್ಕಾ ಕಣತೂರನಬ್ಬಿಣವ ಬೇಲೂರಂ
ಚಕ್ಕನೆ ಕೊಂಡಾ ಶಿವನೃಪ
ನಕ್ಕರಿನಣುಗಂ ಬಲಾತಿಶಯಮಂ ಮೆರೆದಂ ೨೧

ವ|| ಇಂತಾ ಸೋಮಶೇಖರನಾಯಕಂ ಮಾಯಾವಿಗಳ ಮದೋದ್ರೇಕಮಂ ನಿವಾರಿಸಿ ಮರಳ್ದು ವೇಣುಪುರವರಮಂ ಸಾರ್ದ ನಂತರಂ ತರಿಕೆರೆಯ ಹನುಮಪ್ಪನಾಯಕಂ ಸ್ವಪತ್ನಿಯಂ ವಧೆಗೈದು ಉನ್ಮಾದಾವಸ್ಥೆಯಿಂ ಭ್ರಾಂತನಾಗಿ ಅವ್ಯವಸ್ಥಿತವ್ಯಾಪಾರದಿಂ ವರ್ತಿಸುತಿರ್ಪ ವಾರ್ತೆಯುಂ ಕೇಳ್ದು ಸಬ್ಬುನೀಸ ಕೃಷ್ಣಪ್ಪಯ್ಯನಂ ಸೈನ್ಯಂಗೂಡಿಸಿ ತೆರಳ್ಚಿಸಿ ಕಳುಪಿ ಕಾಮನದುರ್ಗಮಂ ತೆಗೆದುಕೊಂಡಾತನ ಕುಮಾರ ಸೀತಾರಾಮಪ್ಪಯ್ಯನಾಯಕಂಗಿತ್ತು ತದ್ರಾಜ್ಯಮಂ ನೆಲೆಗೊಳಿಸಿ ನಿಲಿಸಿ ಹನುಮಪ್ಪನಾಯಕನಂ ವೇಣುಪುರಕ್ಕೈದಿಸಿ ಪೊರೆದೀ ಪ್ರಕಾರದಿಂ ತರಿಕೆರೆಸಂಸ್ಥಾನಮನುದ್ಧರಿಸಿ ಪರಮಪ್ರಖ್ಯಾತಿಯಂ ಪಡೆದು ವಿರಾಜಿಸುತ್ತಿರ್ದನಂತುಮಲ್ಲದೆಯುಂ

ಸೋಮಶೇಖರನಾಯಕನು ಸುಂದರನೂ ಮತ್ತು ಗುಣವಂತನೂ ಆಗಿ ಭೂಮಂಡಲವನ್ನು ಆಳಿದನು. ವ|| ಸೋಮಶೇಖರನಾಯಕನು ತನ್ನ ಅಣ್ಣ ಭದ್ರಪ್ಪನು ಆಳಿಕೊಂಡು ಬರುತ್ತಿದ್ದ ದೇಶ, ಕೋಶ, ಪ್ರಜೆಗಳು, ಪರಿವಾರಗಳು, ಕೋಟೆಗಳು, ಪರಿಜನರು, ಸೇವಕಜನರು ಮುಂತಾದವರನ್ನು ಪರಿಪಾಲಿಸುತ್ತಿದ್ದನು. ಈತನು ಕೋಟಿಪುರದ ಸಿದ್ಧಪ್ಪಶೆಟ್ಟರ ಮಗಳು ಚೆನ್ನಮ್ಮಾಜಿಯೆಂಬ ಕನ್ಯೆಯನ್ನು ಬಹು ಸಂಭ್ರಮದಿಂದ ವಿವಾಹವಾದನು. ತನ್ನ ಸೋದರತ್ತೆಯರಾದ ಪರಮೇಶ್ವರಮ್ಮ, ನಾಗಾಜಮ್ಮ, ಭಗಿನಿ ಸಿದ್ಧಮ್ಮನವರುಗಳನ್ನು ಹಾಗೂ ದಾದಿ ಚೆನ್ನಮ್ಮನನ್ನು ಅತ್ಯಂತ ಪ್ರೀತಿಯಿಂದ ನೋಡಿಕೊಳ್ಳುತ್ತಾ ಸುಖದಿಂದ ರಾಜ್ಯವನ್ನು ರಕ್ಷಿಸುತ್ತಿದ್ದನು. ಮೈಸೂರಿನವರ ಗರ್ವವನ್ನೂ ಹಾಗೂ ಮದವನ್ನೂ ತಗ್ಗಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಸೈನ್ಯವನ್ನು ಕೂಡಿಕೊಂಡು ಅವರನ್ನು ಸೋಲಿಸಿದನು. ಅನಂತರ ೨೧. ಬೆಕ್ಕೋಡು, ಬೆಳಗೋಡು, ಕಣತೂರು, ಅಬ್ಬಿಣ ಮತ್ತು ಬೇಲೂರನ್ನು ವಶಪಡಿಸಿಕೊಂಡು ಶಿವಪ್ಪನಾಯಕನ ಮಗನು ಪರಾಕ್ರಮಾತಿಶಯ ವನ್ನು ಮೆರೆದನು. ವ|| ಈ ರೀತಿ ಸೋಮಶೇಖರನಾಯಕನು ಮಾಯಾವಿಗಳ ಮದೋದ್ರೇಕವನ್ನು ಹೋಗಲಾಡಿಸಿ ತಿರುಗಿ ವೇಣುಪುರಕ್ಕೆ ಹಿಂದಿರುಗಿದನು. ಇಷ್ಟರಲ್ಲಿ ತರೀಕೆರೆಯ ಹನುಮಪ್ಪನಾಯಕನು ತನ್ನ ಹೆಂಡತಿಯನ್ನು ಕೊಂದು, ಉನ್ಮತ್ತನಾಗಿದ್ದು, ದುರಾಡಳಿತದಿಂದ ಸ್ವೇಚ್ಛಾಚಾರಿಯಾಗಿ ವರ್ತಿಸುತ್ತಿರುವನೆಂದು ವರ್ತಮಾನ ಬಂದಿತು. ಇದನ್ನು ಕೇಳಿ ಸಬ್ಬುನೀಸ ಕೃಷ್ಣಪ್ಪಯ್ಯನ ಮುಖಾಂತರ ಸೈನ್ಯವನ್ನು ಕೂಡಿಸಿ ಹೊರಡಿಸಿದನು. ಹೀಗೆ ಕಾಮನದುರ್ಗವನ್ನು ವಶಪಡಿಸಿಕೊಂಡು ಅದನ್ನು ಆತನ ಕುಮಾರ ಸೀತಾರಾಮಪ್ಪಯ್ಯ

ವ|| ತತ್ ಸೋಮಶೇಖರನಾಯಕರ ಪಟ್ಟದರಸಿ ಚನ್ನಮ್ಮಾಜಿ ತನ್ನ ಪತಿಗೆ ವಿಘಾತಿಯಂ ನೆನೆದ ಕುಹಕಿಜನರ್ಕಳನೀ ಪರಿಯಿಂ ಶಿಕ್ಷೆಗೈಸಿ ವರ್ತಿಸುತ್ತುಮಿರಲ್ ತದನಂತರಂ ರಾಜ್ಯಾಧಿಕಾರವನ ಪೇಕ್ಷಿಸಿ ಕುಹಕಿಗಳ ದುರ್ಬೋಧೆಗೊಳಗಾದ ಮೈದುನ ಬಸವಲಿಂಗನಾಯಕನಂ ಸ್ಥಳಾಂತರಕ್ಕೆ ಕಳುಪಿ ಅಂಗವಿಕಲನಂ ಮಾಡಿಸಿ ರಾಜ್ಯಂಗೆಯ್ಯುತ್ತುಮಿರಲ್ ಮತ್ತಂ ಕ್ವಚಿತ್‌ಕಾಲದೊಳ್ ಮರೆಬೋವ ಕಂದಾಚಾರದ ಲಕ್ಷ್ಮಯ್ಯ ವೀರಭದ್ರಯ್ಯ ಮುಂತಾದ ಕೆಲಂಬರ್ ಕೂಡಿ ಚನ್ನಮ್ಮಾಜಿಯಂ ಮಾಣ್ದು ರಾಜತ್ವಕ್ಕೆ ಬೇರೊರ್ವನಧಿಕಾರಿಯಂ ಮಾಡಿ ನಡೆಸಬೇಕೆಂದು ದುರಾಲೋಚನೆಯಂ ರಚಿಸಿ ಪ್ರಾಕು ಹೊಸಂಗಡಿ ಪರಿಸ್ತರಣದೊಳಂಕೆಯೊಳಿರುತಿರ್ದ ಅಂಧಕ ವೆಂಕಟಯ್ಯಂಗೆ ಪರಿಚರ್ಯಮಂ ರಚಿಸುತಿರ್ದ ಹೊರಹೆಣ್ಣಿನೊಳೊರ್ವ ಪುತ್ರನುದಿಸಿರಲಾತನಂ ಬರಿಸಿ ಆ ಅಂಧಕ ವೆಂಕಟಯ್ಯನೆಂಬಾತನಂಗುದ್ಭವಿಸಿದ ಕುಮಾರಂ ಹಿರಿಯ ವೆಂಕಟಪ್ಪನಾಯಕರ ಮಗಳು ಹಿರಿಯಮ್ಮನ ಮಗ ಸದಾಶಿವಯ್ಯಂಗೆ ಮೊಮ್ಮಗನಾದುದರಿಂದಮಾ ಅಂಧಕ ವೆಂಕಟಯ್ಯನ ಮಗಂಗೆ ಶಿವಪ್ಪನಾಯಕನೆಂದು ನಾಮಾಂಕಿತಮಂ ಮಾಡಿ ಆತನ ತಂದೆ ಅಂಧಕ ವೆಂಕಟಯ್ಯನೆಂಬಾತನುಮಂ ಸಮೀಪದೊಳಿಟ್ಟುಕೊಂಡು ಅವರ ಮುಖದಲ್ಲಿಯೆ ಸಂಸ್ಥಾನದ ಆರಭಾರಮಂ ನಡೆಸುತ್ತುಮಿರಲಾ ಕಾಲದೊಳ್

ಕಂ|| ಆ ಸೋಮಶೇಖರೋರ್ವೀ
ವಾಸವನಂತರದೆ ಸಾರ್ಧಮಾಸತ್ರಯಮಾ
ಭಾಸಂ ಶಿವನೃಪನೆಂದೆನಿ
ಪಾ ಸಮುಚಿತರಹಿತನಾತನರಸೆನಿಸಿರ್ದಂ ೩೦

ಓಡಿಸಿ, ಪರಮ ಧೂರ್ತನಾದ ಮೋಳೆಯಪ್ಪನ ಪರಾಕ್ರಮವನ್ನು ಕುಗ್ಗಿಸಿ ಕೆಲವು ದುಷ್ಟರ ಗುಂಪುಗಳಿಗೆ ಆ ಕ್ಷಣವೇ ಶಾಸ್ತಿ ಮಾಡಿಸಿದಳು. ವ|| ಆ ಸೋಮಶೇಖರನಾಯಕರ ಪಟ್ಟದರಸಿಯಾದ ಚೆನ್ನಮ್ಮಾಜಿಯು ತನ್ನ ಗಂಡನಿಗೆ ದ್ರೋಹ ಮಾಡಿದ ದ್ರೋಹಿಗಳನ್ನು ಈ ರೀತಿಯಿಂದ ಶಿಕ್ಷಿಸಿದಳು. ಆ ಬಳಿಕ ದುಷ್ಟಜನಗಳ ದುರ್ಬೋಧೆಗೆ ಒಳಗಾಗಿ ರಾಜ್ಯಾಧಿಕಾರವನ್ನು ಬಯಸುತ್ತಿದ್ದ ಮೈದುನನಾದ ಬಸವಲಿಂಗನಾಯಕನನ್ನು ಸ್ಥಳಾಂತರಿಸಿ ಅವನಿಗೆ ಅಂಗಚ್ಛೇದನ ಮಾಡಿಸಿದಳು. ಹೀಗೆ ರಾಜ್ಯವನ್ನು ನಡೆಸುತ್ತಿರಲು ಕೆಲವು ಕಾಲದಲ್ಲಿ ಮರೆಬೋವ ಕಂದಾಚಾರದ ಲಕ್ಷ್ಮಯ್ಯ, ವೀರಭದ್ರಯ್ಯ ಮುಂತಾದ ಹಲವರು ಕೂಡಿಕೊಂಡು ಚೆನ್ನಮ್ಮಾಜಿಯುನ್ನು ಬಿಟ್ಟು ಬೇರೊಬ್ಬನನ್ನು ಅಧಿಕಾರಿಯನ್ನಾಗಿ ಮಾಡಬೇಕೆಂದು ದುರಾಲೋಚನೆ ಮಾಡಿದರು. ಹಿಂದೆ ಹೊಸಂಗಡಿ ಕೋಟೆಯಲ್ಲಿ ಅಧೀನತೆಯಿಂದ ವಿಧೇಯನಾಗಿದ್ದ ಕುರುಡ ವೆಂಕಟಯ್ಯನಿಗೆ ಸೇವೆ ಮಾಡಿಕೊಂಡಿದ್ದ ದಾದಿಯಲ್ಲಿ ಒಬ್ಬ ಮಗನು ಜನಿಸಿದ್ದನು. ಆ ಕುವರನನ್ನು ಬರಮಾಡಿಕೊಂಡು ಆತನು ಹಿರಿಯ ವೆಂಕಟಪ್ಪನಾಯಕರ ಮಗಳಾದ ಹಿರಿಯಮ್ಮನ ಮಗ ಸದಾಶಿವಯ್ಯನಿಗೆ ಮೊಮ್ಮಗನಾದುದರಿಂದ ಆತನಿಗೆ ಶಿವಪ್ಪನಾಯಕನೆಂದು ನಾಮಕರಣ ಮಾಡಿದಳು. ಈ ಕುವರನ ತಂದೆ ಕುರುಡ ವೆಂಕಟಯ್ಯನನ್ನು ಮುಂದಿಟ್ಟುಕೊಂಡು ಸಂಸ್ಥಾನದ ಕಾರ್ಯಭಾರವನ್ನೆಲ್ಲವನ್ನೂ ನಡೆಸುತ್ತಿದ್ದಳು. ಆ ಕಾಲದಲ್ಲಿ ೩೦. ಆ ಸೋಮಶೇಖರ ನಾಯಕನ ಬಳಿಕ ಮೂರುವರೆ ತಿಂಗಳ ಕಾಲ ಈ ಶಿವಪ್ಪನಾಯಕನು ಅನರ್ಹನಾಗಿದ್ದರೂ

ವ|| ಇಂತು ಕುತ್ಸಿತ ಶಿವಪ್ಪನಾಯಕನೆಂಬಾತನಂ ಕರ್ತೃವಂ ಮಾಡಿಕೊಂಡು ವರ್ತಿಸುತ್ತುಮಿರುತಿರಲ್ ಬರಮೆಮಾವುತ ಮುಂತಾದ ಕುಹಕಿಗಳ್ ರಚಿಸಿದ ಫಿರಿಯಾದಿನಿಂ ನಿತ್ತರಿಸಲಮ್ಮದೆ ಸ್ಥಳದಿಂ ಮುನ್ನಮೆ ತೊಲಗಿ ಪೋಗಿ ಬಿಳಿಗಿಸೀಮೆಯ ಪ್ರಾಂತದೊಳಿರುತಿರ್ದ ಕಾಸರಗೋಡ ತಿಮ್ಮಣ್ಣನೆಂಬಾತನುಂ ಸಬ್ಬುನೀಸ ಕೃಷ್ಣಪ್ಪಯ್ಯನುಮೀ ವೃತ್ತಾಂತಮಂ ಕೇಳ್ದು ಜಾತಪ್ಪನ ಮಗ ಭದ್ರಯ್ಯನ ಮಗನಂ ರಾಜಾಧಿಕಾರಕ್ಕೆ ನಿಲಿಸಬೇಕೆಂದು ಆಲೋಚನೆಯಂ ಮಾಡಿಕೊಂಡು ಮೊದಲೈತಂದಿರ್ದ ಜನ್ನೋಪಂತನಂ ಸಹಾಯಕ್ಕೆ ಬರಿಸಿಕೊಂಡು ಬಿಳಿಗಿಯವರ ಸೈನ್ಯಮಂ ಕೂಡಿಕೊಂಡು ಬಂದು ನಿಲಲಾ ಕಾಲದೊಳ್ ಅಂಧಕ ವೆಂಕಟಯ್ಯನ ಮುಖದಿಂ ರಾಜ್ಯಾಧಿಕಾರಮಂ ನಡೆಸುತಿರ್ದ ಮರೆಬೋವಿ ಕಂದಾಚಾರದ ಲಕ್ಷ್ಮಯ್ಯ ವೀರಭದ್ರಯ್ಯ ಮುಂತಾದವರೊಂದಾಗಿ ಯುದ್ಧಮಂ ರಚಿಸವೇಳ್ಕೆಂದು ಯೋಚಿಸಿ ಮಂದಿಯಂ ಕೂಡಿಸಿ ಚಿಟನೀಸ ಗಿರಿಯಪ್ಪನಂ ಕಳುಹಲವರಿರ್ವರ್ಗೆ ಕೈಗಲಿಸಿ ತತ್‌ಸಂಗ್ರಾಮದೊಳಾ ಗಿರಿಯಪ್ಪನಮರಲೋಕಮಂ ಪಡೆಯಲೊಡ ನುಳಿದವರ್ ನಿತ್ತರಿಸಲಮ್ಮದೆ ಮುರಿದು ಹಳೆಪೈಕದ ಹೆಮ್ಮೆ ವೀರಭದ್ರಣ್ಣ ಸಹಿತಂ ತಿರುಗಿ ಬರಲೊಡನೆ ಮರೆಬೋವಿಯ ಶಿರಶ್ಚೇದನಮಂ ಮಾಡಿಸಿ, ಇಕ್ಕಟ್ಟಿನೊಳಿಂತಿರ್ಪ ವಿಷಮಕಾಲ ದೊಳಾವಿಲ್ಲಿರ್ಪುದನುಚಿತಮೆಂದು ಯೋಚಿಸಿ ಚನ್ನಮ್ಮಾಜಿ ವೇಣುಪುರದರಮನೆಯಿಂ ತೆರಳ್ದು ಭುವನಗಿರಿಯ ದುರ್ಗದರಮನೆಯಂ ಸಾರ್ದು, ಕಾಸರಗೋಡು ತಿಮ್ಮಣ್ಣನಾಯಕ ಸಬ್ಬುನೀಸ

ಅರಸನೆನಿಸಿದ್ದನು. ವ|| ಈ ರೀತಿ ಕುತ್ಸಿತ ಶಿವಪ್ಪನಾಯಕನೆಂಬಾತನನ್ನು ಅಧಿಕಾರಿಯನ್ನಾಗಿ ಮಾಡಿಕೊಂಡು ಕಾರ್ಯಭಾರವನ್ನು ನಿರ್ವಹಿಸುತ್ತಿರಲಾಗಿ, ಬರಮೇ ಮಾವುತ ಮುಂತಾದ ಕುಹಕಿಗಳ ಪಿತೂರಿಯಿಂದ ಓಡಿಹೋಗಿ, ಬಿಳಿಗಿ ಸೀಮೆಯ ಪ್ರಾಂತದಲ್ಲಿದ್ದ ಕಾಸರಗೋಡು ತಿಮ್ಮಣ್ಣ ಮತ್ತು ಸಬ್ಬುನೀಸ ಕೃಷ್ಣಪ್ಪಯ್ಯ ಎಂಬವರು ಈ ವೃತ್ತಾಂತವನ್ನು ತಿಳಿದುಕೊಂಡರು. ಅವರಿಬ್ಬರೂ ಜಾತಪ್ಪನ ಭದ್ರಪ್ಪನ ಮಗನನ್ನು ರಾಜ್ಯಾಧಿಕಾರಕ್ಕೆ ನಿಲ್ಲಿಸಬೇಕೆಂದು ಆಲೋಚಿಸಿ, ಮೊದಲು ಬಂದಿದ್ದ ಜನ್ನೋಪಂತನನ್ನು ಸಹಾಯಕ್ಕೆ ಬರಮಾಡಿಕೊಂಡು, ಬಿಳಗಿಯವರ ಸೈನ್ಯವನ್ನು ಕೂಡಿಕೊಂಡು ಎದುರಾಗಿ ನಿಂತರು. ಆ ಕಾಲದಲ್ಲಿ ಅಂಧಕ ವೆಂಕಟಯ್ಯನ ಮುಖಾಂತರ ರಾಜ್ಯಭಾರ ನಡೆಸುತ್ತಿದ್ದ ಮರೆಬೋವ, ಕಂದಾಚಾರದ ಲಕ್ಷ್ಮಯ್ಯ ಹಾಗೂ ವೀರಭದ್ರಯ್ಯ ಮುಂತಾದವರು ಸೇರಿಕೊಂಡು ಯುದ್ಧ ಹೂಡಲು ಯೋಚಿಸಿ ಮಂದಿಯನ್ನು ಕೂಡಿಸಿ ಚಿಟನೀಸ ಗಿರಿಯಪ್ಪನನ್ನು ಕಳುಹಿಸಿದರು. ಹೀಗೆ ಕೈಕೈ ಮಿಲಾಯಿಸಲು ಆ ಯುದ್ಧದಲ್ಲಿ ಗಿರಿಯಪ್ಪನು ಮೃತಿ ಹೊಂದಿದನು. ಉಳಿದವರು ನಿಲ್ಲಲಾರದೆ ಹೋದರು. ಧೈರ್ಯಗೆಡದೆ ಹಳೇಪೈಕದ ಹೆಮ್ಮೆ ವೀರಭದ್ರಣ್ಣನೊಡನೆ ತಿರುಗಿ ಬಂದು ಮರೆಬೋವಿಯ ಶಿರಚ್ಛೇದನವನ್ನು ಮಾಡಿಸಿದಳು. ಈ ಇಕ್ಕಟ್ಟಿನ ವಿಷಮ ಸನ್ನಿವೇಶದಲ್ಲಿ ತಾನು ಇಲ್ಲಿರುವುದು ಅನುಚಿತವೆಂದು ಬಗೆದು ಚೆನ್ನಮ್ಮಾಜಿಯು ವೇಣುಪುರದ ಅರಮನೆಯಿಂದ ಭುವನಗಿರಿಯ ದುರ್ಗದ ಅರಮನೆಗೆ ತೆರಳಿದಳು. ಅಲ್ಲಿ ಕಾಸರಗೋಡು ತಿಮ್ಮಣ್ಣನಾಯಕ ಹಾಗೂ ಸಬ್ಬುನೀಸ ಕೃಷ್ಣಪ್ಪಯ್ಯ ಮುಂತಾದವರನ್ನು ನಂಬಿಕೆಯ ಮೇಲೆ ಬರಮಾಡಿಕೊಂಡಳು. ಒಡನೆ ಅವರೆಲ್ಲರೂ ಮತ್ತು ಭುವನಗಿರಿ ದುರ್ಗದಲ್ಲಿರುವ ಪರಿವಾರದವರೆಲ್ಲರೂ ಒಂದಾಗಿ ಕಲೆತು ತಮ್ಮ ತಮ್ಮಲ್ಲಿರುವ ರಾಗ

ಕೃಷ್ಣಪ್ಪಯ್ಯರಂ ನಂಬುಗೆಯ ಮೇಲೆ ಬರಿಸಿಕೊಳಲೊಡನೆ ಅವರೆಲ್ಲರುಂ ಭುವನಗಿರಿಯ ದುರ್ಗದ ಪರಿವಾರದವರ್ ಸಹಿತವೊಂದಾಗಿ ತಮ್ಮ ತಮ್ಮ ರಾಗದ್ವೇಷಮಂ ಮಾಣ್ದು ಏಕಮತದಿಂ ಮಂತ್ರಾಲೋಚನೆಯಂ ರಚಿಸಿ ಜಾತಪ್ಪನ ಭದ್ರಯ್ಯನ ಮಗಂಗೆ ರಾಜ್ಯಾಧಿಕಾರಕ್ಕೆ ಸಂಬಂಧವಿಲ್ಲವೆಂಬುದಂ ನಿಶ್ಚಯಮಾಡಿ ಚನ್ನಮ್ಮಾಜಿಯವರ ಸಮ್ಮತಿಪಿಡಿದು ಅಂಧಕ ವೆಂಕಟಯ್ಯನುಮಂ ತತ್ಪುತ್ರನುಮಂ ಮುನ್ನಿನಂತೆ ಹೊಸಂಗಡಿಯ ಪರಿಸ್ತರಣಕ್ಕೆ ಕಳುಪಿ ತದ್ವೆಂಟಕಯ್ಯನ ಮಗ ಕುತ್ಸಿತ ಶಿವಪ್ಪನಾಯಕನೆಂಬಾ ತನನಂಗವಿಕಲನಂ ಮಾಡಿಸಿ ರಾಜತ್ವಕ್ಕೆ ಚನ್ನಮ್ಮಾಜಿಯನೆ ಅರ್ಹಳಂ ಮಾಡಿಕೊಂಡಿಂತು ಸಂಸ್ಥಾನದ ಕಾರ್ಯಂಗಳನೆಲ್ಲಮಂ ಚನ್ನಮ್ಮಾಜಿಯ ಮುಖದಲ್ಲಿಯೆ ನಡೆಸುತ್ತುಮಿರಲ್ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೯೪ನೆಯ ವಿರೋಧಿಕೃತ್ ಸಂವತ್ಸರದ ಫಾಲ್ಗುಣ ಬಹುಳ ೧೦ಯಲ್ಲಿ ಭುವನಗಿರಿಯ ದುರ್ಗದರಮನೆಯಲ್ಲಿ ಸೋಮಶೇಖರನಾಯಕರ ಪತ್ನಿ ಚನ್ನಮ್ಮಾಜಿಗೆ ರಾಜಪಟ್ಟಮಾಗಲೊಡನೆ ಚನ್ನಮ್ಮಾಜಿ ಸಕಲ ಸೈನ್ಯ ಸಮೇತಳಾಗಿ ಭುವನಗಿರಿದುರ್ಗದರಮನೆಯಿಂ ತೆರಳ್ದು ವೇಣುಪುರದ ಕೋಂಟೆಯಂ ಪೊಕ್ಕು ರಾಜಾಲಯಮಂ ಸಾರ್ದು

ಕಂ॥ ನೆರೆ ರಾಜಧರ್ಮಮಾರ್ಗದ
ಪರಿಯಂ ಬಲ್ಲವನಿಪಾಲರೊಳ್ ಮಿಗಿಲೆನಿಪಾ
ತರುಣೀನಿಕರಶಿರೋಮಣಿ
ವರಚನ್ನಮ್ಮಾಜಿ ಕೆಳದಿಯಿಳೆಗರಸಾದಳ್ ೩೧

ದ್ವೇಷಾದಿಗಳನ್ನು ಮರೆತು ಒಮ್ಮತದಿಂದ ಮಂತ್ರಾಲೋಚನೆಯನ್ನು ಕೈಗೊಂಡರು. ಜಾತಪ್ಪನ ಭದ್ರಯ್ಯನ ಮಗನಿಗೆ ರಾಜ್ಯಾಧಿಕಾರಕ್ಕೆ ಸಂಬಂಧವಿಲ್ಲವೆಂಬುದನ್ನು ನಿಶ್ಚಯ ಮಾಡಿಕೊಂಡು ಚೆನ್ನಮ್ಮಾಜಿಯವರ ಸಮ್ಮತಿಯಿಂದ ಅಂಧಕ ವೆಂಕಟಯ್ಯನನ್ನೂ ಹಾಗೂ ಅವನ ಮಗನನ್ನೂ ಮುಂಚಿನಂತೆ ಹೊಸಂಗಡಿಯ ಕೋಟೆಗೆ ಕಳುಹಿಸಿದರು. ವೆಂಕಟಯ್ಯನ ಮಗ ಕುತ್ಸಿತ ಶಿವಪ್ಪನಾಯಕನೆಂಬಾತನನ್ನು ಅಂಗವಿಕಲನನ್ನಾಗಿ ಮಾಡಿಸಿ, ಈ ರಾಜ್ಯಕ್ಕೆ ಚೆನ್ನಮ್ಮಾಜಿಯೇ ಅರ್ಹಳೆಂಬುದಾಗಿ ನಿಶ್ಚಯಿಸಿ, ಅವಳಿಗೆ ಅಧಿಕಾರವಿತ್ತು, ಸಂಸ್ಥಾನದ ಕಾರ್ಯಗಳನ್ನೆಲ್ಲವನ್ನೂ ಚೆನ್ನಮ್ಮಾಜಿಯ ಮುಖದಿಂದಲೇ ನಡೆಸುತ್ತಿದ್ದರು. ಹೀಗೆ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೯೪ನೆಯ ವಿರೋಧಿಕೃತ್ ಸಂವತ್ಸರದ ಫಾಲ್ಗುಣ ಬಹುಳ ೧೦ರಲ್ಲಿ ಭುವನಗಿರಿಯ ದುರ್ಗದ ಅರಮನೆಯಲ್ಲಿ ಸೋಮಶೇಖರನಾಯಕರ ಪತ್ನಿ ಚೆನ್ನಮ್ಮಾಜಿಗೆ ರಾಜ್ಯಾಭಿಷೇಕವಾದ ಕೂಡಲೇ, ಚೆನ್ನಮ್ಮಾಜಿಯು ಸಕಲ ಸೈನ್ಯ ಸಹಿತಳಾಗಿ ಭುವನಗಿರಿದುರ್ಗದ ಅರಮನೆಯಿಂದ ತೆರಳಿ ವೇಣುಪುರದ (ಬಿದನೂರಿನ) ಕೋಟೆಯನ್ನು ಸೇರಿ ರಾಜಾಲಯವನ್ನು ಹೊಕ್ಕಳು. ೩೧. ರಾಜಧರ್ಮಮಾರ್ಗದ ರೀತಿಯನ್ನು ತಿಳಿದಿರುವ ಅರಸರಲ್ಲಿ ಮೇಲು ಎನ್ನಿಸುವಂತೆ ಆ ನಾರೀರತ್ನ ಚೆನ್ನಮ್ಮಾಜಿಯು ಕೆಳದಿ ರಾಜ್ಯಕ್ಕೆ ಅರಸಾದಳು.

# ನವಮಾಶ್ವಾಸಂ

ಕಂ|| ವರ ಸೋಮಶೇಖರೇಂದ್ರನ
ತರುವಾಯಿಯೊಳಾಳ್ದ ಕುಶಿವನೃಪನಂತರಮಾ
ದೊರೆ ಸೋಮಶೇಖರಾಂಗನೆ
ಸುರುಚಿರ ಚನ್ನಾಂಬೆಯಾಳ್ದಳುರ್ವೀತಳಮಂ ೧

ವ|| ತಮಗೆ ರಾಜಪಟ್ಟಮಾದ ತರುವಾಯಮಾ ಚನ್ನಮ್ಮಾಜಿಯವರ್ ತಮ್ಮರಸ ಸೋಮಶೇಖರನಾಯಕರಾಳಿಬರುತ್ತಿರ್ದ ರಾಜ್ಯ ರಾಷ್ಟ್ರ ಕೋಶ ಪ್ರಜೆ ಪರಿವಾರ ಪರಿಜನ ಪುರಜನ ನಿಯೋಗಿಜನ ಮಂತ್ರಿಜನ ದೇಶಸೇವಾಜನರ್ ಮುಂತಾದ ಸಮಸ್ತ ಜನರಂ ಸಂರಕ್ಷಿಸುತುಂ ರಾಜ್ಯವಾಳುತಿರ್ದು ಮುಂದೆ ಕೆಳದಿ ಧರ್ಮಸಂಸ್ಥಾನದ ರಾಜತ್ವಕರ್ಹನಾದೊರ್ವ ಕುಮಾರ ನಾಗಲ್ವೇಳ್ಕೆಂದು ಮಂತ್ರಿಜನ ನಿಯೋಗಿಜನ ಬಂಧುಜನರೊಳಾಲೋಚಿಸಿ ಶಿವಪ್ಪನಾಯಕರ ಜ್ಯೇಷ್ಠಪುತ್ರರಾದ ಭದ್ರಪ್ಪನಾಯಕರುಂ ತಮ್ಮರಸ ಸೋಮಶೇಖರನಾಯಕರುಂ ಸಹೋದರರಾದುದ ರಿಂದೆಯುಂ ಆ ಭದ್ರಪ್ಪನಾಯಕರ ಪತ್ನಿ ಸಿದ್ದಮ್ಮಾಜಿಯವರ್ ನಂಬೆಣ್ಣ ಶೆಟ್ಟರ ಮಗ ಮರಿಯಪ್ಪಶೆಟ್ಟರ ಪತ್ನಿಯಾದ ಗೌರಮ್ಮನವರ್ ಈಯಿರ್ವರುಮೇಕೋದರಿಯರಾದುದರಿಂದೆಯುಂ ಆ ಮರಿಯಪ್ಪ ಶೆಟ್ಟರ ಪತ್ನಿ ಗೌರಮ್ಮನ ಕುಮಾರರಾದ ಬಸಪ್ಪನವರ್ ಶಿವಪ್ಪನಾಯಕರ ಜ್ಯೇಷ್ಠಕುಮಾರ ಭದ್ರಪ್ಪನಾಯಕರ್ಗೆ ಪುತ್ರವಾವೆಯಾದ ಕಾರಣಮಾ ಭದ್ರಪ್ಪನಾಯಕರನುಜನಾದ ತಮಗೆ ವಲ್ಲಭನಾದ

೧. ಶ್ರೇಷ್ಠವಾದ ಸೋಮಶೇಖರನಾಯಕನ ಅನಂತರ ಆಳಿದಂತಹ ಕುತ್ಸಿತ ಶಿವಪ್ಪ ನಾಯಕನ ತರುವಾಯ ಸೋಮಶೇಖರನಾಯಕನ ಪತ್ನಿ ಚೆನ್ನಮ್ಮನು ರಾಜ್ಯವನ್ನು ಆಳಿದಳು.
ವ|| ತನಗೆ ರಾಜ್ಯಾಭಿಷೇಕವಾದ ನಂತರ ಚೆನ್ನಮ್ಮಾಜಿಯು ತನ್ನ ಪತಿಯಾದ ಸೋಮಶೇಖರನಾಯಕನು ಆಳಿಕೊಂಡು ಬರುತ್ತಿದ್ದ ರಾಜ್ಯ, ರಾಷ್ಟ್ರ, ಭಂಡಾರ, ಪ್ರಜೆ, ಪರಿವಾರರು, ಪರಿಜನರು, ಪುರಜನರು, ನಿಯೋಗಿ ಜನಗಳು, ಮಂತ್ರಿಜನಗಳು, ದೇಶ ಸೇವಾಜನರುಗಳು ಮುಂತಾದ ಸಮಸ್ತ ಜನಗಳನ್ನು ಕಾಪಾಡುತ್ತಾ ರಾಜ್ಯವಾಳುತ್ತಿದ್ದಳು. ಮುಂದೆ ಕೆಳದಿ ಧರ್ಮಸಂಸ್ಥಾನಕ್ಕೆ ಹಾಗೂ ಪಟ್ಟಾಭಿಷೇಕಕ್ಕೆ ಅರ್ಹನಾದವನೊಬ್ಬನನ್ನು ಕುಮಾರನನ್ನಾಗಿ ಮಾಡಿಕೊಳ್ಳಬೇಕೆಂದು ಮಂತ್ರಿಗಳು, ನಿಯೋಗಿಗಳು ಹಾಗೂ ಬಂಧುವರ್ಗದವರೊಡನೆ ಸಮಾಲೋಚಿಸಿದಳು, ಶಿವಪ್ಪನಾಯಕನ ಜ್ಯೇಷ್ಠಪುತ್ರ ಭದ್ರಪ್ಪನಾಯಕನು ಚೆನ್ನಮ್ಮಾಜಿಯ ಪತಿ ಸೋಮಶೇಖರನಾಯಕನಿಗೆ ಅಣ್ಣನಾಗಿದ್ದನು. ಆ ಭದ್ರಪ್ಪನಾಯಕನ ಪತ್ನಿ ಸಿದ್ಧಮ್ಮಾಜಿಯೂ ಹಾಗೂ ನಂಬೆಣ್ಣಶೆಟ್ಟರ ಮಗ ಮರಿಯಪ್ಪಶೆಟ್ಟರ ಪತ್ನಿಯಾದ ಗೌರಮ್ಮನೂ ಈ ಇಬ್ಬರೂ ಒಂದೇ ಹೊಟ್ಟೆಯಲ್ಲಿ ಹುಟ್ಟಿದವರಾಗಿದ್ದರು. ಆ ಮರಿಯಪ್ಪಶೆಟ್ಟರ ಪತ್ನಿ ಗೌರಮ್ಮನ ಕುಮಾರನಾದ ಬಸವಪ್ಪನು ಶಿವಪ್ಪನಾಯಕರ ಜ್ಯೇಷ್ಠಪುತ್ರ ಭದ್ರಪ್ಪನಾಯಕನಿಗೆ ಮಗನ ವಾವೆ ಆಗಬೇಕು. ಈ ಕಾರಣದಿಂದ ಭದ್ರಪ್ಪನಾಯಕನ ಸಹೋದರನಾದ ಹಾಗೂ ತಮಗೆ ಪತಿಯಾದ ಸೋಮಶೇಖರನಾಯಕನಿಗೆ ಮಗನ ಸಂಬಂಧವೇ ಆದುದರಿಂದ ಮರಿಯಪ್ಪಶೆಟ್ಟರ ಮಗ ಬಸವಪ್ಪನು ಕೆಳದಿ ಧರ್ಮಸಂಸ್ಥಾನದ ರಾಜ್ಯಾಭಿಷೇಕದ ಹಕ್ಕುದಾರಿಕೆಗೆ

ಸೋಮಶೇಖರನಾಯಕರ್ಗಂ ಪುತ್ರವಾವೆಯೇ ಆದುದರಿಂದಮಾ ಮರಿಯಪ್ಪಶೆಟ್ಟರ ಕುಮಾರ ಬಸವಪ್ಪನವರ್ ಕೆಳದಿ ಧರ್ಮಸಂಸ್ಥಾನದ ರಾಜತ್ವಕ್ಕರ್ಹರಹುದೆಂದು ಬಸವಪ್ಪನವರಂ ರಾಜತ್ವಕ್ಕೆ ನಿಲಿಸಬೇಕೆಂದು ನಿಶ್ಚಯಂಗೈದು ಸರ್ವಜನ ಸಮ್ಮತಿಯಿಂದಮಾ ಬಸವಪ್ಪನವರ್ಗೆ ಕೆಳದಿನೃಪಾಲ ಬಸವಪ್ಪ ನಾಯಕರೆಂದು ನಾಮಕರಣಂ ರಚಿಸಿ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೫೫ನೆಯ ಪರೀಧಾವಿನಾಮ ಸಂವತ್ಸರದ ಶ್ರಾವಣ ಶುದ್ಧ ೧೪ ನೆಯ ದಿವಸಮಾ ಬಸವಪ್ಪನಾಯಕರಂ ಗೃಹೀತಪುತ್ರನಂ ಮಾಡಿಕೊಂಡು ಸರ್ವಸಂಭ್ರಮದಿಂದಮರಮನೆಗೆ ಬಿಜಯಂಗೈಸಿ ತಂದಾ ಕುಮಾರಬಸವಪ್ಪನಾಯಕರಂ ಓದು ಸಾಧನೆ ಗಜತುರಗವೈಹಾಳಿ ಮುಂತಾದ ರಾಜೋಪಯುಕ್ತಮಾದ ಸಮಸ್ತ ವಿದ್ಯಂಗಳಲ್ಲಿಯುಂ ಪರಿಣತರಂ ಮಾಡಿಸಿ ಕುಮಾರ ಬಸವಪ್ಪನಾಯಕರಂ ಮುಂದಿಟ್ಟುಕೊಂಡು ಸದ್ಧರ್ಮದಿಂ ರಾಜ್ಯಂಗೆಯ್ಯುತ್ತುಮಿರ್ದು ಕಾಸರಗೋಡು ತಿಮ್ಮಣ್ಣನಾಯಕನೊಡನೆ ಸೇನಾಸಮೂಹಮಂ ತೆರಳ್ಚಿಸಿ ಕಳುಹಿ

ಕಂ॥ ಯವನರ್ ಬಿಡದಾಕ್ರಮಿಸಿದ
ತವನಿಧಿ ಹೊನ್ನಾಳಿ ಜಡೆಯದುರುಕೋಂಟೆಗಳಂ
ಬವರದೊಳ್ ಕೊಂಡ್ವಿದ್ಧ
ಶ್ರವಣರ ಕಾಲ್ದೆಗೆಸಿ ಬಾಹುಬಲಮಂ ಮೆರೆದಳ್ ೨

ವ॥ ಮತ್ತಮಲ್ಲದೆ ಸರಪನಮಲುಕನೆಂಬ ತಾಮ್ರಮುಖಂ ತಾಂ ದಿವಾಣದ ವಕೀಲಿಯಾಗಿ ವರ್ತಿಸುತ್ತುಮಿರ್ದು ಅವಂ ಮುನ್ನಾಳ್ದ ಪಂಚಮಹಲೊಳಗಣ ಮಿಡಿಜೆಯೆಂಬ ಪರಿಸ್ತರಣಮಂ ಸೋದೆಯವರಾಕ್ರಮಿಸಿ ಹನುಮನಾಯಕನೆಂಬಧಿಕಾರಿಯನಿಟ್ಟು ತಮ್ಮಧೀನಮಂ ಮಾಡಿಕೊಂಡು

ಅರ್ಹನಾಗಿರುವುದರಿಂದ ಬಸವಪ್ಪನನ್ನು ಪಟ್ಟಾಭಿಷೇಕಕ್ಕೆ ನಿಲ್ಲಿಸಬೇಕೆಂದು ನಿಶ್ಚಯ ಮಾಡಿದಳು. ಸರ್ವಜನರ ಸಮ್ಮತಿಗಳೊಡನೆ ಆ ಬಸವಪ್ಪನಿಗೆ "ಕೆಳದಿ ನೃಪಾಲ ಬಸವಪ್ಪನಾಯಕ"ರೆಂದು ನಾಮಕರಣ ಮಾಡಿದಳು. ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೫೫ನೆಯ ಪರೀಧಾವಿನಾಮಸಂವತ್ಸರದ ಶ್ರಾವಣ ಶುದ್ಧ ೧೪ನೆಯ ದಿವಸದಲ್ಲಿ ಆ ಬಸವಪ್ಪ ನಾಯಕನನ್ನು ದತ್ತುಮಗನನ್ನಾಗಿ ಮಾಡಿಕೊಂಡು ಅರಮನೆಗೆ ಕರೆಸಿಕೊಂಡು ಪಾಲಿಸಿದಳು, ಆ ಕುಮಾರ ಬಸವಪ್ಪನಾಯಕನಿಗೆ ವಿದ್ಯಾಭ್ಯಾಸ, ಶಾಸ್ತ್ರಾಭ್ಯಾಸ, ಆನೆ-ಕುದುರೆಗಳ ಸವಾರಿ ಮುಂತಾದ ರಾಜೋಪಯುಕ್ತವಾದ ಸಮಸ್ತ ವಿದ್ಯೆಗಳಲ್ಲಿ ನಿಪುಣನನ್ನಾಗಿ ಮಾಡಿದಳು. ಈ ಕುಮಾರನನ್ನು ಮುಂದೆ ಮಾಡಿಕೊಂಡು ಚನ್ನಮ್ಮಾಜಿಯು ಸದ್ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿದ್ದಳು. ಆಮೇಲೆ ಕಾಸರಗೋಡು ತಿಮ್ಮಣ್ಣನಾಯಕನೊಡನೆ ಸೇನೆಯನ್ನು ಹೊರಡಿಸಿ ಕಳುಹಿಸಿ ೨. ಮುಸಲ್ಮಾನರು ಆಕ್ರಮಿಸಿಕೊಂಡಿದ್ದ ತವನಿಧಿ, ಹೊನ್ನಾಳಿ ಜಡೆಯ ಎದುರು ಕೋಟೆಗಳನ್ನು ಯುದ್ಧದ ಮೂಲಕ ವಶಪಡಿಸಿಕೊಂಡು, ತುರುಕರನ್ನು ಓಡಿಸಿ ತೋಳ್ಬಲವನ್ನು ಮೆರೆದಳು. ವ॥ ಮತ್ತು ಅಲ್ಲದೆ ಸರ್‌ಪನ್‌ಮಲ್ಲಿಕ್ ಎಂಬ ಐರೋಪ್ಯದವನು ದಿವಾನನಾಗಿಯೂ ಹಾಗೂ ಆಪ್ತಕಾರ್ಯದರ್ಶಿಯಾಗಿಯೂ ಇರುತ್ತಿದ್ದು, ಅವನು ಮುಂಚೆ ಆಳುತ್ತಿದ್ದ ಪಂಚಮಹಲ್ಲಿನ ಮಿಡಿಜೆ ಎಂಬ ಕೋಟೆಯನ್ನು ಸೋದೆಯವರು ಆಕ್ರಮಿಸಿಕೊಂಡಿದ್ದರು. ಅವರು ಹನುಮನಾಯಕನೆಂಬ ಅಧಿಕಾರಿಯನ್ನು ಅಲ್ಲಿಟ್ಟು ಸ್ವಾಧೀನ ಮಾಡಿಕೊಂಡಿದ್ದರು.

ವರ್ತಿಸುತ್ತುಮಿರಲಾ ಕಾಲದೊಳ್ ಕಾಸರಗೋಡು ತಿಮ್ಮಣ್ಣನಾಯಕನೊಡನೆ ಸೇನಾಸಮೂಹಮಂ ತೆರಳ್ಚಿಸಿ ಕಳುಹಿ

ಕ॥ ಹನುಮನಾಯಕನ ದರ್ಪದ
ಮೊನೆಯಂ ಮುರಿದಾ ಸುಧಾಪುರಾಧಿಪರೊಳಗಿ
ರ್ದನುಪಮ ಮಿಡಿಚೆಯ ಕೋಂಟೆಯ
ನನುವರದೊಳ್ ಕೊಂಡು ಮೆರೆದಳತಿಸಾಹಸಮಂ ೩

ವ॥ ಮತ್ತಮದಲ್ಲದೊಂದವಸರದೊಳಿತ್ತಂ ಕಡೆಯುವನಿಯೊಳ್ ಕಲ್ಯಾಣಪುರದ ಪರಿಸ್ತರಣದೊಳ್ ಸದಾಶಿವಯ್ಯನೆಂಬ ಕುಮಾರಸಹಿತಮಂಕೆಯೊಳಿರುತಿರ್ಪ ಜಾತಪ್ಪನ ಭದ್ರಪಂ ಘಟ್ಟದ ಕೆಳಗಣ ರಾಜ್ಯಕ್ಕೆ ತಾನಧಿಕಾರಿಯಾಗಬೇಕೆಂಬಪೇಕ್ಷೆಯಿಂ ಚೌಟ ಬಂಗಾಜಲ ಸಾವಂತ ಮುಂತಾದ ತುಳುವ ಮನ್ನೆಯರ್ಕಳ್ಗಂ ಬೋಧಿಸಿ ಕಾರಕಳ ಮಲ್ಲಿಕಾರ್ಜುನಗಿರಿ ಮುಂತಾದ ಕೋಂಟೆಗಳಂ ಸ್ವಾಧೀನಮಂ ಮಾಡಿಕೊಂಡಿದಿರ್ಚಿ ಗರ್ವೋದ್ರೇಕದಿಂ ವರ್ತಿಸುತ್ತುಮಿರಲಲ್ಲಿಗೆ ದಳವಾಯಿ ಭದ್ರಪನೊಡನೆ ಸೈನ್ಯಮಂ ತೆರಳ್ಚಿಸಿ ಕಳುಹಿ

ಕಂ॥ ಆ ತುಳುವನೃಪರ ಕುಮತದ
ರೀತಿಯನುರೆ ನಿಲಿಸಿಕೊಂಡು ನಿಜಕೋಂಟೆಗಳಂ
ಜಾತಪನ ಭದ್ರಪನ ತ
ಜ್ಜಾತನುಮಂ ಪಿಡಿಸಿ ಶಾಸ್ತಿಯಂ ಮಾಡಿಸಿದಳ್ ೪

ವ॥ ಮತ್ತಮದಲ್ಲದೆ ಸಬ್ಬುನೀಸಕೃಷ್ಣಪ್ಪಯ್ಯ ಕಾಸರಗೋಡು ತಿಮ್ಮಣ್ಣನಾಯಕರೊಡನ ಸಂಖ್ಯಾತಮಾದ ಸೇನಾಸಮೂಹಮಂ ತೆರಳ್ಚಿಸಿ ಕಳುಹಿ

ಈ ಕಾಲದಲ್ಲಿ ಕಾಸರಗೋಡ್ಲು ತಿಮ್ಮಣ್ಣನಾಯಕನೊಡನೆ ಸೇನೆಯನ್ನು ಹೊರಡಿಸಿ ಕಳುಹಿಸಿ ೩. ಹನುಮನಾಯಕನ ದರ್ಪದ ತೀಕ್ಷ್ಣತೆಯನ್ನು ಹೋಗಲಾಡಿಸಿ, ಸೋದೆಯ ಒಡೆಯರ ವಶದಲ್ಲಿದ್ದ ಅಸಮಾನವಾದ ಮಿಡಿಜೆಯ ಕೋಟೆಯನ್ನು ಯುದ್ಧದಲ್ಲಿ ಸ್ವಾಧೀನ ಮಾಡಿಕೊಂಡು ಹೆಚ್ಚು ಸಾಹಸವನ್ನು ಮೆರೆದಳು. ವ॥ ಮತ್ತೆ ಅದಲ್ಲದೆ ಒಂದು ಸಾರಿ ಕಲ್ಯಾಣಪುರದ ಕೋಟೆಯ ಒಂದೆಡೆಯಲ್ಲಿ ಸದಾಶಿವಯ್ಯನೆಂಬ ಕುಮಾರನೊಡನೆ ಪಾಲನೆಯಲ್ಲಿದ್ದ ಜಾತಪ್ಪನ ಭದ್ರಪ್ಪನು ಘಟ್ಟದ ಕೆಳಗಡೆ ರಾಜ್ಯಗಳಿಗೆ ತಾನು ಅಧಿಕಾರಿಯಾಗಬೇಕೆಂದು ಹೊಂಚು ಹೂಡಿದನು. ಈತನು ಚೌಟ, ಬಂಗಾಜಲ, ಸಾವಂತ ಮುಂತಾದ ತುಳುವ ಸಾಮಂತರಿಗೆಲ್ಲ ಬೋಧನೆಮಾಡಿ ಕಾರ್ಕಳ, ಮಲ್ಲಿಕಾರ್ಜುನಗಿರಿ ಮೊದಲಾದ ಕೋಟೆಗಳನ್ನು ಸಾಧಿಸಿಕೊಂಡು ಗರ್ವೋದ್ರೇಕದಿಂದ ಮೆರೆಯುತ್ತಿದ್ದನು. ಅಲ್ಲಿಗೆ ದಳವಾಯಿ ಭದ್ರಪ್ಪನೊಡನೆ ಸೈನ್ಯವನ್ನು ಹೊರಡಿಸಿ ಕಳುಹಿಸಿ ೪. ಆ ತುಳುವರಾಜರ ದುರಭಿಪ್ರಾಯದ ಕ್ರಮವನ್ನು ನಿಲ್ಲಿಸಿ ತನ್ನ ಕೋಟೆಗಳನ್ನು ವಶಪಡಿಸಿಕೊಂಡು ಜಾತಪ್ಪನ ಭದ್ರಪ್ಪನನ್ನೂ ಅವನ ಮಗನನ್ನು ಬಂಧಿಸಿ ಶಿಕ್ಷಿಸಿದಳು. ವ॥ ಮತ್ತೆ ಅದಲ್ಲದೆ ಸಬ್ಬುನೀಸ ಕೃಷ್ಣಪ್ಪಯ್ಯ, ಕಾಸರಗೋಡು ತಿಮ್ಮಣ್ಣನಾಯಕರೊಡನೆ ಅಸಂಖ್ಯಾತ ಸೈನ್ಯವನ್ನು ಹೊರಡಿಸಿ

ಕಂ|| ಮಾಯಾವಾದಿಗಳುರುದಳ
ವಾಯಿ ಕುಮಾರಯ್ಯನದಟನುಡುಗಿಸಿ ಬಲಮಂ
ನೋಯಿಸಿ ವಸುಧಾರೆಯ ಕಮ
ನೀಯ ಪರಿಸ್ತರಣಮಂ ಕರಂ ವಶಗೈದಳ್ ೫

ವ|| ಇಂತು ಮೈಸೂರಮ ಹೀಪನ ದಳವಾಯಿ ಕುಮಾರಯ್ಯನಂ ಪಲಾಯನಂಗೊಳಿಸಿ ವಸುಧಾರೆಯ ಕೋಂಟೆ ಸೀಮೆಗಳಂ ಸ್ವಾಧೀನಂಗೈದು ಸುಖದಿಂ ರಾಜ್ಯಂಗೆಯುತ್ತುಮಿರಲಿತ್ತ ಮತ್ಯಂತಗರ್ವೋದ್ರೇಕದಿಂ ಸೋದೆಯ ರಾಮಚಂದ್ರನಾಯಕಂ ಮಿಡಿಜೆಯ ಕೋಂಟೆಯಂ ತೆಗೆದುಕೊಳಲ್ಕೇಳ್ದು ಸಬ್ಬುನೀಸಕೃಷ್ಣಯ್ಯನೊಡನೆ ಸೈನ್ಯಮಂ ತೆರಳ್ಚಿಸಿ ಕಳುಹಿ ಯುದ್ಧ ರಂಗದೊಳಾ ಮಿಡಿಜೆಯ ಕೋಂಟೆಯಂ ಮಗುಳ್ದು ಸ್ವಾಧೀನಂಗೈದಳಂತುಮಲ್ಲದೆಯುಂ

ಕಂ|| ಸಿರಸೆಯ ಸೋದೆಯ ಸುಪರಿ
ಸ್ತರಣಗಳಂ ಕೊಂಡು ತತ್ಸುಧಾಪುರದವನೀ
ಶ್ವರನ ಬಿರುದಗಳನೀಳ್ದಾ
ದೊರೆ ಚನ್ನಮ್ಮಾಜಿ ಮೆರೆದಳತಿವಿಕ್ರಮಮಂ ೬

ವ|| ಇಂತು ಸಿರಸೆ ಸೋದೆಗಳ ಪರಿಸ್ತರಣಂಗಳಂ ಕೊಂಡಾ ಸುಧಾಪುರಾಧಿಪನಂ ಪಲಾಯನಂಗೊಳಿಸಿ ತತ್ಸುಧಾಪುರದೊಳ್ ಸ್ವಸೈನ್ಯಮಂ ನಿಲಿಸಿ ಅವರಾಳ್ವ ನಾಡೊಳಗಣ ಬನವಸೆ ಬದನಗೋಡು ಬಾಳೂರ್ ಪುಲಿಯಕಣ್ಣ ಕರುಪೂರ್ ಮುಂತಾದ ಸೀಮೆಗಳಂ ಸ್ವಾಧೀನಮಂ

ಕಳುಹಿಸಿ ೫. ಮಾಯಾವಾದಿಗಳ ಸೇನಾಪತಿಯಾದ ಕುಮಾರಯ್ಯನ ಸಾಮರ್ಥ್ಯವನ್ನು ಕುಗ್ಗಿಸಿ, ಸೈನ್ಯವನ್ನು ನೋಯಿಸಿ ವಸುಧಾರೆಯ ಸುಂದರವಾದ ಕೋಟೆಯನ್ನು ವಶಪಡಿಸಿಕೊಂಡಳು. ವ|| ಈ ರೀತಿ ಚನ್ನಮ್ಮಾಜಿಯು ಮೈಸೂರಿನ ರಾಜರ ದಳವಾಯಿ ಅಥವಾ ಸೇನಾಪತಿಯಾದ ಕುಮಾರಯ್ಯನನ್ನು ಪಲಾಯನಗೊಳಿಸಿದಳು. ವಸುಧಾರೆಯ ಕೋಟೆಗಳು ಮತ್ತು ಅದಕ್ಕೆ ಸೇರಿದ ಸೀಮೆಗಳನ್ನು ಸ್ವಾಧೀನಮಾಡಿಕೊಂಡು ಸುಖದಿಂದ ರಾಜ್ಯವನ್ನು ಪಾಲಿಸುತ್ತಿದ್ದಳು. ಹೀಗಿರಲು ಸೋದೆಯ ರಾಮಚಂದ್ರನಾಯಕನು ಮಿಡಿಜೆಯ ಕೋಟೆಯನ್ನು ವಶಪಡಿಸಿಕೊಂಡು ಬಹು ಗರ್ವದಿಂದ ಮೆರೆಯುತ್ತಿದ್ದನು. ಅದನ್ನು ತಿರುಗಿ ಪಡೆಯಲು ಸಬ್ಬುನೀಸ ಕೃಷ್ಣಪ್ಪಯ್ಯನೊಡನೆ ಸೈನ್ಯವನ್ನು ಹೊರಡಿಸಿ ಕಳುಹಿಸಿದಳು. ಯುದ್ಧರಂಗದಲ್ಲಿ ಮಿಡಿಜೆಯ ಕೋಟೆಯನ್ನು ಗೆದ್ದು ಸ್ವಾಧೀನಪಡಿಸಿಕೊಂಡಳು, ಅಂತೂ ಅಲ್ಲದೆ- ೬. ಶಿರಸಿ ಮತ್ತು ಸೋದೆಯ ಕೋಟೆಗಳನ್ನು ವಶಪಡಿಸಿಕೊಂಡು ಆ ಸೋದೆಯ ಅರಸುಗಳ ಬಿರುದುಗಳನ್ನು ಸೆಳೆದುಕೊಂಡು ರಾಣಿ ಚೆನ್ನಮ್ಮಾಜಿಯು ಹೆಚ್ಚು ಪರಾಕ್ರಮವನ್ನು ಮೆರೆದಳು. ವ|| ಈ ರೀತಿ ಸಿರಸಿ, ಸೋದೆಗಳ ಕೋಟೆಗಳನ್ನು ಸಾಧಿಸಿಕೊಂಡು ಸೋದೆಯ ಅರಸನನ್ನು ಪಲಾಯನಗೊಳಿಸಿದಳು. ಸುಧಾಪುರದಲ್ಲಿ (ಸೋದೆಯಲ್ಲಿ) ತನ್ನದೇ ಆದ ಸೈನ್ಯವನ್ನು ನೆಲೆಗೊಳಿಸಿ ಅವರು ಆಳುತ್ತಿದ್ದ ಸೀಮೆಯ ಒಳಗಣ ಬನವಾಸೆ, ಬದನಗೋಡು, ಬಾಳೂರು, ಪುಲಿಯಕಣ್ಣ ಕರುವೂರು ಮುಂತಾದ ಸೀಮೆಗಳನ್ನು ಸ್ವಾಧೀನಪಡಿಸಿಕೊಂಡಳು.

ಮಾಡಿಕೊಂಡವರ ಬಿರುದಿನ ನೀಲಚ್ಛತ್ರಮಂ ಕೆಳದಿ ವೀರಭದ್ರದೇವರ್ಗೆ ಕಾಣ್ಕೆಯಂ ಕಳಪಲವರ್ ನಿಸ್ತೇಜಸ್ಕರಾಗಿ ಸಂಧಿಯನಪೇಕ್ಷಿಸಿ ದೈನ್ಯಭಾವದಿಂ ಪೊಕ್ಕು ಪೇಳಿಸಲತ್ಯಂತಕಾರುಣ್ಯದಿಂದಾಗಲವರ್ಗೆ ಸೋದೆ ಮುಂತಾದ ಕೆಲವು ಸೀಮೆಗಳನಿತ್ತು ಬನವಸೆ ಮುಂತಾದ ಕೆಲವು ಸೀಮೆಯಂ ಸ್ವಾಧೀನಮಂ ಮಾಡಿಕೊಂಡಿಂತೀ ಪ್ರಕಾರದಿಂ ಸುಧಾಪುರದರಸರ ಗರ್ವಮಂ ಮುರಿದು ಮಗುಳ್ದವರಂ ಸಂಸ್ಥಾನದೊಳ್ ನಿಲಿಸಿ ಪರಮ ಪ್ರಖ್ಯಾತಿಯಂ ಪಡೆದತ್ಯಂತಸಂತೋಷದಿಂ ರಾಜ್ಯವಾಳುತ್ತುಂ ಕುಮಾರ ಬಸವಪ್ಪನಾಯಕರ್ಗೆ ಕಾಳಯುಕ್ತಿ ಸಂವತ್ಸರದ ಮಾರ್ಗಶಿರಮಾಸದಲ್ಲಿ ಹೆಬ್ಬೆ ಮಹಂತಯ್ಯನ ಕುಮಾರಿ ಚನ್ನಮ್ಮಾಜಿಯರ್ ಮಳಿಗೆ ಚನ್ನವೀರಪ್ಪನ ಕುಮಾರಿ ಬಸಮ್ಮಾಜಿಯವರ್ ಇಂತಿರ್ವರ್ ಕನ್ಯಾರತ್ನಂಗಳನತ್ಯಂತ ಸಂಭ್ರಮದಿಂ ವಿವಾಹಮಂ ರಚಿಸಿಯನಂತರಂ ಸಬ್ಬುನೀಸ ಕೃಷ್ಣಪ್ಪಯ್ಯನೊಡನೆ ಸೈನ್ಯಮಂ ಕೂಡಿಸಿ ಕಳುಹಿ ದಿವಾಣದ ವಕೀಲಿಯೊಳಿರುತಿರ್ದ ಬಸವಾಪಟ್ಟಣಮಂ ಸ್ವಾಧೀನಂಗೈದು ಮತ್ತಮಾ ಸಬ್ಬುನೀಸಕೃಷ್ಣಪ್ಪಯ್ಯನಂ ತೆರಳ್ಚಿಸಿ ಕಳುಹಿ

ಕಂ॥ ಧುರದೊಳ್ ಕಡವೂರ್ ಬಾಣಾ
ವರ ಹಾಸನಮಂ ಸುರಮ್ಯಬೇಲೂರ ಪರಿ
ಸ್ತರಣಮುಮಂ ಕೊಂಡು ಮಹ
ತ್ತರ ಮೈಸೂರವರ ಮದವನುರೆ ಮಗ್ಗಿಸಿದಳ್ ೭

ವ॥ ಇಂತು ಮಾಯಾವಿಗಳ ಮದಮಂ ಮಗ್ಗಿಸಿಯವರ ನಾಡೊಳಗಣ ಕಡವೂರ್ ಬಾಣಾವರ ಹಾಸನ ಬೇಲೂರ ಪರಿಸ್ತರಣ ರಾಜ್ಯಂಗಳಂ ಸ್ವಾಧೀನಂಗೈದನಂತರಂ ಗೋಕರ್ಣಯಾತ್ರೆಯಂ

ಅಲ್ಲದೆ ಅವರ ಬಿರುದಿನ ನೀಲಿಯ ಕೊಡೆಯನ್ನು ಕೆಳದಿಯ ವೀರಭದ್ರದೇವರಿಗೆ ಕಾಣಿಕೆಯನ್ನಾಗಿ ಕಳುಹಿಸಿದಳು. ಅವರು ಕಳೆಗುಂದಿದವರಾಗಿ ದೈನ್ಯಭಾವದಿಂದ ಸಂಧಿಯನ್ನು ಅಪೇಕ್ಷಿಸಿ ರಾಣಿಯನ್ನು ಪ್ರಾರ್ಥಿಸಿಕೊಂಡರು. ಅವಳಲ್ಲಿ ಕೇಳಿಕೊಳ್ಳಲಾಗಿ ಅತ್ಯಂತ ಕರುಣದಿಂದ ಅವರಿಗೆ ರಾಣಿಯು ಸೋದೆ ಮುಂತಾದ ಸೀಮೆಗಳನ್ನು ಕೊಟ್ಟಳು. ಹೀಗೆ ಬನವಾಸೆಯೇ ಮುಂತಾಗಿ ಹಲವು ಸೀಮೆಗಳನ್ನು ಸಾಧಿಸಿಕೊಂಡು ಈ ರೀತಿಯಾಗಿ ಸೋದೆಯರಸರ ಅಹಂಕಾರವನ್ನು ಮುರಿದು, ಅವರನ್ನು ಸಂಸ್ಥಾನದಲ್ಲಿ ತಿರುಗಿ ನಿಲ್ಲಿಸಿ ಪರಮ ಕೀರ್ತಿಯನ್ನು ಪಡೆದಳು. ಹೀಗೆ ಬಹು ಸಂತೋಷದಿಂದ ರಾಜ್ಯವನ್ನಾಳುತ್ತಾ ಕುಮಾರ ಬಸವಪ್ಪನಾಯಕನಿಗೆ ಕಾಳಯುಕ್ತಿ ಸಂವತ್ಸರದ ಮಾರ್ಗಶಿರಮಾಸದಲ್ಲಿ ಹೆಬ್ಬೆ ಮಹಂತಯ್ಯನ ಕುವರಿ ಚನ್ನಮ್ಮಾಜಿ ಮತ್ತು ಮಳಿಗೆ ಚನ್ನವೀರಪ್ಪನ ಕುವರಿ ಬಸಮ್ಮಾಜಿ ಎಂಬ ಈರ್ವರು ಕನ್ಯಾರತ್ನಗಳನ್ನು ತಂದುಕೊಂಡು ಬಹು ಸಂಭ್ರಮದಿಂದ ವಿವಾಹವನ್ನು ನೆರವೇರಿಸಿದಳು. ಅನಂತರದಲ್ಲಿ ಸಬ್ಬುನೀಸ ಕೃಷ್ಣಪ್ಪಯ್ಯನೊಡನೆ ಸೈನ್ಯವನ್ನು ಕೂಡಿಸಿ ಕಳುಹಿಸಿ ಬಸವಾಪಟ್ಟಣವನ್ನು ಸ್ವಾಧೀನ ಮಾಡಿಕೊಂಡಳು, ಮತ್ತೆ ಆ ಸಬ್ಬುನೀಸ ಕೃಷ್ಣಪ್ಪಯ್ಯನನ್ನು ತೆರಳಿಸಿ ಕಳುಹಿಸುತ್ತಾ, ೭. ಯುದ್ಧದಲ್ಲಿ ಕಡವೂರು (ಕಡೂರು), ಬಾಣಾವರ, ಹಾಸನ ಮತ್ತು ಸುಂದರವಾದ ಬೇಲೂರಿನ ಕೋಟೆಗಳನ್ನು ವಶಪಡಿಸಿಕೊಂಡು ಮೈಸೂರಿನವರ ಮದವನ್ನು ಹೋಗಲಾಡಿಸಿದಳು. ವ॥ ಈ ರೀತಿಯಾಗಿ ಮಾಯಾವಿಗಳ ಮದವನ್ನು ತಗ್ಗಿಸಿ, ಅವರ ಸೀಮೆಗೆ ಸೇರಿದ ಕಡೂರು, ಬಾಣಾವರ, ಹಾಸನ, ಬೇಲೂರು

ರಚಿಸಿ ಮಹಾಬಲೇಶ್ವರಾದಿ ಲಿಂಗಸಂದರ್ಶನಪೂಜಾದಿಗಳಂ ನಿರ್ವತಿರ್ಚಿ ಮಗಳ್ದೆಳ್ತಂದು ವೇಣುಪುರವರಮಂ ಸಾರ್ದು ಸುಖದಿಂ ರಾಜ್ಯಂಗೆಯ್ಯುತ್ತುಮಾ ಚನ್ನಮ್ಮಾಜಿ ತಾಂ ಪೋಷಿಸುತಿರ್ದ ಕುಮಾರಿ ಮರಿಚನ್ನಮ್ಮಾಜಿಯನಕ್ಷಯಸಂವತ್ಸರದ ವೈಶಾಖಮಾಸದಲ್ಲಿ ಸಿದ್ದಮ್ಮಾಜಿಯವರ ಮಗ ಮಲ್ಲಿಕಾರ್ಜುನನಾಯಕಂಗತ್ಯಂತ ಸಂಭ್ರಮದಿಂ ವಿವಾಹಮಂ ರಚಿಸಿ ತದ್ವಿವಾಹಮಹೋತ್ಸವ ಕಾಲದೊಳ್ಸೆದಿದ ಸೋದೆಯ ಅರಸಪ್ಪನಾಯಕ ರಾಮಚಂದ್ರನಾಯಕರನುಜನೆನಿಪ ಸದಾಶಿವನಾಯಕಂ ತಮ್ಮ ಸೀಮೆಯನೀಯಲ್ವೇಳ್ಕೆಂದು ಪೇಳಿಸಲ್ ದಯೆಯಿಂ ಮುನ್ನಮಧೀನಂಗೈದ ಬನವಸೆ ಮುಂತಾದ ಸೀಮೆಗಳನಿತ್ತು ಬೀಳ್ಕೊಟ್ಟು ಭಾಗಾನಗರದವರ ಬಗೆಯ (?) ಪೆದೂರ ಲಿಂಗಪ್ಪಂ ಬಿಗಡಿಸಿ ಬಂದಿರಲಾತನಂ ಬಸವಾಪಟ್ಟಣದೊಳಿಟ್ಟು ಸಂತಸಂಬಡಿಸಿಯನಂತರಂ ಜರಿಮಲೆಯರಸನ ಪ್ರತಾಪಾತಿಶಯಮಂ ಕೇಳ್ದು ಸಬ್ಬುನೀಸ ಶರಜಾ ಶಂಕರನಾರಾಯಣಯ್ಯನಂ ತೆರಳ್ಚಿಸಿ ಕಳುಹಿ

ಕಂ॥ ಮೆರೆವ ಮೊಳಕಾಲ ಬಾಸಿಗ
ದುರುಬಿರುದಂ ಧರಿಸಿ ಶೌರ್ಯದಿಂ ಮಾರ್ಮಲೆವಾ
ಜರಿಮಲೆಯರಸನುಮಂ ಸಂ
ಗರದೊಳ್ ಸೆರೆಪಿಡಿದು ಬಾಹುಬಲಮಂ ಮೆರೆದಳ್ ೮

ವ॥ ಇಂತತ್ಯಂತಪರಾಕ್ರಮಶಾಲಿಯಪ್ಪ ಜರಿಮಲೆಯರಸನಂ ಕೈಸೆರೆವಿಡಿದು ಮೊಳಕಾಲ ಬಾಸಿಗದ ಬಿರುದಂ ಕಳಲ್ಚಿಸಿ ಕೈಗಾಯ್ದುಳುಹಿ ಕಳುಹಿದಳಂತುಮಲ್ಲದೆಯುಂ

ಕೋಟೆಗಳನ್ನೂ ಹಾಗೂ ರಾಜ್ಯವನ್ನೂ ಸ್ವಾಧೀನಪಡಿಸಿಕೊಂಡಳು. ಅನಂತರ ಗೋಕರ್ಣಕ್ಕೆ ಯಾತ್ರೆಯನ್ನು ಕೈಗೊಂಡು ಮಹಾಬಲೇಶ್ವರನನ್ನು ಸಂದರ್ಶಿಸಿ, ಆ ದೇವನಿಗೆ ಪೂಜೆಯನ್ನು ನಡೆಸಿ ಅನಂತರ ವೇಣುಪುರಕ್ಕೆ ಬಂದು ಸುಖದಿಂದ ರಾಜ್ಯವನ್ನು ಪಾಲಿಸುತ್ತಿದ್ದಳು. ಚೆನ್ನಮ್ಮಾಜಿಯು ತಾನು ಕಾಪಾಡುತ್ತಿದ್ದ ಕುವರಿಯಾದ ಮರಿಚನ್ನಮ್ಮಾಜಿಯನ್ನು ಅಕ್ಷಯ ಸಂವತ್ಸರದ ವೈಶಾಖ ಮಾಸದಲ್ಲಿ ಸಿದ್ಧಮ್ಮಾಜಿಯವರ ಮಗ ಮಲ್ಲಿಕಾರ್ಜುನನಾಯಕನಿಗೆ ಕೊಟ್ಟು ಅತಿ ವೈಭವದಿಂದ ವಿವಾಹವನ್ನು ನಡೆಸಿದಳು. ಈ ವಿವಾಹ ಮಹೋತ್ಸವ ಕಾಲದಲ್ಲಿ ಸೋದೆಯ ಅರಸಪ್ಪನಾಯಕ ಹಾಗೂ ರಾಮಚಂದ್ರನಾಯಕರ ಸಹೋದರನೆನಿಸಿದ ಸದಾಶಿವನಾಯಕನು ತನ್ನ ಸೀಮೆಯನ್ನು ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡ ಮೇರೆಗೆ ಕರುಣದಿಂದ ಮುಂಚೆ ತನ್ನ ಅಧೀನದಲ್ಲಿದ್ದ ಬನವಾಸೆ ಮುಂತಾದ ಸೀಮೆಗಳನ್ನು ಅವನಿಗೆ ಹಿಂದಕ್ಕೆ ಕೊಡಿಸಿ ಅವನನ್ನು ಬೀಳ್ಕೊಟ್ಟಳು. ಈ ಕಾಲದಲ್ಲಿ ಭಾಗಾನಗರದವನಾದ ಪೆದ್ದೂರ ಲಿಂಗಪ್ಪನು ಕೆರಳಿ ಬಂದಿರಲು ಆತನನ್ನು ಬಸವಾಪಟ್ಟಣದಲ್ಲಿ ನಿಲ್ಲಿಸಿ ಸಂತೋಷಪಡಿಸಿದಳು. ಅನಂತರ ಜರಿಮಲೆಯ ರಾಜನ ಪರಾಕ್ರಮವನ್ನು ಕೇಳಿ ಸಬ್ಬುನೀಸ ಹಾಗೂ ಶರಜಾ ಶಂಕರನಾರಾಯಣಯ್ಯನನ್ನು ಕಳುಹಿಸಿ
೮. ಮೊಳಕಾಲ ಬಾಸಿಗನೆಂಬ ಬಿರುದನ್ನು ಧರಿಸಿ ಪರಾಕ್ರಮದಿಂದ ಎದುರಾದ ಜರಿಮಲೆಯ ರಾಜನನ್ನು ಯುದ್ಧದಲ್ಲಿ ಸೆರೆಹಿಡಿದು ಬಾಹುಬಲವನ್ನು ಮೆರೆದಳು.
ವ॥ ಈ ರೀತಿ ಅತ್ಯಂತ ಪರಾಕ್ರಮಶಾಲಿಯಾದ ಜರಿಮಲೆಯ ರಾಜನನ್ನು ಸೆರೆಹಿಡಿದು

ಕಂ|| ಭೂಮಹಿತ ಯವನರೊಳ್ ಸಂ
ಗ್ರಾಮದೆ ಮುರಿದ್ಯೈದಿ ಪೊಕ್ಕ ಮನ್ನೆಯ ರಾಜೇ
ರಾಮನನುರೆ ಕಾಯ್ದು ನೃಪ
ಸ್ತೋಮದೊಳತ್ಯಧಿಕಕೀರ್ತಿಯಂ ಮಿಗೆ ಪಡೆದಳ್ ೯

ವ|| ಆ ವಿವರಣಮೆಂತೆಂದೊಡಾರೆಯರ ಮೂಲಮುಮನಾ ರಾಮರಾಜನಂ ಪಿಡಿಯಲ್ವೆದಿದ ತುರುಷ್ಕರ ಮೂಲಮುಮನಾ ತುರುಷ್ಕ ರಾಮರಾಯರ್ಗ್ಗಂ ವಿರೋಧಂ ಪುಟ್ಟದ ಕಾರಣಮುಮನುಸಿರ್ವೆನದಕ್ಕೋಸುಗಂ ಮೊದಲೊಳಾರೆಯರ ಮೂಲವೃತ್ತಾಂತಮಂ ಬಿತ್ತರಿಪೆನದೆಂತೆಂದೊಡೆ – ಕುರುಕ್ಷೇತ್ರಸಮೀಪದೊಳ್ ಕಾಶಿಯ ಡಿಳ್ಳಿಯ ವಾಯವ್ಯದಿಕ್ಕಿನ ತಾಣದೊಳ್ ಕ್ಷತ್ರಿಯರ್ಗೆ ಮೂಲಸಂಸ್ಥಾನಮಾದ ಚಿತ್ತೋಡೆಂಬ ಗಡಮೊಪ್ಪುತಿರ್ಪುದು ಚಿತ್ತಕ್ಕೆ ಭಯಮಂ ಪುಟ್ಟಸುತಿರ್ದುದರಿಂ ಚಿತ್ತೋಡೆಂಬ ನಾಮಮಾದುದಾ ಚಿತ್ತೋಡೆಂಬ ಗಡಂ ಸುತ್ತಮೈದುಯೋಜನ ವಿಸ್ತೀರ್ಣದಿಂ ಸಮಸ್ತಧನಧಾನ್ಯಪುಷ್ಪಫಲಸಮೃದ್ಧಿಯಿಂ ಸತತಂ ವಿರಾಜಿಸುತ್ತುಮಿರ್ಪುದಾ ಚಿತ್ತೋಡ ಸಂಸ್ಥಾನಾಧಿಪತಿಗಳಾದ ಭಾರದ್ವಾಜಗೋತ್ರಜರೆನಿಪ ಕ್ಷತ್ರಿಯರಾಜರ್ ಪರಂಪರೆಯಿಂ ರಾಣರೆಂಬಭಿಧಾನಮನಾಂತು ರಾಜ್ಯಪ್ರತಿಪಾಲನಂಗೆಯುತ್ತಿರ್ಪರಾ ಕ್ಷತ್ರಿಯಕುಲಪರಂಪರೆಯೊಳುದ್ಭವಿಸಿದ ರಾಣನೆಂಬ ರಾಜನಾ ಚಿತ್ತೋಡ ಸಂಸ್ಥಾನದೊಳೊಪ್ಪುತಿರ್ದನಾ ರಾಣನೆಂಬಾತಂಗೆ ರೂಪವತಿಯಾದ ಪದ್ಮಿನೀಜಾತಿಯ ಕುಮಾರಿಯುದಿಸಲಾ ಕುಮಾರಿಯಂ ಪೋಷಿಸುತ್ತುಮಾ ರಾಣಂ ರಾಜ್ಯವಾಳುತ್ತಿರಲಾ

'ಮೊಳಕಾಲ ಬಾಸಿಗ' ಎಂಬ ಅವನ ಬಿರುದನ್ನು ತೆಗೆಸಿ, ಅವನನ್ನು ಉಳಿಸಿ ಕಳುಹಿಸಿದಳು. ಅಂತೂ ಅಲ್ಲದೆ-೯. ಭೂಮಿಯಲ್ಲಿಯೇ ವೀರರೆನಿಸಿದ ಯವನರೊಡನೆ ಯುದ್ಧದಲ್ಲಿ ಸೋತು, ತನಗೆ ಶರಣು ಬಂದ ರಾಜೇರಾಮನನ್ನು ಕಾಪಾಡಿ ರಾಜರ ಸಮೂಹದಲ್ಲಿ ಹೆಚ್ಚಿನ ಕೀರ್ತಿಯನ್ನು ಗಳಿಸಿದಳು. ವ|| ಆ ವಿವರಣವು ಯಾವ ರೀತಿಯೆಂದರೆ-ಆರೆಯರ ಮೂಲ ವೃತ್ತಾಂತವನ್ನೂ, ರಾಮರಾಜನನ್ನು ಹಿಡಿಯಲು ಬಂದ ತುರುಕರ ಮೂಲ ವೃತ್ತಾಂತವನ್ನೂ, ತುರುಕರಿಗೂ ರಾಮರಾಯನಿಗೂ ವಿರೋಧ ಹುಟ್ಟಿದ ಕಾರಣವನ್ನೂ ಹೇಳುವೆನು. ಅದಕ್ಕೋಸ್ಕರ ಮೊದಲು ಆರೆಯರ ಮೂಲವನ್ನು ಕಥಾರೂಪವಾಗಿ ವಿವರಿಸುವೆನು. ಅದು ಯಾವ ರೀತಿಯೆಂದರೆ-ಕುರುಕ್ಷೇತ್ರದ ಹತ್ತಿರದಲ್ಲಿ ಕಾಶಿಯ ಮತ್ತು ಡಿಲ್ಲಿಯ ವಾಯವ್ಯ ದಿಕ್ಕಿನ ಪ್ರದೇಶದಲ್ಲಿ ಕ್ಷತ್ರಿಯರಿಗೆ ಮೂಲ ಆವಾಸಸ್ಥಾನವೆನಿಸಿದ ಚಿತ್ತೋಡು ಎಂಬ ಕೋಟೆಯೊಂದು ಇದೆ. ಮನಸ್ಸಿಗೆ ಭಯವನ್ನು ಹುಟ್ಟಿಸುತ್ತಿದ್ದುದರಿಂದ 'ಚಿತ್ತೋಡು' ಎಂಬುದಾಗಿ ನಾಮಕರಣವುಂಟಾಯಿತು. ಚಿತ್ತೋಡು ಎಂಬ ಈ ಕೋಟೆಯು ಸುತ್ತುಮುತ್ತಲೂ ಐದು ಯೋಜನ ವಿಸ್ತೀರ್ಣವನ್ನು ಹೊಂದಿ, ಸಕಲ ವಿಧವಾದ ಧನ, ಧಾನ್ಯ, ಹೂವು ಮತ್ತು ಫಲಗಳಿಂದ ಕೂಡಿ ಯಾವಾಗಲೂ ಸಮೃದ್ಧಿಯಿಂದ ವಿರಾಜಿಸುತ್ತಿತ್ತು. ಚಿತ್ತೋಡ ಸಂಸ್ಥಾನಾಧಿಪತಿಗಳಾದ ಕ್ಷತ್ರಿಯ ರಾಜರುಗಳು ಭಾರದ್ವಾಜ ಗೋತ್ರದವರಾಗಿದ್ದು ಪರಂಪರೆಯಿಂದ ರಾಣರೆಂಬ ನಾಮಾಂಕಿತದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದರು. ಆ ಕ್ಷತ್ರಿಯ ವಂಶದ ಪರಂಪರೆಯಲ್ಲಿ ಜನಿಸಿದ ರಾಣನೆಂಬ ಅರಸನು ಚಿತ್ತೋಡ ಸಂಸ್ಥಾನವನ್ನು ಆಳುತ್ತಿದ್ದನು. ಈ ರಾಣನಿಗೆ ರೂಪವತಿಯೆನಿಸಿದ ಪದ್ಮಿನೀಜಾತಿಯ ಕುವರಿಯೊಬ್ಬಳು

**ಪದ್ಮಿನೀಜಾತಿಯ ಕುಮಾರಿಯ ರೂಪಲಾವಣ್ಯ ಗುಣಗಣಶೀಲಮಂ ಡಿಳ್ಳಿಯನಾಳುತಿರ್ದಕಬರ ಪಾತುಶಾಹಂ ಕೇಳ್ದು ಸೈನ್ಯಸಮೇತನಾಗಿ ತಾನೇ ತೆರಳ್ದೈಂತದಾ ಚಿತ್ತೋಡೆಂಬ ಗಢಮಂ ವೇಷ್ಟೈಸಿ ನೆಲದಂಡಿಳಿದು ಆ ಸಂಸ್ಥಾನಮಂ ಸಾಧಿಸವೇಳ್ಕೆಂದು ಪನ್ನೆರಡು ವರುಷಂಬರಂ ಬಹುವಿಧಪ್ರಯತ್ನಂ ಬಟ್ಟೊಡಮಾಗಡಂ ಸಾಧ್ಯಮಾಗದಿರ್ಪುದಂ ಕಂಡು ಪ್ರಚ್ಛನ್ನವೇಷದಿಂದಕಬರಪಾತುಶಾಹನಾ ಗಡಮನೊಳ ಪೊಕ್ಕು ವಸಿಷ್ಠಗೋತ್ರಜನಾದ ರಾಣನ ಅಳಿಯ ರಾಮಸಿಂಗನ ಬಳಿಯೊಳ್ ಮುಖ್ಯಸೇವಕನಾಗಿ ವರ್ತಿಸುತ್ತಿರ್ದೊಂದವಸರದೊಳ್ ರಾಮಸಿಂಗನೆಂಬವನ ಸಂಗಡಮೇ ತಾನರಮನೆಯೊಳ ಪೊಕ್ಕು ಆ ರಾಣನ ಸಮೀಪಕ್ಕೈದಲಾ ರಾಣಂ ಸಿಂಹಾಸನದಿಂದಿಳಿದು ನಿಂದಿರಲದಂ ರಾಮಸಿಂಗಮಂ ಕಂಡು ಭಯದಿನ್ನೈದುತ್ತೆನ್ನಂ ಕಂಡೇಂ ಕಾರಣಂ ಸಿಂಹಾಸನವನಿಳಿದಿರೆಂದು ಬೆಸಗೊಳಲಾಂ ನಿನ್ನಂ ಕಂಡು ಸಿಂಹಾಸನವನಿಳಿದವನಲ್ಲಂ ನಿನ್ನ ಸಂಗಡಮೈದಿದವನಂ ಕಂಡಾಂ ಸಿಂಹಾಸನವನಿಳಿದೆನೆಂದಾ ಅಕಬರಪಾತುಶಾಹನಂ ರಾಣಾರಾಯಂ ಕೈವಿಡಿದು ಸಿಂಹಾಸನದೊಳ್ ಕುಳ್ಳಿರಿಸಿ ಆ ಚಿತ್ತೋಡಗಡಮಂ ನಜರುಗಾಣಿಕೆಯಂ ಮಾಡಿ ನೀವಿಲ್ಲಿಗೆಯ್ದಿದ ಹದನೇನೆನ್ನಿಂದಪ್ಪ ಕಜ್ಜಮೇನೆಂದು ಬೆಸಗೊಳಲ್ ನಿನ್ನ ಕುಮಾರಿಯಾದ ಪದ್ಮಿನಿಯಂ ನೋಡಲೆಳ್ತಂದೆನೆನಲಂತಾದೊಡೊಳ್ಳಿತೆಂದು ಪದ್ಮಿನಿಯಿಂ ಬರಿಸಿ ಕಾಣಿಸಲಾಗಳಾ ಅಕಬರಪಾತುಶಾಹನಾ ಪದ್ಮಿನಿ ತನ್ನ ಮಗಳೆಂದು ತೊಡೆಯ ಮೇಲೆ ಕುಳ್ಳಿರಿಸಿಕೊಂಡು**

ಜನಿಸಿದಳು. ಇವಳನ್ನು ರಾಣನು ಪ್ರೀತಿಯಿಂದ ಕಾಪಾಡುತ್ತಿದ್ದನು. ಆಗ ಡಿಲ್ಲಿಯಲ್ಲಿ ಆಳುತ್ತಿದ್ದ ಅಕ್ಬರ ಬಾದಷಹನ ಈ ಪದ್ಮಿನೀ ಜಾತಿಯ ಕುವರಿಯ ರೂಪ ಲಾವಣ್ಯ, ಗುಣ ಹಾಗೂ ಶೀಲವನ್ನು ಕೇಳಿ ಆ ಚಿತ್ತೋಡನ್ನು ವಶಪಡಿಸಿಕೊಳ್ಳಲು ಹವಣಿಸಿ, ತಾನೇ ಸ್ವತಃ ಸೈನ್ಯವನ್ನು ಹೊರಡಿಸಿಕೊಂಡು, ಚಿತ್ತೋಡು ಕೋಟೆಯನ್ನು ಆಕ್ರಮಿಸಿದನು. ಅವನು ನೆಲದಲ್ಲಿ ದಂಡನ್ನು ಬೀಡುಬಿಟ್ಟು ಆ ಸಂಸ್ಥಾನವನ್ನು ಸಾಧಿಸಬೇಕೆಂದು ಹನ್ನೆರಡು ವರ್ಷಗಳವರೆಗೂ ನಾನ ವಿಧಗಳಲ್ಲಿ ಪ್ರಯತ್ನಪಟ್ಟರೂ ಸಾಧ್ಯವಾಗದೇ ಹೋಯಿತು. ಇದರಿಂದ ಖಿನ್ನನಾದ ಅಕ್ಬರ ಬಾದಷಹನು ಮಾರುವೇಷದಿಂದ ಕೋಟೆಯ ಒಳಹೊಕ್ಕು ವಸಿಷ್ಠಗೋತ್ರಜನಾದ ರಾಣನ ಅಳಿಯನಾದ ರಾಮಸಿಂಗನ ಬಳಿಯಲ್ಲಿ ಮುಖ್ಯ ಸೇವಕನಾಗಿ ವರ್ತಿಸುತ್ತಿದ್ದನು. ಒಂದಾನೊಂದು ಕಾಲದಲ್ಲಿ ಅಕ್ಬರನು ರಾಮಸಿಂಗನ ಜೊತೆಯಲ್ಲಿಯೇ ತಾನೂ ಅರಮನೆಯ ಒಳಹೊಕ್ಕು ಆ ರಾಣನ ಸಮೀಪಕ್ಕೆ ಹೋದನು. ಆ ರಾಣನು ಸಿಂಹಾಸನದಿಂದ ಇಳಿದು ನಿಂತಿರುವುದನ್ನು ರಾಮಸಿಂಗನು ಕಂಡು ಭಯಪಟ್ಟನು. "ನನ್ನನ್ನು ಕಂಡ ಕೂಡಲೇ ಯಾವ ಕಾರಣದಿಂದ ಸಿಂಹಾಸನದಿಂದ ಇಳಿದಿರಿ?" ಎಂಬುದಾಗಿ ರಾಮಸಿಂಗನು ಕೇಳಿದನು. "ನಿನ್ನನ್ನು ಕಂಡು ನಾನು ಸಿಂಹಾಸನದಿಂದ ಇಳಿದವನಲ್ಲ; ನಿನ್ನ ಸಂಗಡ ಬಂದವನನ್ನು ಕಂಡು ಸಿಂಹಾಸನದಿಂದ ಕೆಳಗಿಳಿದೆನು" ಎಂದನು. ಆಮೇಲೆ ಅಕ್ಬರ ಬಾದಷಹನನ್ನು ರಾಣಾರಾಯನು ಕೈಹಿಡಿದು ಸಿಂಹಾಸನದಲ್ಲಿ ಕುಳ್ಳಿರಿಸಿದನು. ಆಗ ರಾಣನು ಚಿತ್ತೋಡು ಕೋಟೆಯನ್ನು ನಜರುಕಾಣಿಕೆಯಾಗಿ ಒಪ್ಪಿಸಿ, ನೀನು ಇಲ್ಲಿಗೆ ಬಂದ ಕಾರಣವೇನು ಮತ್ತು ನನ್ನಿಂದ ಯಾವ ಕಾರ್ಯವಾಗಬೇಕು ಎಂದು ಕೇಳಿದನು. "ನಾನು ನಿನ್ನ ಕುವರಿ ಪದ್ಮಿನಿಯನ್ನು ನೋಡಲು ಬಂದಿದ್ದೇನೆ" ಎಂಬುದಾಗಿ ಅಕ್ಬರನು ಹೇಳಿದನು. "ಒಳ್ಳೆಯದು" ಎಂದು ಪದ್ಮಿನಿಯನ್ನು ಬರಮಾಡಿಕೊಂಡು ತೋರಿಸಲು, ಅಕ್ಬರ ಬಾದಷಹನು ಪದ್ಮಿನಿಯನ್ನು ತನ್ನ ಮಗಳೆಂದು ಹೇಳಿ ತೊಡೆಯ ಮೇಲೆ

ಮುದ್ದಾಡಿ ರಾಣನಂ ಕರೆದು ನೀನೆನಗಿತ್ತ ಚಿತ್ತೋಡಗಡಮಂ ಭಾಷಾಪೂರ್ವಕಮಾಗಿ ನಿನ್ನ ಮಗಳಾದ ಪದ್ಮಿನಿಗಿತ್ತೆನೆಂದುಸಿರಲಾ ಮಾತಂ ಪದ್ಮಿನಿ ಕೇಳ್ದು ತನ್ನ ತಂದೆಯ ಮೇಲೆ ಪ್ರತ್ಯರ್ಥಿಯಾಗಿ ದಂಡೆತ್ತಿ ಬಂದಾತನಿತ್ತ ಗಡಮಂ ತಾಂ ಸರ್ವಥಾ ಅಂಗೀಕರಿಸುವವಳಲ್ಲವೆಂದು ತನ್ನ ತಂದೆ ರಾಣನೊಡನುಸಿರಲಾಗಳಾ ಗಡಕೊರ್ವರುಮಧಿಕಾರಿಗಳಿಲ್ಲದಿರಲಾಗಳಾ ರಾಣನುಮಕಬರಪಾತುಷಾಹನುಮಿರ್ವರುಮೈಕಮತ್ಯಮಾಗೆ ಮಾತನಾಡಿ ಈ ಚಿತ್ತೋಡಗಡಮೆಮ್ಮಿರ್ವರ್ಗಂ ಬೇಡಮೆಂದರಮನೆಯ ಬಾಗಿಲಂ ದೃಢಮಾಗಿ ಬೀಗಮುದ್ರೆಯಂ ಮಾಡಿಸಿ ಅಕಬರಪಾತುಶಾಹಂ ಮುತ್ತಿಗೆದೆಗೆದು ಡಿಳ್ಳಿಯಂ ಸಾರಲಿತ್ತಲೀ ರಾಣಂ ಮಗಳ್ವೆರಸು ಆ ಚಿತ್ತೋಡಗಡದ ಸಮೀಪದೊಳಿರುತಿರ್ದ ಉದಯಪುರಮೆಂಬ ಪಟ್ಟಣಮಂ ಸಾರ್ದು ಸಕಲ ರಾಜವಿಭವಸಹಿತಂ ತಾನಲ್ಲಿಯೆ ನೆಲೆಯಾಗಿ ನಿಂದು ತನ್ನ ಪತ್ನಿಯೊಳೊರ್ವ ಕುಮಾರನಂ ಪಡೆದಾ ಕುಮಾರಂಗೆ ರಾಣನೆಂದು ಪೆಸರನಿಟ್ಟು ಪೋಷಣಮಂ ಮಾಡುತಿಂತಿರುತಿರ್ದಾ ರಾಣನೊಂದವಸರದೊಳ್ ಸ್ವಾರಿಮಾರ್ಗಮಂ ಪೋಗಿ ಬರುತ್ತುಂ ತತ್ಪುರದಳಿರ್ಪೊರ್ವ ವರ್ಧಕಿಯ ಮಗಳಂ ಕಂಡು ಕಾಮಿಸಿ ಆಕೆಯಂ ಪರಿಗ್ರಹಿಸಿ ಕೆಲಕಾಲಂ ವರ್ತಿಸುತ್ತುಮಿರಲಾ ಬಡಗಿಯ ಮಗಳ ಗರ್ಭದೊಳಿರ್ವರ್ ಕುಮಾರರುದ್ಭವಿಸಲವರ್ಗೆ ಶಿವಾಜಿ ಸಂಬಾಜಿಯೆಂದು ನಾಮಕರಣಮಂ ರಚಿಸಿ ಪೋಷಿಸುತ್ತುಮಿರಲ್ ಕತಿಪಯವತ್ಸರಂ ಪೋಗಲೊಡನೊಂದವಸರದೊಳಾ ರಾಣಾರಾಯನ ಕುಮಾರನಾದ ರಾಣಂ ಶಿವಾಜಿ

ಕುಳ್ಳಿರಿಸಿಕೊಂಡು ಮುದ್ದಾಡಿದನು. ರಾಣನನ್ನು ಕರೆದು ನೀನು ನನಗೆ ಒಪ್ಪಿಸಿದ ಚಿತ್ತೋಡ ಕೋಟೆಯನ್ನು ಭಾಷೆ ಕೊಟ್ಟು ನಿನ್ನ ಮಗಳಾದ ಪದ್ಮಿನಿಗೆ ನೀಡಿದ್ದೇನೆಂದು ಹೇಳಿದನು. ಈ ಮಾತನ್ನು ಪದ್ಮಿನಿಯು ಕೇಳಿ ತನ್ನ ತಂದೆಯ ಮೇಲೆ ವಿರುದ್ಧವಾಗಿ ದಂಡೆತ್ತಿ ಬಂದಾತನು ಕೊಟ್ಟ ಕೋಟೆಯನ್ನು ತಾನು ಸರ್ವಥಾ ಅಂಗೀಕರಿಸುವವಳಲ್ಲವೆಂದು ತನ್ನ ತಂದೆಯಾದ ರಾಣನೊಡನೆ ಹೇಳಿದಳು. ಹೀಗೆ ಆ ಕೋಟೆಗೆ ಒಬ್ಬರೂ ಅಧಿಕಾರಿಗಳಿಲ್ಲದಂತಾಯಿತು. ಆ ರಾಣನೂ ಹಾಗೂ ಅಕ್ಬರ ಬಾದಷಹನೂ ಐಕಮತ್ಯದಿಂದ ಮಾತನಾಡುತ್ತಾ ಈ ಚಿತ್ತೋಡು ಕೋಟೆಯು ನಮ್ಮಿಬ್ಬರಿಗೂ ಬೇಡವೆಂದು ಅರಮನೆಯ ಬಾಗಿಲಿಗೆ ಬಲವಾದ ಬೀಗಮುದ್ರೆಯನ್ನು ಮಾಡಿಸಿದರು. ಅಕ್ಬರ ಬಾದಷಹನು ಮುತ್ತಿಗೆಯನ್ನು ತೆಗೆಸಿ ಡಿಲ್ಲಿಗೆ ಹೋದನು. ಈ ರಾಣನೂ ಹಾಗೂ ಇವನ ಮಗಳೂ ಕೂಡಿಕೊಂಡು ಆ ಚಿತ್ತೋಡ ಕೋಟೆಯ ಸಮೀಪದಲ್ಲಿ ಇದ್ದ ಉದಯಪುರವೆಂಬ ಪಟ್ಟಣವನ್ನು ಸೇರಿ, ಸಕಲ ರಾಜವೈಭವಗಳೊಡನೆ ಅಲ್ಲಿಯೆ ನೆಲೆಯಾಗಿ ನಿಂತರು. ಆಗ ರಾಣನಿಗೆ ತನ್ನ ಪತ್ನಿಯಲ್ಲಿ ಒಬ್ಬ ಕುಮಾರನು ಜನಿಸಿದನು. ಆ ಕುಮಾರನಿಗೂ ರಾಣನೆಂದು ನಾಮಕರಣಮಾಡಿ ಕಾಪಾಡುತ್ತಿದ್ದರು. ಒಂದಾನೊಂದು ಕಾಲದಲ್ಲಿ ರಾಣನು ಪಟ್ಟಣದ ಮಾರ್ಗದಲ್ಲಿ ಹೋಗಿ ಬರುತ್ತಿದ್ದಾಗ ಬಡಗಿಯ ಮಗಳೊಬ್ಬಳನ್ನು ಕಂಡು ಕಾಮಿಸಿ, ಆಕೆಯನ್ನು ಪರಿಗ್ರಹಿಸಿದನು. ಕೆಲವು ಕಾಲದ ಅನಂತರ ಬಡಗಿಯ ಮಗಳ ಗರ್ಭದಲ್ಲಿ ಇಬ್ಬರು ಕುವರರು ಜನಿಸಿದರು. ಅವರಿಗೆ ಶಿವಾಜಿ, ಸಂಬಾಜಿ ಎಂದು ನಾಮಕರಣ ಮಾಡಿ ಕಾಪಾಡುತ್ತಿದ್ದರು. ಹೀಗೆ ಅನೇಕ ವರ್ಷಗಳು ಕಳೆದ ಅನಂತರ ಒಂದಾನೊಂದು ಕಾಲದಲ್ಲಿ ರಾಣಾರಾಯನ ಕುಮಾರರಾದ ರಾಣ, ಶಿವಾಜಿ ಹಾಗೂ ಸಂಬಾಜಿಗಳು ಕೂಡಿಕೊಂಡು ಮೂವರೊಂದಾಗಿ ಅನ್ಯೋನ್ಯದಿಂದ ಕಾಡಿಗೆ ಹೋಗಿ ಮೃಗ ಬೇಟೆಯನ್ನಾಡಿದರು. ಅನಂತರ ಬಳಲಿಕೆಯಾಗಲು

**ಸಂಬಾಜಿಗಳ್ವೆರಸು ತಾಮನ್ಯೋನ್ಯವೃತ್ತಿಯಿಂ ಮೂವರ್ ಕುವರರೊಂದಾಗಿ ಮೃಗಯಾವ್ಯಸನಕ್ಕೈದಿ ಬೇಂಟೆಯನಾಡಿ ಬಳಲ್ದಾಮೂವರುಮೊಂದು ವೃಕ್ಷಚ್ಛಾಯೆಯಂ ಸಾರ್ದು ಮಲಗಿರಲವರೊಳಾ ಶಿವಾಜಿಯೆಂಬವಂ ರಾಣನಂ ಕರೆದೀ ವೃಕ್ಷದ ಜಾತಿಯ ಪೆಸರೇನೆಂದು ಬೆಸಗೊಳಲಾಂ ಕ್ಷತ್ರಿಯಪುತ್ರನೀ ವೃಕ್ಷದ ಜಾತಿಸ್ವಭಾವಮಂ ವರ್ಧಕಿಸ್ತ್ರೀಸಮುದ್ಭವರೇ ಬಲ್ಲರೆನಲಾ ಮಾತು ತಮ್ಮ ಮರ್ಮಮಂ ತಾಗಲಾಗಳಾ ಮಾತಂ ಶಿವಾಜಿ ತನ್ನ ಮನದೊಳಿಟ್ಟು ಸೈರಿಸಿಯಾ ಮೂವರುಮುದಯಪುರಕ್ಕೈತಂದ ಬಳಿಕ್ಕಂ ಆ ಶಿವಾಜಿ ಸಂಬಾಜಿಗಳಾಲೋಚಿಸಿ ತಾಂ ಬಡಗಿವೆಣ್ಣಿನೊಳುದ್ಭವಿಸಿದ ಮುಂದೆ ರಾಜತ್ವಕ್ಕನರ್ಹರಾದೆವಿನ್ನಿಂತುರ್ಪುದನುಚಿತಮೆಂದು ತತ್ಪುರದೊಳಿರ್ಪ ಓಂಕಾರೇಶ್ವರಲಿಂಗಮಂ ಭಜಿಸಲಾ ಓಂಕಾರೇಶ್ವರಂ ಶಿವಾಜಿಯ ಸ್ವಪ್ನದೊಳ್ ಬ್ರಾಹ್ಮಣವೇಷದಿಂ ಪ್ರಸನ್ನನಾಗಿ ನಿಮಗೆ ರಾಜತ್ವವನಿತ್ತಪೆನಿದಕ್ಕೆ ಕುರುಹೇನೆಂದೊಡೆ ನೀವಿರ್ವರುಂ ಮುನ್ನಿನಂತೆ ಮೃಗಯಾವ್ಯಸನಕೆಂದೈದಲ್ ನೀಂ ತೊಟ್ಟಂಗಿಯ ಸೆರಗೊಂದು ಗಿಡಕ್ಕೆ ಸಿಲುಂಕುವದಲ್ಲಿಯಗುಳ್ಚಿಸಿ ನೋಡಲಪರಿಮಿತ ನಿಕ್ಷೇಪಂ ಕೈಸಾರ್ಪುದದರಿಂ ಮುಂದೆ ನೀಂ ದಿನದಿನದೊಳ್ ವರ್ಧಿಷ್ಣುಗಳಾಗಿ ಪ್ರತ್ಯೇಕರಾಜರೆನಿಸಿ ಪ್ರಸಿದ್ಧಿಯಂ ಪಡೆವಿರೆಂದುಸಿರ್ದು ಮಾಯಮಾಗಲ್ಕೆಚ್ಚತ್ತು ತಾನಾ ಸ್ವಪ್ನಾಭಿಪ್ರಾಯ ಮನದೆಗೊಂಡು ತನ್ನ ತಮ್ಮ ಸಂಬಾಜಿಗುಸಿರ್ದು ಈ ಸ್ವಪ್ನಾಭಿಪ್ರಾಯಫಲ ನಿದರ್ಶನಮಂ ನೋಡವೇಳ್ಕೆಂದು ಮೃಗಯಾವ್ಯಸನವ್ಯಾಜದಿಂ ತಾಮಿರ್ವರುಮೊಂದಾಗಿ ವೈಹಾಳಿಯಂ ಪೊರಟು ಪೋಗುತ್ತಿರಲಾ ವೇಳೆಯೊಳ್ ಶಿವಾಜಿ**

ಮೂವರೂ ಒಂದು ಮರದ ನೆರಳನ್ನು ಆಶ್ರಯಿಸಿ ಮಲಗಿದ್ದರು. ಅವರಲ್ಲಿ ಒಬ್ಬನಾದ ಶಿವಾಜಿಯೆಂಬವನು ರಾಣನನ್ನು ಕರೆದು ಈ ಮರದ ಜಾತಿಯ ಹೆಸರೇನೆಂದು ಕೇಳಿದನು. ಕ್ಷತ್ರಿಯಪುತ್ರನಾದ ರಾಣನು "ಈ ಮರದ ಜಾತಿಯ ಸ್ವಭಾವವನ್ನು ಬಡಗಿ ಹೆಣ್ಣಿನ ಮಕ್ಕಳೇ ಬಲ್ಲರು!" ಎಂಬುದಾಗಿ ಹೇಳಿದನು. ಈ ಮಾತು ಶಿವಾಜಿಯ ಮನಸ್ಸಿಗೆ ಬಲವಾಗಿ ನಾಟಿತು. ಇದನ್ನು ತನ್ನ ಮನಸ್ಸಿನಲ್ಲಿಟ್ಟು ಸಹಿಸಿಕೊಂಡು ಮೂವರೂ ಉದಯಪುರಕ್ಕೆ ಬಂದರು. ಆ ಬಳಿಕ ಶಿವಾಜಿ ಹಾಗೂ ಸಂಬಾಜಿಗಳು ತಾವು ಬಡಗಿಹೆಣ್ಣಿನಲ್ಲಿ ಜನಿಸಿದ ಮೇಲೆ ರಾಜ್ಯಾಧಿಕಾರಕ್ಕೆ ಅರ್ಹರಲ್ಲವಾದ್ದರಿಂದ ಇಲ್ಲಿರುವುದು ಉಚಿತವಲ್ಲವೆಂದು ಆಲೋಚಿಸಿದರು. ಈ ಈರ್ವರೂ ಪಟ್ಟಣದಲ್ಲಿದ್ದ ಓಂಕಾರೇಶ್ವರ ಲಿಂಗವನ್ನು ಭಕ್ತಿಯಿಂದ ಮನಃಪೂರ್ವಕವಾಗಿ ಭಜಿಸಿದರು. ಒಂದು ದಿನ ಶಿವಾಜಿಯ ಕನಸಿನಲ್ಲಿ ಓಂಕಾರೇಶ್ವರನು ಬ್ರಾಹ್ಮಣವೇಷದಿಂದ ಪ್ರಸನ್ನನಾಗಿ "ನಿಮಗೆ ರಾಜತ್ವವನ್ನು ಕೊಡುವೆನು" ಎಂದು ವರವಿತ್ತನು. "ಇದಕ್ಕೆ ಕುರುಹು ಏನು" ಎಂಬುದಾಗಿ ಪ್ರಶ್ನಿಸಲು "ನೀವಿಬ್ಬರೂ ಮುಂಚಿನಂತೆ ಮೃಗಬೇಟೆ ನಡೆಸುವಾಗ ನೀನು ತೊಟ್ಟ ಅಂಗಿಯ ಸೆರಗು ಒಂದು ಗಿಡಕ್ಕೆ ಸಿಕ್ಕಿಕೊಳ್ಳುವುದು; ಅದನ್ನು ಕಿತ್ತು ಅಗೆಸಿ ನೋಡಿದರೆ ಅಪಾರನಿಧಿ ಹಾಗೂ ಹಣಗಳು ನಿಮ್ಮ ಕೈಸೇರುತ್ತವೆ; ಮುಂದೆ ನೀವು ಅಭಿವೃದ್ಧಿ ಹೊಂದುತ್ತಾ ಪ್ರತ್ಯೇಕ ರಾಜರು ಎನಿಸಿಕೊಂಡು ಪ್ರಸಿದ್ಧಿಯನ್ನು ಹೊಂದುವಿರಿ" ಎಂಬುದಾಗಿ ಹೇಳಿ ಮಾಯವಾದನು. ಆಗ ಎಚ್ಚೆತ್ತು ತಾನು ಸ್ವಪ್ನಾಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ತನ್ನ ತಮ್ಮ ಸಂಬಾಜಿಗೆ ಶಿವಾಜಿಯು ಹೇಳಿದನು. ಬಳಿಕ ಈ ಸ್ವಪ್ನಾಭಿಪ್ರಾಯದ ಫಲವನ್ನು ನಿದರ್ಶನ ಮಾಡಿಕೊಳ್ಳಲು ನೋಡಬೇಕೆಂದು ತಾವೀರ್ವರೇ ವಿಹಾರ ಮಾಡುತ್ತಾ ಮೃಗಬೇಟೆಗೆ ಹೋದರು. ಆ ವೇಳೆಯಲ್ಲಿ ಶಿವಾಜಿಯು ತೊಟ್ಟಿದ್ದ ಅಂಗಿಯ ಭಾಗವೊಂದು ಗಿಡವೊಂದಕ್ಕೆ

ತೊಟ್ಟಿರ್ದಂಗಿಯ ಸೆರಗೊಂದು ಗಿಡುವಿಂಗೆ ತೊಡಂಗಲಲ್ಲಿ ನಿಂದು ಆ ತಾಣವನುಗುಳ್ಚಿಸಿ ನೋಡಲಲ್ಲಿ ಭೂರಿನಿಕ್ಷೇಪಮಿರಲದಂ ಸಾಧ್ಯಮಂ ಮಾಡಿಕೊಂಡು ಬಳಿಕ್ಕಾ ಶಿವಾಜಿ ಸಂಬಾಜಿಯೆಂಬಿರ್ವರುಂ ಕಾಶೀಕ್ಷೇತ್ರಕ್ಕೈದಿ ನಾಗಭಟ್ಟನೆಂಬ ವಿದ್ವಾಂಸನಂ ಬರಿಸಿಕೊಂಡು ತಮ್ಮ ಮೂಲವೃತ್ತಾಂತಮನೆಲ್ಲಮನು ಸಿರಲಾ ವೃತ್ತಾಂತಮನೆಲ್ಲಮಂ ಕೇಳ್ದು ನೀಂ ಜನಿಸಿದ ಭೂಮಿ ನೀಚಜಾತಿಯದಾದೊಡಮಾ ಭೂಮಿಯಲ್ಲಿ ಬಿತ್ತಿದ ಬೀಜಂ ಕ್ಷತ್ರಿಯಬೀಜಮಾದ ಕಾರಣದಿಂ ನೀಂ ಉಪನಯನಕ್ಕರ್ಹರೆಂಬುದು ಸಿರ್ದು ಬಳಿಕ್ಕವರ್ಗಂ ಭಾರದ್ವಾಜಗೋತ್ರಜರೆಂದು ಉಪನಯನಮಂ ರಚಿಸಿ ಬೀಳ್ಕೊಡಲ್ ಬಳಿಕ್ಕಂ ಕ್ಷತ್ರಿಯವಂಶಜರಾದ ರಜಪೂತರ್ಗೆ ದಾಯಾದರೆನಿಸಿ ಪ್ರಖ್ಯಾತಿವೆತ್ತ ಶಿವಾಜಿ ಸಂಬಾಜಿಯೆಂಬಿರ್ವರುಂ ಪ್ರತ್ಯೇಕವಜೀರರೆಂದೆನಿಸಿ ವರ್ತಿಸುತ್ತುಮಿರ್ದರ್ ಮುಂತವರ ವಂಶಪರಂಪರೆಯೊಳ್

ಕಂ॥ ಹರಿಜಿಯೊಗೆದಂ ತದಾತ್ಮಜ
ಸುರುತರ ನೇತೋಜಿ ತತ್ಸುತಂ ಶಾಜಿಯುಮಾ
ವರಶಾಜಿಯ ಸುಕುಮಾರರ್
ಪರಿಕಿಸೆ ವಿಲಸಚ್ಛಿವಾಜಿ ಯೇಕೋಜಿ ವಲಂ ೧೦

ವ॥ ಇಂತೊಗೆದ ಶಾಜಿಯ ಪುತ್ರರಿರ್ವರೊಳಾ ಶಾಜಿಯ ಜ್ಯೇಷ್ಠಪತ್ನಿ ಜಾಜಾಬಾಯಿಯ ಬಸಿರೊಳೊಗೆದ ಕುಮಾರಂ ಶಿವಾಜಿ ತಚ್ಛಾಜಿಯ ಕನಿಷ್ಠಪತ್ನಿಯೊಳೊಗೆದ ಕುಮಾರನೇಕೋಜಿಯೆಂದು ತಿಳಿವುದಂತುಮಲ್ಲದೆಯುಂ

ಸಿಕ್ಕಿಕೊಂಡಿತು. ಅಲ್ಲಿ ನಿಂತು ಆ ಭಾಗವನ್ನು ಅಗೆಸಿ ನೋಡಲು ಅಪರಿಮಿತ ನಿಧಿ ನಿಕ್ಷೇಪಗಳು ದೊರಕಿದವು. ಅದನ್ನು ತಮ್ಮ ಕೈವಶ ಮಾಡಿಕೊಂಡು ನಂತರ ಶಿವಾಜಿ ಹಾಗೂ ಸಂಬಾಜಿ ಈ ಈರ್ವರೂ ಕಾಶೀಕ್ಷೇತ್ರಕ್ಕೆ ಹೋದರು. ಅಲ್ಲಿ ನಾಗಭಟ್ಟನೆಂಬ ವಿದ್ವಾಂಸನಲ್ಲಿ ತಮ್ಮ ಮೂಲವೃತ್ತಾಂತಗಳೆಲ್ಲವನ್ನೂ ತಿಳಿಸಿದರು. ಆತನು ಇದೆಲ್ಲವನ್ನೂ ಕೇಳಿ ತಿಳಿದು "ನೀವು ಜನಿಸಿದ್ದು ನೀಚಜಾತಿಯಲ್ಲಾದರೂ, ಬಿತ್ತಿದ ಬೀಜವು ಕ್ಷತ್ರಿಯಕುಲವಾದ ಕಾರಣದಿಂದ ನೀವು ಉಪನಯನಕ್ಕೆ ಅರ್ಹರು" ಎಂಬುದಾಗಿ ಹೇಳಿದನು. ಆ ಬಳಿಕ ಅವರಿಗೆ ಭಾರದ್ವಾಜಗೋತ್ರದಿಂದ ಉದ್ಭವಿಸಿದವರೆಂಬುದಾಗಿ ನಿರೂಪಿಸಿ ಉಪನಯನವನ್ನು ಮಾಡಿದರು. ಹೀಗೆ ಕ್ಷತ್ರಿಯವಂಶಜರಾಗಿ ರಜಪೂತರಿಗೆ ದಾಯಾವಾದಿಗಳೆನಿಸಿಕೊಂಡು ಪ್ರಖ್ಯಾತಿ ಹೊಂದಿ, ಶಿವಾಜಿ ಹಾಗೂ ಸಂಬಾಜಿ ಸಹೋದರರು ವಜೀರನೆನಿಸಿಕೊಂಡು ಇರುತ್ತಿದ್ದರು. ಮುಂದೆ ಅವರ ವಂಶಪರಂಪರೆಯಲ್ಲಿ, ೧೦. ಹರಿಜಿ ಎಂಬವನು ಹುಟ್ಟಿದನು; ಅವನ ಮಗ ನೇತೋಜಿ; ಇವನ ಮಗ ಶಾಜಿ; ಈ ಶಾಜಿಯ ಮಕ್ಕಳು ಶಿವಾಜಿ ಮತ್ತು ಏಕೋಜಿ ಎಂಬವರು. ವ॥ ಈ ರೀತಿ ಹುಟ್ಟಿದ ಶಾಜಿಯ ಗಂಡು ಮಕ್ಕಳಿಬ್ಬರಲ್ಲಿ ಶಾಜಿಯ ಹಿರಿಯ ಹೆಂಡತಿ ಜಾಜಾಬಾಯಿಯ ಗರ್ಭದಲ್ಲಿ ಶಿವಾಜಿಯೆಂಬ ಕುಮಾರನೂ, ಕನಿಷ್ಠ ಪತ್ನಿಯಲ್ಲಿ ಏಕೋಜಿಯೆಂಬ ಕುವರನೂ

ಕಂ|| ಮೆರೆವೇಕೋಜಿಯ ಪುತ್ರರ್
ಪರಿಕಿಪೊಡಂ ಶಾಜಿಯೆಸೆವ ಶರಭಜಿ ಮತ್ತಾ
ಕಿರಿಯ ಕುಮಾರಂ ಭೂತಳ
ವರಿಯಲ್ ತುಕ್ಕೋಜಿಯಿಂತು ಮೂವರ್ ತನುಜರ್ ೧೧

ವ|| ಅಂತುಮಲ್ಲದೆ

ಕಂ|| ಶಾಜಿಯ ನಂದನನೆನಿಪ ಶಿ
ವಾಜಿಗೆ ಸಂಭೂತನಾದ ಪಿರಿಯ ಮಗಂ ಸಂ
ಬಾಜಿ ಕನಿಷ್ಠಸುತಂ ವಿ
ಭ್ರಾಜಿಸುತಿಹ ರಾಮರಾಜನಿಂತಿವರಿರ್ವರ್ ೧೨

ವ|| ಇಂತೊಗೆದ ಶಿವಾಜಿಯ ಪುತ್ರರಿರ್ವರೊಳಾ ಶಿವಾಜಿಯ ಜ್ಯೇಷ್ಠ ಪತ್ನಿ ಜಿವಾಬಾಯಿಯ ಬಸಿರೊಳೊಗೆದ ಪುತ್ರಂ ಸಂಬಾಜಿ ತತ್ ಕನಿಷ್ಠ ಪತ್ನಿಯಾದ ಜಾಧವರಾಯನ ಕುಮಾರಿ ತಾರಾಬಾಯಿಯ ಬಸಿರೊಳುದ್ಭವಿಸಿದ ಕುಮಾರಂ ರಾಮರಾಜನಾ ರಾಮರಾಜನೇ ರಾಜೇರಾಮನೆಂದು ನೆಗಳ್ತೆವೆತ್ತನಂತುಮಲ್ಲದೆಯುಂ

ಕಂ|| ಕರಮೆಸೆವಾ ಸಂಬಾಜಿಯ
ವರತನುಜಂ ಸಾಹುರಾಜನೆಂದೆನಿಪಂ ಭಾ
ಸುರ ತತ್‌ಸಂಬಾಜಿಯ ಸೋ
ದರನೆನಿಸುವ ರಾಮರಾಜಗಿರ್ವರ್ ಸತಿಯರ್ ೧೩

ಅವರೊಳ್ ಜ್ಯೇಷ್ಠವಧೂಸಂ
ಭವನಭಿಧಾನಂ ಶಿವಾಜಿ ಕಿರಿವೆಂಡತಿಯೊಳ್
ತವೆ ಜನಿಸಿದ ಸುಕುಮಾರಂ
ವಿವರಿಸೆ ಸಂಬಾಜಿಯವಗೆ ನಂದನರಿರ್ವರ್ ೧೪

ಜನಿಸಿದರೆಂಬುದಾಗಿ ತಿಳಿಯತಕ್ಕುದು. ಅಂತು ಅಲ್ಲದೆ, ೧೧. ಏಕೋಜಿಯ ಮಕ್ಕಳು ಶಾಜಿ, ಶರಭಜಿ ಎಂಬುವರು; ಮೂರನೆಯವನಾದ ತುಕ್ಕೋಜಿ ಎಂಬವನು ಪ್ರಸಿದ್ಧನಾದವನು; ಹೀಗೆ ಏಕೋಜಿಗೆ ಮೂವರು ಮಕ್ಕಳು, ಅಂತೂ ಅಲ್ಲದೆ ೧೨. ಶಾಜಿಯ ಮಗನಾದ ಶಿವಾಜಿಗೆ ಹಿರಿಯ ಮಗ ಸಂಬಾಜಿ; ಕಿರಿಯ ಮಗ ರಾಮರಾಜ; ಹೀಗೆ ಶಿವಾಜಿಗೆ ಇಬ್ಬರು ಮಕ್ಕಳು. ವ|| ಈ ರೀತಿ ಹುಟ್ಟಿದ ಶಿವಾಜಿಯ ಪುತ್ರರಿಬ್ಬರಲ್ಲಿ, ಶಿವಾಜಿಯ ಹಿರಿಯ ಹೆಂಡತಿಯಾದ ಜೀವಾಬಾಯಿಯ ಗರ್ಭದಲ್ಲಿ ಹುಟ್ಟಿದ ಮಗನೇ ಸಂಬಾಜಿ; ಕಿರಿಯ ಹೆಂಡತಿಯಾದ ಜಾಧವರಾಯನ ಕುವರಿ ತಾರಾಬಾಯಿಯ ಗರ್ಭದಲ್ಲಿ ಜನಿಸಿದ ಕುಮಾರನು ರಾಮರಾಜ; ಈ ರಾಮರಾಜನೇ ರಾಜೇರಾಮನೆಂದು ಪ್ರಸಿದ್ಧಿ ಪಡೆದನು. ಅಂತೂ ಅಲ್ಲದೆ. ೧೩. ಸಂಬಾಜಿಯ ಮಗ ಸಾಹುರಾಜ; ಸಂಬಾಜಿಯ ಸಹೋದರನಾದ ರಾಮರಾಜನಿಗೆ ಇಬ್ಬರು ಹೆಂಡಿರು. ೧೪. ಅವರಲ್ಲಿ ಹಿರಿಯ ಹೆಂಡತಿಯ ಮಗನ ಹೆಸರು ಶಿವಾಜಿ; ಕಿರಿಯ ಹೆಂಡತಿಯಲ್ಲಿ ಹುಟ್ಟಿದವನು ಸಂಬಾಜಿ; ಹೀಗೆ

**ವ|| ಇನ್ನು ಡಿಳ್ಳಿಯನಾಳ್ದ ತುರುಷ್ಕರ ವಂಶವಿವರಣಮಂ ಪೇಳ್ವೆನದೆಂತೆಂದೊಡೆ : - ಡಿಳ್ಳಿಯೆಂಬುದಾದಿಯೊಳ್ ಹಸ್ತಿನಾವತಿ ಆ ಸಂಸ್ಥಾನಮಂ ದುರ್ಯೋಧನನನಂತರಂ ಧರ್ಮರಾಯನಾಳ್ದ. ತದನಂತರಂ ಪರೀಕ್ಷಿತಮಹಾರಾಯನಾಳ್ದನಾ ತರುವಾಯಂ ಕೆಲಬರ್ ಜಾತಿಕ್ಷತ್ರಿಯರಾಳ್ದರಾ ತರುವಾಯಂ ಕೆಲಬರಾಭಾಸ ಕ್ಷತ್ರಿಯರಾಳ್ದರಾ ತರುವಾಯಂ ಮಿಶ್ರಜಾತಿಯವರಾಳ್ದರಾ ತರುವಾಯಂ ರಜಪೂತಸಂತತಿಯೊಳುದಿಸಿದ ಜಯಚಂದ್ರನರೇಂದ್ರನಾಳ್ದನಾತನ ತರುವಾಯಂ ತದ್ವಂಶಜನಾದ ಅನಂಗಪಾಲಂ ವರ್ಷ ೩೬ ಪೃಥುರಾಜಂ ವರ್ಷ ೬ ಉಭಯಂ ವರ್ಷ ೪೨ ಆ ತರುವಾಯಂ ಪಠಾಣಜಾತಿಯವರಾಳ್ದರವರೊಳ್ ಸುಲ್ತಾನ ವರ್ಷ ೪೦ ಸುಲ್ತಾನ ಶಹಮೋದೀನ್ ವರ್ಷ ೨೭ ಮಾಸ ೭ ಶಾಹಾಸುದೀನ್ ಘೋರಿ ವರ್ಷ ೨೦ ಮಾಸ ೧೦ ಸುಲ್ತಾನ ಫೇರೋದಶಾಹ ವರ್ಷ ೧೦ ಮಾಸ ೭ ಈತನ ಪತ್ನಿ ಶಾಹಾ ಮಸೂದಾಬೀಬಿ ಪಾಜಿ ವರ್ಷ ೭ ಮಾಸ ೬. ಶಾಹಾ ಮೈನುದೀನ್ ವರ್ಷ ೭ ಮಾಸ ೧ ಮಸೂದನಶಾಹಾ ರಣತಿ (?) ತಿಂಗಳು ೫ ನಸೀಮದೀನ್ ಘೋರಿ ವರ್ಷ ೩೦ ತಿಂಗಳು ೬ ಗಯಾಸುದೀನ್ ಘೋರಿ ವರ್ಷ ೨೩ ಮಾಸ ೪ ಶಾಹಾ ಕುತುಬಘೋರಿ ವರ್ಷ ೩ ಮಾಸ ೮ ಶಾಹಾನಸೀಮದೀನ್ ಘೋರಿ ವರ್ಷ ೬ ಮಾಸ ೫ ಶಾಹಾ ಅಲ್ಲಾವುದೀನ್ ವರ್ಷ ೫೮ ಮಾಸ ೪ ಶಾಹಾಕುತುಬದೀನ್ ವರ್ಷ ೪೮ ಮಾಸ ೩ ಶರಶಾಹಾ ಸುರ (?) ಅಭಗ ವರ್ಷ ೬ ತಿಂಗಳು ೮ ಅಂತುಂ ಪಠಾಣರಾಳಿದುದು ವರ್ಷ ೨೯೦. ಆ ತರುವಾಯಂ ಮೊಗಲರ್: - ಸುಲ್ತಾನ ಕುಸು ವರ್ಷ ೮ ಮಾಸ ೬ ಸುಲ್ತಾನ ಪೇರೋದಶಾಹಾ ಖತನು ಪಾತುಶಾಹಾ ವರ್ಷ ೩೮ ಮಾಸ ೫ ಮಹಮ್ಮದುಲ್ಲಾ ನಸಲಕ್ಕ ವರ್ಷ ೬ ಮಾಸ ೬ ಈ ಮಹಮ್ಮದುಲ್ಲಾ ನಸಲಕ್ಕಾ ಪಾತುಶಾಹಂ ತೊಗಲ ನಾಣ್ಯ ನಡೆಸಿದಂ ಆಮೇಲೆ ಶಾಹಾ ಸುಲ್ತಾನ**

ರಾಮರಾಜನಿಗೆ ಇಬ್ಬರು ಮಕ್ಕಳು. ವ|| ಇನ್ನು ಡಿಲ್ಲಿಯನ್ನು ಆಳಿದ ಮುಸಲ್ಮಾನರ ವಂಶದ ವಿವರಣೆಯನ್ನು ಹೇಳುವೆನು. ಅದು ಯಾವ ರೀತಿಯೆಂದರೆ-ಡಿಲ್ಲಿಯೆಂಬುದು ಮೊದಲು ಹಸ್ತಿನಾವತಿಯಾಗಿತ್ತು. ಆ ಸಂಸ್ಥಾನವನ್ನು ದುರ್ಯೋಧನನ ಅನಂತರ ಧರ್ಮರಾಯನು ಆಳಿದನು. ಅನಂತರ ಪರೀಕ್ಷಿತ ಮಹಾರಾಜನು ಆಳಿದನು. ತರುವಾಯ ಕೆಲವರು ಕ್ಷತ್ರಿಯ ಜಾತಿಯವರು ಆಳಿದರು. ಆ ಬಳಿಕ ಕ್ಷತ್ರಿಯರೆಂದುಕೊಳ್ಳುತ್ತಿದ್ದ ಕೆಲವರು ಆಳಿದರು. ಆಮೇಲೆ ಮಿಶ್ರಜಾತಿಯವರು ಆಳಿದರು; ಆಮೇಲೆ ರಜಪೂತಸಂತತಿಯಲ್ಲಿ ಜನಿಸಿದ ಜಯಚಂದ್ರನರೇಂದ್ರನು ರಾಜ್ಯವಾಳಿದನು. ಈತನ ತರುವಾಯ ಆ ವಂಶದವನಾದ ಅನಂಗಪಾಲ ೩೬ ವರ್ಷ, ಪೃಥುರಾಜ ೬ ವರ್ಷ, ಸೇರಿ ೪೨ ವರ್ಷಗಳು; ಆಮೇಲೆ ಪಠಾಣಜಾತಿಯವರು ಆಳಿದರು. ಅವರಲ್ಲಿ ಸುಲ್ತಾನ್ ೪೦ ವರ್ಷ, ಸುಲ್ತಾನ್ ಶಹಮೋದೀನ್ ೨೭ ವರ್ಷ ೭ ಮಾಸ, ಶಾಹಾಸುದೀನ್ ಘೋರಿ ೨೦ ವರ್ಷ ೧೦ ತಿಂಗಳು, ಸುಲ್ತಾನ ಫೇರೋದಶಾಹ ೧೦ ವರ್ಷ ೭ ತಿಂಗಳು, ಈತನ ಪತ್ನಿ ಶಾಹಾ ಮಸೂದಾಬೀಬಿಪಾಜಿ ೭ ವರ್ಷ ೬ ತಿಂಗಳು, ಶಾಹಾ ಮೈನುದೀನ್ ೭ ವರ್ಷ ೧ ತಿಂಗಳು, ಮಸೂದನ ಶಾಹಾ ರಣತಿ (?) ೫ ತಿಂಗಳು, ನಸೀಮುದೀನ್ ಘೋರಿ ೩೦ ವರ್ಷ ೬ ತಿಂಗಳು, ಗಯಾಸುದೀನ್ ಘೋರಿ ೨೨ ವರ್ಷ ೪ ತಿಂಗಳು, ಶಾಹಾಕುತುಬ ಘೋರಿ ವರ್ಷ ೩ ತಿಂಗಳು ೮, ಶಾಹಾ ನಸೀಮದೀನ್ ಘೋರಿ ೬ ವರ್ಷ ೬ ತಿಂಗಳು, ಶಾಹಾ ಅಲ್ಲಾವುದೀನ್ ೫೮ ವರ್ಷ ೪ ತಿಂಗಳು, ಶಾಹಾ ಕುತುಬುದೀನ್ ೪೮ ವರ್ಷ ೩ ತಿಂಗಳು, ಶರಶಾಹಾಸುರ (?) ಆಭಗ ೬ ವರ್ಷ ೮ ತಿಂಗಳು. ಈ ರೀತಿ ಅಂತು ಪಠಾಣರು ೨೯೦ ವರ್ಷಗಳವರೆಗೆ ಆಳಿದರು. ವ|| ಆ ತರುವಾಯ ಮೊಗಲರು- ಸುಲ್ತಾನ ಕುಸ್ರು ೮ ವರ್ಷ ೬ ತಿಂಗಳು, ಸುಲ್ತಾನ ಪೇರೋದ ಶಾಹಾ ಖತನು ಪಾತುಶಾಹ (ಬಾದಷಹ) ೩೮ ವರ್ಷ ೫ ತಿಂಗಳು, ಮಹಮ್ಮದುಲ್ಲಾ ನಸಲಕ್ಕ

ಮಹಮ್ಮುದ ತೋಬರ ವರ್ಷ ೧೨ ಮಾಸ ೫ ಶಾಮಾಯಿಯಾಸನ್ (?) ವರ್ಷ ೧ ಮಾಸ ೪ ಸುಲ್ತಾನ ಹಮ್ಮೀರ ವರ್ಷ ೨೦ ತಿಂಗಳು ೧೦ ಸುಲ್ತಾನ ಬಹಿಲೋಲಲೂದಿ ವರ್ಷ ೩೮ ಮಾಸ ೫ ಶಿಖೇಂದ್ರ ಲೋದಿ ವರ್ಷ ೨೮ ಮಾಸ ೭ ಇಭರಾಮ ಲೋದಿ ವರ್ಷ ೧೦ ಬಾಬರ್ ಪಾತುಶಾಹಾ ವರ್ಷ ೪ ಮಾಸ ೧೦ ಹಮ್ಮಾವು ವರ್ಷ ೧೪ ಮಾಸ ೨ ಅಂತು ವರ್ಷ ೧೮೪. ಆಮೇಲೆ ಇತ್ತ ಕೇವಲ ಪ್ರಖ್ಯಾತಿವೆತ್ತರೊಳ್ ಫಕೀರೇಶ್ವರನ ಕೃಪೆಯಿಂ ತಕಥನಾಳ್ದ (ತಿಮಿರಲಂಗ್) ವರ್ಷ ೨೭ ಮಾಸ ೮ ಬಾಬರ್ ಲಂಗ ವರ್ಷ ೭ ಮಾಸ ೯ ಸರೀಮಶಾಹಾ ಪೆಸರಶೇರುಶಾಹಾ ವರ್ಷ ೮ ಮಾಸ ೧೦ ಮಸೂದಶಾಹಾ ಶರೀರಮನ್ (?) ಮಾಸ ೧ ಶಾಹಾಹಮ್ಮಾವು ತಿಂಗಳು ೯ ಮಸೂದ ಶಾಹಾ ಜಲಾವುದೀನ್ ವರ್ಷ ೫೦ ಮಾಸ ೧ ಜಹಂಗೀರ್ ವರ್ಷ ೨೦ ಮಾಸ ೧ ಶೆರಜಾನ್ ವರ್ಷ ೩೨ ಅವರಂಗಜೇಬ ವರ್ಷ ೫೨ ಮಾಸ ೬ ಶಾಹಾ ಅಲ್ಲಿ ವರ್ಷ ೫ ಮಾಸ ೫ ಫರಕ್ಷಾಹ ವರ್ಷ ೨ ಮಾಸ ೬ ಆಮೇಲೆ ಮೌಭದೀನ್ ವರ್ಷ ೨ ಮಾಸ ೧೧ ಅಜಂ ಮೌಜದೀನ್ ವರ್ಷ ೧ ಮಾಸ ೧೦ ಫರಕ್ಷಾಹ ವರ್ಷ ೩ ಮಹಮುದ್ದ ಅಜಂ ರಾಜದೀನ್ ವರ್ಷ ೧ ಮಾಸ ೬ ಅಂತುಂ ವರ್ಷ ೨೧೮ ಮಾಸ ೯ ಅಂತುಂ ಶಾಲಿವಾಹನ ಶಕ ವರ್ಷ ೧೬೫... ನೆಯ ಶಾರ್ವರಿ ಸಂವತ್ಸರದ ಮಾರ್ಗಶಿರ ೩೦ ವರೆಗೆ ಆಳ್ದರ್ ಇಂತು ಪೂರ್ವಮಾರಭ್ಯ ದಿಳ್ಳಿಯನಾಳ್ದವರೊಳಿತ್ತಂ ಸುಲ್ತಾನನಾದಿಯಾಗಿ ವಂಶಪರಂಪರಾವಿವರಂ ತತ್ತಚ್ಚರಿತ್ರಂಗಳಂ ಪದ್ಯರೂಪದಿಂ ಪೇಳ್ವೆನದೆಂತೆಂದೊಡೆ

೬ ವರ್ಷ ೬ ತಿಂಗಳು, ಈ ಮಹಮ್ಮದುಲ್ಲಾ ನಸಲಕ್ ಬಾದಷಹನು ಚರ್ಮದ ನಾಣ್ಯವನ್ನು ಚಲಾವಣೆ ಮಾಡಿದನು. ಆಮೇಲೆ ಶಾಹಾಸುಲ್ತಾನ ಮಹಮ್ಮದ್ ತೋಬರ್ ೧೨ ವರ್ಷ ೫ ತಿಂಗಳು; ಶಾಮಾಯಿಯಾಸನ್ (?) ೧ ವರ್ಷ ೪ ತಿಂಗಳು; ಸುಲ್ತಾನ ಹಮೀರ ೨೦ ವರ್ಷ ೧೦ ತಿಂಗಳು; ಸುಲ್ತಾನ್ ಬಹಿಲೋಲ್ ಲೂದಿ ೩೮ ವರ್ಷ ೫ ತಿಂಗಳು; ಶಿಖೇಂದ್ರ ಲೋದಿ ೨೮ ವರ್ಷ ೭ ತಿಂಗಳು, ವಿಭರಾಮ ಲೋದಿ ೧೦ ವರ್ಷ; ಬಾಬರ್ ಬಾದಷಹ ೪ ವರ್ಷ ೧೦ ತಿಂಗಳು; ಹುಮಾಯೂನ್ ೧೪ ವರ್ಷ ೨ ತಿಂಗಳು; ಅಂತು ೧೮೪ ವರ್ಷಗಳು. ವ॥ ಆಮೇಲೆ ಈ ಕಡೆಯಲ್ಲಿ ಪ್ರಖ್ಯಾತಿಗೊಂಡು ಫಕೀರೇಶ್ವರನ ಕೃಪೆಯಿಂದ ಆಳಿದ ತಿಮಿರಲಂಗ (ತೈಮೂರಲಂಗ್?) ೨೭ ವರ್ಷ ೮ ತಿಂಗಳು; ಬಾಬರ್‌ಲಂಗ್ ೨ ವರ್ಷ ೯ ತಿಂಗಳು; ಸರೀಮ್‌ಷಹ ಹೆಸರಿನ ಶೇರ್‌ಷಹ ೮ ವರ್ಷ ೧೦ ತಿಂಗಳು; ಮಸೂದಷಹ ಶರೀರಮನ್ (?) ೧ ತಿಂಗಳು; ಷಹಾ ಹುಮಾಯೂನ್ ೯ ತಿಂಗಳು: ಮಸೂದ್ ಷಹ ಜಲಾವುದೀನ್ ೫೦ ವರ್ಷ ೧ ತಿಂಗಳು; ಜಹಂಗೀರ್ ೨೦ ವರ್ಷ ೧ ತಿಂಗಳು; ಷಹಜಹಾನ್ ೩೨ ವರ್ಷ; ಔರಂಗಜೇಬ್ ೫೨ ವರ್ಷ ೬ ತಿಂಗಳು; ಶಾಹಾ ಅಲ್ಲಿ ೫ ವರ್ಷ ೫ ತಿಂಗಳು; ಫರಕ್ಷಾಹ ೨ ವರ್ಷ ೬ ತಿಂಗಳು; ಆಮೇಲೆ ಮೌಜದೀನ್ ೨ ವರ್ಷ ೧೧ ತಿಂಗಳು; ಅಜಂ ಮೌಜದೀನ್ ೧ ವರ್ಷ ೧೦ ತಿಂಗಳು; ಫರಕ್ಷಾಹ ೩ ವರ್ಷ; ಮಹಮದ್ ಅಜಂ ರಾಜದೀನ್ ೧ ವರ್ಷ ೬ ತಿಂಗಳು; ಅಂತೂ ೨೧೮ ವರ್ಷ - ೯ ತಿಂಗಳವರೆಗೆ ಶಾಲಿವಾಹನ ಶಕ ವರುಷ ೧೬೫.... ನೆಯ ಶಾರ್ವರಿ ಸಂವತ್ಸರದ ಮಾರ್ಗಶಿರ ೩೦ರವರೆಗೆ ಆಳಿದರು, ಈ ರೀತಿ ಆದಿಯಿಂದ ಡಿಲ್ಲಿಯನ್ನು ಆಳಿದವರಲ್ಲಿ ಇತ್ತ ಕಡೆ ಸುಲ್ತಾನರೇ ಮೊದಲುಗೊಂಡು ವಂಶಪಾರಂಪರ್ಯದ ವಿವರಣೆಗಳನ್ನು ಹಾಗೂ ಆಯಾ

ಕಂ॥ ವರ ದಿಳ್ಳಿಯನಾಳ್ದ ತುರು
ಷ್ಕರ ಗಮದಿಂ ಪೇಳ್ವನಾದಿಯೊಳ್ ಸುಲಿತಾನಂ
ಪರಿಕಿಪೊಡಿತ್ತ ಫಕೀರೇ
ಶ್ವರಕೃಪೆಯಿಂ ತಿಮಿರಲಂಗನೆಂಬವನಾಳ್ದಂ ೧೫

ವರತಿಮಿರಲಂಗ ಬಾಬರ್
ಪರಿಕಿಸೆ ಹಮ್ಮಾವಕಬರ ಜಾಂಗೀರ್ ಶರಜ್ಹಾ
ಮಿರುಗುವವರಂಗಜೇಬಂ
ನೆರೆ ಬಹದರ್ಪರಕಶಾಹ ಮಹಮುದ ಶಾಹಂ ೧೬

ಅವರೊಳ್ ಕಂಪಿಲರಾಯನ
ಕುವರನೆನಿಪ್ಪುರು ಕುಮಾರರಾಮನ ದಂಡಂ
ಬವರದೆ ಮುಳುಗಿಸಿ ಶೋಭಿಸು
ವವನೀಮಂಡಲವನಾಳ್ದನಾ ಸುಲಿತಾನಂ ೧೭

ವಿಲಸತ್ ತ್ರಿವೇಣಿಯೊಳಗಾ
ಳ್ದಳಿದಾನಾವಿಲನೆ (?) ಧರೆಯೊಳಕಬರನಾದಂ
ಬಳಿಕೆ ಜಾತಿಸ್ಮರತ್ವಂ
ದಳೆದತಿಭುಜಬಲದೆ ಡಿಳ್ಳಿಯಂ ಪಾಲಿಸಿದಂ ೧೮

ಚಾರುಯಶೋವಿಕ್ರಮದಿಂ
ರಾರಾಜಿಸುವೋರುಗಲ್ಲಧೀಶನೆನಿಪ್ಪಾ
ವೀರಪ್ರತಾಪರುದ್ರಮ
ಹೀರಮಣಾಧಿಪನನ್ನೆದೆ ಕೈಸೆರೆವಿಡಿದಂ ೧೯

ಚರಿತ್ರೆಗಳನ್ನು ಪದ್ಯರೂಪದಲ್ಲಿ ಹೇಳುವೆನು; ಅದು ಯಾವ ರೀತಿಯೆಂದರೆ- ೧೫. ಡಿಲ್ಲಿಯನ್ನು ಆಳಿದ ತುರುಕರ ಕ್ರಮದಿಂದ ಹೇಳುತ್ತೇನೆ. ಮೊದಲು ಸುಲತಾನನು ಆಳಿದನು. ಆ ಮೇಲೆ ಫಕೀರೇಶ್ವರನ ಕೃಪೆಯಿಂದ ತಿಮಿರಲಂಗ (ತೈಮೂರಲಿಂಗ್?) ನೆಂಬವನು ರಾಜ್ಯವಾಳಿದನು. ೧೬. ತಿಮಿರಲಂಗ (ತೈಮೂರಲಂಗ್?), ಬಾಬರ್, ಹುಮಾಯೂನ್, ಅಕ್ಬರ್, ಜಹಾಂಗೀರ್, ಷಹಜಹಾನ್, ಔರಂಗಜೇಬ್ ಅರಕಶಾಹ (ಫರಕ್ಷಾಹ?), ಮಹಮುದಶಾಹ ಈ ಬಾದಷರುಗಳು ಬಹಳ ದರ್ಪವುಳ್ಳವರು. ೧೭. ಅವರಲ್ಲಿ ಸುಲತಾನನು ಕಂಪಿಲರಾಯನ ಮಗನಾದ ಕುಮಾರರಾಮನ ಸೈನ್ಯವನ್ನು ಯುದ್ಧದಲ್ಲಿ ಸೋಲಿಸಿ, ಭೂಮಂಡಲವನ್ನು ಆಳಿದನು. ೧೮. ತ್ರಿವೇಣಿಯಲ್ಲಿ ಆಳುತ್ತಿದ್ದು ಮೃತನಾದ ಅನಾವಿಲನು (?) ಈ ಭೂಮಿಯಲ್ಲಿ ಅಕ್ಬರನಾಗಿ ಹುಟ್ಟಿದನು. ಅವನಿಗೆ ಜನ್ಮಾಂತರ ಸ್ಮರಣೆ ಇತ್ತು. ಆತನು ತನ್ನ ಭುಜಬಲದಿಂದ ಡಿಲ್ಲಿಯನ್ನು ಪಾಲಿಸಿದನು. ೧೯. ಉತ್ತಮವಾದ ಯಶಸ್ಸಿನಿಂದಲೂ, ಪರಾಕ್ರಮದಿಂದಲೂ ಶೋಭಿಸುವ ವಾರಂಗಲ್ಲು ನಗರದ

ದುಮ್ಮಿಯ ಯವನಾಧೀಶನ
ಹಮ್ಮಂ ಮುರಿದವನ ಘೋಟಕಂಗಳ್ಗೆಂದುಂ
ಧುಮ್ಮುಟಿಯನಿಕ್ಕದಿಹ ಪರಿ
ಯಮ್ಮಾಡಿಸಿ ತದ್ವಕೀಲಿಯಂ ಮಾಣಿಸಿದಂ ೨೦

ವII ಮತ್ತಮದಲ್ಲದಾ ಅಕ್ಬರಪಾತುಶಾಹನ ವಂಶೋದ್ಭವನಾದ ಅವರಂಗಜೇಬ ಪಾತುಶಾಹಂ ತನ್ನಗ್ರಸಾದ ದಾರಶಾಹನಂ ಕೊಂದು ತಾಂ ಪಟ್ಟಕ್ಕೆ ನಿಂದು ರಾಜ್ಯಂಗೆಯ್ಯುತ್ತುಂ

ಕಂII ಅವರಂಗಜೇಬನೊಪ್ಪುವ
ಬವರದೆ ಬಾವನ್ನಪಾತುಶಾಹರ ಮುರಿದು
ತ್ಸವದಿಂದೇಕಚ್ಛತ್ರದೊ
ಳವನೀಮಂಡಲವನಾಳ್ದನತಿವಿಕ್ರಮದಿಂ ೨೧

ವII ಮತ್ತಮದಲ್ಲದವರಂಗಜೇಬಪಾತುಶಾಹಂ ರಜಪೂತವೆಣ್ಣಿನೊಳಕ್ಬರನೆಂಬ ಕುಮಾರನಂ ಮೊಗಲವೆಣ್ಣಿನೊಳ್ ಶಹಲನೆಂಬ ಪುತ್ರನಂ ಬೇಗಮ್ಮುಯೆಂಬ ಕುಮಾರಿಯುಮನಿಂತಿರ್ವರುಮಂ ಮತ್ತಂ ಮುಸಲ್ಮಾನವೆಣ್ಣಿನೊಳಜಮತಾರನೆಂಬ ಪುತ್ರನಂ ಗುಜರಾತಿ ಕಾರುಕಿ ಸೂಳೆವೆಣ್ಣಿನೊಳ್ ಕಾಂಬಕ್ಸನೆಂಬ ನಂದನನಂ ಪಡೆದಿಂತಿರುತೊಂದವಸರದೊಳ್ ಅವರಂಗಜೇಬ ಪಾತುಶಾಹಂ ಸದರೊಳ್ ಕುಳ್ಳಿರ್ದಕ್ಬರನೆಂಬ ಕುಮಾರನಂ ಕರೆದು ತನ್ನ ಕಯ್ಯೊಳ್ ಪಿಡಿದಿರ್ದ ಪಟ್ಟದ ಕೂರಸಿಯನವನ ಕೈಗಿತ್ತಿದೆಂತಿರ್ಪುದೆನಲವನಳ್ಕಿ ಹೂಣಿಸಿ ನಿಲಲಾರದೆ ಕಂಪಿಸುತ್ತಿರಲವನಂ ಕಂಡಿವಂ ತಕತ್ತನಾಳ್ವುದರ್ಕ ಯೋಗ್ಯನೆಂದು ಬಗೆದು ತಿರಸ್ಕರಿಸಲವಂ ನಿಸ್ತೇಜಸ್ಕನಾಗಿ ಗುಜ್ಜರ ದೇಶಪ್ರಾಂತವನ್ನೈದಲುಳಿದ ಜಮತಾರ ಕಾಂಬಾಕ್ಸ ಶಹಲಮನೆಂಬ ಕುಮಾರರುಂ ಬೇಗಮುಯೆಂಬ ಕುಮಾರ್ತಿಯುಂವೆರಸು

ಒಡೆಯನಾದ ವೀರಪ್ರತಾಪರುದ್ರ ರಾಜನನ್ನು ಅಕ್ಬರನು ಕೈಸೆರೆ ಹಿಡಿದನು. ೨೦. ಆತನು ದುಮ್ಮಿಯ ಯವನರಾಜನ ದರ್ಪವನ್ನಡಗಿಸಿ, ಆತನ ಕುದುರೆಗೆ ಮತ್ತೆಂದಿಗೂ ಜೀನನ್ನು ಹಾಕದಂತೆ ಮಾಡಿ, ಅವನ ಕಾರುಬಾರನ್ನು ನಿಲ್ಲಿಸಿದನು. ವII ಮತ್ತೆ ಅದಲ್ಲದೆ ಅಕ್ಬರ್ ಬಾದಷಹನ ವಂಶದಲ್ಲಿ ಜನಿಸಿದ ಔರಂಗಜೇಬನು ತನ್ನ ಅಣ್ಣನಾದ ಬಾದಷಹನನ್ನು ಕೊಂದು ತಾನು ಪಟ್ಟಕ್ಕೆ ನಿಂತು ರಾಜ್ಯವಾಳುತ್ತಿದ್ದನು. ೨೧. ಔರಂಗಜೇಬನು ಯುದ್ಧದಲ್ಲಿ ಐವತ್ತೆರಡು ಬಾದಷಹರನ್ನು ಸೋಲಿಸಿ, ಆನಂದದಿಂದ ಭೂಮಂಡಲವನ್ನು ಏಕಛತ್ರಾಧಿಪತ್ಯವಾಗಿ ಅತಿ ಪರಾಕ್ರಮದಿಂದ ಆಳಿದನು. ವII ಮತ್ತೆ ಅದಲ್ಲದೆ ಔರಂಗಜೇಬ ಬಾದಷಹನು ರಜಪೂತ ಹೆಣ್ಣಿನಲ್ಲಿ ಅಕ್ಬರನೆಂಬ ಕುಮಾರನನ್ನೂ ಮೊಗಲಾಯಿ ಹೆಣ್ಣಿನಲ್ಲಿ ಶಹಲನೆಂಬ ಪುತ್ರ ಹಾಗೂ ಬೇಗಮ್ಮು ಎಂಬ ಪುತ್ರಿಯನ್ನು ಹೊಂದಿದ್ದನು. ಇದಲ್ಲದೆ ಮುಸಲ್ಮಾನರ ಹೆಣ್ಣಿನಲ್ಲಿ ಅಜಮತಾರನೆಂಬ ಮಗನನ್ನು ಗುಜರಾತಿನ ಶಿಲ್ಪಿಜಾತಿಯ ವೇಶ್ಯೆಯೊಬ್ಬಳಲ್ಲಿ ಕಾಂಬಕ್ಸನೆಂಬ ಕುಮಾರನನ್ನು ಪಡೆದಿದ್ದನು. ಹೀಗಿರುವಾಗ ಒಂದು ಬಾರಿ ಔರಂಗಜೇಬ ಬಾದಷಹನು ಓಲಗದಲ್ಲಿ ಕುಳಿತಿದ್ದನು. ತನ್ನ ಕುಮಾರನಾದ ಅಕ್ಬರನನ್ನು ಹತ್ತಿರಕ್ಕೆ ಕರೆದು ತನ್ನ ಕೈಯಲ್ಲಿ ಹಿಡಿದುಕೊಂಡಿದ್ದ ಪಟ್ಟದ ಕತ್ತಿಯನ್ನು ಅವನ ಕೈಗಿತ್ತು "ಇದು ಹೇಗಿದೆ?" ಎಂದು ಕೇಳಿದನು. ಅವನು ಹೆದರಿ ಅದನ್ನು ಹಿಡಿದು ನಿಲ್ಲಲಾರದೆ

**ಸುಖಮಿರುತ್ತುಂ ಶಹಲಮನೆಂಬ ಕುಮಾರನ ತೇಜೋಬಲ ಪಟುತ್ವಕ್ಕಂ ಮೆಚ್ಚಿ ಭಾದುರ್ಶಾಹನೆಂದು ಪ್ರತಿನಾಮವನಿಟ್ಟಾ ಶಹಲಮಂಗೆ ಮೂವರ್ ಪುತ್ರರುದಿಸಲ್ ಕ್ರಮದಿಂದವರ್ಗೆ ಅಜಮುದೀನ್ ಮೌಜದೀನ್ ರಪೇಲ್‌ಶಾಹನೆಂದು ಪೆಸರಿಟ್ಟು ಮತ್ತಮಾ ರಪೇಲ್‌ಶಹನೆಂಬ ಮೊಮ್ಮಗಂಗೆ ಬುಲಂದಕ್ಥರ (?) ನೆಂದು ಪ್ರತಿನಾಮವನಿಟ್ಟು ಮತ್ತಮಾ ಶಹಲಮನ ಮಗನಾದ ಅಜಮ್ಮುದೀನಗೊರ್ವ ಕುಮಾರನೊಗೆಯಲವಂಗೆ ಘರಕ್ಕ್‌ಶಾಹನೆಂದು ಪೆಸರಿಟ್ಟು ಮತ್ತಮಾ ಜಮತಾರನೆಂಬ ಕುಮಾರನೊಳುದ್ಭವಿಸಿದ ಮೊಮ್ಮಗಂಗೆ ದಿವಾರ್ಬೋಕ್ಸ (?) ನೆಂದು ಪೆಸರಿಟ್ಟು ಇಂತವರಂಗಜೇಬ ಪಾತುಶಾಹಂ ಮಕ್ಕಳ್ ಮೊಮ್ಮಕ್ಕಳ್ ಮರಿಮಕ್ಕಳ್ವೆರಸು ತನ್ನ ಸೋದರಮಾವನಾದ ಶಾಸ್ತಾಖಾನ ಫೇರೋಜಂಘನೆಂದುಭಯಮಾಂಕಿತನಾದ ಶಾಬ್ಜಿಖಾನನ ಮಗ ನಿಜಾಮಂಗೆ ಮಂತ್ರಿ ಅಸತ್ಖಾನ ಅವನ ಮಗ ಜುಲುಪರಖಾನ ಮತ್ತಂ ಶೇಖುನಿಜಾಮರಗಟಬಲ್ಲೂಲಖಾನ ಮುಂತಾದ ವಜೀರರ್ಕಳ್ವೆರಸು ಗಾಜದೀಖಾನ ಚಿಕ್ಕಲೀಸಖಾನನೆಂದು (?) ಇವನಿಗೆ ದಾಕ್ಷಿಣಾತ್ಯ ರಾಜ್ಯದಧಿಕಾರವನಿತ್ತು ತಾಂ ಪ್ರಾಜ್ಯರಾಜ್ಯಭಾರವಿಟ್ಟು ವಿಚಾರಕೃತನಾಗಿ ವರ್ತಿಸುತ್ತುಂ ಮತ್ತಂ ಸ್ವನಾಮಾಂಕಿತಮಾದವರಂಗಾಬಾದೆಂಬ ಪಟ್ಟಣಮಂ ನಿರ್ಮಾಣಂಗೈಸಿ ಸ್ವಮತಾನ್ಯಮತಂಗಳೆನ್ನದೆ ತತ್ತಚ್ಛಾಸ್ತ್ರಮರ್ಮಂಗಳಂ ಕೇಳುತುಂ**

ಮೈ ನಡುಗುತ್ತಿರಲು ದೊರೆಯು ಕಂಡು ಇವನು ಸಿಂಹಾಸನಕ್ಕೆ ಅರ್ಹನಲ್ಲವೆಂದು ನಿಶ್ಚಯಿಸಿ ತಿರಸ್ಕರಿಸಿದನು. ಅವನು ಕಳೆಗುಂದಿದವನಾಗಿ ಗುಜ್ಜರದೇಶ ಪ್ರಾಂತಕ್ಕೆ ಹೋದನು. ಉಳಿದ ಅಜಮತಾರ, ಕಾಂಬಕ್ಸ, ಶಹಲಮನೆಂಬ ಪುತ್ರರನ್ನು ಹಾಗೂ ಬೇಗಮು ಎಂಬ ಮಗಳನ್ನು ಕೂಡಿಕೊಂಡು ಸುಖದಿಂದಿದ್ದನು. ಶಹಲಮನೆಂಬ ಕುಮಾರನ ತೇಜಸ್ಸನ್ನು ಹಾಗೂ ಪರಾಕ್ರಮವನ್ನೂ ಮೆಚ್ಚಿ "ಭಾದುರ್ಶಾಹ"ನೆಂದು ಪ್ರತಿನಾಮವನ್ನಿಟ್ಟನು. ಶಹಲಮನಿಗೆ ಮೂವರು ಗಂಡು ಮಕ್ಕಳು ಹುಟ್ಟಿದರು. ಅವರಿಗೆ ಕ್ರಮವಾಗಿ ಅಜಮುದೀನ್, ಮೌಜದೀನ್ ಮತ್ತು ರಪೇಲ್‌ಶಾಹನೆಂದು ಹೆಸರಿಟ್ಟು ಮತ್ತೆ ಆ ರಫೇಲ್ ಶಾಹನೆಂಬ ಮೊಮ್ಮಗನಿಗೆ ಬುಲಂದಕ್ಥರ್ (?)ನೆಂದು ಪ್ರತಿನಾಮವನ್ನಿಟ್ಟನು. ಆ ಶಹಲಮನ ಮಗನಾದ ಅಜಮುದೀನ್‌ನಿಗೆ ಒಬ್ಬ ಕುಮಾರನು ಹುಟ್ಟಿದನು. ಅವನಿಗೆ ಘರಕ್ಕ್‌ಶಾಹನೆಂದು ಹೆಸರಿಟ್ಟನು. ಅಜಮತಾರನೆಂಬ ಕುಮಾರನಲ್ಲಿ ಜನಿಸಿದ ಮೊಮ್ಮಗನಿಗೆ ದಿವಾರ್ಬೋಕ್ಸ್ (?) ಎಂದು ಹೆಸರಿಟ್ಟನು. ಈ ರೀತಿ ಔರಂಗಜೇಬ ಬಾದಷಹನು ಮಕ್ಕಳು, ಮೊಮ್ಮಕ್ಕಳು ಹಾಗೂ ಮರಿಮಕ್ಕಳೊಡನೆ ಕೂಡಿಕೊಂಡು ಸುಖದಿಂದಿದ್ದನು. ಈ ಬಾದಷಹನು ತನ್ನ ಸೋದರಮಾವನಾದ ಶಾಸ್ತಾಖಾನ ಅಥವಾ ಫೇರೋಜಂಘನೆಂಬುದಾಗಿ ಎರಡು ಹೆಸರುಗಳನ್ನು ಹೊಂದಿರುವ ಶಾಬ್ಜಿಖಾನನ ಮಗ ನಿಜಾಮನಿಗೆ, ಮಂತ್ರಿ ಅಸತ್‌ಖಾನ್ ಅವನ ಮಗ ಜುಲುಪರಖಾನ್ ಮತ್ತು ಶೇಖ್ ನಿಜಾಮ ರಗಟೆ ಬಲ್ಲೂಲ್‌ಖಾನ ಮುಂತಾದ ಮಂತ್ರಿಗಳನ್ನು ಕೂಡಿ ಗಾಜದೀಖಾನ ಚಿಕ್ಕಲೀಸಖಾನನೆಂದು (?) ದಾಕ್ಷಿಣಾತ್ಯ ರಾಜ್ಯದ ಅಧಿಕಾರಗಳನ್ನು ನೀಡಿ, ತಾನು ದರ್ಪದಿಂದ ರಾಜ್ಯಭಾರವನ್ನು ಮಾಡುತ್ತ ಶಾಸ್ತ್ರಗಳ ಅಧ್ಯಯನ ತತ್ಪರನಾಗಿ ಕಾಲಯಾಪನ ಮಾಡುತ್ತಿದ್ದನು. ತನ್ನ ಹೆಸರಿನಲ್ಲಿ ಔರಂಗಾಬಾದೆಂಬ ಪಟ್ಟಣವೊಂದನ್ನು ನಿರ್ಮಾಣ ಮಾಡಿಸಿದನು. ತನ್ನ ಮತ ಹಾಗೂ ಬೇರೆ ಮತಗಳೆನ್ನದೆ ಆಯಾ ಶಾಸ್ತ್ರಗಳ ಮರ್ಮಗಳನ್ನು ಕೇಳುತ್ತಾ ಹಾಗೂ ತಿಳಿದುಕೊಳ್ಳುತ್ತಾ ಇದ್ದನು. ಮಂತ್ರಶಾಸ್ತ್ರಗಳನ್ನು ಅಭ್ಯಾಸಮಾಡಿ, ಮುಲ್ಲಾಶಾಸ್ತ್ರಗಳ ಅರ್ಥಗಳನ್ನು-

ಮಂತ್ರಶಾಸ್ತ್ರಂಗಳಂ ಸಂಗ್ರಹಿಸಿ ಮುಲ್ಲಾಶಾಸ್ತ್ರ ವಿವರಣಂಗಳಂ ಕೇಳುತಿಂತು ಸುಖಸಂಕಥಾವಿನೋದ ಗೋಷ್ಠಿಗಳಿಂ ರಾಜ್ಯವನಾಳುತ್ತುಮಿರ್ದಂ. ಇನ್ನು ಮುಂದುಸಿರ್ವ ಕಥಾಸಂದರ್ಭಕೋಸುಗಂ ಗೀಜಗನಹಳ್ಳಿಯ (ಪ್ರತಿನಾಮ ಬಿಜಾಪುರ) ಸಂಸ್ಥಾನವನಾಳ್ದ ಪಾತುಶಾಹರಂ ವಿವರಣಮಾಗೆ ಪೇಳ್ವೆನದೆಂತೆಂದೊಡೆ :- ಆದಿಯಲ್ಲಿ ಪರಮೇಶ್ವರನ ಕೃಪೆಯಿಂ ಸಂಸ್ಥಾನಾಧಿಪತಿಯಾದ ಶಾಹಾಮೂರ್ತಜಾ ಅಲ್ಲಿ ವರ್ಷ..... ಅವನ ತಮ್ಮ ಶಾಹೀನದೀಮುಲ್ಲ ವರ್ಷ..... ಆಮೇಲೆ ಫಕೀರಸಾಹೇಬ (ಪ್ರತಿನಾಮ ದರ್ಬೇಸಿ) ಪಾತುಶಾಹ ವರ್ಷ..... ಆ ಬಳಿಕಂ ಅಲ್ಲಿಯೆದುಲ ಶಾಹ ವರ್ಷ.... ಅವನಿಂ ಬಳಿಕಂ ಸುಲ್ತಾನ ಮಹಮುದ್ದ ವರ್ಷ.... ಆಮೇಲೆ ಸುಲ್ತಾನಿ ಶಿಖೀಂದ್ರ ವರ್ಷ..... ಅಂತುಂ ವರ್ಷ..... ಈ ಶಿಖೀಂದ್ರನ ಕಾಲದಲ್ಲಿ ಶಾಲಿವಾಹನ ಶಕವರ್ಷ ..... ನೆಯ ಕ್ಷಯಸಂವತ್ಸರದಲ್ಲಿ ಈ ವಿಜಾಪುರ ಸಂಸ್ಥಾನಂ ಮುಂದೊರೆವ ಗೊಲುಕೊಂಡೆಯ (ಪ್ರತಿನಾಮ ಭಾಗಾನಗರದ) ಸಂಸ್ಥಾನಮಿಂತುಭಯಸಂಸ್ಥಾನಗಳುಂ ಕಾಕತಾಳೀಯನ್ಯಾಯದಿಂ ಪೆಂತೊರೆದಾರೆಯರ ವಂಶೋದ್ಭವನಾದ ಶಾಜಿಯ ಸುತನೆನಿಪ ಶಿವಾಜಿಯುಂ ವಶಂಗೆಯ್ವೆನೆಂದೈದಿದ ಡಿಳ್ಳಿಯ ಪಾತುಶಾಹನಪ್ಪವರಂಗಜೇಬನಧೀನ ಮಾದುವಾ ವೃತ್ತಾಂತ ಮುಂದೆ ಬರ್ಪುದೀಗೊರೆದ ವಿಜಾಪುರದ ಸಂಸ್ಥಾನವನಾಳ್ದ ತುರುಷ್ಕರ ನಾಮಂಗಳಂ ಪದ್ಯರೂಪದಿಂ ಪೇಳ್ವೆನದೆಂತೆಂದೊಡೆ

ಉ॥ ಸೊಲ್ಲಿಪೆನಾ ವಿಜಾಪುರವನಾಳ್ದರನೊಪ್ಪುವ ಶಾಹಮುರ್ತುಜಾ
ಅಲ್ಲಿಯನಂತರಂ ನದಿಯಮುಲ್ಲನುದಾರ ಪಕೀರಶಾಹನಾ
ಅಲಿಯಯೇದುಲಂ ಮೆರೆವ ವಿಭ್ರಮಯೇದುಲಪಾತುಶಾಹನಿಂ
ತಿಲ್ಲಿಗೆಯ್ಯೆವರಿನ್ನುಳಿದಂ ನಾಲ್ವರುಮಂ ತಿಳಿವಂತುಸಿರ್ದಪೆಂ ೨೨

ತಾತ್ಪರ್ಯಗಳನ್ನು ಕೇಳಿ ತಿಳಿದುಕೊಳ್ಳುತ್ತಾ ಮನನಮಾಡಿಕೊಳ್ಳುತ್ತಿದ್ದನು. ಈ ರೀತಿ ಸಂತೋಷದಿಂದಲೂ ಮತ್ತು ವಿನೋದಗಳಿಂದಲೂ ಇದ್ದು ರಾಜ್ಯವನ್ನು ಆಳುತ್ತಿದ್ದನು. ವ॥ ಮುಂದೆ ಹೇಳುವ ಕಥಾಸಂದರ್ಭಕ್ಕೋಸ್ಕರ ಗೀಜಗನ ಹಳ್ಳಿಯ (ಬಿಜಾಪುರದ) ಸಂಸ್ಥಾನವನ್ನು ಆಳಿದ ಬಾದಷಹರ ವಿವರಣವನ್ನು ಹೇಳುವೆನು. ಅದು ಯಾವ ರೀತಿಯೆಂದರೆ-ಪ್ರಾರಂಭದಲ್ಲಿ ಪರಮೇಶ್ವರನ ಕೃಪೆಯಿಂದ ಸಂಸ್ಥಾನಕ್ಕೆ ಅಧಿಪತಿಯಾದವನು ಶಾಹಮೂರ್ತಜಾ ಅಲ್ಲಿ... ವರ್ಷ, ಅವನ ತಮ್ಮ ಶಾಹಾನದೀಮುಲ್ಲ.... ವರ್ಷ, ಆ ಮೇಲೆ ಫಕೀರಸಾಹೇಬ ಬಾದಷಹ (ಇನ್ನೊಂದು ಹೆಸರು ದರ್ಬೇಸಿ)..... ವರ್ಷ, ಆ ಬಳಿಕ ಅಲ್ಲಿ ಯೇದುಲಶಹ.... ವರ್ಷ, ಅವನ ತರುವಾಯ ಸುಲ್ತಾನ ಮಹಮ್ಮದ್...... ವರ್ಷ, ಆಮೇಲೆ ಸುಲ್ತಾನಿ ಶಿಖೀಂದ್ರ.... ವರ್ಷ, ಅಂತು..... ವರ್ಷಗಳು, ಈ ಶಿಖೀಂದ್ರನ ಕಾಲದಲ್ಲಿ ಶಾಲಿವಾಹನ ಶಕ ವರ್ಷ..... ನೆಯ ಕ್ಷಯಸಂವತ್ಸರದಲ್ಲಿ ಈ ಬಿಜಾಪುರ ಸಂಸ್ಥಾನವು ಮತ್ತು ಮುಂದೆ ಹೇಳುವ ಗೋಲುಕೊಂಡೆ (ಪ್ರತಿನಾಮ ಭಾಗಾನಗರ) ಸಂಸ್ಥಾನವು, ಈ ರೀತಿ ಉಭಯ ಸಂಸ್ಥಾನಗಳು ಕಾಕತಾಳೀಯನ್ಯಾಯದಿಂದ ಹಿಂದೆ ವಿವರಿಸಿದ ಆರೆಯರ ವಂಶೋದ್ಭವನಾದ ಶಾಜಿಯ ಮಗ ಶಿವಾಜಿಯನ್ನು ವಶಪಡಿಸಿ ಕೊಳ್ಳುವೆನೆಂದು ಹೋದ ಡೆಲ್ಲಿಯ ಬಾದಷಹನಾದ ಔರಂಗಜೇಬನ ಅಧೀನವಾದವು. ಆ ಕಥೆಯ ವಿವರಣವು ಮುಂದೆ ಬರುವುದು, ಈಗ ನಿರೂಪಿಸಿದ ಬಿಜಾಪುರದ ಸಂಸ್ಥಾನವನ್ನು ಆಳಿದ ತುರುಕರ ಹೆಸರುಗಳನ್ನು ಪದ್ಯರೂಪದಿಂದ ಹೇಳುವೆನು. ಅದು ಯಾವ ರೀತಿಯೆಂದರೆ- ೨೨. ಬಿಜಾಪುರದಲ್ಲಿ ಆಳಿದವರ ಹೆಸರುಗಳನ್ನು ಹೇಳುವೆನು;

ಕಂ|| ಸುಲುತಾನ ಮಹಮುದಾಖ್ಯಂ
ಬಳಿಕಲ್ಲಿಯೆದುಲಶಹಾನ ಸಮನಂತರದೊಳ್
ವಿಲಸದ್ಬಡೆಸಾಹೇಬತಿ
ಸುಲುತಾನಶಿಖೀಂದ್ರರೆಂಬವರ್ಕಳ್ ಕ್ರಮದಿಂ ೨೩

ವ|| ಇಂತು ಶಾಹಮುರ್ತಜಾ ಅಲ್ಲಿಯಾದಿಯಾಗಿ ಸುಲುತಾನಶಿಖೀಂದ್ರಾಂತಮಾಗಿ ವಿಜಾಪುರದ ತಕಥನಾಳ್ದ ಪಾತುಶಾಹರ್ ಇವರೊಳಾ ವಿಬ್ರಾಮಲ್ಲಿ ಯೇದುಲಶಾಹನ ತಂದೆಯಾದ ಅಲ್ಲಿಯೇದುಲಶಾಹಂಗೆ ವಿವಾಹಮಾದ ಸ್ತ್ರೀಯರಾರೆಂದೊಡೆ ದೇವಗಿರಿ ಪ್ರತಿನಾಮ ದೌಲತಾಬಾದಿನ ಸಂಸ್ಥಾನಕ್ಕೆ ಸಲ್ವ ಅಮದಾನಗರದ ನಿಜಾಮಪಾತುಶಾಹನ ಮಗಳ್ ಆಕೆಯ ಪೆಸರ್ .............................. ಮತ್ತಮಾ ವಿಭ್ರಾಮಯೇದುಲಶಾಹನ ಮಗ ಸುಲುತಾನ ಮಹಮ್ಮದಶಾಹನ ಮಂತ್ರಿಯ ಪೆಸರ್ ಹಿರೆಖವಾಸಖಾನ ಆ ಅರಸಿನ ನಿಯೋಗಿಯಾದ ಕಾರಕೂನಂ ಮುರಾರಿ ಜಗದೇವ ಪಂತಂ ಈ ಮುರಾರಿ ಜಗದೇವಪಂತಂ ಕರ್ತೃ ಸುಲುತಾನ ಮಹಮ್ಮದಶಾಹಂಗೆ ಗೋಲುಕೊಂಡೆಯ ಕುತುಬಶಾಹನ ಮಗಳಾದ ಬಡೆ ಸಾಹೇಬತಿಯೆಂಬ ಪೆಣ್ಣಂ ವಿವಾಹಮಂ ಮಾಡಿಸಿದಂ. ಆ ಬಡೆಸಾಹೇಬತಿಯ ಮಗನ ಪೆಸರ್...................... ಈ ಸುಲ್ತಾನ ಮಹಮ್ಮದಶಾಹಂ ಬಡೆಸಾಹೇಬತಿಯೆಂಬ ಸ್ತ್ರೀಯಲ್ಲದೆ ನವರಸನಾರಿಯೆಂಬ ಸೂಳೆವೆಣ್ಣನಂಗೀಕರಿಸಿ ಕೊಂಡಿರ್ದಂ ಆ ನವರಸ ನಾರಿಯೆಂಬ ಸೂಳೆಯ ಬಸಿರಿನಲ್ಲಿ ಪುಟ್ಟಿದ ಮಗನ ಪೆಸರ್ ಅಲ್ಲಿಯೇದುಲಶಾಹಾ

ಶಾಹಮುರ್ತುಜಾ ಅಲ್ಲಿ; ನದಿಯಮುಲ್ಲ; ಫಕೀರಶಹಾ; ಅಲ್ಲಿಯ ಯೇದುಲ್; ಯೇದುಲ್ ಪಾತುಶಾಹ; ಈ ಐವರಲ್ಲದೆ ಇನ್ನುಳಿದ ನಾಲ್ವರನ್ನು ತಿಳಿದಂತೆ ಹೇಳುವೆನು. ೨೩. ಸುಲ್ತಾನ ಮಹಮುದ್, ಅಲ್ಲಿ ಯೇದುಲ್‌ಶಾಹ, ಬಡೇಸಾಹೇಬತಿ ಮತ್ತು ಸುಲ್ತಾನ್ ಶಿಖೀಂದ್ರ ಎಂಬವರು ಕ್ರಮದಿಂದ ಇದ್ದರು. ವ|| ಈ ರೀತಿಯಾಗಿ ಶಾಹಮುರ್ತಜಾ ಅಲ್ಲಿ ಮೊದಲುಗೊಂಡು ಸುಲ್ತಾನ್ ಶಿಖೀಂದ್ರನವರೆಗೆ ಬಿಜಾಪುರದ ಸಿಂಹಾಸನವನ್ನು ಆಳಿದ ಬಾದಷಹರು ರಾಜ್ಯವನ್ನು ಪಾಲಿಸುತ್ತಿದ್ದರು. ಇವರಲ್ಲಿ ವಿಬ್ರಾಮಲ್ಲಿ ಯೇದುಲ್‌ಶಾಹನ ತಂದೆಯಾದ ಅಲ್ಲಿ ಯೇದುಲಷಹನಿಗೆ ವಿವಾಹ ಮಾಡಿಕೊಂಡ ಸ್ತ್ರೀಯರು ಯಾರು ಎಂದರೆ ದೇವಗಿರಿ ಎಂಬುದಾಗಿ ಪ್ರತಿನಾಮವಿರುವ ದೌಲತಾಬಾದಿನ ಸಂಸ್ಥಾನಕ್ಕೆ ಸೇರಿದ ಅಹಮ್ಮದಾನಗರದ ನಿಜಾಮ ಬಾದಷಹನ ಮಗಳು; ಆಕೆಯ ಹೆಸರು.........., ಮತ್ತೆ ಆ ಇಬ್ರಾಮ ಯೇದುಲಶಾಹನ ಮಗ ಸುಲ್ತಾನ್ ಮಹಮ್ಮದ್‌ಷಹನ ಮಂತ್ರಿಯ ಹೆಸರು ಹಿರೇಖವಾಸಖಾನ್. ಆ ರಾಜನ ನಿಯೋಗಿ ಹಾಗೂ ಕಾರಕೂನ ಮುರಾರಿ ಜಗದೇವ ಪಂತ. ಈ ಮುರಾರಿ ಜಗದೇವ ಪಂತನು ಒಡೆಯ ಸುಲ್ತಾನ ಮಹಮ್ಮದ್‌ಷಹನಿಗೆ ಗೋಲ್ಕೊಂಡೆಯ ಕುತುಬ್‌ಷಹನ ಪುತ್ರಿ ಬಡೆಸಾಹೇಬತಿಯೆಂಬ ಹೆಣ್ಣನ್ನು ಕೊಟ್ಟು ವಿವಾಹ ಮಾಡಿಸಿದನು. ಆ ಬಡೆಸಾಹೇಬತಿಯ ಮಗನ ಹೆಸರು... ಈ ಸುಲ್ತಾನ್ ಮಹಮ್ಮದ್‌ಷಹನಿಗೆ ಬಡೆಸಾಹೇಬತಿಯೆಂಬ ಹೆಂಡತಿಯಲ್ಲದೆ, ನವರಸ ನಾರಿ ಎಂಬ ವೇಶ್ಯೆ ಇದ್ದಳು. ಅವಳ ಗರ್ಭದಲ್ಲಿ ಹುಟ್ಟಿದ ಮಗನ ಹೆಸರು ಅಲ್ಲಿಯೇದುಲ್‌ಷಹ. ಅಲ್ಲಿ ಯೇದುಲ್‌ಷಹನ ಕುಮಾರನಿಗೆ ತನ್ನ ಕಡೆಯ ಮಂತ್ರಿಯಾದ

**ಆ ಅಲ್ಲಿಯೇದುಲಶಾಹಾನ ಕುಮಾರಂಗೆ ತನ್ನ ಕಡೆಯ ವಜೀರ ಪತ್ತೇಖಾನನ ಮಗಳಂ ವಿವಾಹಮಂ ಮಾಡಿ ತಾನೀ ರೀತಿಯಲ್ಲಿರುತ್ತಿರ್ದಂ. ಆ ಪತ್ತೇಖಾನನ ಕಾರಕೂನನ ಪೆಸರ್ ಕಾಶೀಪಂತಂ ಇಂತು ವರ್ತಿಸುತ್ತುಮಿರ್ದ ಸುಲುತಾನ ಮಹಮುದ್ದಶಾಹಂಗೆ ವ್ಯಾಧಿ ಪ್ರಕೋಪಿಸಲಾಗಳ್ ತನ್ನ ಬೀಗ ಪತ್ತೇಖಾನನಂ ಬರಿಸಿಕೊಂಡಾಪ್ತಾಳೋಚನೆಯಂ ರಚಿಸಿ ನಿನಗಿಂತು ಸೌಭಾಗ್ಯಮೆಂತು ದೊರೆಕೊಂಡುದೆಂದು ಬೆಸಗೊಳಲ್ ತನ್ನ ಕಾರಕೂನಂ ಕಾಶೀಪಂತನಿಂದಾದುದೆನಲಾ ಕಾಶೀಪಂತಂಗೆ ಜಾನಂತರಾಯನೆಂದು ಪ್ರತಿನಾಮವನಿಟ್ಟು ದವಲತ್ತು ಕೊಟ್ಟು ಬಹಳ ಮೇರುಮಾನಿಯಂ ಮಾಡಿ ಈ ಪ್ರಕಾರದಲ್ಲಿಟ್ಟುಕೊಂಡಿರ್ದು ತನ್ನ ಪ್ರಾಣೋತ್ಕ್ರಮಣಕಾಲದಲ್ಲಿ ಆ ಜಾನಂತರಾಯನಂ ಕರೆಸಿಕೊಂಡು ತಾನಿಟ್ಟುಕೊಂಡಿರ್ದ ನವರಸನಾರಿಯೆಂಬ ವೇಶ್ಯೆಯ ಪುತ್ರಂಗೆ ಸಂಸ್ಥಾನದ ಪಟ್ಟಾಧಿಕಾರಮಂ ರಚಿಸಿ ನಡೆಸುವಂತೆ ಆ ಜಾನಂತರಾಯನಿಂ ನಂಬುಗೆಯಂ ತೆಗೆದುಕೊಂಡು ಪ್ರಾಣಮಂ ಬಿಟ್ಟಂ. ಆಮೇಲೆ ಆ ಜಾನಂತರಾಯಂ ಮುನ್ನಮೇ ಸ್ಥಳಚ್ಯುತನಾಗಿ ಬಿಟ್ಟು ಪೋಗಿರ್ದ ಬಡೆಸಾಹೇಬತಿಯ ಮಗಂಗೆ ಬರೆಸಿ ಕಳುಹಿ ನಿನಗೆ ಪಟ್ಟಮಂ ಕಟ್ಟಿ ದೊರೆತನಮಂ ನಡೆಸಿ ಅಲ್ಲಿಯೇದುಲಶಾಹಗಂ ನಿನಗಂ ಭೇಟಿಯಂ ಮಾಡಿಸಿ ಮನಸ್ಸಂಕೋಚಮಂ ಪರಿಹರಿಸಿ ಅನ್ಯೋನ್ಯಮಾಗೆ ನಡೆವಂತು ಮಾಡಿ ಪಾತುಶಾಹಿಕೆಯಂ ನಿನಗೆ ನಡೆವಂತು ಮಾಳ್ಪೆಂ ಕ್ಷಿಪ್ರದೊಳ್ ತೆರಳಿ ಬರ್ಪುದೆಂದು ಲಿಖಿತಮಂ ಬರೆಸಿ ಕಳುಪಿ ಅವನಂ ಪಟ್ಟಣದ ಸಮೀಪಕ್ಕೆ ಬರಿಸಿಕೊಂಡು ಅವನ ಸಮೀಪದಲ್ಲಿರ್ಪ ವಜೀರ ಉಮರಾವು ಕಾರಕೂನರ್ಗೆ ಹೇರಳ ಲಂಚಮಂ ಕೊಟ್ಟೊಳಗುಮಾಡಿಕೊಂಡು ಈ ಅಲ್ಲಿ**

ಪತ್ತೇಖಾನನ ಮಗಳನ್ನು ಕೊಟ್ಟು ವಿವಾಹವನ್ನು ಮಾಡಿಸಿದನು. ಪತ್ತೇಖಾನನ ಗುಮಾಸ್ತನ ಹೆಸರು ಕಾಶೀಪಂತ, ಈ ರೀತಿ ಇರುತ್ತಿರಲು ಸುಲ್ತಾನ ಮಹಮುದ್ದಶಾಹನಿಗೆ ಮಹಾರೋಗವುಂಟಾಗಲು ತನ್ನ ಬೀಗನಾದ ಪತ್ತೇಖಾನನ್ನು ಕರೆಸಿಕೊಂಡನು. ಆತನೊಡನೆ ಆಪ್ತಾಲೋಚನೆಯನ್ನು ಕೈಗೊಂಡು, ಈ ರೀತಿ ಸೌಭಾಗ್ಯಪ್ರಾಪ್ತಿಯು ಹೇಗೆ ಉಂಟಾಯಿತೆಂದು ಬೆಸಗೊಳ್ಳಲು, ತನ್ನ ಸೇವಕನಾದ ಕಾಶೀಪಂತನಿಂದ ಉಂಟಾದ ಸೌಲಭ್ಯ ಆದಿಯಾಗಿ ಎಲ್ಲಾ ವಿವರಗಳನ್ನು ನಿವೇದಿಸಿಕೊಂಡನು. ಅನಂತರ ಕಾಶೀಪಂತನಿಗೆ ಜಾನಂತರಾಯನೆಂದು ಹೆಸರನ್ನಿಟ್ಟು ದೌಲತ್ತನ್ನು ಕೊಟ್ಟು ಗೌರವಿಸಿದನು. ಈ ರೀತಿಯಲ್ಲಿ ನಡೆಸಿಕೊಂಡು ತನ್ನ ಮರಣಕ್ಕೆ ಪೂರ್ವದಲ್ಲಿ ಆ ಜಾನಂತರಾಯನನ್ನು ಕರೆಸಿಕೊಂಡು ತನ್ನ ವೇಶ್ಯೆ ನವರಸನಾರಿಯ ಮಗನಿಗೆ ಸಂಸ್ಥಾನದ ಅಧಿಕಾರವನ್ನು ವಹಿಸಿಕೊಟ್ಟು ನಡೆಸಿಕೊಳ್ಳುವಂತೆ ಹೇಳಿ, ಜಾನಂತರಾಯನಿಂದ ವಚನವನ್ನು ತೆಗೆದುಕೊಂಡು ಮೃತನಾದನು. ಅನಂತರ ಆ ಜಾನಂತರಾಯನು ಮುಂಚೆಯೇ ಸ್ಥಳವನ್ನು ಬಿಟ್ಟು ಹೋಗಿದ್ದ ಬಡೇ ಸಾಹೇಬತಿಯ ಮಗನಿಗೆ ಹೇಳಿ ಕಳುಹಿಸಿದನು. "ನಿನಗೆ ಪಟ್ಟವನ್ನು ಕಟ್ಟಿ ರಾಜಪದವಿಯನ್ನಿತ್ತು, ಅಲ್ಲಿ ಯದೇಲಶಾಹನಿಗೂ ಮತ್ತು ನಿನಗೂ ಭೇಟಿಯನ್ನು ಮಾಡಿಸಿ, ಭಿನ್ನಾಭಿಪ್ರಾಯವನ್ನು ಪರಿಹರಿಸಿ, ಅನ್ಯೋನ್ಯವಾಗಿರುವಂತೆ ಮಾಡಿ, ದೊರೆತನವು ನಡೆಯುವಂತೆ ಮಾಡುವೆನು ಈ ಕಾರಣ ಕೂಡಲೇ ಬರುವುದೆಂದು" ಲಿಖಿತದ ಮೂಲಕ ಹೇಳಿಕಳುಹಿಸಿದನು. ಈ ಮೇರೆಗೆ ಅವನು ಪಟ್ಟಣಕ್ಕೆ ಬರಲಾಗಿ, ಅವನ ಅಧಿಕಾರಿಗಳು, ಕೋಶಾಧಿಕಾರಿಗಳು ಮತ್ತು ಕಾರಕೂನರು ಮುಂತಾದವರಿಗ ಲಂಚವನ್ನಿತ್ತು ತನ್ನೊಳಗು

ಯೇದುಲಶಾಹನಂ ಕರೆದು ಭೇಟಿಯ ಮುಖದಲ್ಲಿ ಆಲಿಂಗನಕಾಲದಲ್ಲಿ ನೀಂ ಹೆದರದೆ ನಿನ್ನ ಕೈಯೊಳಡಂಗಿಸಿಕೊಂಡಿರ್ಪ ಕಿರುಚೂರಿಯೊಳವನಂಗುಲಿಚ್ಛೇದನಮಂ ಮಾಳ್ಪುದೆಂದು ಬೋಧಿಸಿ ಬಳಿಕ್ಕವರವರ್ಗೆ ಭೇಂಟಿಯಂ ಮಾಡಿಸಿ ತಾಂ ಮನಸ್ಸಂಕಲ್ಪಂಗೈದಂತು ಭೇಟಿಯ ಮುಖದೊಳವನಂಗುಲಿಚ್ಛೇದನವಂ ಮಾಡಿಸಿ ಅವನ ಸಮೀಪಸ್ಥರಾದ ವಜೀರ ಉಮರಾವು ಕಾರಕೂನರಂ ಸ್ವಾಧೀನಕೆಳದು ಅಲ್ಲಿಯೇದುಲಶಾಹಂಗೆ ಪಟ್ಟಮಂ ಕಟ್ಟಿಸಿದಂ ಮುರಾರಿ ಜಗದೇವಪಂತಂ ಬಡೆಸಾಹೇಬತಿಯೊಡನೆ ನಿಷ್ಠುರೋಕ್ತಿಯಂ ನುಡಿದು ತನ್ಮೂಲಮಾದಾಜ್ಞೆಗೊಳಗಾಗಿ ಮೃತಿವೆತ್ತಂ ಆಮೇಲೆ ಜಾನಂತರಾಯಂ ಪಿತುಮೆಯ ಮೇಲೆ ಖವಾಸಖಾನನಂ ಕೊಲಿಸಿ ತಾನೇ ಮುಖ್ಯನಾಗಿ ಪಾತುಶಾಹಿಯ ಬದುಕುಗಳಂ ನಡೆಸಿದಂ. ಆಮೇಲೆ ಈ ಅಲ್ಲಿಯೇದುಲಶಾಹನ ಮಗ ಸುಲುತಾನಶೀಖೀಂದ್ರಂಗೆ ಪಟ್ಟಮಾಯ್ತು. ಈ ಸುಲುತಾನಶಿಖೀಂದ್ರನ ಕಾಲದಲ್ಲಿ ಕಿರಿಯ ಖವಾಸಖಾನನ ಪ್ರಾಬಲ್ಯಂ ಈ ವಿಜಾಪುರದ ಪಾತುಶಾಹಂಗೆ ಹಸರು ನಿಶಾನಿ ಬಿರುದು ಇದು ಬಿಜಾಪುರವನಾಳ್ದ ಪಾತುಶಾಹರ ವಿವರಣಂ

ಇನ್ನು ಗೋಲುಕೊಂಡೆಯುಮೆಂಬ ಭಾಗ್ಯನಗರಿಯ(ಪ್ರತಿನಾಮ ಭಾಗಾನಗರದ)ನಾಳ್ದ ಪಾತುಶಾಹರ ವಿವರಣಮಂ ಪೇಳ್ವೆನದೆಂತೆಂದೊಡೆ :- ಆದಿಯಲ್ಲಿ ಚಾಂದೀನ ಮಲ್ಲೀಕನ ಮಕ್ಕಳ್ ಖೋದಾಖಂಡ ಮಲ್ಲೀಕವಿಭ್ರಾಮ. ಈತಂ ಕಾಮಿಸಿದ ಬ್ರಾಹ್ಮಣಸ್ತ್ರೀಯ ಪೆಸರ್ ಭಾಗೀರಥಿ. ಆಕೆ ತನ್ನ ಪೆಸರಿನಲ್ಲಿ ನಗರಮಂ ವಿಸ್ತಾರಂಗೈಸಲದೆ ಭಾಗಾನಗರಮೆಂದು ಪೆಸರಾಯ್ತು. ಮಲ್ಲೀಕವಿಭ್ರಾಮನ ಮಗಂ ಮುದಖುಲ್ಲಿ ಮತ್ತವನ ಮಗಂ ಮಹಮುದ್ದಖುಲ್ಲಿ ಅವನ ಮಗಂ ಸುಲ್ತಾನ ಅಬ್ದುಲ್ ಆತನ ಅಳಿಯಂ ಸುಲ್ತಾನ ಅಬ್ದುಲ್ ಹಸನ್ ಪಾತುಶಾಹಂ. ಅವನ ಮಗಂ ಲತೆಬ ಅವನ

ಮಾಡಿಕೊಂಡನು. ಅಲ್ಲಿ ಯಾದುಲಶಾಹನನ್ನು ಆಲಂಗಿಸಿಕೊಂಡು ಉಚಿತಾಸನದಲ್ಲಿ ಕುಳ್ಳಿರಿಸಿದನು. ಅವನಿಗೆ "ನೀನು ಹೆದರದೆ ನಿನ್ನೊಳಗಿದ್ದ ಚಿಕ್ಕ ಚೂರಿಯಿಂದ ಅವನ ಬೆರಳನ್ನು ಕೊಯ್ಯಬೇಕೆಂದು" ಬೋಧಿಸಿದನು. ಹೀಗೆ ಕುಹಕದಿಂದ ನಿರೂಪಿಸಿ ಅವರವರಿಗೆ ಭೇಟಿಯನ್ನು ಏರ್ಪಡಿಸಿ, ತಾನು ಮನದಲ್ಲಿ ಎಣಿಸಿಕೊಂಡಂತೆ ಭೇಟಿಯ ಸಮ್ಮುಖದಲ್ಲಿ ಬೆರಳನ್ನು ತುಂಡುಮಾಡಿಸಿ, ಅವನ ಸಮೀಪದಲ್ಲಿದ್ದ ಮಂತ್ರಿಗಳು, ಕೋಶಾಧಿಕಾರಿಗಳು ಹಾಗೂ ಕಾರಕೂನರನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ಯೇದುಲಶಾಹನಿಗೆ ಪಟ್ಟವನ್ನು ಕಟ್ಟಿಸಿದನು. ಮುರಾರಿ ಜಗದೇವಪಂತನು ಬಡೆ ಸಾಹೇಬತಿಯೊಡನೆ ನಿಷ್ಠೂರವಾಗಿ ಮಾತನಾಡಿ ಜಗಳವಾಡಿದ್ದ ಕಾರಣ ಆ ಆಜ್ಞೆಗೊಳಗಾಗಿ ಪ್ರಾಣಬಿಟ್ಟನು. ನಂತರ ಜಾನಂತರಾಯನು ಪಿತೂರಿಯ ಮೇಲೆ ಖವಾಸಖಾನನನ್ನು ಕೊಲ್ಲಿಸಿ ತಾನೇ ದೊರೆತನವನ್ನು ನಡೆಸತೊಡಗಿದನು. ಅನಂತರ ಈ ಅಲ್ಲಿ ಯೇದುಲಶಾಹನ ಮಗ ಸುಲ್ತಾನ ಶಿಖೀಂದ್ರನಿಗೆ ಪಟ್ಟಾಭಿಷೇಕವಾಯಿತು. ಈ ಸುಲ್ತಾನ ಶಿಖೀಂದ್ರನ ಕಾಲದಲ್ಲಿ ಕಿರಿಯ (ಚಿಕ್ಕ) ಖವಾಸಖಾನನ ಪ್ರಾಬಲ್ಯವು. ಈ ವಿಜಾಪುರದ ಬಾದಷಹನಿಗೆ ಹಸುರು ನಿಶಾನಿ. ಬಿರುದು ಇರುವ ಬಿಜಾಪುರವನ್ನು ಆಳಿದ ಬಾದಷಹರ ವಿವರಗಳು ಈ ರೀತಿ ಇವೆ. ಇನ್ನು ಗೋಲ್ಕೊಂಡೆಯೆಂಬ ಭಾಗ್ಯನಗರ (ಇದರ ಹೆಸರು ಭಾಗಾನಗರ)ವನ್ನು ಆಳಿದ ಬಾದಷಹರ ವಿವರಣೆಗಳನ್ನು ಹೇಳುವೆನು; ಅದು ಯಾವ ರೀತಿಯೆಂದರೆ- ಆರಂಭದಲ್ಲಿ ಚಾಂದೀನ ಮಲ್ಲೀಕನ ಮಕ್ಕಳು ಖೋದಾಖಂಡ ಮಲ್ಲೀಕ ವಿಭ್ರಾಮ, ಈತನು ಭಾಗೀರಥಿಯೆಂಬ

ಮಗಂ ಪಿರಿಯ ಕುತುಬಶಾಹಂ ಅವನ ಮಗಂ ಮರಿಕುತುಬಶಾಹಂ ಅವನ ತರುವಾಯಂ ಖೋದಾಖಂಡನ ಮಗಳ ಮಗಂ ತಾನಾಶಾಹಂ ಈ ಭಾಗಾನಗರದ ಪಾತುಶಾಹರ್ಗೆ ಹಳದಿಯ ನಿಶಾನಿಯ ಬಿರುದು. ದೇವಗಿರಿಯ (ಪ್ರತಿನಾಮ ದವಲತಾಬಾದಿನ) ಸಂಸ್ಥಾನಕ್ಕೆ ಸಲ್ವಮದಾನಗರಮೆಂಬ ಸಂಸ್ಥಾನವನಾಳ್ದ ಪಾತುಶಾಹರ ವಿವರಣಮಂ ಪೇಳ್ವೆನದೆಂತೆಂದೊಡೆ :- ಆದಿಯೊಳ್ ನಿಜಾಮಪಾತುಶಾಹಂ ಹಳದಿ ನಿಶಾನಿಯ ಬಿರುದು. ಬಿದರೆ ಸಂಸ್ಥಾನಕ್ಕೆ ಬರೀದಪಾತುಶಾಹಂ ಕೆಂಪಿನ ನಿಶಾನಿಯ ಬಿರುದು ಸಗಕ್ಕೆ (?) ಬಹಿರ್ವಾಸದ ನಿಶಾನಿಯ ಬಿರುದು ಅದಕ್ಕಧಿಪತಿ ಹಸನಗಂಗೂ ಬೊಮ್ಮಣ್ಣಪಾತುಶಾಹಂ. ಇದು ದಿಳ್ಳಿಯಾದಿಯಾದ ತತ್ತತ್ಸಂಸ್ಥಾನಂಗಳನಾಳ್ದ ಪಾತುಶಾಹರ ವಿವರಣಂ ಇನ್ನು ಪೂರ್ವಕಥಾಸಂದರ್ಭಕ್ಕೋಸುಗಂ ಹರಿಜಿ ಮೊದಲಾದ ಆರೆಯರ ಸಂಗತಿಯೆಂತವರೆಂತಿರ್ದರೆಂತು ವೃದ್ಧಿಯನ್ನೈದಿದರೆಂಬ ವಿವರಣಮಂ ಪೇಳ್ವೆನದೆಂತೆಂದೊಡೆ :-

ಕಂ॥ ಸೊಗಯಿಪ ಹರಿಜಿಯುಮುಮದಾ<br>
ನಗರದಧೀಶನ ವಜೀರನೆಂದೆನಿಸಿರ್ದಂ<br>
ತೆಗೆದಲ್ಲಿಂ ತತ್ತನುಜಂ<br>
ಮಗವೆರಸೊರಸಿಂ ವಿಜಾಪುರವನುರೆ ಸಾರ್ದಂ ೨೪

ಬ್ರಾಹ್ಮಣ ಸ್ತ್ರೀಯನ್ನು ಕಾಮಿಸಿದ್ದನು. ಆಕೆಯು ತನ್ನ ನಾಮಾಂಕಿತದಲ್ಲಿ ಪಟ್ಟಣವನ್ನು ವಿಸ್ತಾರಗೊಳಿಸಿದ್ದರಿಂದ ಭಾಗಾನಗರವೆಂದು ಹೆಸರುಂಟಾಯಿತು. ಮಲ್ಲೀಕ ವಿಭ್ರಾಮನ ಮಗ ಮುದಖುಲ್ಲಿ; ಅವನ ಮಗ ಮಹಮೂದಖುಲ್ಲಿ; ಅವನ ಮಗ ಸುಲ್ತಾನ ಅಬ್ದುಲ್; ಆತನ ಅಳಿಯ ಸುಲ್ತಾನ್ ಅಬ್ದುಲ್ ಹಸನ್ ಬಾದಷಹ; ಅವನ ಮಗ ಲತೀಬ; ಅವನ ಮಗ ಹಿರಿಯ ಕುತುಬಶಾಹ; ಇವನ ಮಗ ಮರಿ ಕುತುಬಶಾಹ; ಇವನ ನಂತರ ಖೋದಾಖಂಡನ ಮಗಳ ಮಗ ತಾನಾಶಾಹ ; ಈ ಭಾಗಾನಗರದ ಬಾದಷಹರಿಗೆ ಹಳದಿ ಬಣ್ಣದ ನಿಶಾನಿಯ ಬಿರುದು. ದೇವಗಿರಿಯ ಸಂಸ್ಥಾನಕ್ಕೆ (ಇದಕ್ಕೆ ದೌಲತಾಬಾದ್ ಎಂಬುದಾಗಿಯೂ ಪ್ರತಿನಾಮವುಂಟು) ಸೇರಿದ ಅಹಮ್ಮದಾನಗರವೆಂಬ ರಾಜ್ಯವನ್ನು ಆಳಿದ ಬಾದಷಹರ ವಿವರಣವನ್ನು ಹೇಳುವೆನು. ಅದು ಯಾವ ರೀತಿ ಎಂದರೆ ಆರಂಭದಲ್ಲಿ ನಿಜಾಮ ಬಾದಷಹನಿಗೆ ಹಳದಿಯ ನಿಶಾನಿಯ ಬಿರುದು. ಬಿದಿರೆ ಸಂಸ್ಥಾನಕ್ಕೆ ಬರೀದ ಬಾದಷಹನಿಗೆ ಕೆಂಪಿನ ನಿಶಾನಿಯ ಬಿರುದು. ಅಂಗವಸ್ತ್ರದ ನಿಶಾನಿಯ ಬಿರುದು ಮತ್ತು ಅದಕ್ಕೆ ಅಧಿಪತಿಯಾದ ಹಸನ್‌ಗಂಗೂ ಬೊಮ್ಮಣ್ಣ ಬಾದಷಹ. ಇದು ದಿಳ್ಳಿಯಾದಿಯಿಂದ ಆಯಾ ಸಂಸ್ಥಾನವನ್ನು ಆಳಿದ ಬಾದಷಹರ ವಿವರಣೆ, ಇನ್ನು ಮುಂದೆ ಪೂರ್ವಕಥೆಯ ಸಂದರ್ಭಕ್ಕನುಗುಣವಾಗಿ ಹರಿಜಿಯೇ ಮೊದಲಾದ ಆರೆಯರ ಸಂಗತಿ, ಅವರು ಯಾರು ಯಾರು, ಹೇಗಿದ್ದರು, ಹೇಗೆ ವೃದ್ಧಿಯನ್ನೈದಿದರು ಮುಂತಾದ ವಿವರಣಗಳನ್ನು ಹೇಳುವೆನು. ಅದು ಯಾವ ರೀತಿಯೆಂದರೆ ೨೪. ಅಹಮ್ಮದಾನಗರದ ಬಾದಷಹನಿಗೆ ಮಂತ್ರಿಯಾಗಿ ಹರಿಜಿ ಎಂಬುವನಿದ್ದನು. ಅವನ ಮಗನು ಒಂದಾನೊಂದು ಹಿಂಸೆಗೆ ಸಿಕ್ಕಿ ತನ್ನ

ನೇತೋಜಿ ಶಾಜಿಗಳ್ ವಿ
ಖ್ಯಾತವಿಜಾಪುರದ ಪಾತುಶಾಹನ ಪರಮ
ಪ್ರೀತಿಯ ವಜೀರರಾರೆಯ
ಜಾತಿಯೊಳೆ ಬಲಾಢ್ಯರೆನಿಸಿ ಸುಖದಿಂ ಬಾಳ್ದರ್ ೨೫

ವ|| ಇಂತು ನೆಗಳ್ತೆವೆತ್ತ ನೇತೋಜಿ ಶಾಜಿಗಳ್ ವಿಜಾಪುರದ ನಾಡಿಂಗೆ ಸಲ್ವ ತಮಗೆ ಸ್ಥಿರಾಮರಮಾಗಣೆಯಾಗಿತ್ತು ಜಾವಲಿಮ್ಮಾರಲಿ (?) ಯೆಂಬ ಗ್ರಾಮಕಧಿಕಾರಿಗಳೆನಿಸಿ ತದ್ಗ್ರಾಮಮಂ ಬಲ್ಪುಗೈದದರೊಳಪ್ಪಾಜಿಪಂತನೆಂಬ ಸ್ವಕೀಯನಂ ನಿಲಿಸಿ ತಾಮಿರ್ವರುಂ ಪಾತುಶಾಹನನೋಲಗಿಸುತ್ತುಂ ತತ್ಸಮೀಪದೊಳ್ ಶಸ್ತ್ರೋಪಜೀವಿಗಳಾಗಿ ವರ್ತಿಸುತ್ತಿರ್ದೆಂದಿನಂತೊಂದು ದಿನದೊಳಾ ನೇತೋಜಿಯ ಪುತ್ರನಾದ ಶಾಜಿ ತನ್ನ ಮಗ ಶಿವಾಜಿವೆರಸು ಪಾತುಶಾಹನನೊಲಗಿಸಲವನರಮನೆಗೈತಪ್ಪವಸರದೊಳಾ ಪಾತುಶಾಹನ ವಜೀರನಪ್ಪ ತುರುಷ್ಕಂ ಗೋವಧೆಯಂ ರಚಿಯಿಸುತ್ತಿರಲದಂ ಶಿವಾಜಿ ಕಂಡು ತನ್ನ ತಂದೆ ಶಾಜಿಗೆ ತೋರ್ದಿಂತು ಗೋವಧೆಗೈವುದಂ ಕಂಡಿವರ್ಕಳಂ ಶಿಕ್ಷಿಸಿದಲ್ಲದೆ ತಾಂ ಸುಮ್ಮನಿರ್ಪುದನುಚಿತಮೆನಲೀ ವಜೀರಂ ಪಾತುಶಾಹಂಗೆ ಪರಮಪ್ರೀತಿಪಾತ್ರನಾಗಿರ್ಪನೆಮಗಾ ವಜೀರನ ತ್ವಷ್ಟಿ (?) ಬೇಡವಥವಾ ಶಿಕ್ಷಿಸಿದೆವಾದೊಡೆ ಪಾತುಶಾಹಂಗೆ ದೂರಾಗಿ ಜಾತ್ಯಭಿಮಾನದಿಂ ಬಲವದ್ವಿರೋಧಂ ಸಂಭವಿಸಲ್ ತಮಗೆ ಮೂಲಚ್ಯುತಿಯಪ್ಪುದೆಂದುಸಿರಲೇನಾದೊಡಮಾಗಲಿಂತು

ಮಗನೊಂದಿಗೆ ಬಿಜಾಪುರಕ್ಕೆ ಹೋದನು. ೨೫. ನೇತೋಜಿ, ಷಾಜಿ ಎಂಬವರು ಬಿಜಾಪುರದ ಬಾದಷಹನ ಪ್ರೀತಿಯ ಮಂತ್ರಿಗಳಾಗಿಯೂ ಮತ್ತು ಆರೆಯರ ಜಾತಿಯಲ್ಲೇ ಬಲಾಢ್ಯರಾಗಿಯೂ ಸುಖದಿಂದ ಬದುಕಿ ಬಾಳಿದರು. ವ|| ಈ ರೀತಿ ಪ್ರಸಿದ್ಧಿ ಹೊಂದಿದ ನೇತೋಜಿ ಹಾಗೂ ಷಾಜಿಯವರುಗಳು ಬಿಜಾಪುರದ ನಾಡಿಗೆ ಸೇರಿದ ಹಾಗೂ ತಮಗೆ ಶಾಶ್ವತವಾಗಿ ಉಂಬಳಿಯ ರೂಪದಲ್ಲಿ ಅಮರಮಾಗಣೆಯಾಗಿ ದೊರಕಿದ ಜಾವಲಿಮ್ಮಾರಲಿ (?) ಎಂಬ ಗ್ರಾಮಕ್ಕೆ ಅಧಿಪತಿಗಳೆನಿಸಿಕೊಂಡರು. ಆ ಗ್ರಾಮವನ್ನು ಬಲಪಡಿಸಿ, ಅದರಲ್ಲಿ ಅಪ್ಪಾಜಿಪಂತನೆಂಬ ತಮ್ಮ ಆಪ್ತನೊಬ್ಬನನ್ನು ನೇಮಿಸಿ, ತಾವಿಬ್ಬರೂ ಬಾದಷಹನನ್ನು ಓಲೈಸುತ್ತಾ ಅವನ ಸಮೀಪದಲ್ಲಿದ್ದುಕೊಂಡು ಶಸ್ತ್ರಪಾಣಿಗಳಾಗಿದ್ದರು. ಹೀಗಿರಲು ಒಂದು ದಿನ ನೇತೋಜಿಯ ಮಗನಾದ ಷಾಜಿಯೂ, ತನ್ನ ಮಗ ಶಿವಾಜಿಯೂ ಸೇರಿ ಬಾದಷಹನನ್ನು ಓಲೈಸಲು ಅವನ ಅರಮನೆಗೆ ಬರುವ ಸಂದರ್ಭದಲ್ಲಿ ಬಾದಷಹನ ಮಂತ್ರಿಯಾಗಿರುವ ತುರುಕನೊಬ್ಬನು ಗೋಹತ್ಯೆ ಮಾಡುತ್ತಿರುವುದನ್ನು ಶಿವಾಜಿಯು ಕಂಡನು. ಕೂಡಲೇ ಶಿವಾಜಿಯು ತನ್ನ ತಂದೆ ಷಾಜಿಗೆ ತೋರಿಸಿ, ಗೋವಧೆ ಮಾಡುತ್ತಿರುವ ಇಂತಹವರನ್ನು ಶಿಕ್ಷೆ ಮಾಡಿದಲ್ಲದೆ ತಾನು ಸುಮ್ಮನಿರುವುದು ಉಚಿತವಲ್ಲವೆಂದನು. "ಆ ಮಂತ್ರಿಯು ಬಾದಷಹನಿಗೆ ಅತ್ಯಂತ ಪ್ರೀತಿಪಾತ್ರನಾಗಿರುವುದರಿಂದ ನಮಗೆ ಆ ವಜೀರನ ದ್ವೇಷವು ಯೋಗ್ಯವಲ್ಲ" ಎಂದು ಷಾಜಿಯು ಮಾರುತ್ತರವಿತ್ತನು. "ಒಂದು ವೇಳೆ ನಾವು ಶಿಕ್ಷೆ ಕೊಟ್ಟಲ್ಲಿ ಜಾತ್ಯಭಿಮಾನವನ್ನು ಹೊಂದಿರುವ ಬಾದಹಷನಿಂದ ದೂರವಾಗಿ, ಬಲವಾದ ವಿರೋಧವು ಉಂಟಾಗುವುದಲ್ಲದೆ ತಮ್ಮ ಇರುವಿಕೆಗೇ ಚ್ಯುತಿಯುಂಟಾಗುತ್ತದೆ" ಎಂಬುದಾಗಿ ಎಚ್ಚರಿಸಿದನು. ಶಿವಾಜಿಯು "ಏನಾದರಾಗಲಿ, ಕೆಟ್ಟ ಕೆಲಸಗಳನ್ನು ಮಾಡುವವರನ್ನು ಶಿಕ್ಷೆ ಮಾಡಿದಲ್ಲದೆ ಬಿಡುವವನಲ್ಲ" ಎಂದು ಹೇಳಿ ಆ ಮಂತ್ರಿಯನ್ನು ಕರೆದು ಇಂತಹ

ದುಷ್ಕೃತ್ಯವಮಂ ಮಾಳ್ಪರಂ ಶಿಕ್ಷಿಸಿದಲ್ಲದೆ ಮಾಣ್ಬನಲ್ಲೆನೆಂದಾಗಳಾ ಶಿವಾಜಿ ವಜೀರನಂ ಕರೆದಿಂತು ದುಷ್ಕೃತ್ಯಮಂ ರಚಿಸವೇಡೆಂದು ಕೋಪಿಸಿ ಗಜರಿಸಿ ಗರ್ಜಿಸಲವನಾ ಮಾತಂ ಲಕ್ಷೀಕರಿಸದಿರಲವರಿರ್ವರ್ಗಂ ಕೈಗಲಸಿ ಯುದ್ಧಂ ಪಣ್ಣಿ ಬಳಿಕ್ಕೀ ವೃತ್ತಾಂತಮೆಲ್ಲಂ ಪಾತುಶಾಹಂಗೆ ಕಿಮಿದಾಗಳಾಗಳಾ ಪಾತುಶಾಹಂ ಜಾತ್ಯಭಿಮಾನದಿಂದಾ ವಜೀರನಂ ಪಕ್ಷೀಕರಿಸಿ ಶಾಜಿ ಶಿವಾಜಿಗಳಂ ಕರೆಸಿ ಕನಲ್ದು ಝುಂಕಿಸಿ ಕೆಡೆನುಡಿಯಲ್ ಶಿವಾಜಿಯದಂ ಮನದೊಳಿಟ್ಟು ಮಂದಿರಕ್ಕೈತಂದು ಬಲವದ್ವೀರರೊಳಂ ವಿರೋಧಂ ಬೇಡೆಂದು ಪಲಬಗೆಯೊಳೊಡಂಬಡಿಸಿ ಪೇಳಲೇನಾದೊಡಮಾ ಶಾಜಿಯ ಮಾತಂ ಬಗೆಗೊಳದಂತಾದೊಡೇಕೋಜಿವೆರಸು ನೀನೆ ಪಾತುಶಾಹನನೋಲಗಿಸಿಕೊಂಡು ಸುಖಮಿರ್ಪುದೆಂದತ್ಯಂತಕೋಪಾಟೋಪದಿಂ ನಿಷ್ಠುರೋಕ್ತಿಗಳಂ ನುಡಿದನಂತರಂ

ಉ॥ ತಂದೆಯೆನಿಪ್ಪ ಶಾಜಿಯುಸಿರ್ದಂತಿರೆ ವರ್ತಿಸದಾ ಶಿವಾಜಿ ತಾ
ನಂದು ತೆರಳ್ದು ಶೋಭಿಸುವ ಜಾವುರಿಮಾವುರಿಯೆಂಬ ತಾಣಮಂ
ಪೊಂದಿ ಬಲಿಷ್ಠನಾಗಿ ಹಯಸೈನ್ಯಸಮೂಹವನ್ನೆದೆ ಕೂಡಿಸು
ತ್ತೊಂದಿ ವಿಜಾಪುರಾಧಿಪನ ನಾಡನವಂ ಪುಡಿಗೈದನಾರ್ಜಿನಿಂ ೨೬

ವ॥ ಮತ್ತಮಂತುಮಲ್ಲದೆಯುಂ

ಕಂ॥ ಚಂದನ ವಾಮನ ಪುಣ್ಯಪು
ರಂದರ ಪನ್ನಾಳಿ ಪರಶುರಾಮ ವಸಂತಂ
ವಂದನ ರಿಂಗಿಣಿ ಲೇಖಿನಿ
ಯೆಂದೆನಿಪುಗ್ಗಡದ ಗಡಗಳಂ ಸಾಧಿಸಿದಂ ೨೭

ದುಷ್ಕಾರ್ಯಗಳನ್ನು ಮಾಡಬೇಡವೆಂದು ಕೋಪದಿಂದ ಗದರಿಸಿ ಹೇಳಿದನು. ಆ ಮಂತ್ರಿಯು ಈ ಮಾತನ್ನು ಲಕ್ಷಕ್ಕೆ ತೆಗೆದುಕೊಳ್ಳದೇ ಇದ್ದುದರಿಂದ ಇವರಿಬ್ಬರಿಗೂ ಕೈಕೈ ಮಿಲಾಯಿಸಿ ಯುದ್ಧವುಂಟಾಯಿತು. ಬಳಿಕ ಈ ವರ್ತಮಾನವು ಬಾದಷಹನ ಕಿವಿಯವರೆಗೂ ಹೋಗಿ, ಹಲವರು ಅವನಲ್ಲಿ ಚಾಡಿ ಹೇಳಿದರು. ಬಾದಷಹನು ತನ್ನ ಜಾತಿಯ ಅಭಿಮಾನವನ್ನು ಹೊಂದಿಸಿವನಾಗಿದ್ದರಿಂದ ಮಂತ್ರಿಯ ಪಕ್ಷವನ್ನೇ ವಹಿಸಿಕೊಂಡು ಷಾಜಿ ಮತ್ತು ಶಿವಾಜಿಯನ್ನು ಕರೆಸಿ, ಸಿಟ್ಟಾಗಿ, ಅಬ್ಬರಿಸಿ ಮಾತನಾಡಿದನು. ಶಿವಾಜಿಯು ಇದನ್ನು ಮನಸ್ಸಿನಲ್ಲಿಟ್ಟುಕೊಂಡು ತನ್ನ ನಿವಾಸಕ್ಕೆ ಬಂದನು. ಷಾಜಿಯು ಬಲವಾದ ವೀರರಲ್ಲಿ ವಿರೋಧವು ಸಲ್ಲದೆಂದು ನಾನಾ ವಿಧದಿಂದ ಮಗನನ್ನು ಒಡಂಬಡಿಸಲು ಪ್ರಯತ್ನಪಟ್ಟನು. ಈ ಮಾತನ್ನು ಶಿವಾಜಿಯು ಲಕ್ಷ್ಯಕ್ಕೆ ತಾರದೇ, ಏಕೋಜಿ ಹಾಗೂ ನೀನೂ ಬಾದಷಹನನ್ನು ಓಲೈಸಿಕೊಂಡು ಸುಖವಾಗಿರಿ ಎಂಬುದಾಗಿ ಕೋಪದಿಂದಲೂ, ನಿಷ್ಠುರದಿಂದಲೂ ನುಡಿದನು. ಅನಂತರ ೨೬. ಆ ಶಿವಾಜಿಯು ತಂದೆಯಾದ ಷಾಜಿಯು ಹೇಳಿದಂತೆ ನ[illegible]ಯದೆ, ಅಲ್ಲಿಂದ ಹೊರಟು 'ಜಾವುರಿಮಾವುರಿ' ಎಂಬ ಪ್ರದೇಶವನ್ನು ಸೇರಿ, [illegible]ಷ್ಠನಾಗಿ ಕುದುರೆ, ಸೈನ್ಯ ಸಮೂಹವನ್ನು ಸೇರಿಸಿ ಬಿಜಾಪುರದ ಬಾದಷಹನ ನಾಡನ್ನು [illegible]ಾಕ್ರಮದಿಂದ ಧ್ವಂಸಗೊಳಿಸಿದನು. ಮತ್ತೆ ಅಂತೂ ಅಲ್ಲದೆ ೨೭. ಚಂದನ, ವಾಮನ,

ಭೂತಳಕದ್ಭುತಮೆನಿಸಿದ
ಸಾತಾರಿಯು ಪಾಳ್ಯಮೆಸೆವರಾದಿರಿಯೆಂಬೀ
ಖ್ಯಾತಗಡಂಗಳುಮಮಂ ತ
ನ್ನೇತೋಜಿಯ ಮೊಮ್ಮನದಟನಿಂ ವಶಗೈದಂ ೨೮

ವ|| ಇಂತಿವೇ ಮೊದಲಾದ ಗಡಂಗಳುಮಂ ಕೊಂಡನೇಕರಾಜ್ಯಂಗಳನಧೀನಂಗೈದು ರವಣೆಯಿಂ ಮಿಕ್ಕು ಮೀರಿ ವರ್ತಿಸುತ್ತಿರ್ಪ ತಚ್ಛಿವಾಜಿಯದಟಂ ವಿಜಾಪುರದ ಪಾತುಶಾಹಂ ಕೇಳ್ದು ಶಾಜಿಯಂ ಕರೆದು ಕೋಪಿಸಿ ನಿನ್ನ ಮಗನಂ ಕರೆತರಿಸಲ್ಲದೊಡವನಂ ಪಿಡಿತರಿಸಿ ನಿಗ್ರಹಿಸಿದಪೆನೆನಲಾತನೆನ್ನ ಮಾತಿನೊಳಿಲ್ಲಮವನೆನಗಂ ಗನೀಬನಾಗಿ ನಡೆಯುತಿರ್ಪನೆನಲಾ ಮಾತಂ ಪಾತುಶಾಹಂ ಕೇಳ್ದಾತನಂ ಪಿಡಿತರ್ಪುದೆಂದು ಸೈನ್ಯಮಂ ಕೂಡಿಸಿ ತೆರಳ್ಚಿಸಿ ಕಳುಪಲಾಗಳ್ ತನ್ನಡೆಗೈದಿದಬ್ದುಲ್ಲಖಾನನೆಂಬ ವಜೀರನಂ ಭೇಟಮುಖದೊಳೊಳವುಗುರೆಂಬಾಯುಧದಿಂ ಶಿವಾಜಿ ಘಾತಂಗೆಯ್ಯಲಾ ವಾರ್ತೆಯಂ ಮಗುಳ್ದು ವಿಜಾಪುರದ ಪಾತುಶಾಹಂ ಕೇಳ್ದತ್ಯಂತಕೋಪಾಟೋಪದಿಂದೆಮಗೆ ಗನೀಬನಾಗಿ ವರ್ತಿಸುತಿರ್ಪ ನಿನ್ನ ಮಗನಂ ಪಿಡಿತರ್ಪುದೆಂದು ನಿಯಾಮಿಸಿ ಹೇರಳಮಾದ ಮಂದಿ ಕುದುರೆಗಳಂ ಕೂಡಿಸಿ ಶಾಜಿಯಂ ಕಳುಪಲ್ ಶಿವಾಜಿ ಶಾಜಿಯಂ ಭೇಟಗೊಂಡೊಡನಾ ಶಾಜಿಯಂ ವಂಚಿಸಿ ಪಂಗುಳಿಯಗಡಮಂ ಸಾರ್ದು ನಿಂದು

ಪುಣ್ಯಪುರಂದರ, ಪನ್ನಾಳಿ, ಪರಶುರಾಮ, ವಸಂತ, ವಂದನ, ರಂಗಿಣಿ, ಲೇಖನಿ ಎಂಬ ಬಲವಾದ ಕೋಟೆಗಳನ್ನು ಗೆದ್ದುಕೊಂಡನು. ೨೮. ಆ ನೇತೋಜಿಯ ಮೊಮ್ಮಗನಾದ ಶಿವಾಜಿಯು ಭೂಮಿಯಲ್ಲಿಯೇ ಅದ್ಭುತವೆನಿಸಿದ್ದ ಸಾತಾರಿ, ಪಾಳ್ಯ, ರಾದಿರಿ (?) ಎಂಬ ಪ್ರಸಿದ್ಧ ಕೋಟೆಗಳನ್ನು ವಶಪಡಿಸಿಕೊಂಡನು. ವ|| ಈ ರೀತಿ ಇವೇ ಮೊದಲಾದ ಕೋಟೆಗಳನ್ನು ಸಾಧಿಸಿ, ಅನೇಕ ರಾಜ್ಯಗಳನ್ನು ಅಧೀನಮಾಡಿಕೊಂಡು ವಿಕ್ರಮವನ್ನು ತೋರಿಸುತ್ತಿದ್ದ ಶಿವಾಜಿಯ ಪರಾಕ್ರಮವನ್ನು ಬಿಜಾಪುರದ ಬಾದಷಹನು ಕೇಳಿದನು, ಕೋಪದಿಂದ ಕರೆದು "ನಿನ್ನ ಮಗನನ್ನು ಕರೆತರಿಸು; ಇಲ್ಲದಿದ್ದರೆ ನಾನು ಹಿಡಿತರಿಸಿ ಶಿಕ್ಷಿಸುವೆನು" ಎಂದನು. ಷಾಜಿಯು "ಆತನು ನನ್ನ ಮಾತನ್ನು ಕೇಳುವುದಿಲ್ಲ; ಹಾಗೂ ನನಗೆ ಅವಿಧೇಯನಾಗಿದ್ದಾನೆ" ಎಂದು ಹೇಳಿದನು. ಬಾದಷಹನು ಈ ಮಾತನ್ನು ಕೇಳಿ ಶಿವಾಜಿಯನ್ನು ಹಿಡಿದು ತರತಕ್ಕದೆಂದು ತಕ್ಕ ಸೈನ್ಯವನ್ನು ಸೇರಿಸಿ ಕಳುಹಿಸಿದನು. ತನ್ನೆಡೆಗೆ ಸೈನ್ಯದೊಡನೆ ಬಂದ ಅಬ್ದುಲ್‌ಖಾನನೆಂಬ ವಜೀರನನ್ನು ಭೇಟಿಮುಖದಲ್ಲಿ ಒಳಗಿನ ಉಗುರು (ವ್ಯಾಘ್ರನಖ) ಎಂಬ ಆಯುಧದಿಂದ ಶಿವಾಜಿಯು ಕೊಂದನು. ಈ ವಾರ್ತೆಯನ್ನು ತಿರುಗಿ ಕೇಳಿದ ಬಾದಷಹನು ಅತ್ಯಂತ ಸಿಟ್ಟಿನಿಂದ ಕೂಡಿ, ಅವಿಧೇಯನಾಗಿ ವರ್ತಿಸುತ್ತಿದ್ದ ನಿನ್ನ ಮಗನನ್ನು ಕೂಡಲೇ ಹಿಡಿದು ತರಬೇಕೆಂದು ಷಾಜಿಯನ್ನೇ ನೇಮಿಸಿ ಅವನೊಡನೆ ಹೇರಳವಾಗಿ ಸೈನ್ಯವನ್ನು ಹಾಗೂ ಕುದುರೆ- ಕಾಲಾಳುಗಳನ್ನೂ ಕಳುಹಿಸಿದನು. ಶಿವಾಜಿಯು ಷಾಜಿಯನ್ನು ಭೇಟಿಮಾಡಿ ಅವನನ್ನು ಮೋಸಗೊಳಿಸಿ ಪಂಗುಳಿಯ ಕೋಟೆಯನ್ನು ಸೇರಿ ಅಲ್ಲಿ ನಿಂತು ಹೇರಳವಾದ ಕುದುರೆ ಹಾಗೂ ಕಾಲಾಳುಗಳನ್ನು ಕೂಡಿಕೊಂಡು ಮತ್ತೆ ಕೆಲವು ರಾಜ್ಯಗಳನ್ನೂ, ಕೋಟೆಗಳನ್ನೂ ವಶಪಡಿಸಿಕೊಂಡು ಪ್ರಬಲನಾಗಿ ವರ್ತಿಸುತ್ತಿದ್ದನು. ಮಗನನ್ನು ಕೈವಶಮಾಡಿಕೊಳ್ಳಲು ಅಸಾಧ್ಯವಾದ

ಹೇರಳಮಾದ ಮಂದಿಕುದುರೆಗಳಂ ನೆರಹಿ ಮತ್ತಂ ಕೆಲವು ರಾಜ್ಯಗಡಂಗಳಂ ಕೊಂಡತ್ಯಂತಪ್ರಬಲನಾಗಿ ವರ್ತಿಸುತ್ತಿರಲ್ ಮಗನಂ ಕೈವಶಂಗೈವೊಡಸಾಧ್ಯಮಾದ ಕಾರಣದಿಂದಾ ಶಾಜಿ ಲಜ್ಜಿತನಾಗಿ ಹಿಂದೆಗೆದು ಮಗುಳ್ದಾ ವಿಜಾಪುರಕ್ಕೆ ಪೋಪ ದಾರಿಗಾಣದೆ ಮಗ ಯೇಕೋಜಿ ಸಮೇತನಾಗಿ ಮೈದೆಗೆದು ನಡೆದು ತಮಗೊಂದು ಸ್ಥಳಮಾಗೆ ನಿಲ್ವೊಡೆಡೆಗಾಣದೆ ಮಧುರೆಯವರೊಳಗಣ ಚಂದೀಗಡ ಚಂದಾವರದ ಕೋಂಟೆಗಳಂ ತೆಗೆದುಕೊಂಡಾ ಸ್ಥಳದೊಳ್ ತನ್ನ ಕಿರಿಯ ಮಗನಾದೇಕೋಜಿಸಮೇತನಾಗಿ ನಿಂತು ಕೆಲದಿನಮಲ್ಲಿರ್ದು ಮಗನನಲ್ಲಿಯೆ ನಿಲ್ಲಿಸಿ ತಾಂ ಮಗುಳ್ದು ವಿಜಾಪುರಕ್ಕೈದುತಿರಲ್ ಮಧ್ಯಮಾರ್ಗದೊಳ್ ರೋಗಪೀಡಿತನಾಗಿ ಶೀರೆದ ಪ್ರಾಂತದೊಳ್ ಶಿವಸಾಯುಜ್ಯಮಂ ಪಡೆಯಲಿತ್ತಂ ತತ್ಪುತ್ರನಾದ ಶಿವಾಜಿ ಮತ್ತಂ ಬಹು ರಾಜ್ಯರಾಷ್ಟ್ರಗಡನಿಕ್ಷೇಪಂಗಳಂ ಸಾಧ್ಯಂಗೈದು ದಿನದಿನದೊಳತ್ಯಂತ ಪ್ರಬಲನಾಗಿ ವರ್ತಿಸುತ್ತುಂ

ಕಂ॥ ಡಿಳ್ಳಿಯವರಂಗಜೇಬನ
ಪಳ್ಳಿಯ ಗೋಕುಲವ ತಿರುಹಿ ರಾಷ್ಟ್ರಂಗಳೊಳಿಂ
ಬುಳ್ಳ ಗಡಂಗಳ ನೀಳ್ದೊ
ಳ್ಳೊಳ್ಳೆಯ ರಾಜ್ಯಗಳನಿರದವಂ ವಶಗೈದಂ ೨೯

ಬಳಿಕವನ ರಾಜ್ಯಗಳೊಳುಪ
ಟಳಮಂ ರಚಿಸಲ್ಕೆ ತನ್ನ ಮಾವನೆನಿಪ್ಪ
ಗ್ಗಳನಹ ಶಾಸ್ತಾಖಾನನ
ನಳವಿಂ ಬೀಳ್ಕೊಡೆ ಶಿವಾಜಿಯಂ ತಹುದೆನುತುಂ ೩೦

ಕಾರಣದಿಂದ ಷಾಜಿಯು ಲಜ್ಜಿತನಾಗಿ ಹಿಂದಕ್ಕೆ ತಿರುಗಿದನು. ಹಿಂದಿರುಗುವಾಗ ಬಿಜಾಪುರಕ್ಕೆ ಹೋಗಲು ದಾರಿ ತೋರದೆ ಮಗ ಏಕೋಜಿ ಸಹಿತನಾಗಿ ಸಂಕೋಚಪಟ್ಟುಕೊಂಡು ನಡೆಯುತ್ತಾ, ತಮಗೆ ಯಾವ ಸ್ಥಳವೂ ತೋಚದೆ, ನಿಲ್ಲುವುದಕ್ಕೂ ಎಡೆ ತೋರದೆ ಮಧುರೆಯವರ ಒಳಗಿನ ಪ್ರದೇಶವಾದ ಚಂದೀಗಡ ಮತ್ತು ಚಂದಾವರ ಕೋಟೆಗಳನ್ನು ವಶಪಡಿಸಿಕೊಂಡನು. ಆ ಪ್ರದೇಶದಲ್ಲಿ ತನ್ನ ಕಿರಿಯ ಮಗನಾದ ಏಕೋಜಿ ಸಹಿತನಾಗಿ ನಿಂತು ಕೆಲವು ದಿನಗಳು ಅಲ್ಲಿಯೇ ಇದ್ದು ಮಗನನ್ನು ಅಲ್ಲಿಯೇ ಉಳಿಸಿದನು. ತಾನು ತಿರುಗಿ ಬಿಜಾಪುರಕ್ಕೆ ಮರಳುತ್ತಿದ್ದಾಗ ಮಧ್ಯಮಾರ್ಗದಲ್ಲಿ ರೋಗಗ್ರಸ್ತನಾಗಿ ಶೀರ್ಯದ ಪ್ರಾಂತದಲ್ಲಿ ಶಿವಸಾಯುಜ್ಯವನ್ನು ಹೊಂದಿದನು. ಈ ಕಡೆಯಲ್ಲಿ ಅವನ ಮಗನಾದ ಶಿವಾಜಿಯು ಮತ್ತೂ ರಾಜ್ಯ, ರಾಷ್ಟ್ರ, ಕೋಟೆ ಹಾಗೂ ಧನಗಳನ್ನು ಸಾಧಿಸಿಕೊಂಡು ದಿನದಿನಕ್ಕೂ ಅತ್ಯಂತ ಪ್ರಬಲನಾಗಿ ಬೆಳೆಯುತ್ತಿದ್ದನು. ೨೯. ಶಿವಾಜಿಯು ಡಿಲ್ಲಿಯ ಔರಂಗಜೇಬ ಬಾದಷಹನ ಹಳ್ಳಿಯ ಹಸುಗಳ ಹಿಂಡನ್ನು ತಿರುಗಿಸಿ, ರಾಷ್ಟ್ರಗಳಲ್ಲಿ ಆಯಕಟ್ಟಿನ ಕೋಟೆಗಳನ್ನು ಸೆಳೆದುಕೊಂಡು ಒಳ್ಳೊಳ್ಳೆಯ ರಾಜ್ಯಗಳನ್ನು ವಶಪಡಿಸಿಕೊಂಡನು. ೩೦. ಆಮೇಲೆ ಬಾದಷಹನ ರಾಜ್ಯದಲ್ಲಿ ಉಪದ್ರವಗಳನ್ನು ಮಾಡುತ್ತಿದ್ದಾಗ ಆ ಔರಂಗಜೇಬನು ತನ್ನ ಮಾವನೂ ಹಾಗೂ ಪರಾಕ್ರಮಿಯೂ ಆದ ಶಾಸ್ತಾಖಾನನನ್ನು ಶಿವಾಜಿಯನ್ನು ಹಿಡಿದು ತರುವಂತೆ ಕಳುಹಿಸಿದನು.

ಕಡುಗಲಿ ಶಾಸ್ತಾಖಾನಂ
ಪಡೆವೆರಸು ತೆರಳ್ದು ಶೀಘ್ರದಿಂ ಪನ್ನಾಳೀ
ಗಡಮಂ ಮುತ್ತಲ್ಕೊರ್ವನೆ
ನಡೆತಂದು ಶಿವಾಜಿಯವನಗೋಂಟಂ ಪೊಗುತುಂ ೩೧

ಛುರಿಕದೆ ಶಾಸ್ತಾಖಾನನ
ಬೆರಲಂ ಕತ್ತರಿಸಿ ನಿಶಿಯೊಳಂ ಪೋಗಲವಂ
ಪರಮಭೀತಿಯೊಳೆ ತೆಗೆದತಿ
ಭರದಿಂ ಪಡೆವೆರಸು ಡಿಳ್ಳಿಯಂ ನೆರೆಪೊಕ್ಕಂ ೩೨

ಅವರಂಗಜೇಬನಂ ಕಂ
ಡವನಾತ್ಮಾಂಗುಲಿಯನ್ನೆದೆ ತೋರಲ್ ಖತಿಯಿಂ
ಯವನಾಧೀಶಂ ಕಲ್ಪದ
ಜವನೆನೆ ಗರ್ಜಿಸಿ ವಜೀರರಂ ನೋಡುತ್ತುಂ ೩೩

ಕರೆದು ಜಯಸಿಂಗನಂ ನೀಂ
ತ್ವರಿತದೊಳಂ ತೆರಳ್ದು ತಚ್ಛಿವಾಜಿಯುಮಂ ಕೈ
ಸೆರೆವಿಡಿದು ತಪ್ಪದೆನುತಂ
ದುರೆ ನೇಮಿಸಿ ಪೋಪುದೆಂದವಂ ಬೀಳ್ಕೊಟ್ಟಂ ೩೪

ವ॥ ಇಂತೆಂದು ನಿಯಾಮಿಸಿ ಬೀಳ್ಕೊಡಲ್ ಭೂರಿಸೈನ್ಯಂವೆರಸು ಜಯಸಿಂಗಂ ತೆರಳ್ದೈತಂದು ಪನ್ನಾಳಿಯ ಗಡಮಂ ವೇಢೈಸಲ್ ಶಿವಾಜಿಯೆಯ್ತಂದು ಭೇಟಿಯಂ ಕೊಳಲಾಗಳಾ ಜಯಸಿಂಗಂ

•

೩೧. ಕಡುಗಲಿಯಾದ ಶಾಸ್ತಾಖಾನನು ಸೈನ್ಯಸಹಿತನಾಗಿ ಬೇಗನೆ ಹೋಗಿ ಪನ್ನಾಳಿ ಕೋಟೆಯನ್ನು ಮುತ್ತಲು ಶಿವಾಜಿಯು ಏಕಾಕಿಯಾಗಿ ಬಂದು ಅವನ ಶಿಬಿರವನ್ನು ಹೊಕ್ಕನು. ೩೨. ಶಿವಾಜಿಯು ರಾತ್ರಿಕಾಲದಲ್ಲಿ ಒಳಹೊಕ್ಕು ಚೂರಿಯಿಂದ ಶಾಸ್ತಾಖಾನನ ಬೆರಳನ್ನು ಕತ್ತರಿಸಿ ಹೊರಟುಹೋದನು. ಇದರಿಂದ ಹೆದರಿದ ಶಾಸ್ತಾಖಾನನು ಸೈನ್ಯಸಹಿತನಾಗಿ ಡಿಲ್ಲಿಗೆ ಮರಳಿದನು. ೩೩. ಶಾಸ್ತಾಖಾನನು ಔರಂಗಜೇಬನನ್ನು ಕಂಡು ತನ್ನ ಕತ್ತರಿಸಿದ ಬೆರಳನ್ನು ತೋರಿಸಿದಾಗ ಆ ಯವನರ ಅರಸನು ಪ್ರಳಯಕಾಲದ ಯಮನಂತೆ ಗರ್ಜಿಸಿ ವಜೀರನನ್ನು ನೋಡಿದನು. ೩೪. ಔರಂಗಜೇಬನು ಜಯಸಿಂಗನೆಂಬ ಮಂತ್ರಿಯನ್ನು ಕರೆದು ನೀನು ಶೀಘ್ರವಾಗಿ ಹೋಗಿ ಆ ಶಿವಾಜಿಯನ್ನು ಕೈಸೆರೆ ಹಿಡಿದು ತರಬೇಕು ಎಂದು ಅಪ್ಪಣೆಕೊಟ್ಟು ಕಳುಹಿಸಿದನು. ವ॥ ಈ ರೀತಿಯಾಗಿ ನಿಯಮಿಸಿ ಬೀಳ್ಕೊಡಲು ಬಹುಸೈನ್ಯದಿಂದ ಕೂಡಿ ಜಯಸಿಂಗನು ತೆರಳಿ ಬಂದು ಪನ್ನಾಳಿಯ ಕೋಟೆಯನ್ನು ಆಕ್ರಮಿಸಿದನು. ಶಿವಾಜಿಯು ಬಂದು ಭೇಟಿಯನ್ನು ಕೊಡಲು ಜಯಸಿಂಗನು ಶಿವಾಜಿಯ ಹಸ್ತವನ್ನು ಹಿಡಿದನು. ಶಿವಾಜಿಯು ನಸುನಗುತ್ತಾ "ನನ್ನ ಕೈಹಿಡಿಯುವ ಬಲವಿದ್ದರೆ ಹಿಡಿಯುವುದು; ಇಲ್ಲದಿದ್ದರೆ ಬಿಟ್ಟುಬಿಡಬೇಕು" ಎಂದನು. ಈ ಮಾತನ್ನು ಜಯಸಿಂಗನು ಕೇಳಿ "ಕೈ ಹಿಡಿದ ಮೇಲೆ ಬಿಡುವವನಲ್ಲ" ಎಂದು ಹೇಳಿದನು. "ಹಾಗಿದ್ದರೆ ಒಳ್ಳೆಯದು"

**ಶಿವಾಜಿಯ ಹಸ್ತಮಂ ಪಿಡಿಯಲಾಗಳಾ ಶಿವಾಜಿ ನಸುನಗುತ್ತೆನ್ನ ಹಸ್ತಮಂ ಪಿಡಿವ ಬಲ್ಪುಳ್ಳೊಡೆ ಪಿಡಿವುದಲ್ಲದಿರ್ದೊಡೆ ಮಾಣ್ಬುದೆನಲಾ ಮಾತಂ ಜಯಸಿಂಗಂ ಕೇಳ್ದು ಕೈವಿಡಿದ ಬಳಿಕ್ಕಂ ಬಿಡುವೆನಲ್ಲಮೆನಲಂತಾದೊಡೊಳ್ಳಿತೆಂದೊಡಂಬಟ್ಟಾ ಶಿವಾಜಿ ನಿಜಪುತ್ರ ಸಂಬಾಜಿವೆರಸು ತಾನಲ್ಪ ಸೈನ್ಯಸಮೇತನಾಗಿ ತೆರಳ್ದು ಡಿಳ್ಳಿಯಂ ಪೊಕ್ಕವರಂಗಜೇಬನ ಭೇಟಿಯಂ ಕೊಳಲ್ ಮನ್ನಿಸಿಯುಚಿತಮಾದುಡುಗೊರೆ ವೀಳ್ಯಂಗಳನಿತ್ತಾದರಿಸಿ ಬಿಡಾರಕ್ಕೆ ತೆರಳ್ಚಿಯುಲುಪೆ ಮೊದಲಾದ ಸಮಸ್ತವಸ್ತೂತ್ಕರಮಂ ಕಳುಪಿ ಕಬ್ಜಿ ಪ್ರತಿನಾಮಮನುಳ್ಳ ಕವಿಕಳಸಂಗೆ ನಿಯಾಮಿಸಿ ಚೌಕಿಯನಿಕ್ಕಿಸಲದರೊಳಾ ಶಿವಾಜಿ ಸಂಬಾಜಿವೆರಸು ಕೆಲವು ದಿನಮಿರುತ್ತುಂ ಕ್ರಮದಿಂ ನಾನಾ ಪ್ರಕಾರದಿಂದಾ ಕವಿಕಳಸನನೊಳಗುಮಾಡಿಕೊಂಡು ನಿನ್ನ ಸಂಸ್ಥಾನದೊಳಿರ್ಪ ವಜೀರ ಉಮರಾವುಗಳ್ಗಾತಣ ವುಡುಗೊರೆಗಳಂ ಮಾಡಿಸಲ್ವೇಳ್ಕೆಂದು ಪಾತುಶಾಹನಿಂದಪ್ಪಣೆವೆತ್ತು ಸ್ಥೂಲಸೂಕ್ಷ್ಮಂಗಳಾದ ಪೇಟಿಕೆಗಳಂ ಸಂಗ್ರಹಿಸಿಯವರೊಳ್ ತಂಡುಲಾಢಕ ಮಾಷ ಮುದ್ಗ ಗೋಧೂಮಾಧಿ ಸಕಲಧಾನ್ಯ ನಾನಾ ಫಲಪದಾರ್ಥಪರಿಮಳದ್ರವ್ಯ ತಾಂಬೂಲ ವಿಚಿತ್ರವಸನಾದಿ ವಸ್ತೂತ್ಕರಂಗಳಂ ತುಂಬಿಸಿ ಚಾರರಿಂದಾ ಪೇಟಿಕೆಗಳನೊಂದೊಂದುದಿನದೊಳೋರೊರ್ವ ವಜೀರರ ಮನೆಗೆ ಕಳುಪುತ್ತೀ ಪ್ರಕಾರಮಾದ ನಡತೆಯಿಂ ನಚ್ಚು ಹಾಕಿ ಬಳಿಕೊಂದುದಿನದೊಳ್ ತಾಂ ಮಲಂಗುವ ಪಾಸಿನೊಳ್ ನೀಳಮಾದೊಂದು ಲೋಡಂ ಮಲಂಗಿಸಿ ತಲೆಗಿಂಬನಿಕ್ಕಿ ತಾಂ ಪೊದೆದ ವಸ್ತ್ರವನಾ ಲೋಡಿಂಗೆ ಪೊದೆಯಿಸಿ ನೋಳ್ಪರ್ಗೆ ತಾನೆಂದಿನಂತೆ ಮಲಂಗಿರ್ಪನೆಂಬ ಭಾವಮಂ ಪುಟ್ಟಿಸಿ ಬಳಿಕ್ಕಾ ಶಿವಾಜಿ**

ಎಂದು ಒಡಂಬಟ್ಟು ಶಿವಾಜಿಯು ತನ್ನ ಮಗ ಸಂಬಾಜಿಯೊಡನೆ ಸೇರಿ ಅಲ್ಪ ಸೈನ್ಯದೊಡನೆ ಹೊರಟು ಡೆಲ್ಲಿಯನ್ನು ಹೊಕ್ಕು ಔರಂಗಜೇಬನನ್ನು ಭೇಟಿಮಾಡಿದನು. ಔರಂಗಜೇಬನು ಶಿವಾಜಿಯನ್ನು ಮನ್ನಿಸಿ ಉಚಿತವಾದ ಉಡುಗೊರೆ ಹಾಗೂ ವೀಳ್ಯಗಳನ್ನಿತ್ತು ಆದರಿಸಿದನು. ಅವನನ್ನು ಬಿಡಾರಕ್ಕೆ ಕಳುಹಿಸಿ ಊಟ ಉಪಚಾರಗಳಿಗೆ ಪದಾರ್ಥಗಳನ್ನು ಕಳುಹಿಸಿಕೊಟ್ಟು ಆತನನ್ನು ನೋಡಿಕೊಳ್ಳಲು ಕಬ್ಜಿ ಎಂಬ ಪ್ರತಿನಾಮವಿರುವ ಕವಿಕಳಸನನ್ನು ನಿಯಮಿಸಿದನು. ಹೀಗೆ ಏರ್ಪಡಿಸಿ ಅವನಿರುವ ಪ್ರದೇಶದಲ್ಲಿ ಕಾವಲು ಹಾಕಿಸಿದನು. ಆ ಶಿವಾಜಿ ಹಾಗೂ ಸಾಂಬಾಜಿಯು ಹೀಗೆ ಕೆಲವು ದಿನಗಳು ಇರುತ್ತಿರಲು, ಈ ಈರ್ವರೂ ಕಾಲ ಕ್ರಮೇಣ ಕವಿಕಳಸನನ್ನು ನಾನಾ ಪ್ರಕಾರದಿಂದ ಒಲಿಸಿ, ತನ್ನೊಳಗು ಮಾಡಿಕೊಂಡರು. ಆ ಸಂಸ್ಥಾನದಲ್ಲಿರುವ ಮಂತ್ರಿಗಳು ಮತ್ತು ಕೋಶಾಧಿಕಾರಿಗಳು ಮುಂತಾದವರಿಗೆ ಉಡುಗೊರೆಗಳನ್ನು ಕೊಡಿಸಲು ಬಾದಷಹನಿಂದ ಅಪ್ಪಣೆ ಪಡೆದನು. ಅನಂತರ ಸ್ಥೂಲವೂ ಹಾಗೂ ಸೂಕ್ಷ್ಮವೂ ಆದ ಪೆಟ್ಟಿಗೆಗಳನ್ನು ಸಂಗ್ರಹಿಸಿ, ಅದರಲ್ಲಿ ಅಕ್ಕಿ, ತೊಗರಿ, ಉದ್ದು, ಹೆಸರುಕಾಳು ಮತ್ತು ಗೋಧಿಯೇ ಮೊದಲಾದ ಸಕಲ ಧಾನ್ಯಗಳನ್ನೂ ನಾನಾ ವಿಧವಾದ ಪದಾರ್ಥಗಳು, ಪರಿಮಳದ್ರವ್ಯಗಳು, ತಾಂಬೂಲಗಳು, ಬಟ್ಟೆಗಳು, ಮತ್ತು ಶ್ರೇಷ್ಠವಾದ ವಸ್ತುಗಳು ಮುಂತಾದುವುಗಳನ್ನು ತುಂಬಿಸಿ ಸೇವಕರಿಂದ ಪೆಟ್ಟಿಗೆಗಳನ್ನು ಒಂದೊಂದು ದಿನದಲ್ಲಿ ಒಬ್ಬೊಬ್ಬ ಮಂತ್ರಿಯ ಮನೆಗೆ ಕಳಿಸುತ್ತಿದ್ದನು. ಈ ಪ್ರಕಾರದ ನಡತೆಗಳಿಂದ ನಂಬಿಸಿ, ಬಳಿಕ ಒಂದು ದಿನ ತಾನು ಮಲಗುವ ಹಾಸಿಗೆಯಲ್ಲಿ ಉದ್ದವಾದ ದಿಂಬನ್ನು ಇಟ್ಟು ಮಲಗಿಸಿ, ತಲೆದಿಂಬನ್ನಿಟ್ಟು, ತಾನು ಹೊದೆದುಕೊಂಡಿದ್ದ ವಸ್ತ್ರವನ್ನು ಹೊದೆಸಿ,

ತನ್ನ ಮಗನನೊಂದು ಪೆಟ್ಟಗೆಯೊಳ್ ಪುಗಿಸಿ ತಾನೊಂದು ಪೆಟ್ಟಗೆಯೊಳ್ ಪೂರ್ವದೊಳ್ ಭೇಟಿಕಾಲದೊಳ್ ಕೈವಿಡಿದ ನಂಬುಗೆಯಂ ಮನದೆಗೊಂಡು ಜಯಸಿಂಗನಾಲಯಮಂ ಸಾರ್ದು ಮತ್ತಮಲ್ಲಿ ಫಕೀರವೇಷಮಂ ತಾಳ್ದು ಪೊರಮಟ್ಟು ಮಗ ಸಂಬಾಜಿಯಂ ಕರೆದು ವೇಷಾಂತರದಿಂ ನೀಂ ಪನ್ನಾಳಿಗೈದಿ ನೀನಾವುದರೊಳಮೆಚ್ಚರಿನೊಳ್ ವರ್ತಿಪುದೆಂದೊರೆದು ಬೀಳ್ಕೊಟ್ಟು ತಾಂ ಪರದೇಶಿ ಫಕೀರ ಜೋಗಿ ಜಂಗಮ ಮುಂತಾದ ಬಗೆಬಗೆಯ ವೇಷಗಳಂ ತಾಳ್ದೈದುತ್ತುಂ

ಕಂ|| ವರಕಾಶೀಕ್ಷೇತ್ರವನಾ
ಗರುವಂ ತಾಂ ಪೊರ್ದಿ ಮಿಂದು ವಾರಣಾಸಿಯೊಳ್
ಪರಮಭಕ್ತಿಯೊಳೆ ವಿಶ್ವೇ
ಶ್ವರನಡಿಯಂ ಭಜಿಸಿ ಕೂಡೆ ಗಯೆಯಂ ಸಾರ್ದಂ ೩೫

ಮಿರುಪಾ ಕ್ಷೇತ್ರದೊಳಂ ಮಿಗೆ
ವಿರಚಿಪ ಕೃತ್ಯಗಳನೈದೆ ತೀರ್ಚಿ ಬಳಿಕ್ಕಂ
ತೆರಳ್ದಲ್ಲಿಂದೆ ತದಾರೆಯ
ರೆರೆಯಂ ತಾಂ ಗೋಲುಕೊಂಡೆಯವನುರೆ ಸಾರ್ದಂ ೩೬

ಅಕ್ಕಣಮಾದಣರುಗಳಿಂ
ಚಕ್ಕನೆ ತತ್ಪಾತುಶಾಹಗರುಹಿಸಿ ಬರವಂ
ಮಿಕ್ಕಾ ರಾಜಾಲಯಮಂ
ಪೊಕ್ಕಾ ಯವನಪನ ಭೇಟಿಯಂ ನೆರೆ ಕೊಂಡಂ ೩೭

ನೋಡುವವರಿಗೆ ತಾನು ಎಂದಿನಂತೆ ಮಲಗಿರುವ ಭಾವವನ್ನು ಹುಟ್ಟುವಂತೆ ಮಾಡಿದನು. ಬಳಿಕ ಶಿವಾಜಿಯು ತಾನೊಂದು ಪೆಟ್ಟಿಗೆಯಲ್ಲಿಯೂ ಮತ್ತು ಮಗನನ್ನು ಒಂದು ಪೆಟ್ಟಿಗೆಯಲ್ಲಿಯೂ ಅಡಗಿಸಿಕೊಂಡು ಪೂರ್ವದಲ್ಲಿ ಭೇಟಿಕಾಲದಲ್ಲಿ ಕೈಹಿಡಿದ ನಂಬಿಗೆಯಂತೆ ಜಯಸಿಂಗನ ಮನೆಯನ್ನು ಪ್ರವೇಶಿಸಿದನು, ಅಲ್ಲಿ ಫಕೀರವೇಷವನ್ನು ಧರಿಸಿ ಹೊರಟು ಮಗ ಸಂಬಾಜಿಯನ್ನು ಕರೆದು "ವೇಷಾಂತರದಿಂದ ನೀನು ಪನ್ನಾಳಿಗೆ ಹೋಗು; ಮತ್ತು ಎಲ್ಲ ರೀತಿಯಿಂದಲೂ ಎಚ್ಚರವಾಗಿರು" ಎಂದು ಹೇಳಿ ಬೀಳ್ಕೊಟ್ಟನು. ತಾನು ಪರದೇಶಿ, ಫಕೀರ, ಜೋಗಿ ಮತ್ತು ಜಂಗಮ ಮುಂತಾದ ನಾನಾ ವಿಧವಾದ ವೇಷವನ್ನು ಧರಿಸಿಕೊಂಡು ಹೋಗುತ್ತಿದ್ದನು. ೩೫. ಅಭಿಮಾನಿಯಾದ ಶಿವಾಜಿಯು ಕಾಶೀಕ್ಷೇತ್ರಕ್ಕೆ ಹೋಗಿ ವಾರಾಣಸಿಯಲ್ಲಿ ಗಂಗಾಸ್ನಾನಮಾಡಿ ಪರಮಭಕ್ತಿಯಿಂದ ವಿಶ್ವೇಶ್ವರನ ಪಾದವನ್ನು ಪೂಜಿಸಿ ಗಯೆಗೆ ಹೋದನು. ೩೬. ಶ್ರೇಷ್ಠವಾದ ಆ ಗಯಾಕ್ಷೇತ್ರದಲ್ಲಿ ಮಾಡಬೇಕಾದ ಕೃತ್ಯಗಳನ್ನೆಲ್ಲ ಮುಗಿಸಿ ಬಳಿಕ ಅಲ್ಲಿಂದ ಹೊರಟ ಆರೆಯರ ದೊರೆಯಾದ ಶಿವಾಜಿಯು ಗೋಲ್ಕೊಂಡೆಗೆ ಹೋದನು. ೩೭. ಅಕ್ಕಣ್ಣ ಮಾದಣ್ಣ ಎಂಬವರ ಮೂಲಕ ಗೋಲ್ಕೊಂಡೆಯ ಬಾದಷಹನಿಗೆ ತನ್ನ ಆಗಮನವನ್ನು ತಿಳಿಸಿದ ಶಿವಾಜಿಯು ಅರಮನೆಯನ್ನು ಪ್ರವೇಶಿಸಿ ಬಾದಷಹನನ್ನು ಭೇಟಿ ಮಾಡಿದನು.

ವ॥ ಇಂತು ಭಾಗಾನಗರದೊಳ್ ತಾನಾಶಾಹನ ಭೇಟಿಯಂ ಕೊಂಡನೇಕ ಬಹುಮಾನಮಂ ಪಡೆದು ತೆರಳ್ದನಂತರಂ ಪನ್ನಾಳಿಯಂ ಸಾರ್ದು ಮುನ್ನಿಗಿಂದತ್ಯಧಿಕ ಪ್ರಬಲನಾಗಿ ವರ್ತಿಸುತ್ತುಮಿರಲ್ ಡಿಳ್ಳಿಯೊಳಿತ್ತಂ

ಮ॥ ಮಿಗೆ ನೇತೋಜಿಯ ಪೌತ್ರನಂ ಬಿಡದೆ ಕಾಯ್ವಚೌಕಿಯೊಳ್ ಕಾಣದು
ಬ್ವೆಗದಿಂದಂದವರಂಗಜೇಬಗರುಪಲ್ ಕೇಳ್ದಿಮ್ಮೊಳಿಂತಾರೆಯಂ
ಡಗೆಗೆಯ್ದಾವೆಡೆಗೆಯ್ದಿದಂ ಬೆದಕಿ ಶೀಘ್ರಂ ತಪ್ಪುದೆಂದಾರ್ದು ಕೆ
ಮ್ಮೊಗರಾಣ್ಮಂ ಬಿಡದಟ್ಟಿದಂ ಪ್ರಬಲಸೇನಾಭಾರರಂ ಚಾರರಂ ೩೮

ಕಂ॥ ತೆರಳ್ದವರ್ಗಳ್ನಾಲ್ಗಡೆಗಳೊ
ಳರಸುತ್ತಿರೆ ತಚ್ಛಿವಾಜಿ ಗಯೆಯಿಂ ಪೊರಮ
ಟ್ಟುರೆ ಪನ್ನಾಳಿಯನೈದಿದ
ಪರಿಯಂ ಕೇಳ್ದಾ ತುರುಷ್ಕಪತಿಯತಿಖತಿಯಿಂ ೩೯

ಕಡುಗಲಿ ಶಾಜಿಯ ಸುತನಂ
ಪಿಡಿದವಗಂ ಕಾಯ್ಪನಿಕ್ಕಿ ಕಳುಪುವುದಿರದೆ
ನ್ನೆಡೆಗೀಗೆಂದು ವಿಜಾಪುರ
ದೊಡೆಯಂಗಾ ಮ್ಲೇಚ್ಛಪಂ ನಿರೂಪಿಸಿ ಕಳುಪಲ್ ೪೦

ಬರೆಯಲ್ಪರ್ಯಾಯೋಕ್ತಿಯ
ನುರೆ ಕೇಳ್ದವರಂಗಜೇಬನಾಗಳೆ ಫೌಜಂ
ನೆರಹಿ ವಜೀರರ್ಕಳುಮಂ
ಬರಿಯಿಸಿ ಕೋಪದೊಳೆ ತನ್ನೊಳಂದಿಂತೆಂದಂ ೪೧

ವ॥ ಈ ರೀತಿ ಭಾಗಾನಗರದಲ್ಲಿ ತಾನಾಶಾಹನ ಭೇಟಿಯನ್ನು ಕೈಗೊಂಡು, ಅವನಿಂದ ಅನೇಕ ಬಹುಮಾನಗಳನ್ನು ಪಡೆದನು. ಅನಂತರ ಪನ್ನಾಳಿಗೆ ಹೋಗಿ ಮುಂಚಿಗಿಂತ ಅಧಿಕ ಪ್ರಬಲನಾಗಿ ಇದ್ದನು. ಹೀಗಿರಲು ಇತ್ತ ಡಿಲ್ಲಿಯಲ್ಲಿ- ೩೮. ನೇತೋಜಿಯ ಮೊಮ್ಮಗನಾದ ಶಿವಾಜಿಯನ್ನು ಕಾವಲುಗಾರರು ಚೌಕಿಯಲ್ಲಿ ಕಾಣದೇ ಉದ್ವೇಗದಿಂದ ಔರಂಗಜೇಬನಿಗೆ ತಿಳಿಸಿದಾಗ ಅವನು ಅದನ್ನು ಕೇಳಿ "ಈ ಆರೆಯನು ನಮ್ಮಲ್ಲಿ ಈ ರೀತಿ ವಂಚನೆ ಮಾಡಿ ಎಲ್ಲಿಗೆ ಹೋದನು? ಹುಡುಕಿ ಬೇಗನೆ ಕರೆತರಬೇಕೆಂದು" ಕೆಂಪುಮುಖದವನಾದ ಆ ದೊರೆಯು ಪ್ರಬಲ ಸೇನಾಸಹಿತರಾದ ಸಾರಥರನ್ನು ಕಳುಹಿಸಿಕೊಟ್ಟನು. ೩೯. ಅವರೆಲ್ಲರೂ ಹೊರಟು ನಾಲ್ಕು ಕಡೆಗಳಲ್ಲೂ ಹುಡುಕುತ್ತಿದ್ದಾಗ ಆ ಶಿವಾಜಿಯು ಗಯೆಯಿಂದ ಹೊರಟು ಪನ್ನಾಳಿಯನ್ನು ಸೇರಿದ ವಿಚಾರವನ್ನು ಕೇಳಿದ ಬಾದಷಹನು ಬಹಳ ಕೋಪಗೊಂಡನು. ೪೦. ಕಡುಗಲಿಯಾದ ಷಾಜಿಯ ಮಗ ಶಿವಾಜಿಯನ್ನು ಹಿಡಿದು ಅವನನ್ನು ಬಲವಾದ ಕಾವಲಿನಲ್ಲಿ ತನ್ನ ಕಡೆಗೆ ಕಳುಹಿಸಿಕೊಡಬೇಕೆಂದು ಬಿಜಾಪುರದ ಒಡೆಯನಿಗೆ ಮ್ಲೇಚ್ಛರಾಜನಾದ ಔರಂಗಜೇಬನು ನಿರೂಪವನ್ನು ಕಳುಹಿಸಿದನು. ೪೧. ಅದಕ್ಕೆ ವಿರುದ್ಧವಾದ ಉತ್ತರವನ್ನು ಪರ್ಯಾಯವಾಗಿ ಬರೆದ ಬಿಜಾಪುರದ ಬಾದಷಹನ ಅಭಿಪ್ರಾಯವನ್ನು ತಿಳಿದ ಔರಂಗಜೇಬನು ಕೂಡಲೇ

ವ॥ ವಿಜಾಪುರದ ಪಾತುಶಾಹ ವಿಭ್ರಾಮುಅಲ್ಲಿಯೇದುಲಶಾಹನ ಕುಮಾರನಾದ ಸುಲುತಾನಮಹಮುದ್ದಶಾಹಂಗೆ ಗೋಲುಕೊಂಡೆಯುದ ಕುತುಬಶಾಹನ ಪುತ್ರಿಯಾದ ಬಡೆಸಾಹೇಬತಿಯಂ ತಂದುದರಿಂ ವಿಜಾಪುರ ಭಾಗಾನಗರಗಳ ಪಾತುಶಾಹರ್ಬೀಗ ಮನೆತನದವರಾಗಿ ವರ್ತಿಸುತಿರ್ಪರಿವರ್ಗಳನುಸಂಧಾನಮುಖದಿಂದಾ ಶಿವಾಜಿ ಬಲಿಷ್ಠನಾಗಿ ತನ್ನಂ ಲಕ್ಷ್ಯೀಕರಿಸದೆ ನಡೆಯುತಿರ್ಪನೀವುಭಯಸಂಸ್ಥಾನಂಗಳಂ ಮುರಿದಲ್ಲದೆ ಈ ಶಿವಾಜಿ ತನಗೆ ಸ್ವಾಧೀನಮಾಗನೆಂದಾಲೋಚಿಸಿ ತೆಂಕಮುಖಕ್ಕೈದಲಾಗದೆಂದುಸಿರ್ದ ಮಾವಶಾಸ್ತಖಾನನುಕ್ತಿಯಂ ಬಗೆಗೊಳ್ಳದವರಂಗಜೇಬ ಪಾತುಶಾಹಂ ಡಿಳ್ಳಿಯಿಂ ತೆರಳ್ದವರಂಗಾಬಾದಿನೊಳ್ ನಿಂದು ಹೇರಳ ಚತುರಂಗಸೈನ್ಯಮಂ ನೆರಹಿ ಬಳಿಕ್ಕಮಲ್ಲಿಂ ತೆರಳ್ದು ವಿಜಾಪುರದ ಕೋಂಟೆಗೆ ಮುತ್ತಿಗೆಯಿಕ್ಕಿಸಿ ಪಥ ಪೈಕ ಕಂಡಿ ಕಣಿವೆಗಳಂ ಕಟ್ಟಿಸಿ ನಡೆಗೋಂಟೆ ತಳಿಸುರಂಗಗಳಂ ನಡೆಸುತ್ತಿಂತನೇಕ ಪ್ರಯತ್ನಗಳಿಂ ಬಹುಕಾಲಂ ಪೋರ್ದತ್ಯಂತಸಾಹಸಂಗೈದೊಡಂ ಭಾಗಾನಗರದ ಸಂಸ್ಥಾನದ ಖಂಡಾಧಿಕಾರಮಂ ವಹಿಸಿ ನಡೆಸುತಿರ್ದಕ್ಕಣ್ಣ ಮಾದಣ್ಣರೆಂಬ ಪ್ರಸಿದ್ಧನಿಯೋಗಿಗಳ್ ನಡೆಸುತಿರ್ದ ಸಹಾಯಮೂಲದಿಂದೇನಾದೊಡಮಾ ಪರಿಸ್ತರಣಂ ಕ್ಷಿಪ್ರಸಾಧ್ಯಮಾಗದಿರ್ಪುದಂ ಕಂಡು ಚಲದಿಂ ಕಸ್ತುಗೆಯ್ದು ನಿಂದೀರಯ್ದು ವರ್ಷಂಬರಂ ನೆಲದಂಡಿಳಿದು ಜೇರುಮುತ್ತಿಗೆಯನಿಕ್ಕಿ ಬಹುವಿಧ ಪ್ರಯತ್ನಂಬಡುತ್ತಿರಲಿತ್ತಂ ಭಾಗಾನಗರದೊಳ್ ಸರ್ವಾಧಿಕಾರಮಂ ನಡೆಸುತಿರ್ದಕ್ಕಣ್ಣ ಮಾದಣ್ಣರೆಂಬ ನಿಯೋಗಿಗಳ್ ಕುಹಕಿಗಳ್ ಭಿನ್ನತಂತ್ರಮಂ ರಚಿಸಿ ನಡೆಸಿದ ಲೇಖನಮೂಲದಿಂ ಸಿದ್ದಿಜಾತಿಯವರಿಂ ಘಾತಮುಖದಿಂದಳಿದರೆಂಬ ವರ್ತಮಾನವನವರಂಗಜೇಬಂ ಕೇಳ್ದಿನ್ನು ವಿಜಾಪುರ ಭಾಗಾನಗರಗಳೆಂಬುಭಯಸಂಸ್ಥಾನಂಗಳುಮೆನಗೆ ಸಾಧ್ಯಮಾದುವೆಂದು ಪ್ರಮುದಿತಮಾನಸನಾಗಿ ಬಳಿಕಿತ್ತಂ ಕೆಲವುದಿವಸಂಗಳ್ ಪೋಗಲೊಡನೆ

ಸೈನ್ಯವನ್ನು ಸೇರಿಸಿ ಮಂತ್ರಿಗಳನ್ನು ಬರಮಾಡಿಕೊಂಡು ಸಿಟ್ಟಿನಿಂದ ತನ್ನಷ್ಟಕ್ಕೇ ಹೀಗೆಂದುಕೊಂಡನು: ವ॥ "ಬಿಜಾಪುರದ ಬಾದಷಹ ವಿಭ್ರಾಮ ಅಲ್ಲಿ ಯೇದುಲ್‌ಷಹನ ಕುಮಾರ ಸುಲ್ತಾನ ಮಹಮೂದ್‌ಷಹನಿಗೆ ಗೋಲ್ಕೊಂಡೆಯ ಕುತುಬ್‌ಷಹನ ಪುತ್ರಿ ಬಡೇಸಾಹೇಬತಿಯನ್ನು ತಂದುಕೊಂಡುದರಿಂದ ಬಿಜಾಪುರ ಹಾಗೂ ಭಾಗಾನಗರಗಳ ಬಾದಷಹರಿಗೆ ಬೀಗ ಮನೆತನದವರಾಗಿದ್ದಾರೆ. ಇವರುಗಳ ಪರಸ್ಪರ ಅನುಕೂಲಕರವಾದ ಸಂಧಾನಗಳಿಂದ ಶಿವಾಜಿಯು ಬಲವಂತನಾಗಿ ತನ್ನನ್ನು ಲಕ್ಷ್ಯಮಾಡದೆ ಮನಸ್ಸಿಗೆ ಬಂದಂತೆ ನಡೆಯುತ್ತಿದ್ದಾನೆ. ಈ ಎರಡು ಸಂಸ್ಥಾನಗಳನ್ನು ಮುರಿಯದಿದ್ದರೆ ಶಿವಾಜಿಯು ತನಗೆ ಸ್ವಾಧೀನವಾಗುವುದಿಲ್ಲ." ಹೀಗೆಂದು ಆಲೋಚನೆ ಮಾಡಿಕೊಂಡು, ದಕ್ಷಿಣದಿಕ್ಕಿಗೆ ಹೋಗಲು ಸಾಧ್ಯವಿಲ್ಲವೆಂದು ಹೇಳಿದ ಮಾವನಾದ ಶಾಸ್ತಖಾನನ ಮಾತನ್ನು ಮನಸ್ಸಿಗೆ ತೆಗೆದುಕೊಳ್ಳದೆ ಔರಂಗಜೇಬಬಾಷಹನು ಡಿಲ್ಲಿಯಿಂದ ಹೊರಟು ಹೇರಳವಾಗಿ ಚತುರಂಗ ಸೈನ್ಯದೊಡನೆ ಕೂಡಿಕೊಂಡು ಔರಂಗಾಬಾದಿನಲ್ಲಿ ನಿಂತನು. ಬಳಿಕ ಅಲ್ಲಿಂದ ಹೊರಟು ಬಿಜಾಪುರದ ಕೋಟೆಗೆ ಮುತ್ತಿಗೆ ಹಾಕಿಸಿ, ದಾರಿ, ಕಾಲುದಾರಿ, ಕಂಡಿ, ಕಣಿವೆಗಳನ್ನು ಬಂದುಮಾಡಿಸಿ, ಕೋಟೆಯ ನಡುಭಾಗದಲ್ಲಿ ತಳಿ ಹಾಗೂ ಸುರಂಗಗಳನ್ನು ನಡೆಸುತ್ತಾ ಅನೇಕ ಪ್ರಯತ್ನಗಳಿಂದ ಬಹುಕಾಲ ಹೋರಾಡಿ ಅತ್ಯಂತ ಸಾಹಸವನ್ನು ಕೈಕೊಂಡನು. ಭಾಗಾನಗರದ ಸಂಸ್ಥಾನದ ಸಂಪೂರ್ಣ ಅಧಿಕಾರವನ್ನು ವಹಿಸಿಕೊಂಡು ಆಳುತ್ತಿದ್ದ ಅಕ್ಕಣ್ಣ ಹಾಗೂ ಮಾದಣ್ಣರೆಂಬ ಪ್ರಸಿದ್ಧ ನಿಯೋಗಿಗಳು ನಡೆಸುತ್ತಿದ್ದ ಸಹಾಯದ ಮೂಲಕದಿಂದ, ಏನಾದರೂ ಆ

**ಶಾಲಿವಾಹನಶಕ ವರ್ಷ ....... ನೆಯ ಕ್ಷಯಸಂವತ್ಸರದೊಳಾ ವಿಜಾಪುರದ ಕೋಂಟೆಯಂ ತೆಗೆದುಕೊಂಡು ಜಕೀರಿರಸ್ತುಮುಸ್ತೈದೆಗಳಿಲ್ಲದಿರ್ದೊಡಂ ಬಹುಕಾಲಂ ಕೋಂಟೆಯಂ ಕಲಿಯೇರಿಸಿ ಕಾದಿಸಿದನೆಂದು ಮೆಚ್ಚಿ ಸುಲಿತಾನಶಿಖೀಂದ್ರನಂ ಪಿರಿದು ಮನ್ನಿಸಿ ಬಳಿಕ್ಕಲ್ಲಿಂ ತೆರಳ್ದು ಭಾಗಾನಗರದ ಕೋಂಟೆಯಂ ವೇಷ್ಟೈಸಿ ಷಣ್ಮಾಸಂಬರಂ ನೆಲದಂಡಿಳಿದು ಜೇರುಮುತ್ತಿಗೆಯನಿಕ್ಕಿ ಬಳಿಕ್ಕಾ ಕೋಂಟೆಯಂ ತೆಗೆದುಕೊಂಡು ಜಕೀರಿರಸ್ತು ಮುಸ್ತೈದೆಗಳ್ ಸಂಪೂರ್ಣಮಾಗಿರ್ದುಂ ಕೋಂಟೆಯನಿತ್ತನೆಂದಾ ಭಾಗಾನಗರದ ತಾನಾಶಾಹನಂ ತಿರಸ್ಕರಿಸಿ ತೇಜೋಭಂಗಮಂ ಮಾಡಿ ಚಲಪದದಿಂದಿಂತು ವಿಜಾಪುರ ಭಾಗಾನಗರಂಗಳೆಂಬುಭಯ ಸಂಸ್ಥಾನಂಗಳಂ ಸ್ವಾಧೀನಂಗೈದನಂತರಮಮವರಂಗಜೇಬಪಾತುಶಾಹಂ ಮುಂದಣ ರಾಜಕಾರ್ಯವನಾಳೋಚಿಸಿ ಶಿವಾಜಿಯಂ ಕೈವಶಂಗೆಯಲ್ವೇಳ್ಕೆಂದಾಟೋಪದಿಂದಲ್ಲಿಂ ತೆರಳ್ದೈತಂದು ಕೃಷ್ಣವೇಣೀ ನದೀತೀರದೊಳ್ ವಿರಾಜಿಸುತ್ತಿರ್ಪ ಗಲಗಲೆಯೆಂಬ ಸ್ಥಾನದೊಳ್ ನಿಂದಿರಲಲ್ಲಿ ಮರುಕಿಯುಪದ್ರವದಿಂ ಬಹುಸೈನ್ಯಂ ಲಯಮಾಗಲಾ ಸ್ಥಾನದೊಳ್ ನಿಂದು ನಿತ್ತರಿಸಲಮ್ಮದೆ ಅಲ್ಲಿಂ ತೆರಳ್ದು ಭೀಮರಥೀನದೀತೀರದೊಳ್ ಮೆರೆವ ಮಾತುಳಂಗಕ್ಷೇತ್ರ (ಪ್ರತಿನಾಮ ಬ್ರಹ್ಮಪುರಿ) ಯೆಂಬ ಸ್ಥಳದೊಳ್ ನಿಂದಿರುತ್ತುಮಿರಲಾ ಪ್ರಸ್ತಾವದೊಳ್**

ಕೋಟೆಯು ಅಸಾಧ್ಯವಾಗಿರುವುದನ್ನು ಕಂಡು ರೋಸಿದನು. ಹಟದಿಂದ ಹಾಕಿದ ಮುತ್ತಿಗೆಯನ್ನು ತೆಗೆಸದೆ ಹತ್ತು ವರ್ಷಗಳವರೆಗೂ ಹಾಕಿದ ಠಾಣ್ಯವನ್ನು ತೆಗೆಸದೆ ಶಿಬಿರ ಹೂಡಿ ಬಹುವಿಧವಾಗಿ ಪ್ರಯತ್ನ ಪಡುತ್ತಿದ್ದನು. ಹೀಗಿರಲು ಇತ್ತ ಕಡೆ ಭಾಗಾನಗರದಲ್ಲಿ ಸರ್ವಾಧಿಕಾರ ನಡೆಸುತ್ತಿದ್ದ ಅಕ್ಕಣ್ಣ ಮಾದಣ್ಣರೆಂಬ ನಿಯೋಗಿಗಳು, ದುಷ್ಟರ ತಂಡವೊಂದು ಉಂಟುಮಾಡಿದ ಲೇಖನೇತ್ಯಾದಿ ಕುತಂತ್ರಗಳಿಗೆ ಸಿಕ್ಕಿ, ಸಿದ್ದಿಜಾತಿಯವರಿಂದ ಒಳಸಂಚಿನಲ್ಲಿ ಸತ್ತುಹೋದರೆಂಬ ವರ್ತಮಾನವನ್ನು ಔರಂಗಜೇಬನ್ನು ಕೇಳಿದನು. ಇದನ್ನು ತಿಳಿದು "ಇನ್ನು ಮುಂದೆ ಬಿಜಾಪುರ ಹಾಗೂ ಭಾಗಾನಗರಗಳೆಂಬ ಎರಡು ಸಂಸ್ಥಾನಗಳೂ ನನಗೆ ವಶವಾದವು!" ಎಂಬುದಾಗಿ ಹರ್ಷಿತನಾದನು. ಆಮೇಲೆ ಇತ್ತ ಕಡೆಯಲ್ಲಿ ಕೆಲವು ದಿನಗಳು ಕಳೆಯಲು ಶಾಲಿವಾಹನ ಶಕ ವರ್ಷ... ನೆಯ ಕ್ಷಯಸಂವತ್ಸರದಲ್ಲಿ ಬಿಜಾಪುರದ ಕೋಟೆಯನ್ನು ತೆಗದುಕೊಂಡು ಜಕೀರಿರಸ್ತು ಮುಸ್ತೈದೆಗಳಿಲ್ಲದಿದ್ದರೂ ಬಹಳ ಕಾಲ ಪರಾಕ್ರಮದಿಂದ ಹೋರಾಡಿದನೆಂದು ಸುಲ್ತಾನ ಶಿಖೀಂದ್ರನನ್ನು ಹೆಚ್ಚಾಗಿ ಮನ್ನಿಸಿ ಗೌರವಿಸಿದನು. ಬಳಿಕ ಅಲ್ಲಿಂದ ಹೊರಟು ಭಾಗಾನಗರದ ಕೋಟೆಯನ್ನು ಆಕ್ರಮಿಸಿ ಆರು ತಿಂಗಳವರೆಗೂ ಶಿಬಿರ ಹೂಡಿ ಮುತ್ತಿಗೆ ಹಾಕಿ ಆ ಕೋಟೆಯನ್ನು ತೆಗೆದುಕೊಂಡನು. ಜಕೀರಿರಸ್ತು ಮುಸ್ತೈದೆಗಳಿದ್ದರೂ ಕೊಡಲಿಲ್ಲವೆಂದು ಭಾಗಾನಗರದ ತಾನಾಶಾಹನನ್ನು ತಿರಸ್ಕರಿಸಿ, ತೇಜೋಭಂಗವನ್ನು ಮಾಡಿ ಛಲದಿಂದ ಈ ಉಭಯ ಸಂಸ್ಥಾನಗಳಾದ ಬಿಜಾಪುರ ಹಾಗೂ ಭಾಗಾನಗರಗಳನ್ನು ವಶಪಡಿಸಿಕೊಂಡು ಔರಂಗಜೇಬ ಬಾದಷಹನು ಮುಂದಿನ ರಾಜಕಾರ್ಯವನ್ನು ಆಲೋಚಿಸಿದನು. ಶಿವಾಜಿಯನ್ನು ಕೈವಶಮಾಡಿಕೊಳ್ಳ ಬೇಕೆಂದು ಅಟಾಟೋಪದಿಂದ ಅಲ್ಲಿಂದ ಹೊರಟು ಕೃಷ್ಣವೇಣೀ ನದೀತೀರದಲ್ಲಿ ಶೋಭಿಸುತ್ತಿದ್ದ ಗಲಗಲೆಯೆಂಬ ಪ್ರದೇಶದಲ್ಲಿ ನಿಂತನು. ಅಲ್ಲಿ ಮಾರಿಯ ಉಪದ್ರವಗಳಿಂದ ಬಹಳ ಸೈನ್ಯವು ನಾಶವಾಗಲು, ಆ ಠಾಣದಲ್ಲಿ ನಿಲ್ಲಲಾರದೆ ಅಲ್ಲಿಂದ ಹೊರಟು ಭೀಮರಥೀ

ಕಂ|| ಅಲೆದು ನಿಜಸೈನ್ಯಮಂ ತಾಂ
ಮುಳುಗಿಸುತ್ತೈತಪ್ಪ ಭೀಮರಥಿಯುರವಣೆಯಂ
ನಿಲಿಸಿ ಬಾಧಿಸುವ ಮರುಗಿಯ
ಕಲೆಯಂ ಕರಮಿೞ್ದು ಮೈಮೆಯಂ ನೆರೆಮೆರೆದಂ ೪೨

ಕಂ|| ಶಾಜಿಯ ಸುತನೆಂದೆನಿಪ ಶಿ
ವಾಜಿಯ ವರಪುತ್ರನೆನಿಸಿ ರಾರಾಜಿಸುತಿಹ ಸಂ
ಬಾಜಿಯುಮಮಂ ಶಿಕ್ಷಿಸಿ ನಿ
ರ್ವ್ಯಾಜದೆ ತತ್ತನುಜ ಶಾಹುಮಂ ರಕ್ಷಿಸಿದಂ ೪೩

ವ|| ಅದೆಂತೆಂದೊಡಿಂತವರಂಗಜೇಬಪಾತುಶಾಹಂ ಬ್ರಹ್ಮಪುರಿಯೊಳ್ ವರ್ತಿಸುತಿರ್ದು ಶಿವಾಜಿಯ ಮೇಲಣ ರಾಜಕಾರ್ಯಮಂ ಮನದೆಗೊಂಡು ಪನ್ನಾಳಿಮುಖಕ್ಕೈದವೇೞ್ಕೆಂಬ ಮಂತ್ರಾಳೋಚನೆಯಂ ನಿಶ್ಚಯಂಗೈದು ..... ತ್ತಿರಲನಿತರೊಳಿತ್ತಂ ಪನ್ನಾಳಿಯೊಳ್ ಶಿವಾಜಿ ಶಿವಸಾಯುಜ್ಯಮನ್ನೈದಲೊಡನೆ ಮೂರ್ಧಾಭಿಷಿಕ್ತನಾಗಿ ಸುಖಸಂಕಥಾವಿನೋದಗೋಷ್ಠಿಗಳಿಂ ರಾಜ್ಯಂಗೆಯ್ಯುತ್ತಿರ್ಪ ತಚ್ಛಿವಾಜಿಯ ಪಿರಿಯ ಮಗನಾದ ಸಂಬಾಜಿ ಪನ್ನಾಳಿಯಂ ತೆಗೆದು ಕೊಳಲವರಂಗಜೇಬಪಾತುಶಾಹನೈದುತಿರ್ಪನೆಂಬ ವರ್ತಮಾನಮಂ ಕೇಳ್ದು ತೆರಳ್ದು

ಕಂ|| ಸಂಬಾಜಿ ತನ್ನ ಪಿತನಿಂ
ದಂ ಬಲ್ಲಿದನೆನಿಸಿ ಪಾತುಶಾಹನ ನಾಡೊಳ್
ತುಂಬಿದ ಧನಧಾನ್ಯಾಭರ
ಣಾಂಬರಪಶ್ವಾದಿ ಸರ್ವಮಂ ವಶಗೈದಂ ೪೪

ನದೀದಡದಲ್ಲಿ ಶೋಭಿಸುವ ಮಾತುಳಂಗ ಕ್ಷೇತ್ರ (ಪ್ರತಿನಾಮ ಬ್ರಹ್ಮಪುರಿ) ಎಂಬ ಸ್ಥಳದಲ್ಲಿ ನೆಲೆಯೂರಿದನು. ಆ ಸಂದರ್ಭದಲ್ಲಿ-೪೨. ಪ್ರವಾಹದ ಮೂಲಕ ತನ್ನ ಸೈನ್ಯವನ್ನು ಮುಳುಗಿಸುತ್ತಿರುವ ಭೀಮರಥೀ ನದಿಯ ಮುನ್ನುಗ್ಗುವಿಕೆಯನ್ನು ತಡೆಗಟ್ಟಿ, ಕಾಡುವ ಮರುಗಿಯ ದೇವತಾ ಕಳೆಯನ್ನು ಹೋಗಲಾಡಿಸಿ ಮಹಿಮೆಯನ್ನು ಮೆರೆದನು. ೪೩. ಷಾಜಿಯ ಮಗ ಶಿವಾಜಿಯ ಶ್ರೇಷ್ಠಪುತ್ರನಾದ ಸಂಬಾಜಿಯನ್ನೂ ಶಿಕ್ಷಿಸಿ, ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ (ನಿರ್ವ್ಯಾಜವಾಗಿ) ಅವನ ಮಗನಾದ ಸಾಹುವನ್ನು ಕಾಪಾಡಿದನು. ವ|| ಅದು ಯಾವ ರೀತಿಯೆಂದರೆ ಔರಂಗಜೇಬ ಬಾದಷಹನು ಬ್ರಹ್ಮಪುರಿಯಲ್ಲಿ ನೆಲೆಸುತ್ತಿದ್ದು, ಶಿವಾಜಿಯ ಮೇಲಿನ ರಾಜಕಾರ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು, ಪನ್ನಾಳಿಗೆ ಅಭಿಮುಖನಾಗಿ ಹೋಗಿ ಮಂತ್ರಾಲೋಚನೆಯನ್ನು ಕೈಗೊಳ್ಳಲು ನಿಶ್ಚಯಿಸಿದನು.... ಅಷ್ಟರಲ್ಲಿ ಪನ್ನಾಳಿಯಲ್ಲಿ ಶಿವಾಜಿಯು ಶಿವಸಾಯುಜ್ಯವನ್ನು ಹೊಂದಿದನು, ಶಿವಾಜಿಯ ಹಿರಿಯ ಮಗನಾದ ಸಂಬಾಜಿಯು ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪಾಲಿಸುತ್ತಿದ್ದು ಪನ್ನಾಳಿಯನ್ನು ತೆಗೆದುಕೊಳ್ಳಲು, ಔರಂಗಜೇಬ ಬಾದಷಹನು ಬರುತ್ತಾ ಇದ್ದಾನೆಂಬ ವರ್ತಮಾನವನ್ನು ಕೇಳಿ ತೆರಳಿ, ೪೪. ಸಂಬಾಜಿಯು ತನ್ನ ತಂದೆಗಿಂತಲೂ ಬಲಿಷ್ಠನಾಗಿ ಬಾದಷಾಹನ ರಾಜ್ಯದಲ್ಲಿ ತುಂಬಿದ ಧನ, ಧಾನ್ಯ, ಆಭರಣ, ಬಟ್ಟೆ, ಪಶುಗಳು ಮುಂತಾದ ಎಲ್ಲವನ್ನೂ ವಶಪಡಿಸಿಕೊಂಡನು.

ಕಂ|| ಅಂತಲ್ಲದಖಿಳಮುಖಗಳೊ
ಳಂತವನುಪಟಳವನೆಸಗೆ ತಾಮ್ರಮುಖಾಧೀ
ಶಂ ತವೆ ಕೆರಳ್ದವನಂ ಪಿಡಿ
ದಂತಿಕಕೆಯ್ದಿಸುವುಪಾಯಮೆಂತೆನುತಿರ್ದಂ ೪೫

ವ|| ಅಂತೆಂದಾಳೋಚಿಸಿ ಬಲಶಾಲಿಯಾಗಿ ವರ್ತಿಸುತಿರ್ಪ ಸಂಬಾಜಿ ಮಾಯತಂತ್ರವನೊಡ್ಡಿದಲ್ಲದೆ ತನಗೆ ವಶನಾಗನೆಂದು ನಿಶ್ಚಯಿಸಿ ಬಳಿಕ್ಕೊಂದುಪಾಯಾಂತರಮಂ ನೆನೆದು

ಮ|| ಬರಿಸುತ್ತಾಗಳೆ ಕಬ್ಜನಾಮಕದ ಕನ್ನೋಜಿದ್ವಿಜಾಧೀಶನಂ
ವರಸಂಬಾಜಿಯನೈದೆ ಸಾರ್ದವನ ನೀನೆಂತಾದೊಡಂ ವಶ್ಯಗೈ
ದಿರದೆನ್ನಲ್ಲಿಗೆ ಬರ್ಪೊಲಾಗಿಪುದೆನುತ್ತೇಕಾಂತದೊಳ್ಮಾಣದಿಂ
ತೊರೆದಿಷ್ಟಾರ್ಥವನಿತ್ತು ಬೀಳ್ಕೊಡಲವಂ ಪನ್ನಾಳಿಯಂ ಪೊರ್ದಿದಂ ೪೬

ವ|| ಇಂತು ಕಬ್ಜಿ ಪ್ರತಿನಾಮ ಕವಿಕಳಸನೆಂಬ ಕನ್ನೋಜಿಬ್ರಾಹ್ಮಣಂ ಪನ್ನಾಳಿಗೈದಿ ಸರ್ವವಿದ್ಯಾಸಂಪನ್ನನಪ್ಪ ಶ್ರೋತ್ರಿಯಬ್ರಾಹ್ಮಣನೈತಂದಿರ್ಪನೆಂದು ಸಮೀಪವರ್ತಿ ಸಾಮಾಜಿಕರಿಂ ಸಂಬಾಜಿಗರುಹಿಸಿ ಬಳಿಕ್ಕಾತನ ಭೇಟಿಯಂ ಕೊಂಡು ದಿನದಿನದೊಳವಂಗತಿಪ್ರೀತಿಪಾತ್ರನೆನಿಸಿ ವರ್ತಿಸುತ್ತಿರ್ದು ಸಮಸ್ತಶತ್ರುಗಳುಂ ನಿನಗೆ ಪಾದಾಕ್ರಾಂತರಾಗಿ ಬಿಡದೋಲಗಿಪಂತು ಜಪಪುರಶ್ಚರಣ ಹೋಮಂಗಳಂ ಮಾಳ್ಪೆನೆಂದೊಡವಡಿಸಿ ಬಳಿಕಂ ಶಲ್ಯಶಾಬರ ಮಂತ್ರ ತಂತ್ರ ಯಂತ್ರ ಪುರಶ್ಚರಣ ಜಪತಪ ತರ್ಪಣ ಹೋಮ ಮೂಲಿಕಾದಿ ನಾನಾಪ್ರಯೋಗಮುಖದಿಂದಾ ಸಂಬಾಜಿರಾಜನಂ

೪೫. ಅಷ್ಟು ಮಾತ್ರವಲ್ಲದೆ ಎಲ್ಲಾ ರೀತಿಯಿಂದಲೂ ಸಾಂಬಾಜಿಯು ಉಪಟಳ ಕೊಟ್ಟಿದ್ದರಿಂದ ಕೆಂಪುಮುಖದವನಾದ ಬಾದಷಾಹನು ಬಹು ಕೆರಳಿ ಆ ಸಂಬಾಜಿಯನ್ನು ಹಿಡಿದು ಹತ್ತಿರಕ್ಕೆ ತರುವ ಉಪಾಯ ಯಾವುದೆಂದು ಯೋಚಿಸುತ್ತಿದ್ದನು. ವ|| ಹೀಗೆಂದುಕೊಂಡು ಆಲೋಚಿಸಿ, ಬಲಶಾಲಿಯಾಗಿದ್ದ ಸಂಬಾಜಿಯು ಮಾಯಾತಂತ್ರವನ್ನು ರಚಿಸಿದಲ್ಲದೆ ತನಗೆ ವಶವಾಗುವುದಿಲ್ಲವೆಂದು ನಿಶ್ಚಯ ಮಾಡಿಕೊಂಡು ಒಂದು ಉಪಾಯವನ್ನು ಹೂಡಿದನು. ೪೬. ಕಬ್ಜಿ ಎಂಬ ಹೆಸರಿನ ಕನ್ನೋಜಿ ಬ್ರಾಹ್ಮಣ ಕವಿ ಕಳಸನನ್ನು ಕೂಡಲೇ ಬರಮಾಡಿ, ನೀನು ಆ ಸಂಬಾಜಿಯ ಬಳಿಗೆ ಹೋಗಿ, ಹೇಗಾದರೂ ಮಾಡಿ, ಅವನನ್ನು ವಶಪಡಿಸಿಕೊಂಡು ಬರಬೇಕೆಂದು ಗುಟ್ಟಿನಲ್ಲಿ ಹೇಳಿ, ಅವನಿಗೆ ಬೇಕಾದ ಇಷ್ಟಾರ್ಥವನ್ನು ಕೊಟ್ಟು ಕಳುಹಿಸಿದನು. ಆ ಕಬ್ಜಿಯು ಪನ್ನಾಳಿಯನ್ನು ಸೇರಿದನು. ವ|| ಈ ರೀತಿ 'ಕಬ್ಜಿ' ಹೆಸರಿನಿಂದ ಕೂಡಿದ ಕವಿಕಳಸನೆಂಬ ಕನ್ನೋಜಿ ಬ್ರಾಹ್ಮಣನು ಪನ್ನಾಳಿಗೆ ಹೋಗಿ, ಅಲ್ಲಿಯ ಸಾಮಾಜಿಕರಿಂದ ಸರ್ವವಿದ್ಯಾಸಂಪನ್ನನಾದ ಶ್ರೋತ್ರಿಯ ಬ್ರಾಹ್ಮಣನು ಬಂದಿದ್ದಾನೆಂದು ಸಂಬಾಜಿಗೆ ಅರುಹುವಂತೆ ಮಾಡಿದನು. ಬಳಿಕ ಆತನ ಭೇಟಿ ಮಾಡಿ, ದಿನದಿನಕ್ಕೂ ಆತನಿಗೆ ಪ್ರೀತಿಪಾತ್ರನೆನಿಸಿ ವರ್ತಿಸುತ್ತಿದ್ದನು. ಸಂಬಾಜಿಗೆ ಈ ಕವಿಯು ಸಮಸ್ತ ಶತ್ರುಗಳೂ ನಿನಗೆ ಪದಾಕ್ರಾಂತರಾಗಲು ಹಾಗೂ ಓಲೈಸಲು ಜಪ-ಪುರಶ್ಚರಣ ಹೋಮಗಳನ್ನು ಕೈಗೊಳ್ಳುವೆನೆಂದು ಒಡಂಬಡಿಸಿದನು. ಬಳಿಕ ಶಲ್ಯ, ಶಾಬರ, ಮಂತ್ರ, ತಂತ್ರ, ಯಂತ್ರ, ಪುರಶ್ಚರಣ, ಜಪ, ತಪ, ತರ್ಪಣ, ಹೋಮ

ವಶೀಕರಿಸಿ ಭ್ರಾಂತನಂ ಮಾಡಲವಂ ಬುದ್ಧಿಶಾಲಿಗಳಪ್ಪ ಸಾಮಾಜಿಕರ ಮಾತಂ ಕೇಳದೆ ಪ್ರತಿದಿನದೊಳ್ ಕ್ಷುದ್ರಜನರ್ಕಳ ಭೇದದಿಂದೋಲಾಡುತುಂ

ಕಂ॥ ಸ್ತ್ರೀಲೋಲನಾಗಿ ಕಬ್ಜಿಯ
ಜಾಲದೊಳಂ ಸಿಲ್ಕಿ ಜಾರನಿಚಯಕ್ಕೆಲ್ಲಂ
ಮೂಲಗುರುವೆನಿಸಿ ತಾಂ ಜಲ
ಕೇಳಿಯನೆಸಗುತ್ತುಮಿಂತು ವರ್ತಿಸುತಿರ್ದಂ ೪೭

ವ॥ ಇಂತು ಸಂಬಾಜಿ ಮದನಭ್ರಾಂತಿಯೊಳಿರೆ ಕಬ್ಜಿ ಗೂಢಚಾರರ ಮುಖದಿಂದಂ ತೌರುಷ್ಕನೃಪಗೀ ಹದನಂ ತಿಳುಹಿ ಬರವನ್ನೆದೆ ಪಾರುತ್ತಿರ್ದಂ

ಕಂ॥ ಅನಿತರೊಳಿತ್ತಂ ತಾಮ್ರಾ
ನನರಾಣ್ಮಂ ಬರಿಸಿ ಗೋಪ್ಯದೊಳ್ ಶೇಕುನಿಜಾ
ಮನನ್ನೆದೆ ಕಳುಪಿದಂ ಭೋಂ
ಕನೆ ನೀಂ ಸಂಬಾಜಿರಾಜನಂ ತಹುದೆನುತುಂ ೪೮

ಕಂ॥ ಇಂತೊರೆದು ಬೀಳ್ಕೊಡಲ್ ಸಮ
ನಂತರದೊಳ್ ಫೌಜುವೆರಸು ಶೇಕುನಿಜಾಮಂ
ನಿಂತಲ್ಲಿ ನಿಲ್ಲದುರುವಿ
ಕ್ರಾಂತಂ ಪನ್ನಾಳಿಯಂ ದಲಂದುರೆ ಸಾರ್ದಂ ೪೯

ವ॥ ಇಂತಾ ಶೇಕುನಿಜಾಮಂ (ಫೌಜು) ವೆರಸತಿಕ್ಷಿಪ್ರದೊಳ್ ಪನ್ನಾಳಿಯಂ ಸಾರ್ದು ತತ್ತದ್ದ್ವಾರ ಕಂಡಿ ಕಣವೆಗಳಂ ಕಾಯ್ದಿರ್ಪ ಭಟರ್ಗೆ ಹೇರಳ ಪರಿಧಾನಮನಿತ್ತು ಕಬ್ಜಿಯ

ಮೂಲಿಕಾದಿಗಳಿಂದಲೂ ಹಾಗೂ ಇತರ ನಾನಾ ವಿಧದಿಂದಲೂ, ಸಂಬಾಜಿ ರಾಜನನ್ನು ವಶೀಕರಿಸಿಕೊಂಡು ಭ್ರಾಂತನನ್ನಾಗಿ ಮಾಡಿದನು. ಅರಸನು ಬುದ್ಧಿಶಾಲಿಗಳಾದ ಸಾಮಾಜಿಕರ ಮಾತುಗಳನ್ನು ಕೇಳದೆ ಪ್ರತಿದಿನಗಳಲ್ಲೂ ಕ್ಷುದ್ರ ಹಾಗೂ ನೀಚಜನಗಳ ಭೇದ ತಂತ್ರವಾದ ವಿಷಯಲೋಲುಪನಾದನು. ೪೭. ಸಂಬಾಜಿಯು ಕಬ್ಜಿಯ ಜಾಲದಲ್ಲಿ ಸಿಲುಕಿ ಸ್ತ್ರೀಲೋಲುಪನಾಗಿ ಜಾರರ ಗುಂಪಿಗೆ ಮೂಲಗುರುವಾಗಿ ನೀರಾಟ ಆಡುತ್ತಾ ಇರುತ್ತಿದ್ದನು. ವ॥ ಈ ರೀತಿ ಸಂಬಾಜಿಯು ಕಾಮೋನ್ಮಾದದಲ್ಲಿರಲು ಕಬ್ಜಿಯು ಗೂಢಚಾರರ ಮುಖದಿಂದ ತುರುಷ್ಕ ರಾಜನಿಗೆ ಈ ಸಮಾಚಾರವನ್ನು ತಿಳಿಸಿ, ಅವನು ಯಾವಾಗ ಬರುವನೆಂಬುದನ್ನು ಕಾಯುತ್ತಿದ್ದನು. ೪೮. ಅಷ್ಟರಲ್ಲಿ ಈ ಕಡೆ ಕೆಂಪುಮುಖದವರ ಒಡೆಯನಾದ ಔರಂಗಜೇಬನು ಶೇಕು ನಿಜಾಮನನ್ನು ಗುಟ್ಟಿನಲ್ಲಿ ಬರಮಾಡಿ ನೀನು ಬೇಗನೆ ಸಂಬಾಜಿರಾಜನನ್ನು ಹಿಡಿದು ತರಬೇಕೆಂದು ಕಳುಹಿಸಿದನು. ೪೯. ಹೀಗೆ ಹೇಳಿ ಕಳುಹಿಸಿಕೊಟ್ಟ ಬಳಿಕ ಶೇಕು ನಿಜಾಮನು ಸೈನ್ಯಸಹಿತನಾಗಿ ನಿಂತಲ್ಲಿ ನಿಲ್ಲದೆ ಅತಿ ಶೀಘ್ರದಲ್ಲಿಯೇ ಪನ್ನಾಳಿಯನ್ನು ಸೇರಿದನು. ವ॥ ಈ ರೀತಿ ಶೇಕು ನಿಜಾಮನು ಫೌಜು ಸಹಿತ ಬೇಗನೆ ಪನ್ನಾಳಿಯನ್ನು ಸೇರಿದನು. ಅಲ್ಲಿರುವ ದ್ವಾರಪಾಲಕರಾದಿಯಾಗಿ ಕಣಿವೆ ಮುಂತಾದುವುಗಳನ್ನು ಕಾಯುತ್ತಿರುವ ಭಟರಿಗೆ ಹೇರಳವಾಗಿ ಉಡುಗೊರೆಗಳನ್ನು

ಸಂಕೇತದಿಂದೊಳಪೊಕ್ಕು ಮದನಭ್ರಾಂತಿಯಿಂ ಮೈಮರೆದೆಂದಿನಂತೆ ಸಂಗಮೇಶ್ವರನ ನದೀತೀರದೊಳ್ ಸ್ತ್ರೀಜನವೆರಸು ಜಲಕೇಳಿವಿನೋದದಿಂ ವಿಹರಿಸುತ್ತಿರ್ಪ ಸಂಬಾಜಿರಾಜನಂ ಪಿಡಿದು ಕವಿಕಳಸಂವೆರಸತ್ಯಂತಶೀಘ್ರದಿಂದೆ ತಂದವರಂಗಜೇಬ ಪಾತುಶಾಹಗೊಪ್ಪಿಸಲ್ ನಿಟ್ಟಿಸಿ ತನಗೆ ಸಲಾಮಂ ಮಾಡಲೆಂದು ಸಂಬಾಜಿ ರಾಜಂಗೆ ಪೇಳಿಸಲವನೀ ಮಾತನಂಗೀಕರಿಸದಿರಲ್ ಮುಸಲ್ಮಾನನಾದೊಡೆ ಬಿಟ್ಟಪೆನಲ್ಲದೊಡಾಜ್ಞೆಗೈಸಿದಪೆನೆಂದು ಪೇಳಿಸಲ್ ಕೇಳ್ದು ತನ್ನ ಪುತ್ರಿ ಬೇಗಮುವನಿತ್ತೊಡೆ ತಾಂ ಮುಸಲ್ಮಾನನಾದಪೆನೆನಲಾ ಮಾತಂ ಕೇಳ್ದತ್ಯಂತ ಕೋಪಾಟೋಪದಿಂದಾ ಸಂಬಾಜಿಯನಾಜ್ಞೆಗೈಸಿ ಕಬ್ಜಿಯ ಶಿರಚ್ಛೇದನಂಗೆಯ್ಯಲಾ ಪಾತುಶಾಹನ ಬೇಗಮುಗೆ ಸಂಬಾಜಿಯ ಮೇಲಣಪೇಕ್ಷೆಯಿರ್ದುದರಿಂ ತನಗಾತನೆ ಪತಿಯೆಂದು ಮತ್ತಾರುಮನಪೇಕ್ಷಿಸದೆ ವಿವಾಹಮಂ ತೊರೆದು ವರ್ತಿಸುತಿರ್ದು ಸಂಬಾಜಿಯ ಮಗ ಶಾಹುರಾಜನೆ ತನಗೆ ಮಗನೆಂದಭಿಮಾನಿಸಿ ಅವರಂಗಜೇಬಂಗರುಹಿ ಆ ಶಾಹುರಾಜನಂ ಪೋಷಣೆಗೈಸಿ ವಿವಾಹಮನೊಡರ್ಚಿಸಿ ದವಲತ್ತಂ ಕೊಟ್ಟು ಚೌಕಿಯನಿಕ್ಕಿಸಿ ಮನತನದ ಶಾಭಿಯಂ (?) ನಡೆಸುತ್ತಿರಲಿತ್ತಂ

ಕಂ॥ ನೆರೆ ತತ್ಸಂಬಾಜಿಯ ಸೋ
ದರನೆನಿಸುವ ರಾಮರಾಜನುರುಪಟ್ಟವನಾಂ
ತುರುಪನ್ನಾಳಿಯೊಳಾಳು
ತ್ತಿರುತಿರೆ ಶೌರ್ಯಾತಿಶಯದೊಳವನೀತಳಮಂ ೫೦

ಕೊಟ್ಟು ಕಬ್ಜಿಯು ಹೇಳಿದ ಸಂಕೇತದ ಮೇರೆಗೆ ಒಳಹೊಕ್ಕನು. ಎಂದಿನಂತೆ ಕಾಮೋನ್ಮಾದದಿಂದ ಮೈಮರೆತು ಸಂಗಮೇಶ್ವರ ನದೀತೀರದಲ್ಲಿ ಸ್ತ್ರೀಯರೊಡನೆ ಜಲಕ್ರೀಡೆಯಾಡುತ್ತಾ ವಿನೋದದಿಂದ ವಿಹರಿಸುತ್ತಿದ್ದ ಸಂಬಾಜಿರಾಜನನ್ನು ಹಿಡಿದನು. ಆಮೇಲೆ ಕವಿಕಳಸನೊಡನೆ ಬೇಗನೆ ಬಂದು ಔರಂಗಜೇಬನಿಗೆ ಒಪ್ಪಿಸಿದನು. ಬಾದಷಹನು ಆತನನ್ನು ನಿಟ್ಟಿಸಿ ನೋಡಿ, ತನಗೆ 'ಸಲಾಮು ಮಾಡು' ಎಂದು ಸಂಬಾಜಿಗೆ ಹೇಳಿಸಿದನು. ಆತನು ಅದನ್ನು ಅಂಗೀಕರಿಸಲಿಲ್ಲ. ಬಾದಷಹನು ತಿರುಗಿ ಆತನಿಗೆ 'ನೀನು ಮುಸಲ್ಮಾನನಾದರೆ ಬಿಡುವೆನು; ಇಲ್ಲದಿದ್ದರೆ ಶಿಕ್ಷಿಸುವೆನು' ಎಂದು ಹೇಳಿಸಿದನು. ಅದನ್ನು ಕೇಳಿ ಸಂಬಾಜಿಯು 'ನಿನ್ನ ಪುತ್ರಿ ಬೇಗಮುವನ್ನು ನನಗೆ ಕೊಟ್ಟರೆ ಮಾತ್ರ ನಾನು ಮುಸಲ್ಮಾನನಾಗುವೆನು!' ಎಂದನು. ಈ ಮಾತನ್ನು ಕೇಳಿ ಬಾದಷಹನು ಅತ್ಯಂತ ಕೋಪದಿಂದ ಸಂಬಾಜಿಯನ್ನು ಮರಣದಂಡನೆಗೆ ಈಡುಮಾಡಿ, ಕಬ್ಜಿಯ ತಲೆಯನ್ನು ಕತ್ತರಿಸಿದನು. ಬಾದಷಹನ (ಮಗಳಾದ) ಬೇಗಮುಗೆ ಸಂಬಾಜಿಯಲ್ಲಿ ಪ್ರೇಮವಿದ್ದುದರಿಂದ ತನಗೆ ಆತನೇ ಪತಿಯೆಂದು ಇನ್ನಾರನ್ನೂ ಅಪೇಕ್ಷಿಸದೆ ಮದುವೆಯನ್ನು ತೊರೆದಳು. ಸಂಬಾಜಿಯ ಮಗ ಶಾಹುರಾಜನೇ ತನಗೆ ಮಗನೆಂದು ಪ್ರೀತಿಸಿ, ಇದನ್ನು ಔರಂಗಜೇಬನಿಗೆ ತಿಳಿಸಿದಳು. ಶಾಹುರಾಜನನ್ನು ಪೋಷಣೆ ಮಾಡುತ್ತಾ ಅವನಿಗೆ ಮದುವೆ ಮಾಡಿಸಿ ದವಲತ್ತು ಹಾಗೂ ಒಂದು ಅಧಿಕಾರವನ್ನು ಕೊಟ್ಟು ಮನೆತನವನ್ನು ಸಾಗಿಸುತ್ತಿದ್ದಳು. ಹೀಗಿರಲು ಈ ಕಡೆಯಲ್ಲಿ ೫೦. ಆ ಸಾಂಬಾಜಿಯ ಸಹೋದರನಾದ ರಾಮರಾಜನು ಪಟ್ಟಾಭಿಷಿಕ್ತನಾಗಿ

ಯವನಪಗೀ ವೃತ್ತಾಂತಂ
ಕಿವಿದಾಗಲ್ ರಾಮರಾಜನಂ ಪಿಡಿತಹುದೆಂ
ದವನಂದಬ್ದುಲಖಾನಾ
ದಿ ವಜೀರವ್ರಾತಮಂ ತೆರಳ್ಚಿಸಿ ಕಳುಪಲ್ ೫೧

ಕತ್ತಲಿಸೆ ಭುವನಮಿಭಹಯ
ಪತ್ತಿಚಯಂವೆರಸು ಸರ್ವಸನ್ನಾಹದೆ ದಂ
ಡೆತ್ತಿಬಂದಾ ತುರುಷ್ಕರ
ಮೊತ್ತಂ ಮೋಹರಿಸೆ ಮುತ್ತೆ ಪನ್ನಾಳಿಯುಮಂ ೫೨

ಅನುಚಿತಮಿನ್ನಿಲ್ಲಿಹುದೆಂ
ದೆನುತುಂ ತದ್ರಾಮರಾಜನಲ್ಲಿಂ ತೆರಳ್ದೊ
ಯ್ಯನೆ ಸಾಗುವನಿತರೊಳ್ಬೋಂ
ಕನೊದವಿ ಬೆಂಬತ್ತಲೊಡನೆ ತೌರುಷ್ಕಚಯಂ ೫೩

ತೆರಳ್ದಲ್ಲಿಂ ಪೊನ್ನಾಳಿಗೆ
ಬರೆ ರಾಜೇರಾಮನವನ ಬೆಂಗೊಂಡವರ್ಗಳ್
ಬರೆ ಚನ್ನಮ್ಮಾಜಿಯವರ್
ನೆರೆ ದಾಂಟಿಸಲ್ಕೆದಿ ಚಂದಿಯಂ ನೆರೆಪೊಕ್ಕಂ ೫೪

ವ|| ಅದೆಂತೆಂದೊಡಾ ಶಿವಾಜಿಯ ಪುತ್ರನೆನಿಪ್ಪ ರಾಮರಾಜಂ ಪನ್ನಾಳಿಯಿಂ ಪಲಾಯನಂಬಡೆದೈದಿ ಪೊನ್ನಾಳಿಯಂ ಪೊಕ್ಕು ತಾನೈತಂದು ಪೊಕ್ಕ ವೃತ್ತಾಂತವೆಲ್ಲಮಂ

ಶೌರ್ಯಾತಿಶಯದಿಂದ ಭೂಮಿಯನ್ನು ಕಾಪಾಡುತ್ತಿದ್ದನು. ೫೧. ಈ ಸಮಾಚಾರವು ಯವನ ಪತಿಯ ಕಿವಿಗೆ ಬಿದ್ದಾಗ ರಾಮರಾಜನನ್ನು ಹಿಡಿದು ತರಬೇಕೆಂದು ಅಬ್ದುಲ್‌ಖಾನ್ ಮುಂತಾದ ಮಂತ್ರಿಸೇನಾಸಮೂಹವನ್ನು ಕಳುಹಿಸಿಕೊಟ್ಟನು. ೫೨. ಲೋಕಕ್ಕೆ ಕತ್ತಲು ಕವಿಯುವ ಹಾಗೆ ಆನೆ, ಕುದುರೆ, ಕಾಲಾಳುಗಳ ಸಮೂಹದೊಂದಿಗೆ ಸಕಲ ಸನ್ನಾಹಗಳಿಂದ ಕೂಡಿದ ತುರುಕರ ಸೈನ್ಯದ ಮೊತ್ತವು ದಂಡೆತ್ತಿ ಬಂದು ಪನ್ನಾಳಿಗೆ ಮುತ್ತಿಗೆ ಹಾಕಿತು. ೫೩. ಆ ರಾಮರಾಜನು ಇನ್ನು ತಾನು ಇಲ್ಲಿ ಇರುವುದು ಉಚಿತವಲ್ಲವೆಂದು ತಿಳಿದು ಮೆಲ್ಲನೆ ಸಾಗುವಷ್ಟರಲ್ಲಿ ತುರುಕ ಸಮೂಹ ಕೂಡಲೇ ಬೆನ್ನಟ್ಟಿತು. ೫೪. ಆ ರಾಜೇರಾಮನು ಪನ್ನಾಳಿಯಿಂದ ಹೊರಟು ಹೊನ್ನಾಳಿಗೆ ಬರಲು ತುರುಕರು ಬೆನ್ನಟ್ಟಿ ಬಂದರು. ಆಗ ಅವನು ತನ್ನನ್ನು ಚಂದಿಗೆ ದಾಟಿಸಿಕೊಡಬೇಕೆಂದು ಚೆನ್ನಮ್ಮಾಜಿಯವರನ್ನು ಮೊರೆಹೊಕ್ಕನು. ವ|| ಅದು ಯಾವ ರೀತಿಯೆಂದರೆ, ಶಿವಾಜಿಯ ಪುತ್ರನೆನಿಸಿದ ರಾಮರಾಜನು ಪನ್ನಾಳಿಯಿಂದ ಪಲಾಯನ ಮಾಡಿ ಹೊನ್ನಾಳಿಯನ್ನು ಪ್ರವೇಶಿಸಿದನು. ತಾನು ಬಂದಿರುವ ವರ್ತಮಾನವನ್ನು ಚೆನ್ನಾಮ್ಮಾಜಿಯುವರಿಗೆ ನಿವೇದಿಸಿಕೊಂಡು ಮೊಗಲರಿಗೆ ಗೋಚರವಾಗದಂತೆ ನಿಮ್ಮ ಗಡಿರಾಜ್ಯದಿಂದ ಚಂದಿಗೆ ತನ್ನನ್ನು ದಾಟಿಸಿಕೊಡಬೇಕೆಂದು

ಚನ್ನಮ್ಮಾಜಿಯವರ್ಗರುಹಿಸಿ ಮೊಗಲರ್ಗೆ ಗೋಚರಮಾಗದಂತು ನಿಮ್ಮ ಗಡಿರಾಜ್ಯದಿಂ ತನ್ನಂ ಚಂದಿಗೆ ದಾಂಟಿಸಿಕೊಡಲ್ವೇಳ್ಕೆಂದು ಬಹುಪ್ರಕಾರದಿಂ ಪೇಳಿಸಲ್ ಕರುಣಾನಿಧಿಯಪ್ಪ ಚನ್ನಮ್ಮಾಜಿಯವರ್ ಕೇಳ್ದು ಸಬನೀಸು ಕೋಳಿವಾಡದ ಬೊಮ್ಮಯ್ಯ ಬೊಕ್ಕಸದ ಸಿದ್ಧಬಸವಯ್ಯ ಮುಂತಾದ ಮಂತ್ರಿ ಮನ್ನೆಯ ಸಾಮಾಜಿಕರೊಳ್ ಮಂತ್ರಾಲೋಚನೆಯಂ ರಚಿಸಿ ಡಿಳ್ಳಿಯವರಂಗಜೇಬ ಪಾತುಶಾಹನೇ ಮುನಿದೈತಂದೆಮ್ಮ ಸಂಸ್ಥಾನಮಂ ತೆಗೆದುಕೊಂಡೊಡಂ ಕೊಳಲೇನಾದೊಡಂ ಮರೆ ಪೊಕ್ಕವನಂ ಕೊಡುವುದು ರಾಜಧರ್ಮಮಲ್ತೆಂದಿಂತು ಮತಮಂ ನಿಶ್ಚಯಂಗೆಯ್ದು ಬಳಿಕ್ಕಾ ರಾಮರಾಜನಂ ಪ್ರಚ್ಛನ್ನವೇಷನಂ ಮಾಡಿ ಸೀಮೊಗ್ಗೆಗಾಗಿ ಗಾಜನೂರ ಪೊಳೆಯಂ ದಾಂಟಿಸಿ ಪಳುವಮಂ ಮರೆಗೊಂಡೊಳದಾರಿವಿಡಿದು ಬೊರೆನೆಡೆಹಳ್ಳಿ ಆಡುವಳ್ಳಿ ಕಳಸ ಖಾಂಡ್ಯ ವಸುಧಾರೆಗಾಗಿ ಸಾಗಿಸಿ ಕಳುಹಿ ಚಂದಿಯಗಡಮಂ ಪೊಗಿಸಲವರಂಗಜೇಬ ಪಾತುಶಾಹನಿಂದಾ ರಾಜೇರಾಮನಂ ಬೆಂಬತ್ತಿದ ತುರುಷ್ಕಸೈನ್ಯಮತ್ಯಂತಾಟೋಪದಿಂದಾ ರಾಜೇರಾಮನೈದಿದ ಬಳಿವಿಡಿದು ದಾಳಿವರಿಯುತ್ತೈತಂದು

ಕಂ॥ ಚಳಕದೊಳಂ ಪೊನ್ನಾಳಿಯೊ
ಳಿಳಿದಾ ರಣಮಸ್ತಖಾನ ಮುಖ್ಯವಜೀರರ್
ಮುಳಿಸಿಂದೆ ಗನೀಮಂ ನಿ
ಮ್ಮೊಳಪೊಕ್ಕೊಡನಿರ್ಪನವನನೀವುದೆನಿತ್ತುಂ ೫೫

ಕೇಳಿಸೆ ಚನ್ನಮ್ಮಾಜಿಯು
ಮಾಲೋಚಿಸಿ ತಮ್ಮ ರಾಷ್ಟ್ರಕಾಗಿಯವಂ ಬಿ
ಚ್ಚಾಳಾಗಿ ಪೋದುದಹುದಾ
ವಾಳುತ್ತಿರ್ಪಿಳೆಯೊಳಿಲ್ಲವೆಂದರುಹಿಸಿದಳ್ ೫೬

ಬಹು ಪ್ರಕಾರದಿಂದ ಪ್ರಾರ್ಥಿಸಿಕೊಂಡನು. ಇದನ್ನು ಕೇಳಿ ಕರುಣಾಮಯಳಾದ ಚೆನ್ನಮ್ಮಾಜಿಯು ಸಬುನೀಸ ಕೋಳಿವಾಡದ ಬೊಮ್ಮಯ್ಯ ಭೊಕ್ಕಸದ ಸಿದ್ಧಬಸವಯ್ಯ ಮುಂತಾದ ಮಂತ್ರಿಗಳು, ಸಾಮಂತರು ಹಾಗೂ ಸಾಮಾಜಿಕರನ್ನು ಸಭೆ ಸೇರಿಸಿ ಮಂತ್ರಾಲೋಚನೆಯನ್ನು ಕೈಗೊಂಡಳು. ಡೆಲ್ಲಿಯ ಔರಂಗಜೇಬ ಬಾದಷಹನೇ ಮುನಿದು ಬಂದು ತಮ್ಮ ಸಂಸ್ಥಾನವನ್ನು ತೆಗೆದುಕೊಳ್ಳಲು ಪ್ರಯತ್ನಿಸಿದರೂ ಮರೆಹೊಕ್ಕವನನ್ನು ಬಿಟ್ಟುಕೊಡುವುದು ರಾಜಧರ್ಮವಲ್ಲವೆಂಬುದಾಗಿ ನಿಶ್ಚಯ ಮಾಡಿಕೊಂಡಳು. ಅನಂತರ ರಾಮರಾಜನನ್ನು ಮಾರುವೇಷದಿಂದ ಶಿವಮೊಗ್ಗ, ಗಾಜನೂರು ಹೊಳೆಯನ್ನು ದಾಟಿಸಿ, ಕಾಡುಮಾರ್ಗವನ್ನು ಹಿಡಿದು ಬೊರೆನೆಡೆಹಳ್ಳಿ, ಆಡುವಳ್ಳಿ, ಕಳಸ, ಖಾಂಡ್ಯ ಮತ್ತು ವಸುಧಾರೆಯ ಮುಖಾಂತರ ಚಂದಿಯಗಡಕ್ಕೆ ಹೋಗುವಂತೆ ಮಾಡಿದಳು. ಔರಂಗಜೇಬ ಬಾದಷಹನಿಂದ ಕಳುಹಿಸಲ್ಪಟ್ಟ ಸೈನ್ಯವು ಆಟಾಟೋಪದಿಂದ ರಾಜೇರಾಮನನ್ನು ಬೆನ್ನಟ್ಟಿಕೊಂಡು ಹತ್ತಿರ ಬಂದು ದಾಳಿಮಾಡಲಾರಂಭಿಸಿತು. ೫೫. ಚಾತುರ್ಯದಿಂದ ಹೊನ್ನಾಳಿಯಲ್ಲಿ ಇಳಿದು ಆ ರಣಮಸ್ತಖಾನ ಮುಂತಾದ ವಜೀರರು ಸಿಟ್ಟಿನಿಂದ ನಮ್ಮ ದ್ರೋಹಿಯು ನಿಮ್ಮ ಮೊರೆಹೊಕ್ಕು ನಿಮ್ಮೊಡನೆ ಇರುವವನು, ಅವನನ್ನು ಕೊಡಬೇಕೆಂದು-೫೬. ಹೇಳಿ ಕಳುಹಿಸಲು ಚೆನ್ನಮ್ಮಾಜಿಯು ಆಲೋಚಿಸಿ, ಅವನು ನಮ್ಮ

ವ|| ಇಂತೆಂದು ತಿಳುಹಿ ತಮ್ಮ ನಾಡಿನ ಮೇಲಾ ರಾಮರಾಜಂ ಪೋಪೆಡೆಯೊಳಾತನ ವಸ್ತ್ರಾಭರಣಂಗಳ್ ಕೆಲವೆಮ್ಮ ವಶಮಾದುದುಂಟೆಂದಾ ವಸ್ತ್ರಾಭರಣ ತುರಗಾದಿ ತದೀಯ ವಸ್ತೂತ್ಕರಂಗಳನಾ ವಜೀರರ ವಶಕ್ಕೆ ಕೊಡಿಸಿ ಪೇಳಿಸಲ್ ತದೀಯ ವಸ್ತೂತ್ಕರಂಗಳಂ ಕೊಟ್ಟು ರಾಮರಾಜನಂ ಕೊಡದಡಂಗಿಸಿಕೊಂಡಿರ್ಪರೆಂದಾ ವಜೀರರ್ಕರ ಲೇಖನಗಳಂ ಬರೆಸಿ ತಮ್ಮ ಕೈವಶಮಾದ ರುಪ್ಪಾಜಿ ಭೋಸಲೆ ಸಂತಾಜೀ ಜಗದಾಬಮನೋಜೀಮೋರಾಶರಜಾರಾವುಯೆಂಬಂತೀ ನಾಲ್ವರ್ ವಜೀರರುಮನಾ ರಾಮರಾಜನ ವಸ್ತ್ರಾಭರಣ ತುರಗಾದಿ ತದೀಯ ವಸ್ತೂತ್ಕರಂಗಳನೆಲ್ಲ ಮುಮವರಂಗಜೇಬ ಪಾತುಶಾಹನೆಡೆಗೆ ಕಳುಪಲವಂ ನಿಟ್ಟಿಸಿ ಲೇಖನವನೋದಿ ಕೇಳ್ದು ಕನಲ್ದು ಕೆಳದಿಯ ಸಂಸ್ಥಾನಮಂ ಕೈವಶಂಗೆಯ್ವುದೆಂದು ತನ್ನ ಪುತ್ರನಾದಜಮತಾರನ ಸಂಗಡಮಪರಿಮಿತ ಹಸ್ತ್ಯಶ್ವಪದಾತಿಯಂ ಕೂಡಿಸಿ ತೆರಳ್ಚಲೊಡನಾ ಅಜಮತಾರನತಿಕ್ಷಿಪ್ರದಿಂ ದಾಳಿವರಿಯುತ್ತೈತಂದು ತಾಂ ಮದಗದಕೆರೆಯ ಬಂಡಿತಿಮ್ಮಾಯಿ ಕಣಿವೆಯೊಳ್ ನಿಂದು ಜಾನ್‌ಸರಖಾನನಂ ದಾಳಿವರಿಸಲವಂ ಮುಂದಾಗಿ ಬಂದು ಮಹಾದೇವಪುರದ ಕೋಂಟೆಯಂ ತೆಗೆದುಕೊಳಲೊಡನಜಮತಾರನಾ ಮಹಾದೇವಪುರದ ಕೋಂಟೆಯೊಳ್ ನಿಂದು ಬಳಿಕಂ ಜಾನ್‌ಸರಖಾನನಂ ಮತ್ತಂ ಮುಂದ್ಯೆದಿಸಲವನಾನಂದಪುರಕ್ಕಾಗಿ ಶಾಲಿವಾಹನ ಶಕ ವರ್ಷ ೧೬೧೨ನೆಯ ಶುಕ್ಲ ಸಂವತ್ಸರದ ವೈಶಾಖ ಬಹುಳದಲ್ಲಿ ವೇಣುಪುರಕ್ಕೆ ಬಂದಿಳಿದು ತತ್ಪರಿಸ್ತರಣಮಂ ವೇಢೈಸುವನಿತರೊಳ್ ಚನ್ನಮ್ಮಾಜಿಯುವರಲ್ಲಿಂ ತೆರಳ್ದು ಭುವನಗಿರಿಯ ಮಾರ್ಗದೊಳ್ ನಿಂದು ಹೇರಳ ಪದಾತಿಯಂ ತೆರಳ್ಚಿ ಕಳುಹಿ

ರಾಷ್ಟ್ರಕ್ಕಾಗಿ ಬಂದು ತಡೆಯಿಲ್ಲದ ವೀರನಾಗಿ ಹೊರಟುಹೋದುದು ನಿಜವೆಂದೂ, ಅವನು ಈಗ ನಾವು ಆಳುತ್ತಿರುವ ಭೂಮಿಯಲ್ಲಿ ಇಲ್ಲವೆಂದೂ ತಿಳಿಸಿದಳು. ವ|| ಈ ರೀತಿಯಾಗಿ ತಿಳುಹಿಸಿ, ತಮ್ಮ ನಾಡಿನ ಮೇಲೆ ಆ ರಾಮರಾಜನು ಹೋದ ಕಡೆಯಲ್ಲಿ ಆತನ ವಸ್ತ್ರ ಹಾಗೂ ಆಭರಣಗಳು ಹಲವು ನಮ್ಮ ವಶವಾಗಿರುವುದು ನಿಜವೆಂದು ಹೇಳಿ ಕಳುಹಿಸಿ, ವಸ್ತ್ರ-ಆಭರಣ-ಕುದುರೆ ಆದಿಯಾಗಿ ಶ್ರೇಷ್ಠವಸ್ತುಗಳನ್ನು ಆ ಮಂತ್ರಿ ಸೇನಾನಾಯಕರ ವಶಕ್ಕೆ ಕೊಡಿಸಿದಳು. ಅವನ ಶ್ರೇಷ್ಠ ವಸ್ತುಗಳನ್ನಿತ್ತು ರಾಮರಾಜನನ್ನು ಕೊಡದೆ ಅಡಗಿಸಿಕೊಂಡಿರುವರು ಎಂಬುದಾಗಿ ಆ ವಜೀರರು ತರಲೆಗಳ ನಿರೂಪಗಳನ್ನು ಬರೆಸಿ, ತಮ್ಮ ಕೈವಶವಾದ ರುಪ್ಪಾಜಿ, ಭೋಸಲೆ ಸಂತಾಜೀ ಜಗದಾಬ, ಮನೋಜೀ ಮೋರಾ ಮತ್ತು ಶರಜಾರಾಮ ಎಂಬ ನಾಲ್ಕು ಮಂದಿ ವಜೀರರುಗಳನ್ನೂ ಮತ್ತು ಆ ರಾಮರಾಜನ ವಸ್ತ್ರಾಭರಣ, ಕುದುರೆ ಮತ್ತು ಇತರ ಅಮೂಲ್ಯ ವಸ್ತುಗಳನ್ನೆಲ್ಲವನ್ನೂ ಔರಂಗಜೇಬ ಬಾದಷಹನ ಕಡೆಗೆ ಕಳುಹಿಸಿದರು. ಅವನು ಇವುಗಳನ್ನು ನೋಡಿ ವಸ್ತುಗಳನ್ನು ದೃಷ್ಟಿಸಿ, ಲೇಖನವನ್ನು ಓದಿಕೊಂಡನು. ಇದರಿಂದ ಅವನು ಸಿಟ್ಟಾಗಿ ಕಡುಕೋಪಗೊಂಡು ಕೆಳದಿ ಸಂಸ್ಥಾನವನ್ನು ಕೈವಶಮಾಡಿಕೊಳ್ಳಬೇಕೆಂದು ತನ್ನ ಮಗನಾದ ಅಜಮತಾರನ ಜೊತೆಯಲ್ಲಿ ಹೇರಳವಾದ ಆನೆ, ಕುದುರೆ ಮತ್ತು ಕಾಲಾಳುಗಳನ್ನು ಕೂಡಿಸಿ ಕಳುಹಿಸಿದನು. ಅಜಮತಾರನು ಒಡನೆ ಶೀಘ್ರದಲ್ಲಿಯೇ ಧಾಳಿ ಮಾಡುತ್ತಾ ಬಂದು ಮದಗದಕೆರೆಯ ಹತ್ತಿರ ಬಂಡಿ ತಿಮ್ಮಾಯಿ ಕಣಿವೆಯಲ್ಲಿ ನಿಂತನು. ಈತನು ಜಾನ್‌ಸರಖಾನನನ್ನು ದಾಳಿ ನಡೆಸಲು, ಮುಂದಾಗಿ ಕಳಿಸಿದ ಮೇರೆಗೆ ಅವನು ಮುಂದಾಗಿ ಬಂದು ಮಹಾದೇವಪುರದ

ಕಂ॥ ತೊಳಪ ಬಿದುರೂರು ಕೋಂಟೆಗೆ
ತಳಿಗಳನಡಿಗಡಿಗೆ ನಡೆಪ ಮೊಗಲರ ಸೇನಾ
ಜಲಧಿಯನಂಕದೊಳಂತಕ
ನಿಳಯವನುರೆ ಪುಗಿಸಿ ಮೆರೆದಳತಿಸಾಹಸಮಂ ೫೭

ಕಗ್ಗೊಲೆಯಂ ಬಿದ್ದಂಕದೊ
ಳಗ್ಗಳಿಯರೆನಿಪ್ಪ ತತ್ತುರುಷ್ಕರ ಫೌಜಂ
ನುಗ್ಗುನುಸಿಮಾಡಿ ರಣದೊಳ್
ಮಗ್ಗಿಸಿ ಬಹುಮುಖದೆ ಪುಗಿಸಿದಳ್ ಜವಪುರಮಂ ೫೮

ನೆರೆ ಕಂಡಿ ಕಣಿವೆ ಪಥಗಳ
ನುರೆ ಬಂಧಿಸಿ ಬಲೆಯೊಳಂ ಸಿಲುಂಕಿದ ಮತ್ಸ್ಯೋ
ತ್ಕರಮೆನಲಾಗಿಸಿ ತದ್ಯವ
ನರ ಸೈನ್ಯವನಾಜಿರಂಗದೊಳ್ ಬರಿಕೈದಳ್ ೫೯

ವ॥ ಇಂತು ಕಸ್ತುಗೆಯ್ದು ನೆಲದಂಡಿಳಿದುರುಬಿ ತರುಬಿ ನಿಂದು ಕೈಗೆಯ್ದ ತಾಮ್ರ ಮುಖರಂ ಬಹುಮುಖದಿಂದೀಪ್ರಕಾರದಿಂ ಸಂಹರಿಸಿ ಇಂತು ಸಮರಸಂಧಾನಮುಖದಿಂ ದಿಳ್ಳಿಯವರಂಗಜೇಬಪಾತುಶಾಹನ ಫೌಜಂ ಪಿಂದೆಗೆಸಿ ರಾಜ್ಯರಾಷ್ಟ್ರಂಗಳಂ ಸಲಹಿ ತನ್ನಂ

ಕೋಟೆಯನ್ನು ತೆಗೆದುಕೊಂಡನು. ಒಡನೆ ಅಜಮತಾರನು ಆ ಮಹಾದೇವಪುರದ ಕೋಟೆಯಲ್ಲಿ ನಿಂತನು. ಆ ಬಳಿಕ ಜಾನ್‌ಸರಖಾನನನ್ನು ಮತ್ತೂ ಮುಂದಕ್ಕೆ ಹೋಗಲು ಹಾಗೂ ಆನಂದಪುರವನ್ನು ಆಕ್ರಮಿಸಲು ಶಾಲಿವಾಹನ ಶಕವರ್ಷ ೧೬೧೨ನೆಯ ಶುಕ್ಲಸಂವತ್ಸರದ ವೈಶಾಖ ಬಹುಳದಲ್ಲಿ ವೇಣುಪುರಕ್ಕೆ ಬಂದಿಳಿದನು. ಆ ಕೋಟೆಯನ್ನು ಆಕ್ರಮಿಸುವಷ್ಟರಲ್ಲಿ ಚೆನ್ನಮ್ಮಾಜಿಯವರು ಅಲ್ಲಿಂದ ಹೊರಟು ಭುವನಗಿರಿಯ ಮಾರ್ಗದಲ್ಲಿ ನಿಂತು ಹೇರಳ ಕಾಲಾಳುಗಳನ್ನು ಹೊರಡಿಸಿ ಕಳುಹಿಸಿ ೫೭. ಬಿದನೂರು ಕೋಟೆಯನ್ನು ಆಗಾಗ ಧಾಳಿಯಿಟ್ಟ ಮೊಗಲರ ಸೇನಾಸಮುದ್ರವನ್ನು ಯುದ್ಧದಲ್ಲಿ ಯಮನ ನಿವಾಸಕ್ಕೆ ಕಳುಹಿಸಿ, ಚೆನ್ನಮ್ಮಾಜಿಯು ಅತಿ ಸಾಹಸವನ್ನು ಮೆರೆದಳು. ೫೮. ಯುದ್ಧದಲ್ಲಿ ಅಗ್ಗಳರು ಎನ್ನಿಸಿದ ಆ ತುರುಕರ ಸೈನ್ಯವನ್ನು ಕಗ್ಗೊಲೆ ಮಾಡಿಸಿ, ನುಚ್ಚುನೂರು ಮಾಡಿ ಯುದ್ಧದಲ್ಲಿ ಅನೇಕರನ್ನು ಸೋಲಿಸಿ ಯಮನಗರಕ್ಕೆ ಕಳುಹಿಸಿದಳು. ೫೯. ಕಂಡಿ, ಕಣಿವೆ ಹಾಗೂ ಮಾರ್ಗಗಳನ್ನು ಕಟ್ಟಿ, ಅವರೆಲ್ಲರನ್ನೂ ಬಲೆಗೆ ಸಿಕ್ಕಿದ ಮೀನುಗಳ ಸಮೂಹವೆಂಬಂತೆ ಮಾಡಿ ಆ ಯವನರ ಸೈನ್ಯವನ್ನು ಯುದ್ಧರಂಗದಲ್ಲಿ ನಿರ್ಮೂಲ ಮಾಡಿದಳು. ವ॥ ಈ ರೀತಿ ಕಠಿಣಗೊಳಿಸಿ ಬೀಡುಬಿಟ್ಟು ಆಕ್ರಮಿಸಿದ ಶತ್ರುಸೈನ್ಯವನ್ನು ತಡೆಗಟ್ಟಿ ಕೈಗೆ ಸಿಕ್ಕಿದ ತುರುಕರನ್ನು ನಾನಾ ಪ್ರಕಾರಗಳಿಂದ ಸಂಹಾರ ಮಾಡಿದಳು. ಈ ಪ್ರಕಾರವಾಗಿ ಯುದ್ಧ ಮುಖದಿಂದಲೂ ಹಾಗೂ ಸಂಧಾನಮುಖದಿಂದಲೂ ಡೆಲ್ಲಿಯ ಔರಂಗಜೇಬ ಬಾದಷಹನ ಸೈನ್ಯವನ್ನು ಹಿಂದಕ್ಕಟ್ಟಿ ರಾಜ್ಯ-ರಾಷ್ಟ್ರಗಳನ್ನು ಕಾಪಾಡಿದಳು. ತನ್ನನ್ನು ಮೊರೆಹೊಕ್ಕು ಶರಣಾಗತನಾದ ಮಹಾರಾಷ್ಟ್ರದ ರಾಮರಾಜನನ್ನು ರಕ್ಷಿಸಿ, ಶರಣಾಗತ ರಕ್ಷಕರೆಂಬ ಛಲದ

**ಮರೆವೊಕ್ಕಾರೆಯರರಸನೆನಿಪ್ಪ ರಾಮರಾಜನಂ ಪೊರೆದು ಚಲಪದವಮಂ ಮೆರೆದು ಸಮಸ್ತ ನೃಪಾಲಮಂಡಲಮಧ್ಯದೊಳತ್ಯಂತಪ್ರಖ್ಯಾತಿಯಂ ಪಡೆದು ವಿರಾಜಿಸುತ್ತುಮಿರಲಿತ್ತರಾಮರಾಜಂ ಚಂದಿಯಂ ಪೊಕ್ಕ ವರ್ತಮಾನಮಂ ಗಲಗಲಿಯಿಂ ಬ್ರಹ್ಮಪುರಿಯಂ ಸಾರ್ದವರಂಗಜೇಬಪಾತುಶಾಹಂ ಕೇಳ್ದು ಬಳಿಕ್ಕಂ ತನ್ನ ಮಂತ್ರಿಯಾದ ಅಸತ್ಖಾನನ ಮಗ ಜುಲುಪರಖಾನನೊಡನೆ ಹೇರಳಸೈನ್ಯಮಂ ಕೂಡಿಸಿ ತೆರಳ್ಚಲವನತ್ಯಂತಾಟೋಪದಿಂ ತೆರಳ್ದೈತಂದು ಚಂದಿಯಗಡಕ್ಕೆ ಮುತ್ತಿಗೆಯನಿಕ್ಕಲೊಡನಾ ಜುಲುಪರಖಾನಂಗೆ ಪಡಿಬಲಮಾಗಿ ಪಿಂತಣಿಂ ತನ್ನ ಪುತ್ರನಾದ ಕಾಂಬಕ್ಸನಂ ತೆರಳ್ಚಿ ಕಳುಪಲಾ ರಾಮರಾಜಂ ಚಂದಿಯಗಡದೊಳ್ ನಿತ್ತರಿಸಿ ನಿಲಲಾರದಲ್ಲಿಂ ಪಲಾಯನಂಬಡೆದು ರಾಂಗಿಣಿಯಗಡವನ್ನೈದಲ್ ಮಗುಳ್ದೀ ವಾರ್ತೆಯಂ ಪಾತುಶಾಹನಂ ಕೇಳ್ದು ಸಾತಾರಿ ಪನ್ನಾಳಿ ವಸಂತ ಲೇಖಿನಿ ಚಂದನ ವಂದನಾದಿಗಡಂಗಳಂ ಕೊಂಡೊಡನೆ ರಾಂಗಿಣಿಗಡವಂ ವೇಢೈಸಲುಜ್ಜುಗಿಪನಿತರೊಳಾ ರಾಮರಾಜಂ ದೈವವಶದಿಂ ಮೃತಿವಡಲೊಡನೆ ತದ್ರಾಮರಾಜನ ಪತ್ನಿ ರಾಣಿ ಸ್ವಪುತ್ರರಾದ ಶಿವಾಜಿ ಸಂಬಾಜಿಗಳಂ ಮುಂತಿಟ್ಟುಕೊಂಡು ರಾಮಚಂದ್ರಪಂತನಂ ಮುಖ್ಯಾಧಿಕಾರಿಯಂ ಮಾಡಿಕೊಂಡಿಂತು ರಾಜ್ಯಂಗೈಯ್ಯುತ್ತಿರಲಾ ರಾಜೇರಾಮರಾಜನ ಕುಮಾರಕರಿರ್ವರೊಳಾ ಶಿವಾಜಿಯೆಂಬ ಕುಮಾರಂ ಮಾತೃ ದ್ರೋಹಮಂ ನೆನೆದು ತನ್ಮೂಲದಿಂ ಬಂಧನದೊಳ್‌ಸಿಲುಕಿ ಮರಣಮಂ ಪಡೆಯಲೊಡನೆ ರಾಮರಾಜನ ಪತ್ನಿ ಸ್ವಪುತ್ರನಾದ ಸಂಬಾಜಿವೆರಸು ರಾಜ್ಯಂಗೆಯ್ಯುತ್ತುಮಿರಲಿತ್ತಲವರಂಗಜೇಬಪಾತುಶಾಹ ನಾರೆಯರ ಮೂಲಚ್ಛೇದನಮಂ ಮಾಡಲ್ವೇಳ್ಕೆಂದಾಳೋಚನೆಯಂ ರಚಿಸುವನಿತರೊಳಿತ್ತಂ ವಾಗಿನ ಗಿರಿಯೊಳಿರ್ದ ವಿಜಾಪುರದ ತಳವಾರ ಪಿಡ್ಡಿನಾಯಕಂ ಪ್ರಬಲನಾಗಿ ಕಾಮಿಯಾಬಖಾನನಂ ತೆರಳ್ಚಿಸಿ ಕಳುಹಿ ವಿಜಾಪುರದ**

ಸ್ಥಾನವನ್ನು ಪಡೆದು, ಸಮಸ್ತ ರಾಜ ಸಮೂಹಗಳಲ್ಲಿ ಅತ್ಯಂತ ಕೀರ್ತಿಯನ್ನು ಪಡೆದುಕೊಂಡು ಶೋಭಿಸಿದಳು. ರಾಮರಾಜನು ಚಂದಿಯನ್ನು ಪ್ರವೇಶಿಸಿದ ಸಮಾಚಾರವನ್ನು ಗಲಗಲಿ ಮತ್ತು ಬ್ರಹ್ಮಪುರಿಗೆ ಹೋಗಿದ್ದ ಔರಂಗಜೇಬಬಾದಷಹನು ಕೇಳಿ ಬಳಿಕ ತನ್ನ ಮಂತ್ರಿಯಾದ ಅಸತ್ಖಾನನ ಮಗ ಜುಲುಪರಖಾನನೊಡನೆ ಅಸಂಖ್ಯಾತ ಸೈನ್ಯವನ್ನು ಕೂಡಿಸಿ ಕಳುಹಿಸಿದನು. ಅವನು ಅತ್ಯಂತ ಆಟೋಪದಿಂದ ಹೊರಟು ಬಂದು ಚಂದಿಯಗಡಕ್ಕೆ ಮುತ್ತಿಗೆಯನ್ನು ಹಾಕಲು ಕೂಡಲೇ ಜುಲಪರಖಾನನಿಗೆ ಬೆಂಬಲವಾಗಲು ತನ್ನ ಮಗ ಕಾಂಬಕ್ಸನನ್ನು ಹೊರಡಿಸಿ ಕಳುಹಿಸಿದನು. ರಾಮರಾಜನು ಚಂದಿಯಗಡದಲ್ಲಿ ನಿಲ್ಲಲಾರದೆ ಪಲಾಯನ ಮಾಡಿ ರಾಂಗಿಣಿಯ ಕೋಟೆಯನ್ನು ಸೇರಿದನು. ಈ ಸಾಮಾಚಾರವನ್ನು ಕೇಳಿದ ಬಾದಷಹನು ಕೆರಳಿ ಸಾತಾರಿ, ಪನ್ನಾಳಿ, ವಸಂತ, ಲೇಖಿನಿ ಚಂದನ ಹಾಗೂ ವಂದನಾದಿ ಕೋಟೆಗಳನ್ನು ವಶಪಡಿಸಿಕೊಂಡು ಆಕ್ರಮಿಸಿಕೊಳ್ಳುವಷ್ಟರಲ್ಲಿ ರಾಮರಾಜನು ದೈವವಶದಿಂದ ಮೃತಿಹೊಂದಿದನು. ಆ ರಾಮರಾಜನ ಹೆಂಡತಿ ರಾಣಿಯು ತನ್ನ ಮಕ್ಕಳಾದ ಶಿವಾಜಿ ಮತ್ತು ಸಂಬಾಜಿಯುವರನ್ನು ಮುಂದೆ ಮಾಡಿಕೊಂಡು ರಾಮಚಂದ್ರಪಂತನನ್ನು ಮುಖ್ಯಾಧಿಕಾರಿಯನ್ನಾಗಿ ಮಾಡಿಕೊಂಡು ರಾಜ್ಯವನ್ನು ಪಾಲಿಸುತ್ತಿದ್ದಳು. ಆ ರಾಜೇರಾಮನ ಮಕ್ಕಳಿಬ್ಬರಲ್ಲಿ ಶಿವಾಜಿಯೆಂಬ ಕುಮಾರನು ಮಾತೃದ್ರೋಹವನ್ನು ನೆನೆದು ಈ ಮೂಲಕ ಸೆರೆಯಾಳಾಗಿ ಮರಣಹೊಂದಿದನು. ರಾಮರಾಜನ ಹೆಂಡತಿ ತನ್ನ ಪುತ್ರನಾದ ಸಂಬಾಜಿಯೊಡನೆ ರಾಜ್ಯವನ್ನು ಪಾಲಿಸುತ್ತಿರಲು, ಇತ್ತಕಡೆ ಔರಂಗಜೇಬ ಬಾದಷಹನು ಆರೆಯರ ಮೂಲವನ್ನೇ ನಾಶಮಾಡಬೇಕೆಂದು ಆಲೋಚನೆ ಮಾಡಿದನು. ಅಷ್ಟರಲ್ಲಿಯೇ

**ಕೆಲವು ಸೀಮೆಗಳಂ ವಶಂಗೈದು ಮತ್ತುಂ ಕೆಲವು ಸೀಮೆಗಳನಾಕ್ರಮಿಸುತ್ತಂ ಬರಲಾರೆಯರ ರಾಜ್ಯರಾಷ್ಟ್ರಮಂ ಸಾಧಿಸುತಿರ್ಪವರಂಗಜೇಬನೀ ವಾರ್ತೆಯಂ ಕೇಳ್ದು ಬಳಿಕ್ಕಾರೆಯರ ಮೇಗಣ ರಾಜಕಾರ್ಯಮಂ ಮಾಣ್ದಾಟೋಪದಿಂ ತೆರಳ್ದೈತಂದಾವಾಗಿನಿಯ ಗಿರಿಯ ನವಬತ್ತಂ ಕೇಳ್ದು ಕೆರಳ್ದಾ ವಾಗಿನಗಿರಿಯಂ ತೆಗೆದುಕೊಂಡಿಂತು ವರ್ತಿಪನಿತರೊಳಾ ಪಾತುಶಾಹನ ಶರೀರದೊಳ್ ರೋಗಂ ಮೊಳೆದೋರಲೊಡನಮದಾನಗರಕ್ಕೈದುತಿರಲ್ ಮಧ್ಯಮಾರ್ಗದೊಳ್ ವ್ಯಾಧಿಪ್ರಕೋಪಿಸಲಾಗಳಾ ಅವರಂಗಜೇಬನಾಳೋಚಿಸಿ ತಾಂ ಕೊಂಡ ಸಂಸ್ಥಾನಂಗಳ್ ತನ್ನ ಮೂಲಸಂಸ್ಥಾನಸಹಿತಮನ್ಯಾಕ್ರಾಂತಮಾಗಿ ಪೋಗಬಾರದಿದಕ್ಕೆ ತಕ್ಕ ಬಲಶಾಲಿಗಳಂ ತತ್ತತ್ಸ್ಥಾನಂಗಳೊಳ್ ನಿಲಿಸಲ್ವೇಳ್ಕೆಂದು ಮನಂದಂದು ಮಗ ಶಹಲಮಂಗೆ ಡಿಳ್ಳಿಯಧಿಕಾರಮನಿತ್ತು ತೆರಳ್ಚಿ ಅಜಮತಾರನೆಂಬ ಕುಮಾರಂಗೆ ಉತ್ತರದಿಕ್ಕಿನ ಸುಬೆಯಧಿಕಾರವನಿತ್ತು ಕಳುಹಿ ಕಾಂಬಕ್ಸನೆಂಬ ಸುತನಂ ಕರೆದು ಆತಂಗೆ ವಿಜಾಪುರ ಭಾಗಾನಗರಗಳಧಿಕಾರಮಂ ಕೈಗೊಳಿಸಿ ಮಗಳ್ ಬೇಗಮುವಿನ ಮೇಲಣಾಸಕ್ತಿಯಿಂದಾರೆಯರೆರೆಯನಾದ ಶಿವಾಜಿಯ ಪೌತ್ರನಾದ ಸಂಬಾಜಿಯ ಪುತ್ರನಾದ ಶಾಹುರಾಜಂಗೆ ತಾನಾಳ್ವ ದೇಶಕೋಶಂಗಳೊಳ್ ತನಗೆ ಬರ್ಪರ್ಥದೊಳ್ ಚತುರಂಶದೊಳೊಂದು ಭಾಗ ಧನಮಂ ಕೊಂಬುದೆಂದು ಚೌದಾಯಿಯ ವರಮಾನಂ ಬರೆಸಿಕೊಡಲ್ ತದಾದಿಯಾಗಾರೆಯರ್ಗೆ ಚೌದಾಯಿಯರ್ಥಮಂ ಕೊಂಬ ಪದ್ಧತಿಯಾದುದಿಂತು ನಿಯಾಮಕಂಗೈದನಂತರಂ ಬೇಗಮುವಿನ**

ವಾಗಿನ ಗಿರಿಯಲ್ಲಿದ್ದ ಬಿಜಾಪುರದ ತಳವಾರ ಪಿಡ್ಡಿನಾಯಕನು ಪ್ರಬಲನಾಗಿ ಕಾಮಿಯಾಬಖಾನನನ್ನು ಹೊರಡಿಸಿ ಕಳುಹಿಸಿ ಬಿಜಾಪುರದ ಹಲವು ಸೀಮೆಗಳನ್ನು ವಶಪಡಿಸಿಕೊಂಡು ಇತರ ರಾಷ್ಟ್ರಗಳನ್ನು ಸಾಧಿಸುತ್ತಿದ್ದನು. ಔರಂಗಜೇಬನು ಈ ಸಮಾಚಾರವನ್ನು ಕೇಳಿದ ಬಳಿಕ ಆರೆಯರ ಮೇಲಿರುವ ರಾಜಕಾರ್ಯವನ್ನು ನಿಲ್ಲಿಸಿ, ಆಟೋಪದಿಂದ ಹೊರಟು ಆ ವಾಗಿನಿಯಗಿರಿಯ ನವಬತ್ತನ್ನು ಕೇಳಿ ಕೋಪಗೊಂಡು ವಾಗಿನಗಿರಿಯನ್ನು ಸಾಧಿಸಿಕೊಂಡನು. ಸ್ವಲ್ಪಕಾಲದಲ್ಲಿಯೇ ಬಾದಷಹನ ಶರೀರದಲ್ಲಿ ರೋಗವು ಕಾಣಿಸಿಕೊಂಡಿತು. ಒಡನೆಯೇ ಅಹಮದಾನಗರಕ್ಕೆ ಹೋಗಬೇಕೆಂದು ನಿರ್ಧರಿಸಿ ಹೋಗುತ್ತಿರಲು ರೋಗವು ಉಲ್ಬಣಗೊಂಡಿತು. ಆಗ ಔರಂಗಜೇಬನು ತನ್ನ ಸಂಸ್ಥಾನವು ಬೇರೆಯವರ ವಶಕ್ಕೆ ಹೋಗಬಾರದೆಂಬುದಾಗಿ ನಿಶ್ಚಯಿಸಿ, ಆಯಾ ಪ್ರದೇಶಗಳಲ್ಲಿ ಬಲಶಾಲಿಯಾದವರನ್ನು ನೇಮಿಸಲು ನಿರ್ಧರಿಸಿದನು. ಮಗ ಶಹಮಲನಿಗೆ ಡೆಲ್ಲಿಯ ಅಧಿಕಾರವನ್ನು, ಅಜಮತಾರನಿಗೆ ಉತ್ತರ ದಿಕ್ಕಿನ ಸುಬೇದಾರಿಕೆಯ ಅಧಿಕಾರವನ್ನೂ, ಕಾಂಬಕ್ಸನಿಗೆ ಬಿಜಾಪುರದ ಭಾಗಾನಗರಗಳ ಅಧಿಕಾರವನ್ನೂ ವಹಿಸಿದನು. ಮಗಳಾದ ಬೇಗಮುವಿನ ಮೇಲೆ ಅಭಿಮಾನದಿಂದ ಆರೆಯರ ಎಳೆಯನಾದ ಶಿವಾಜಿಯ ಮೊಮ್ಮಗನೂ, ಸಂಬಾಜಿಯ ಮಗನೂ ಆದ ಸಾಹುರಾಜನಿಗೆ ತಾನು ಆಳಿದ ದೇಶಕೋಶಗಳಲ್ಲಿ, ತನಗೆ ಬರುವ ಹಣದಲ್ಲಿ ನಾಲ್ಕಂಶದ ಒಂದು ಭಾಗ ಹಣವನ್ನು ಕೊಡುವುದೆಂದು ಚೌದಾಯಿಯ ವರಮಾನವನ್ನು ಬರೆಸಿಕೊಟ್ಟನು, ಆ ಮೊದಲುಗೊಂಡು ಆರೆಯವರಿಗೆ ಚೌದಾಯಿಯ ಹಣವನ್ನು ಕೊಡಕೊಳ್ಳುವ ಪದ್ಧತಿ ಜಾರಿಗೆ ಬಂದಿತು, ಈ ರೀತಿ ನೇಮಕಮಾಡಿದ ನಂತರ ಬೇಗಮುವಿನ ಆರೈಕೆಯಲ್ಲಿ ಇರುತ್ತಿರಲು, ದಿನದಿನಕ್ಕೂ ಬಾದಷಹನಿಗೆ ರೋಗವು ಉಲ್ಬಣಿಸುತ್ತಿತ್ತು. ದೌಲತಾಬಾದಿನಲ್ಲಿ ತನಗೆ ಗೋರಿಯನ್ನು

**ಮೇಲಾರಯ್ಕೆಯಿಂದಿರುತ್ತಮಿರಲ್ ಪ್ರತಿದಿನದೊಳಾ ಪಾತುಶಾಹಂಗೆ ಶರೀರದೊಳ್ ಕೇವಲ ರುಜೋತ್ಕಟಮಾಗಿ ಬರಲ್ ದೌಲತಾಬಾದಿನೊಳ್ ತನಗೆ ಗೋರಿಯಂ ಕಟ್ಟಲಪ್ಪಣೆಯಿತ್ತು ನೀನತಿಶೀಘ್ರದಿಂದ್ಯೆತಪ್ಪುದೆಂದಜಮತಾರಂಗೆ ಲೇಖನಮಂ ಬರೆಸಿ ಕಳುಹಿ ಸಾಗಿಸುತ್ತಿರಲಜಮ ತಾರನೈತಪ್ಪನಿತರೊಳ್ ಮಧ್ಯಮಾರ್ಗದೊಳವರಂಗಜೇಬ ಪಾತುಶಾಹಂ ಪಂಚತ್ವವನೈದಲೊಡನಾತನ ಶರೀರಮಂ ದೌಲತಾಬಾದಿಂಗೆ ಕೊಂಡೊಯ್ದು ಬಳಿಕ್ಕಾ ತಾಣದೊಳ್ ಮುನ್ನಮೆ ನಿರ್ಮಾಣಂಗೈದ ಗೋರಿಯೊಳಾ ಪಾತುಶಾಹನ ಶರೀರಮನಿಕ್ಕಿ ಮುಚ್ಚಿ ಸಂಸ್ಕಾರಮಾಗಲನಂತರಮಾ ಸಮಯದೊಳಾ ಅವರಂಗಜೇಬಪಾತುಶಾಹನ ಪುತ್ರಿಯಾದ ಬೇಗಮುವಾ ಸಂಬಾಜಿಯಪುತ್ರನಾದ ಶಾಹುರಾಜಂಗಿಕ್ಕಿದ ಚೌಕಿಯಂ ತೆಗೆಸಿ ಚೌದಾಯಿಯರ್ಥಮಂ ಕೊಂಬುದೆಂದು ಪಾತುಶಾಹಂ ಮುನ್ನಂ ಬರೆಸಿತ್ತ ಪರಮಾನನಾ ಶಾಹುರಾಜಂಗೆ ಕೈಗೊಳಿಸಿ ನಿನ್ನ ರಾಷ್ಟ್ರಕ್ಕೈದಿ ನೀನಾವುದರಲ್ಲಿಯುಂ ಬುದ್ಧಿಶಾಲಿಯಾಗಿ ವರ್ತಿಪುದೆಂದು ನಿಯಾಮಕಂಗೆಯ್ದು ಬೀಳ್ಕೊಟ್ಟು ತೆರಳ್ವಲೊಡನಾ ಶಾಹುರಾಜನೆಳ್ತಂದು ಸಾತಾರಿಯ ಗಡಮನೈದಿ ರಾಮರಾಜನ ಪುತ್ರನಾದ ಸಂಬಾಜಿವೆರಸು ಬಾಳಾಜಿವಿಶ್ವನಾಥಪಂತನ ಮಗನಾದ ಬಾಜೀರಾಯ ಶ್ರೀಪತಿರಾಯ ಖಂಡೋಜೀದಾಭಾಡೆ (?) ಮುಂತಾದ ವಜೀರರ್ಕಳ್ವೆರಸು ಸುಖಸಂಕಥಾ ವಿನೋದದಿಂ ರಾಜ್ಯವಾಳುತ್ತುಮಿರಲಿತ್ತಂ ಪಾತುಶಾಹಂ ಸಂದ ವರ್ತಮಾನಮನುತ್ತರದಿಕ್ಕಿ ನೊಳ್ಳೆತರುತಿರ್ದಜಮತಾರಂ ಕೇಳ್ದು ತನ್ನ ಮಗ ದಿವಾರ್ಬೋಕ್ಕಸ ಸಹಿತಂ ಕ್ಷಿಪ್ರದೊಳ್ಳೆತಂದು ಡಿಳ್ಳಿಯೊಳಧಿಕಾರಮಂ ನಡೆಸುತಿರ್ಪ ಶಾಹಲಮನ ಮೇಲೆ ದಂಡೆತ್ತಿ ನಡೆತರಲ್ ಚರ್ಮಣಾವತೀ (ಪ್ರತಿನಾಮ ಚಂಬಲ್) ನದೀಪ್ರಾಂತದೊಳುಭಯ ಸೈನ್ಯಕ್ಕುಂ ಕೈಗಲಸಿ ಮಹಾಯುದ್ಧಂ ಪಣ್ಣಲಾಗಳಾ ಯುದ್ಧದೊಳಜಮುರ್ದಿ ದಿವಾರ್ಬೋಕ್ಕಸನಂ ಕೆಡಪಲೊಡನಜಮತಾರಂಗಂ ಶಹಲಮಂಗಂ ಮಹಾಯುದ್ಧಮಾಗಲಾ ಸಮರಾಂಗಣದಳ್ ಶಹಲಮನ ಮಗನಜಮತಾರನಂ ಕೊಂದು ಬಳಿಕ್ಕಂ**

ಕಟ್ಟಲು ಅಪ್ಪಣೆಮಾಡಿ ನೀನು ಬೇಗನೆ ಬರಬೇಕೆಂದು ಅಜಮತಾರನಿಗೆ ನಿರೂಪವನ್ನು ಮುಂದಾಗಿ ಬರೆಸಿ ಕಳುಹಿಸಿದನು. ಮಧ್ಯಮಾರ್ಗದಲ್ಲಿಯೇ ಔರಂಗಜೇಬನು ಮರಣ ಹೊಂದಿದನು. ಆತನ ಶರೀರವನ್ನು ದೌಲತಾಬಾದಿಗೆ ತೆಗೆದುಕೊಂಡು ಹೋಗಿ ಈ ಮುನ್ನವೇ ನಿರ್ಮಿಸಿದಂತೆ ಆ ಗೋರಿಯಲ್ಲಿ ಬಾದಷಹನ ಶರೀರವನ್ನಿಟ್ಟು ಸಂಸ್ಕಾರ ಮಾಡಿದರು. ಔರಂಗಜೇಬ ಬಾದಷಹನ ಮಗಳು ಬೇಗಮಳು ಸಂಬಾಜಿಯ ಮಗನಾದ ಸಾಹುರಾಜನಿಗೆ ಹಾಕಿದ ನಿರ್ಬಂಧವನ್ನು ತೆಗೆಸಿ, ಬಾದಷಹನು ಮುಂಚೆಯೇ ಬರೆಸಿದ್ದಂತೆ ಚೌತಾಯಿಯ ಹಣವನ್ನು ತೆಗೆದುಕೊಳ್ಳಲು ಒಪ್ಪಿಗೆ ನೀಡಿ, ಶಾಹುರಾಜನಿಗೆ ನಿನ್ನ ರಾಜ್ಯಕ್ಕೆ ಹೋಗಿ, ಎಲ್ಲ ರೀತಿಯಿಂದಲೂ ಬುದ್ಧಿಶಾಲಿಯಾಗಿ ರಾಜ್ಯಭಾರವನ್ನು ನಿರ್ವಹಿಸಬೇಕೆಂದು ನಿಯಮಿಸಿ ಅವನನ್ನು ಬೀಳ್ಕೊಟ್ಟಳು. ಸಾಹುರಾಜನು ಸಾತಾರಿಯ ಕೋಟೆಗೆ ಹೋಗಿ ರಾಮರಾಜನ ಮಗನಾದ ಸಾಂಬಾಜಿಯನ್ನು ಕೂಡಿಕೊಂಡು ಬಾಳಾಜಿ ವಿಶ್ವನಾಥ ಪಂತನ ಮಗ ಬಾಜೀರಾಯ, ಶ್ರೀಪತಿರಾಯ, ಖಂಡೋಜೀದಾಭಾಡೆ (?) ಮುಂತಾದ ಮಂತ್ರಿಗಳನ್ನು ಕೂಡಿಕೊಂಡು ಸುಖದಿಂದಲೂ ಹಾಗೂ ವಿನೋದದಿಂದಲೂ ರಾಜ್ಯವನ್ನಾಳುತ್ತಿದ್ದನು. ಇತ್ತಕಡೆ ಬಾದಷಹನು ತೀರಿದ ವರ್ತಮಾನವನ್ನು ಉತ್ತರ ದಿಕ್ಕಿನಲ್ಲಿದ್ದ ಅಜಮತಾರನು ಕೇಳಿ ತನ್ನ ಮಗ ದಿವಾರ್ಬೋಕ್ಕಸನೊಡನೆ ಶೀಘ್ರದಲ್ಲಿಯೇ ಬಂದು ಡೆಲ್ಲಿಯಲ್ಲಿ ಅಧಿಕಾರವನ್ನು ನಡೆಸುತ್ತಿದ್ದ ಶಹಲಮನ ಮೇಲೆ ದಂಡೆತ್ತಿ ಬಂದನು. ಈ ಉಭಯ ಸೇನೆಗೂ ಕೈ ಹಚ್ಚಿ ಚರ್ಮಣಾವತಿ (ಚಂಬಲ್) ನದೀ ಪ್ರಾಂತದಲ್ಲಿ ಮಹಾಯುದ್ಧವುಂಟಾಯಿತು. ಈ ಯುದ್ಧದಲ್ಲಿ ಅಜಮುದೀನನು ದಿವಾರ್ಬೋಕ್ಕಸನನ್ನು ಸೋಲಿಸಿದನು. ಅಜಮತಾರನಿಗೂ, ಶಹಲಮನಿಗೂ ಮಹಾಯುದ್ಧವುಂಟಾಗಲು ಯುದ್ಧ

ಮೌಜದೀನ್‌ವೆರಸು ವಿಜಾಪುರ ಭಾಗಾನಗರದ ಸಂಸ್ಥಾನಂಗಳನಾಳುತಿರ್ಪ ಕಾಂಬಕ್ಸನ ಮೇಲೆ ದಾಳಿಯನ್ನೈದಲೊಡನೀವೃತ್ತಾಂತಮನೆಲ್ಲಮಂ ಕಾಂಬಕ್ಸಂ ಕೇಳ್ದು ಕೆರಳ್ದು ತನ್ನ ಮಗ ಸುಲುತಾನ ಮಹಮ್ಮದು ಸಹಿತಂ ಶಹಲಮನ ಮೇಲೆದಂಡೆತ್ತಿ ನಡೆತರಲ್ ಭಾಗಾನಗರಪ್ರಾಂತದೊಳವರಿರ್ವರ್ಗಂ ಕೈಗಲಸಿ ಬಳಿಕ್ಕೇಳುದಿವಸಪರ್ಯಂತಂ ಮಹಾಯುದ್ಧಮಾಗಲೊಡನೆ ತತ್ಸಮರಾಂಗಣದೊಳ್ ಶಹಲಮಂ ಕಾಂಬಕ್ಸನುಮನವನ ಮಗ ಸುಲುತಾನಮಹಮ್ಮುದ್ದನುಮನಿಂತಿರ್ವರುಮಂ ಕೊಂದು ಬಳಿಕ್ಕಂ ತಾಂ ಡಿಳ್ಳಿಯಂ ಸಾರ್ದೇಕಚ್ಛತ್ರದಿಂ ಪಾತುಶಾಹ ಪಟ್ಟಮನಾಂತಖಂಡಾಧಿಕಾರಮಂ ವಹಿಸಿ ರಾಜ್ಯವನಾಳ್ದನಾ ಶಹಲಮನ ನಂತರಮವನ ಮಗ ಮುಜಾದಿನ್ನುವಾಳ್ದನಾ ಮುಜಾದಿನ್ನು ಸಂದ ತರುವಾಯಿಯೊಳವನ ತಮ್ಮನಾದ ಜಮೋದಿನ್ನುವಿಂಗೆ ಪಟ್ಟಮಾದುದಾ ಅಜಮೋದಿನ್ನುವಿನನಂತರಮಾ ಅಜಮುಜಿನ್ನುವಿನ ಮಗ ಪರಕ್ಸಾಹಂಗೆ ಪಟ್ಟಮಾದುದವಂ ಸಂದ ಬಳಿಕ್ಕಂ ಮೌಜದಿನ್ನನ ಮೊಮ್ಮಗನಾದ ಮಹಮ್ಮದಶಾಹಂಗೆ ಪಟ್ಟಮಾದುದು ಇದಾರೆಯರ ತುರುಷ್ಕರ ಮೂಲವೃತ್ತಾಂತಂ.

ಇನ್ನೊಳಗುಸಿರ್ದಂತು ಕೆಳದಿಯ ಚನ್ನಮ್ಮಾಜಿಯವರ್ ಶುಕ್ಲಸಂವತ್ಸರದಲ್ಲಿ ಏಕಚ್ಛತ್ರಾಧಿಪತಿಯಾದ ಡಿಲ್ಲಿಯುವರಂಗಜೇಬಪಾತುಶಾಹನ ಮೇಲೆ ಕೈಗೆಯ್ದು ಸಮರಸಂಧಾನದ ಮೇಲೆ ತತ್ಪಾತುಶಾಹಸೈನ್ಯಮಂ ಪಿಂದೆಗೆಸಿ ತನ್ನಂ ಮರೆವೊಕ್ಕ ಆರೆಯರ್ಗಧಿರಾಜನಾದ ಶಿವಾಜಿಯ ಪುತ್ರನಾದ ರಾಮರಾಜನಂ ಕಡೆದಾಂಟಿಸಿ ಮನ್ನೆಯರ್ಕಳೊಳ್ ಪರಮ ಪ್ರಖ್ಯಾತಿಯಂ ಪಡೆದು ವಿರಾಜಿಸುತಿರ್ದಳಂತುಮಲ್ಲದೆಯುಂ

ಕಂ॥ ಧರಣಿಪ ಸಂದೋಹಾಗ್ರೇ
ಸರನಹ ನಿಜಸೂನುವೆರಸು ತೆರಳ್ದತಿಮುದದಿಂ
ದೊರೆ ಚನ್ನಮಾಂಬೆಯತಿಭಾ
ಸುರಸುಬ್ರಹ್ಮಣ್ಯಯಾತ್ರೆಯಂ ವಿರಚಿಸಿದಳ್ ೬೦

ರಂಗದಲ್ಲಿ ಶಹಲಮನ ಮಗನು ಅಜಮತಾರನನ್ನು ಕೊಂದನು. ಬಳಿಕ ಮೌಜದೀನ್‌ನೊಡನೆ ಬಿಜಾಪುರ ಹಾಗೂ ಭಾಗಾನಗರದ ಸಂಸ್ಥಾನಗಳನ್ನಾಳುತ್ತಿದ್ದ ಕಾಂಬಕ್ಸನ ಮೇಲೆ ಧಾಳಿಯನ್ನು ನಡೆಸಲು, ಈ ವೃತ್ತಾಂತವೆಲ್ಲವನ್ನೂ ಕಾಂಬಕ್ಸನು ಕೇಳಿ ಕೆರಳಿದನು. ಕಾಂಬಕ್ಸನು ತನ್ನ ಮಗ ಸುಲ್ತಾನ ಮಹಮದ್‌ನೊಡನೆ ಶಹಲಮನ ಮೇಲೆ ದಂಡೆತ್ತಿ ಹೋದನು. ಭಾಗಾನಗರದ ಪ್ರಾಂತದಲ್ಲಿ ಅವರಿಬ್ಬರಿಗೂ ಏಳು ದಿವಸಗಳವರೆಗೂ ದೊಡ್ಡ ಹೋರಾಟವು ಜರುಗಿತು. ರಣರಂಗದಲ್ಲಿ ಶಹಲಮನು ಕಾಂಬಕ್ಸನನ್ನೂ ಹಾಗೂ ಅವನ ಮಗ ಸುಲ್ತಾನ ಮೆಹಮೂದ್ ಎಂಬ ಇಬ್ಬರನ್ನೂ ಕೊಂದು ಹಾಕಿದನು. ಬಳಿಕ ತಾನು ಡೆಲ್ಲಿಯನ್ನು ಪ್ರವೇಶಿಸಿ ಏಕಚ್ಛತ್ರಾಧಿಪತಿಯಾಗಿ ಅಧಿಕಾರವನ್ನು ಹೊಂದಿ ಬಾದಷಹನಾಗಿ ಪಟ್ಟವನ್ನು ವಹಿಸಿಕೊಂಡು ರಾಜ್ಯವಾಳಿದನು. ಆ ಶಹಲಮನ ನಂತರ ಅವನ ಮಗ ಮುಜಾದಿನ್ನು ಆಳಿದನು. ಮುಜಾದಿನ್ನುವಿನ ತರುವಾಯ ಅವನ ತಮ್ಮನಾದ ಅಜಮೋದಿನ್ನುವಿಗೆ ಪಟ್ಟವಾಯಿತು. ಆ ಅಜಮೋದಿನ್ನುವಿನ ಬಳಿಕ ಅವನ ಮಗ ಪರಕ್ಸಾಹನಿಗೆ ಪಟ್ಟವಾಯಿತು. ಈತನು ತೀರಿದ ಮೇಲೆ ಮೌಜದಿನ್ನನ ಮೊಮ್ಮಗನಾದ ಮಹಮ್ಮದಶಹಾಗೆ ಪಟ್ಟವಾಯಿತು, ಇದು ಆರೆಯರ ಮತ್ತು ತುರುಕರ ಮೂಲವೃತ್ತಾಂತವಾಗಿದೆ. ಇನ್ನು ಹಿಂದೆ ಹೇಳಿದಂತೆ ಚೆನ್ನಮ್ಮಾಜಿಯು ಶುಕ್ಲಸಂವತ್ಸರದಲ್ಲಿ ಏಕಚ್ಛತ್ರಾಧಿಪತಿಯಾದ ಡೆಲ್ಲಿಯ ಔರಂಗಜೇಬ ಬಾದಷಹನ ಮೇಲೆ ಹೋರಾಡಿ ಸಮರಸಂಧಾನದ ಮೂಲಕ ಬಾದಷಹನ ಸೈನ್ಯವನ್ನು ಹಿಂದಕ್ಕಟ್ಟಿದಳು. ತನ್ನನ್ನು ಮೊರೆಹೊಕ್ಕ ಮರಾಟೆಯ ಆರೆಯರಿಗೆ ಅಧಿರಾಜನೂ ಹಾಗೂ ಶಿವಾಜಿಯ ಪುತ್ರನೂ ಆದ ರಾಮರಾಜನನ್ನು ಗಡಿದಾಟಿಸಿ ರಾಜರುಗಳಲ್ಲಿ ಪರಮ ಕೀರ್ತಿಯನ್ನು ಹೊಂದಿ ಶೋಭಿಸುತ್ತಿದ್ದಳು. ಅಂತೂ ಅಲ್ಲದೆ, ೬೦. ರಾಜಸಮೂಹದಲ್ಲೇ ಅಗ್ರಗಣ್ಯನಾದ ತನ್ನ ಮಗನೊಂದಿಗೆ ರಾಣಿ ಚೆನ್ನಮಾಂಬೆಯು ಸುಬ್ರಹ್ಮಣ್ಯ ಯಾತ್ರೆಯನ್ನು

ವ|| ಇಂತು ಸುಬ್ರಹ್ಮಣ್ಯೇಶ್ವರಯಾತ್ರೆಯಂ ರಚಿಸಿ ಮರಳ್ದು ವೇಣುಪುರವನ್ನೆಯ್ದಿ ಸುಖಮಿರುತಿರ್ದನಂತರಂ ಸಬನೀಸು ಕೋಳಿವಾಡದ ಬೊಮ್ಮರಸಯ್ಯನೊಡನಸಂಖ್ಯಾತಮಾದ ಸೈನ್ಯಮಂ ತೆರಳ್ಚಿಸಿ ಕಳುಹಿ

ಕಂ|| ಧುರದೊಳ್ ಮಹಿಸೂರ ಮಹೀ
ಶ್ವರನ ಚಮೂಪತಿಯನಿರಿದು ತತ್ಸುತನ ಕೈ
ಸೆರೆವಿಡಿದು ತತ್ಪದಾತಿಯ
ನೊರಸಿ ಜಯೋತ್ಸವವನಾಂತು ರಾರಾಜಿಸಿದಳ್ ೬೧

ವ|| ಇಂತು ಸಂಗ್ರಾಮದೊಳ್ ಮೈಸೂರ ಮಹೀಶ್ವರನ ದಳವಾಯಿ ತಿಮ್ಮಪ್ಪನಂ ನಿಗ್ರಹಿಸಿ ತತ್ಪುತ್ರನಾದ ಕೃಷ್ಣಪ್ಪನಂ ಕೈಸೆರೆವಿಡಿದು ಮರಳ್ದು ಕಳುಹಿಸಿ ಪರಮಪ್ರಖ್ಯಾತಿಯಂ ಪಡೆದು ತುಂಗಭದ್ರಾ ನದೀತೀರದೊಳ್

ಕಂ|| ತರುಣಿಯರ ಕುಲಶಿರೋಮಣಿ
ವರಚನ್ನಮ್ಮಾಜಿಯಾತ್ಮನಾಥನ ಪೆಸರೊಳ್
ಸ್ಥಿರಮಾದ ಸೋಮಶೇಖರ
ಪುರಮೆಂದೆನಿಪಗ್ರಹಾರಮಂ ವಿರಚಿಸಿದಳ್ ೬೨

ವ|| ಇಂತು ಪ್ರಾಣಕಾಂತನಾದ ಸೋಮಶೇಖರನಾಯಕರ ಪೆಸರೊಳ್ ಸೋಮಶೇಖರಪುರಮೆಂದೆನಿಪಗ್ರಹಾರಮಂ ನಿರ್ಮಾಣಂಗೈಸಿ ಸ್ವಾಸ್ಥಿಕ್ಷೇತ್ರವೃತ್ತಿಗಳಂ ಕಲ್ಪಿಸಿ ಶ್ರೋತ್ರಿಯ ಬ್ರಾಹ್ಮಣರ್ಗೆ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತಳಂತುಮಲ್ಲದೆ

ಮಾಡಿದಳು, ವ|| ಈ ರೀತಿ ಸುಬ್ರಹ್ಮಣ್ಯ ಯಾತ್ರೆಯನ್ನು ಕೈಗೊಂಡು ವೇಣುಪುರಕ್ಕೆ ಮರಳಿ ಸುಖದಿಂದಿರುತ್ತಿದ್ದಳು. ಅನಂತರ ಸಬನೀಸು ಕೋಳಿವಾಡದ ಬೊಮ್ಮರಸಯ್ಯನೊಡನೆ ಅಸಂಖ್ಯಾತ ಸೈನ್ಯವನ್ನು ಹೊರಡಿಸಿ ಕಳುಹಿಸಿ, ೬೧. ಯುದ್ಧದಲ್ಲಿ ಮೈಸೂರರಸನ ಸೇನಾಪತಿಯನ್ನು ಇರಿದು, ಅವನ ಮಗನನ್ನು ಕೈಸೆರೆ ಹಿಡಿದು ಅವರ ಸೈನಿಕರನ್ನು ಸೋಲಿಸಿ, ವಿಜಯೋತ್ಸವವನ್ನು ಪಡೆದು ಮೆರೆದಳು. ವ|| ಈ ರೀತಿ ಯುದ್ಧದಲ್ಲಿ ಮೈಸೂರ ಅರಸನ ದಳವಾಯಿ ತಿಮ್ಮಪ್ಪನನ್ನು ಸೋಲಿಸಿ, ಅವನ ಮಗನಾದ ಕೃಷ್ಣಪ್ಪನನ್ನು ಕೈಸೆರೆ ಹಿಡಿದು ಮರಳಿಕಳುಹಿಸಿ ಪರಮ ಪ್ರಖ್ಯಾತಿಯನ್ನು ಗಳಿಸಿ ತುಂಗಭದ್ರಾನದೀ ತೀರದಲ್ಲಿ-೬೨. ತರುಣಿಯರ ಕುಲಶಿರೋಮಣಿಯಾದ ಚೆನ್ನಮ್ಮಾಜಿಯು ತನ್ನ ಗಂಡನ ಹೆಸರಿನಲ್ಲಿ ಸ್ಥಿರವಾದ ಸೋಮಶೇಖರಪುರವೆಂಬ ಅಗ್ರಹಾರವನ್ನು ನಿರ್ಮಿಸಿದಳು. ಈ ರೀತಿ ತನ್ನ ಗಂಡನಾದ ಸೋಮಶೇಖರನಾಯಕನ ಹೆಸರಿನಲ್ಲಿ 'ಸೋಮಶೇಖರಪುರ' ವೆಂಬ ಅಗ್ರಹಾರವನ್ನು ನಿರ್ಮಾಣ ಮಾಡಿಸಿ, ಅಲ್ಲಿ ಸ್ವಾಸ್ಥೆ, ಕ್ಷೇತ್ರ, ಉದ್ಯೋಗಗಳನ್ನು ಕಲ್ಪಿಸಿಕೊಟ್ಟು ಶ್ರೋತ್ರಿಯ ಬ್ರಾಹ್ಮಣರಿಗೆ ಶಿವಾರ್ಪಣವೆಂದು ಧಾರೆಯನ್ನೆರೆದು ಶಾಶ್ವತವಾದ ಶಾಸನವನ್ನು ಬರೆಸಿಕೊಟ್ಟಳು. ಅಂತೂ ಅಲ್ಲದೆ ಬಸವಾಪಟ್ಟಣದ ಸೀಮೆಯ ಹತ್ತಿರ ಹೊಲಿಕೆರೆ (ಹುಲಿಕೆರೆ) ಎಂಬ ಸ್ಥಳದಲ್ಲಿ ಶೋಭಿಸುತ್ತಿದ್ದ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಅದಕ್ಕೆ ತನ್ನ ಹೆಸರಿನ ಅಂಕಿತದೊಡನೆ 'ಚನ್ನಗಿರಿಯ ಕೋಟೆ'ಯೆಂದು ಹೆಸರಿಟ್ಟು ಆ

ಬಸವಾಪಟ್ಟಣದ ಸೀಮಾಸನ್ನಿವೇಶದೊಳ್ ಹೂಲಿಕೆರೆಯೆಂಬ ಸ್ಥಳದೊಳ್ ವಿರಾಜಿಪ ಕೋಂಟೆಯಂ ಸ್ವಾಧೀನಂಗೈದದಕ್ಕೆ ಸ್ವನಾಮಾಂಕಿತಮಾದ ಚನ್ನಗಿರಿಯ ಕೋಂಟೆಯೆಂದು ಪೆಸರಿಟ್ಟು ತತ್ಪರಿಸ್ತರಣಮಂ ಬಲ್ಪುಗೈಸಿದಳಂತುಮಲ್ಲದೆಯುಂ

ಕಂ॥ ಮೆರೆವಳಕಾನಗರದ ಸುರ
ಪುರದೆಸಕವನಿಳಿಕೆಯ್ವ ಬಿದುರೂರೆಡೆಯೊಳ್
ಕರಮೆಸೆವ ನೀಲಕಂಠೇ
ಶ್ವರಗೆ ರಥೋತ್ಸವದ ಕಟ್ಟಳೆಯನಾಗಿಸಿದಳ್ ೬೩

ವ॥ ಇಂತು ವೇಣುಪುರದ ನೀಲಕಂಠೇಶ್ವರ ದೇವರ್ಗೆ ಪ್ರತಿವರ್ಷಮುಂ ರಥೋತ್ಸವ ಮನಾಗಿಪಂತು ಕಟ್ಟಳೆಯಂ ರಚಿಸಿ ಮತ್ತಂ ಕೆಳದಿ ರಾಮೇಶ್ವರ ವೀರಭದ್ರೇಶ್ವರ ಕೊಲ್ಲೂರ ಮೂಕಾಂಬಿಕೆಯಮ್ಮನವರ್ಗೆ ಹೇರಳ ಭೂಸ್ವಾಸ್ಥೆಯಂ ಬಿಟ್ಟು ಲೋಪಮಾಗದಂತು ತತ್ತತ್ಪೂಜಾದಿ ವಿಭವಂಗಳಂ ನಡೆಸಿ ಶ್ರೀಮತ್ಕೊಲ್ಲೂರ ಮೂಕಾಂಬಿಕೆಯವರ ಕಟಾಕ್ಷಲಬ್ಧ ಸಂಪೂರ್ಣೈಶ್ವರ್ಯ ಸಂಪನ್ನಳೆನಿಸಿ ಕೆಳದಿಯ ವೀರಭದ್ರದೇವರ ದೇವಸ್ಥಾನದ ಶಿಲಾಮಯಶಿಖರದ ಕೆಲಸಮುಮಂ ತದ್ರಂಗಮಂಟಪದ ರಚನಾದಿ ನವೀನ ಕೆಲಸಂಗಳುಮಂ ಸಂಪೂರ್ಣಮೆನಲಾಗಿಸಿ ಭೋಗಮಂಟಪದ ಸಮ್ಮುಖದೊಳ್ ಧ್ವಜಸ್ತಂಭಮಂ ನಿಲಿಸಿ ಮತ್ತಂ ಶೃಂಗಪುರದ ಸಂಸ್ಥಾನದ ಧರ್ಮಮಂ ಸಾಂಗಮಾಗಿ ನಡೆಸಿ ವೇಣುಪುರದರಮನೆಯೊಳೊಪ್ಪುವ ಭದ್ರಚಾವಡಿಯಂ ದೃಢಂಗೆಯ್ಸಿ ಕಾಶೀಧರ್ಮಮಂ (?) ಸಾಂಗಮಾಗಿ ನಡೆಸಿ ಮತ್ತಂ ಕಾಶೀ ರಾಮೇಶ್ವರ ಶ್ರೀಶೈಲ ತಿರುಪತಿ ಮುಂತಾದ ಪುಣ್ಯಕ್ಷೇತ್ರಂಗಳೊಳ್ ಸ್ಥಿರಮಾಗಿ ನಡೆವಂತು ವರ್ಷಾಶನದ ಕಟ್ಟಳೆಯಂ ಕಲ್ಪಿಸಿ

ಕೋಟೆಯನ್ನು ಬಲಪಡಿಸಿದಳು. ಅಂತೂ ಅಲ್ಲದೆ, ೬೩. ಕುಬೇರನ ಅಳಕಾವತಿ ಪಟ್ಟಣ ಹಾಗೂ ಇಂದ್ರನ ಅಮರಾವತೀ ಪಟ್ಟಣದ ಸೊಬಗನ್ನು ಮೀರಿಸುವ ಬಿದರೂರಿನಲ್ಲಿ ನೀಲಕಂಠೇಶ್ವರ ದೇವರಿಗೆ ರಥೋತ್ಸವದ ಕಟ್ಟಳೆಯನ್ನು ಮಾಡಿಸಿದಳು. ವ॥ ಈ ರೀತಿ ವೇಣುಪುರದ ಶ್ರೀ ನೀಲಕಂಠೇಶ್ವರ ದೇವರಿಗೆ ಪ್ರತಿವರ್ಷವೂ ರಥೋತ್ಸವವಾಗುವಂತೆ ಕಟ್ಟಳೆ ಮಾಡಿಸಿದಳು, ಕೆಳದಿ ಶ್ರೀರಾಮೇಶ್ವರ, ಶ್ರೀ ವೀರಭದ್ರೇಶ್ವರ ಶ್ರೀಕೊಲ್ಲೂರ ಮೂಕಾಂಬಿಕಾ ಅಮ್ಮನವರಿಗೆ ಹೇರಳವಾದ ಭೂಮಿಯನ್ನು ಬಿಟ್ಟು ನಿಯಮಗಳಿಗೆ ಲೋಪವಾಗದಂತೆ ಆಯಾ ಪೂಜಾದಿ ವೈಭವಗಳನ್ನು ನಡೆಸಿದಳು. ಹೀಗೆ ಮಾಡಿ ಶ್ರೀ ಕೊಲ್ಲೂರು ಮೂಕಾಂಬಿಕಾ ಅಮ್ಮನವರ ಕೃಪೆಯನ್ನು ಹೊಂದಿದ ಸಂಪೂರ್ಣ ಐಶ್ವರ್ಯವನ್ನು ಪಡೆದ ಸಂಪನ್ನಳೆನಿಸಿಕೊಂಡಳು, ಕೆಳದಿಯ ಶ್ರೀ ವೀರಭದ್ರದೇವರ ದೇವಸ್ಥಾನದ ಶಿಲಾವಲಯ ಶಿಖರದ ಕೆಲಸವನ್ನೂ ಅದರ ರಂಗಮಂಟಪದ ನವೀನ ರಚನೆಯ ಕೆಲಸಗಳನ್ನೂ ಸಂಪೂರ್ಣ ಮಾಡಿಸಿ, ಭೋಗಮಂಟದ ಸಮ್ಮುಖದಲ್ಲಿ ಧ್ವಜಸ್ತಂಭವನ್ನು ಸ್ಥಾಪಿಸಿ ನಿಲ್ಲಿಸಿದಳು, ಶೃಂಗಪುರದ (ಶೃಂಗೇರಿಯ) ಸಂಸ್ಥಾನದ ಧರ್ಮವನ್ನು ಸಾಂಗವಾಗಿ ನಡೆಸಿದಳು. ವೇಣುಪುರದ ಅರಮನೆಯಲ್ಲಿ ಶೋಭಿಸುವ ಭದ್ರಚಾವಡಿಯನ್ನು ಶಾಶ್ವತವಾಗುವಂತೆ ಬಲಪಡಿಸಿ ಕಾಶೀಧರ್ಮವನ್ನು ಸಾಂಗವಾಗಿ ನೆರವೇರಿಸಿದಳು, ಕಾಶೀ, ರಾಮೇಶ್ವರ, ಶ್ರೀಶೈಲ, ತಿರುಪತಿ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಸ್ಥಿರವಾಗಿ ನಡೆಯುವ

ಮತ್ತಮದಲ್ಲದುಚಿತಸ್ಥಾನಂಗಳೊಳ್ ಮಠಂಗಳಂ ಕಟ್ಟಿಸಿ ಶಿವಜಂಗಮಾರ್ಥಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತಂತುಮಲ್ಲದೆಯುಂ ತಮ್ಮ ಸೇವಕರಾದ ಶಿವಭಕ್ತಗುರಿಕಾರಶೈವ ವೈಷ್ಣವ ಬ್ರಾಹ್ಮಣ ಗುರಿಕಾರ ಮುಖದಿಂ ಮಠ ಮಾನ್ಯ ದೇವಸ್ಥಾನಾಗ್ರಹಾರಾದಿ ನಾನಾವಿಧ ದಾನಧರ್ಮಂಗಳನಾಗಿಸಿ ಶಾಶ್ವತಧರ್ಮಕೀರ್ತಿಗಳಂ ಸಂಪಾದಿಸಿ ಸದ್ಧರ್ಮದಿಂ ರಾಜ್ಯಪ್ರತಿ ಪಾಲನಂಗೈದಳಂತುಮಲ್ಲದೆಯುಂ

ಕಂ॥ ಉನ್ನತಶುಭಗುಣಗಣಸಂ
ಪನ್ನತೆಯಿಂ ಕ್ಷಾತ್ರದಾನಧರ್ಮಾದಿಗಳಿಂ
ಚನ್ನಮ್ಮಾಜಿಗೆ ಸರಿಯಹ
ಮನ್ನೆಯರಿಲ್ಲೆನಿಸಿ ರಾಜ್ಯಮಂ ರಕ್ಷಿಸಿದಳ್ ೬೪

ವ॥ ಈ ಚನ್ನಮ್ಮಾಜಿಯವರ್ ಭುವನಗಿರಿಯ ದುರ್ಗದೊಳ್ ತಮಗೆ ಪಟ್ಟಮಾದ ಶಾಲಿವಾಹನ ಶಕವರ್ಷ ೧೫೯೪ನೆಯ ವಿರೋಧಿಕೃತ್ಸಂವತ್ಸರದ ಫಾಲ್ಗುಣ ಶುದ್ಧ ೧೦ ಆರಭ್ಯ ಈಶ್ವರನಾಮ ಸಂವತ್ಸರದ ಶ್ರಾವಣ ಶುದ್ಧ ೧೪ವರೆಗೆ ವರ್ಷ ೨೫ ತಿಂಗಳು ೪ ದಿನ ೨೦ ಪರ್ಯಂತಂ ಸದ್ಧರ್ಮದಿಂ ರಾಜ್ಯಂಗೆಯ್ದು ಶಿವಸಾಯುಜ್ಯಮಂ ಪಡೆದರ್

ಹಾಗೆ ವರ್ಷಾಶನದ ಕಟ್ಟಳೆಗಳನ್ನು ಏರ್ಪಡಿಸಿದಳು, ಮತ್ತೂ ಅಲ್ಲದೆ ಉಚಿತ ಪ್ರದೇಶಗಳಲ್ಲಿ ಮಠಗಳನ್ನು ಕಟ್ಟಿಸಿ ಶಿವಜಂಗಮಾರ್ಥವಾಗಿ ಹಾಗೂ ಶಿವಾರ್ಪಣೆಯಾಗಿ ಧಾರೆಯನೆರೆದು ಶಾಶ್ವತವಾದ ಶಾಸನವನ್ನು ಬರೆಸಿಕೊಟ್ಟಳು, ಅಂತೂ ಅಲ್ಲದೆ ತಮ್ಮ ಸೇವಕರಾದ ಶಿವಭಕ್ತರ ಮುಖಂಡರೂ, ಶೈವ ಹಾಗೂ ವೈಷ್ಣವ ಬ್ರಾಹ್ಮಣ ಮುಖಂಡರೂ ಆದವರ ಮುಖಾಂತರ ಮಠ, ಮಾನ್ಯ, ದೇವಸ್ಥಾನ, ಅಗ್ರಹಾರವೇ ಮೊದಲಾದ ನಾನಾ ವಿಧವಾದ ದಾನ ಧರ್ಮಗಳನ್ನು ಕೈಗೊಂಡಳು. ಹೀಗೆ ಮಾಡಿಸಿ ಶಾಶ್ವತವಾದ ಧರ್ಮ ಹಾಗೂ ಕೀರ್ತಿಗಳನ್ನು ಗಳಿಸಿ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿದಳು, ಅಂತೂ ಅಲ್ಲದೆ ೬೪. ಉನ್ನತವಾದ ಗುಣಸಂಪನ್ನತೆಯಿಂದಲೂ, ಪರಾಕ್ರಮ ಹಾಗೂ ದಾನ-ಧರ್ಮಾದಿಗಳಿಂದಲೂ ಚೆನ್ನಮ್ಮಾಜಿಗೆ ಸರಿಸಮಾನರಾದ ರಾಜರೇ ಇಲ್ಲವೆನ್ನುವ ರೀತಿಯಲ್ಲಿ ರಾಜ್ಯವನ್ನು ರಕ್ಷಿಸಿದಳು. ಈ ಚೆನ್ನಮ್ಮಾಜಿಯವರ ಭುವನಗಿರಿಯ ದುರ್ಗದಲ್ಲಿ ತಮಗೆ ಪಟ್ಟವಾದ ಶಾಲಿವಾಹನ ಶಕವರ್ಷ ೧೫೯೪ನೆಯ ವಿರೋಧಿಕೃತ್ ಸಂವತ್ಸರದ ಫಾಲ್ಗುಣ ಶುದ್ಧ ೧೦ರ ಆರಂಭದಿಂದ ಈಶ್ವರನಾಮ ಸಂವತ್ಸರದ ಶ್ರಾವಣ ಶುದ್ಧ ೧೪ರವರೆಗೆ ವರ್ಷ ೨೫, ತಿಂಗಳು ೪ ಮತ್ತು ೨೦ ದಿನಗಳವರೆಗೂ ಸದ್ಧರ್ಮದಿಂದ ರಾಜ್ಯವನ್ನು ಪಾಲಿಸಿ ಶಿವಸಾಯುಜ್ಯವನ್ನು ಹೊಂದಿದರು.

# ದಶಮಾಶ್ವಾಸಂ

ವ|| ಆ ಚನ್ನಮ್ಮಾಜಿಯವರ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೨೦ನೆಯ ಈಶ್ವರ ಸಂವತ್ಸರದ ಶ್ರಾವಣ ಶುದ್ಧ ೧೪ಯಲ್ಲಿ ಹಿರಿಯ ಸೋಮಶೇಖರನಾಯಕರ ಪತ್ನಿ ಚನ್ನಮ್ಮಾಜಿಯವರ ಕುಮಾರರಾದ ಬಸವಪ್ಪನಾಯಕರ್ಗೆ ವೇಣುಪುರದರಮನೆಯಲ್ಲಿ ರಾಜಪಟ್ಟಂ

ಕಂ|| ಧರೆಗಧಿಕ ಚನ್ನಮಾಂಬಾ
ತರುಣಿಯ ತರುವಾಯಿಯೊಳ್ ತದಾತ್ಮಜನಹ ಭಾ
ಸುರಬಸವೇಂದ್ರಂ ರಾಜ್ಯದ
ಧುರಮಂ ತಾಂ ವಹಿಸಿ ಬಾಳ್ದನತಿಸಂಭ್ರಮದಿಂ ೧

ವ|| ಅದೆಂತೆಂದೊಡಾ ಬಸವಪ್ಪನಾಯಕಂ ತಮ್ಮ ತಂದೆ ಮರಿಯಪ್ಪಸೆಟ್ಟರ್ ಮೋನಪ್ಪಸೆಟ್ಟರ ಪುತ್ರ ನಿರ್ವಾಣಯ್ಯನವರ್ ತದನುಜ ಗುರುವಪ್ಪನವರ್ ಪ್ರಧಾನಿ ಗುರುಬಸವಪ್ಪದೇವರ್ ಗರಜಿನ ಶಾಂತಪ್ಪೊಡೆಯರ್ ಸಬ್ಬುನಿಸ ಕೋಳಿವಾಡದ ಬೊಮ್ಮರಸಯ್ಯ ಶರಜಾ ಹೂವಯ್ಯ ಚಿಟನಿಸ ಭೈರಯ್ಯ ಗಾಜನೂರ ಯಲ್ಲಪ್ಪಯ್ಯ ಆ ಲಕ್ಷ್ಮಯ್ಯ ಹೊನ್ನಾಳಿ ಸುಬ್ಬಯ್ಯ ಪಟ್ಟಿಯ ಸೇನಬೋವ ರಂಗಪ್ಪಯ್ಯ ಕೋಳಾಲದ ವೇಂಕಟೇಶಯ್ಯ ನಲ್ಲೂರ ಲಕ್ಷ್ಮೀಪತಯ್ಯ ಆ ವೆಂಕಟಪ್ಪಯ್ಯ ರಾಯಸದ ಅಶ್ವತ್ಥಯ್ಯ ಶರಜಾ ನರಸಪ್ಪಯ್ಯ ಚನ್ನಪ್ಪಯ್ಯ ಆ ನಾಗಪ್ಪಯ್ಯ ವೆಂಕಣಯ್ಯ ಚಿಕ್ಕತಿಮ್ಮಯ್ಯನ ಕೂಸಪ್ಪಯ್ಯ ಮುಂತಾದ ಮಂತ್ರಿ ಸಾಮಾಜಿಕ ನಿಯೋಗಿ ಗುರಿಕಾರಜನರ್ವೆರಸು ತಮ್ಮ ಮಾತೃ

ವ|| ಆ ಚನ್ನಮ್ಮಾಜಿಯವರ ನಂತರ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೨೦ನೆಯ ಈಶ್ವರ ಸಂವತ್ಸರದ ಶ್ರಾವಣ ಶುದ್ಧ ೧೪ರಲ್ಲಿ ಹಿರಿಯ ಸೋಮಶೇಖರನಾಯಕನ ಹೆಂಡತಿ ಚೆನ್ನಮ್ಮಾಜಿಯವರ ಮಗ ಬಸವಪ್ಪನಾಯಕರಿಗೆ ವೇಣುಪುರದ ರಾಜಧಾನಿಯ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ೧. ಭೂಮಿಗೆ ಅತಿ ಶ್ರೇಷ್ಠಳಾದ ಚನ್ನಮಾಂಬೆಯ ತರುವಾಯ ಆಕೆಯ ಮಗ ಬಸವಪ್ಪನಾಯಕನು ರಾಜ್ಯಭಾರವನ್ನು ವಹಿಸಿಕೊಂಡು ಅತ್ಯಂತ ಸಂಭ್ರಮದಿಂದ ಬಾಳಿದನು. ವ|| ಅದು ಯಾವ ರೀತಿಯೆಂದರೆ, ಬಸವಪ್ಪನಾಯಕನು ತನ್ನ ತಂದೆ ಮರಿಯಪ್ಪಶೆಟ್ಟರು, ಮೋನಪ್ಪಶೆಟ್ಟರ ಪುತ್ರ ನಿರ್ವಾಣಯ್ಯನವರು ಅವರ ತಮ್ಮ ಗುರುವಪ್ಪನವರು, ಪ್ರಧಾನಿ ಗುರುಬಸವಪ್ಪ ದೇವರು, ಗರಜಿನ ಶಾಂತಪ್ಪ ಒಡೆಯರು, ಸಬ್ಬುನೀಸ ಕೋಳಿವಾಡದ ಬೊಮ್ಮರಸಯ್ಯ, ಶರಜಾ ಹೂವಯ್ಯ, ಚಿಟನೀಸ್ ಭೈರಯ್ಯ, ಗಾಜನೂರ ಯಲ್ಲಪ್ಪಯ್ಯ, ಅದೇ ಲಕ್ಷ್ಮಯ್ಯ (ಗಾಜನೂರು ಲಕ್ಷ್ಮಯ್ಯ) ಹೊನ್ನಾಳಿ ಸುಬ್ಬಯ್ಯ, ಪಟ್ಟಿಯ ಸೇನಬೋವ ರಂಗಪ್ಪಯ್ಯ, ಕೋಳಾಲದ ವೆಂಕಟೇಶಯ್ಯ, ನಲ್ಲೂರ ಲಕ್ಷ್ಮೀಪತಯ್ಯ, ಅದೇ ವೆಂಕಪ್ಪಯ್ಯ (ನಲ್ಲೂರ ವೆಂಕಪ್ಪಯ್ಯ) ರಾಯಸದ ಅಶ್ವತ್ಥಯ್ಯ, ಶರಜಾ ನರಸಪ್ಪಯ್ಯ, ಚನ್ನಪ್ಪಯ್ಯ, ಅದೇ ನಾಗಪ್ಪಯ್ಯ, ವೆಂಕಟಯ್ಯ, ಚಿಕ್ಕತಿಮ್ಮಯ್ಯನ ಕೂಸಪ್ಪಯ್ಯ ಮುಂತಾದ ಮಂತ್ರಿಗಳು, ಸಾಮಾಜಿಕರು, ನಿಯೋಗಿಗಳು ಹಾಗೂ ಗ್ರಾಮಮುಖಂಡರನ್ನು ಕೂಡಿಕೊಂಡು ತನ್ನ

ಚನ್ನಮ್ಮಾಜಿಯವರಾಳಿ ಬರುತ್ತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಪುರಜನ ವಿದ್ವಜ್ಜನ ಬಂಧುಜನ ಸೇವಕಜನರ್ ಮುಂತಾದ ಸಮಸ್ತ ಜನರಂ ಸಂರಕ್ಷಿಸುತ್ತುಂ ಸದ್ಧರ್ಮದಿಂ ರಾಜ್ಯ ಪ್ರತಿಪಾಲನಂಗೆಯ್ಯುತ್ತುಂ ತತ್ಸಂವತ್ಸರದ ಮಾಘಮಾಸದಲ್ಲಿ ಕುಟರಹಳ್ಳಿ ಚನ್ನವೀರವೊಡೆಯರ ಮಗ ಬಸವಪ್ಪನ ಪತ್ನಿಯಾದ ಪುಟ್ಟವ್ವನ ಕುಮಾರಿಯಾದ ಚನ್ನಮ್ಮಾಜಿಯವರ್ ಹೆಬ್ಬೆಕೋಟೆ ವಿರೂಪಾಕ್ಷಯ್ಯನ ಮಗ ಶಿವಯ್ಯನ ಕುಮಾರಿ ವೀರಮ್ಮಾಜಿಯವರ್ ಹೀಗೆ ಇರ್ವರ್ ಸ್ತ್ರೀಯರಂ ವಿವಾಹವಾದರ್ ಈ ಬಸವಪ್ಪನಾಯಕರ್ಗೆ ಪ್ರಾಕು ಈ ಬಸವಪ್ಪನಾಯಕರ ಮಾತೃ ಚನ್ನಮ್ಮಾಜಿಯವರ ಕಾಲದಲ್ಲಿ ಕಾಳಯುಕ್ತಿ ಸಂವತ್ಸರದ ಮಾರ್ಗಶಿರಮಾಸದಲ್ಲಿ ವಿವಾಹಮಾದ ಸ್ತ್ರೀಯರ್ ಹೆಬ್ಬೆ ಮಹಂತಯ್ಯನ ಕುಮಾರಿ ಚನ್ನಮ್ಮಾಜಿಯವರ್ ಮಳಿಗೆ ಚನ್ನವೀರಪ್ಪನ ಕುಮಾರಿ ಚನ್ನಬಸವಮ್ಮಾಜಿಯವರ್ ಈ ಹಿರಿಯ ಬಸವಪ್ಪನಾಯಕರ್ಗೆ ಈ ಪ್ರಕಾರಂ ನಾಲ್ವರ್ ಸ್ತ್ರೀಯರ್ ಈ ನಾಲ್ಕು ಸ್ತ್ರೀಯರೊಳಗೆ ಹೆಬ್ಬೆ ಮಹಂತಯ್ಯನ ಮಗಳ್ ಚನ್ನಮ್ಮಾಜಿಯವರ್ ಹೆಬ್ಬೆ ವಿರೂಪಾಕ್ಷಯ್ಯನ ಮಗ ಶಿವಯ್ಯನ ಕುಮಾರಿಯಾದ ವೀರಮ್ಮಾಜಿಯವರ್ ಈ ಇರ್ವರ್ ಸ್ತ್ರೀಯರಲ್ಲಿಯುಂ ಸಂತಾನಮಿಲ್ಲ ಮೇಲಾದ ಇರ್ವರ್ ಸ್ತ್ರೀಯರೊಳಗೆ ಮಳಿಗೆ ಚನ್ನವೀರಪ್ಪನ ಮಗಳ್ ಚನ್ನಬಸವಮ್ಮಾಜಿಯವರ ಗರ್ಭದಲ್ಲಿ ಪ್ರಾಕು ಚನ್ನಮ್ಮಾಜಿಯವರ ಕಾಲದಲ್ಲಿ ಪ್ರಜೋತ್ಪತ್ತಿನಾಮ ಸಂವತ್ಸರದ ಕಾರ್ತೀಕ ಶುದ್ಧ ೧೦ ಯಲ್ಲಿ ಸೋಮಶೇಖರನಾಯಕರ್ ಜನಿಸಿದರೆಂದು ಪ್ರಾಕು ಚನ್ನಮ್ಮಾಜಿಯವರ್ ರಾಜ್ಯವಾಳುತ್ತಿರ್ದ ಕಾಲದಲ್ಲಿಯೇ ಒಳಗೆ ಬರೆದು ಇದೆ ಈ ಬಸವಪ್ಪನಾಯಕರ ಇನ್ನೊಬ್ಬ ಪತ್ನಿ

ತಾಯಿ ಚನ್ನಮ್ಮಾಜಿಯವರು ಆಳಿಕೊಂಡು ಬರುತ್ತಿದ್ದ ರಾಜ್ಯ, ರಾಷ್ಟ್ರ, ದೇಶ, ಕೋಶ, ಪ್ರಜೆಗಳು, ಪರಿವಾರಗಳು, ಕೋಟೆಗಳು, ಪುರಜನರು, ಪರಿಜನರು, ವಿದ್ವಾಂಸರುಗಳು ಬಂಧುಜನರು, ಸೇವಕರು ಮುಂತಾದ ಸಕಲ ಜನರನ್ನೂ ಕಾಪಾಡುತ್ತಾ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅದೇ ಸಂವತ್ಸರದ (ಈಶ್ವರ ಸಂ॥ದ) ಮಾಘಮಾಸದಲ್ಲಿ ಈ ನಾಯಕರು ಕುಟರಹಳ್ಳಿ ಚನ್ನವೀರ ಒಡೆಯರ ಮಗ ಬಸವಪ್ಪನ ಹೆಂಡತಿ ಪುಟ್ಟವ್ವನ ಗರ್ಭದಲ್ಲಿ ಹುಟ್ಟಿದ ಚನ್ನಮ್ಮಾಜಿಯವರು ಹಾಗೂ ಹೆಬ್ಬೆಕೋಟೆ ವಿರೂಪಾಕ್ಷಯ್ಯನ ಮಗ ಶಿವಯ್ಯನ ಕುಮಾರಿ ವೀರಮ್ಮಾಜಿಯವರು ಹೀಗೆ ಇಬ್ಬರು ಸ್ತ್ರೀಯರನ್ನು ವಿವಾಹವಾದರು. ಈ ಬಸವಪ್ಪನಾಯಕನಿಗೆ ಹಿಂದೆ ಚನ್ನಮ್ಮಾಜಿಯವರ ಕಾಲದಲ್ಲಿ ಹಾಗೂ ಕಾಳಯುಕ್ತಿ ಸಂವತ್ಸರದ ಮಾರ್ಗಶಿರ ಮಾಸದಲ್ಲಿ ವಿವಾಹವಾಗಿದ್ದ ಸ್ತ್ರೀಯರು ಹೆಬ್ಬೆ ಮಹಂತಯ್ಯನ ಕುವರಿ ಚನ್ನಮ್ಮಾಜಿ ಮತ್ತು ಮಳಿಗೆ ಚೆನ್ನವೀರಪ್ಪನ ಮಗಳು ಚನ್ನಬಸವಮ್ಮಾಜಿ ಈ ಪ್ರಕಾರ ನಾಲ್ವರು ಹೆಂಡಿರು. ಈ ನಾಲ್ವರು ಸ್ತ್ರೀಯರಲ್ಲಿ ಹೆಬ್ಬೆ ಮಹಂತಯ್ಯನ ಮಗಳು ಚೆನ್ನಮ್ಮಾಜಿಗೆ ಹಾಗೂ ಹೆಬ್ಬೆ ವಿರೂಪಾಕ್ಷಯ್ಯನ ಮಗ ಶಿವಯ್ಯನ ಕುವರಿ ವೀರಮ್ಮಾಜಿಗೆ - ಈ ಇಬ್ಬರಿಗೂ ಮಕ್ಕಳಿಲ್ಲ, ಉಳಿದ ಹೆಂಡರಲ್ಲಿ ಮಳಿಗೆ ಚನ್ನವೀರಪ್ಪನ ಮಗಳು ಚನ್ನಬಸವಮ್ಮಾಜಿಯವರ ಗರ್ಭದಲ್ಲಿ ಈ ಮೊದಲು ಚನ್ನಮ್ಮಾಜಿಯವರ ಕಾಲದಲ್ಲಿ ಹೇಳಿದಂತೆ ಪ್ರಜೋತ್ಪತ್ತಿ ಸಂವತ್ಸರದ ಕಾರ್ತೀಕ ಶುದ್ಧ ೧೦ರಲ್ಲಿ ಸೋಮಶೇಖರನಾಯಕರು ಹುಟ್ಟಿದರೆಂದು ಹಿಂದೆ ಚೆನ್ನಮ್ಮಾಜಿಯವರು ರಾಜ್ಯವನ್ನಾಳುತ್ತಿದ್ದ ಭಾಗದ ವಿವರಣೆಯಲ್ಲಿಯೇ ಬರೆದಿರುತ್ತದೆ. ಈ ಬಸವಪ್ಪನಾಯಕನ ಇನ್ನೊಬ್ಬ ಹೆಂಡತಿ ಕುಟರಹಳ್ಳಿ ಚನ್ನವೀರ ಒಡೆಯರ

ಕುಟರಹಳ್ಳಿ ಚನ್ನವೀರವೊಡೆಯರ ಮಗ ಬಸವಪ್ಪನ ಪತ್ನಿಯಾದ ಪುಟ್ಟವ್ವನ ಮಗಳಾದ ಚನ್ನಮ್ಮಾಜಿಯವರ ಗರ್ಭದಲ್ಲಿ ವಿಕ್ರಮ ಸಂವತ್ಸರದ ವೈಶಾಖ ಶುದ್ಧ ೧ ಯಲ್ಲಿ ವೀರಭದ್ರ ನಾಯಕರ್ ಜನಿಸದರ್ ಈ ಹಿರಿಯ ಬಸವಪ್ಪನಾಯಕರ್ಗೆ ಹೀಗೆ ಇರ್ವರ್ ಕುಮಾರರ್ ಅವರೊಳಗೆ ಜ್ಯೇಷ್ಠಪುತ್ರನಾದ ಸೋಮಶೇಖರನಾಯಕರ್ಗೆ ಚಿತ್ರಭಾನು ಸಂವತ್ಸರದ ವೈಶಾಖ ಶುದ್ಧ ೩ ಯಲ್ಲಿ ಚಿಲನೂರ ವೀರಪ್ಪನ ಮಗಳ್ ವೀರಮ್ಮಾಜಿಯವರ್ ಸೂರಿರಾಯನ ಕಲ್ಲಪ್ಪನ ಮಗಳ್ ಬಸವಮ್ಮಾಜಿಯವರ್ ಇಂತಿರ್ವರ್ ಸ್ತ್ರೀಯರಂ ವಿವಾಹಮಂ ಮಾಡಿದರ್ ಮುಂದೆ ಈ ಸೋಮಶೇಖರನಾಯಕರ್ ತಾವು ಸ್ವಾತಂತ್ರ್ಯದಲ್ಲಿ ರಾಜ್ಯವಾಳುತ್ತಿರ್ದ ಪ್ಲವ ಸಂವತ್ಸರದ ಫಾಲ್ಗುಣ ಶುದ್ಧ ೩ ಯಲ್ಲಿ ಮೋನಪ್ಪಶೆಟ್ಟರ ಮಗ ನಿರ್ವಾಣಯ್ಯನವರ ಪತ್ನಿ ಭದ್ರಮ್ಮನವರ ಕುಮಾರಿ ನೀಲಮ್ಮಾಜಿಯವರಂ ವಿವಾಹಮಾದರ್ ಈ ಹಿರಿಯ ಬಸವಪ್ಪನಾಯಕರ ಕುಮಾರ ಸೋಮಶೇಖರ ನಾಯಕರ್ಗೆ ಈ ಮೂವರ್ ಸ್ತ್ರೀಯರ್. ಈ ಮೂವರ್ ಸ್ತ್ರೀಯರೊಳಂ ಸಂತಾನಮಿಲ್ಲ. ಮತ್ತಮಾ ಬಸವಪ್ಪನಾಯಕಂ ತಮ್ಮ ಕನಿಷ್ಠಪುತ್ರನಾದ ವೀರಭದ್ರನಾಯಕರ್ಗೆ ಸರ್ವಧಾರಿ ಸಂವತ್ಸರದ ಮಾರ್ಗಶಿರ ಬಹುಳ ೫ ರಲ್ಲಿ ಸಾಗರದ ವಾರದ ಚೆನ್ನಬಸವಪ್ಪನ ಕುಮಾರಿ ಚನ್ನಮ್ಮಾಜಿಯವರ್ ಸೂರಿರಾಯನ ಕಲ್ಲಪ್ಪನ ಚಿಕ್ಕ ಕುಮಾರಿ ಮಲ್ಲಮ್ಮಾಜಿಯವರ್ ಹೀಗೆ ಇರ್ವರ್ ಸ್ತ್ರೀಯರಂ ವಿವಾಹಮಂ ಮಾಡಿದರ್ ಈ ಇರ್ವರ್ ಸ್ತ್ರೀಯರೊಳಗೆ ವಾರದ ಚನ್ನಬಸವಪ್ಪನ ಮಗಳ್ ಚನ್ನಮ್ಮಾಜಿಯವರ ಗರ್ಭದಲ್ಲಿ ಸಂತಾನವಿಲ್ಲ ಸೂರಿರಾಯಲ್ಲ ಕಲ್ಲಪ್ಪನ ಮಗಳ್ ಮಲ್ಲಮ್ಮಾಜಿಯವರ ಗರ್ಭದಲ್ಲಿ ಮುಂದೆ ಈ ಬಸವಪ್ಪನಾಯಕರ ಕುಮಾರ ಸೋಮಶೇಖರನಾಯಕರ್ ರಾಜ್ಯವಾಳುತ್ತಿದ್ದ ಕಾಲದಲ್ಲಿ

ಮಗ ಬಸವಪ್ಪನ ಹೆಂಡತಿ ಹಾಗೂ ಪುಟ್ಟವ್ವನ ಕುವರಿ ಚನ್ನಮ್ಮಾಜಿಯವರ ಗರ್ಭದಲ್ಲಿ ವಿಕ್ರಮ ಸಂವತ್ಸರದ ವೈಶಾಖ ಶುದ್ಧ ೧ರಲ್ಲಿ ವೀರಭದ್ರನಾಯಕನು ಜನಿಸಿದನು. ಈ ರೀತಿ ಹಿರಿಯ ಬಸವಪ್ಪನಾಯಕನಿಗೆ ಇಬ್ಬರು ಮಕ್ಕಳು. ಜ್ಯೇಷ್ಠಕುಮಾರ ಸೋಮಶೇಖರನಾಯಕನಿಗೆ ಚಿತ್ರಭಾನು ಸಂವತ್ಸರದ ವೈಶಾಖ ಶುದ್ಧ ೩ರಲ್ಲಿ ಚಿಲನೂರು ವೀರಪ್ಪನ ಮಗಳು ವೀರಮ್ಮಾಜಿ ಹಾಗೂ ಸೂರಿರಾಯನ ಕಲ್ಲಪ್ಪನ ಮಗಳು ಬಸವಮ್ಮಾಜಿ ಈ ಇಬ್ಬರನ್ನು ಮದುವೆ ಮಾಡಿದರು. ಹಾಗೂ ಮುಂದೆ ಈ ಸೋಮಶೇಖರ ನಾಯಕನು ತಾನು ಸ್ವತಂತ್ರವಾಗಿ ರಾಜ್ಯವಾಳುತ್ತಿದ್ದಾಗ ಪ್ಲವ ಸಂವತ್ಸರದ ಫಾಲ್ಗುಣ ಶುದ್ಧ ೩ರಲ್ಲಿ ಮೋನಪ್ಪಶೆಟ್ಟರ ಮಗ ನಿರ್ವಾಣಯ್ಯನವರ ಪತ್ನಿ ಭದ್ರಮ್ಮನಲ್ಲಿ ಹುಟ್ಟಿದ ನೀಲಮ್ಮಾಜಿಯವರನ್ನು ವಿವಾಹವಾದನು. ಈ ಹಿರಿಯ ಬಸವಪ್ಪನಾಯಕರ ಮಗ ಸೋಮಶೇಖರನಾಯಕರಿಗೆ ಈ ರೀತಿ ಮೂವರು ಹೆಂಡತಿಯರು. ಈ ಮೂವರಿಗೂ ಸಂತಾನವಿಲ್ಲ. ಮತ್ತೆ ಆ ಬಸವಪ್ಪನಾಯಕನು ತನ್ನ ಚಿಕ್ಕ ಮಗ ವೀರಭದ್ರನಾಯಕನಿಗೆ ಸರ್ವಧಾರಿ ಸಂವತ್ಸರದ ಮಾರ್ಗಶಿರ ಬಹುಳ ೫ರಲ್ಲಿ ಸಾಗರದ ವಾರದ ಚನ್ನಬಸವಪ್ಪನ ಕುವರಿ ಚನ್ನಮ್ಮಾಜಿಯವರು ಹಾಗೂ ಸೂರಿರಾಯನ ಕಲ್ಲಪ್ಪನ ಚಿಕ್ಕಮಗಳು ಮಲ್ಲಮ್ಮಾಜಿಯವರು-ಹೀಗೆ ಇಬ್ಬರು ಕನ್ನಿಕೆಯರನ್ನು ತಂದು ವಿವಾಹಮಾಡಿದನು. ಈ ಇಬ್ಬರು ಸ್ತ್ರೀಯರಲ್ಲಿ ವಾರದ ಚನ್ನಬಸವಪ್ಪನ ಕುಮಾರಿ ಚನ್ನಮ್ಮಾಜಿಯವರ ಗರ್ಭದಲ್ಲಿ ಸಂತಾನವಿಲ್ಲ. ಸೂರಿರಾಯನ ಕಲ್ಲಪ್ಪನ ಮಗಳು ಮಲ್ಲಮ್ಮಾಜಿಯವರ ಗರ್ಭದಲ್ಲಿ ಈ ಹಿಂದೆ ಬಸವಪ್ಪನಾಯಕರ ಮಗ ಸೋಮಶೇಖರನಾಯಕನು ರಾಜ್ಯವಾಳುತ್ತಿದ್ದ

ಪ್ಲವ ಸಂವತ್ಸರದ ಮಾರ್ಗಶಿರ ಶುದ್ಧ ೩ಯಲ್ಲಿ ಈ ಬಸವಪ್ಪನಾಯಕರ್ ಜನಿಸಿದರ್ ಇದು ಚೆನ್ನಮ್ಮಾಜಿಯವರ ಕುಮಾರರಾದ ಹಿರಿಯ ಬಸವಪ್ಪನಾಯಕರ ಸಂತಾನಪರಂಪರಾವಿವರಣಂ ಇನ್ನು ಪ್ರಕೃತಕಥಾಸಂದರ್ಭಮೆಂತೆನಲಾ ಹಿರಿಯಬಸವಪ್ಪನಾಯಕಂ ಸದ್ಧರ್ಮದಿಂ ರಾಜ್ಯಪ್ರತಿಪಾಲನಂ ಗೆಯ್ಯುತ್ತುಮಿರ್ದು ತನಗೆ ಪಟ್ಟಮಾದ ಈಶ್ವರ ಸಂವತ್ಸರ ಫಾಲ್ಗುಣ ಮಾಸದಲ್ಲಿ ತಮ್ಮ ಮಾತೃ ಚೆನ್ನಮ್ಮಾಜಿಯವರ್ ಪುತ್ರಿಯ ಭಾವದಿಂದ ಸಾಕಿದ ಆ ಚೆನ್ನಮ್ಮಾಜಿಯವರ ತಂಗಿ ಮರಿಯಮ್ಮಾಜಿ ಯೆಂಬ ಕುಮಾರಿಯಂ ಮೋನಪ್ಪ ಶೆಟ್ಟರ ಮಗ ನಿರ್ವಾಣಯ್ಯಂಗಿತ್ತತ್ಯಂತ ಸಂಭ್ರಮದಿಂ ವಿವಾಹಮಂ ರಚಿಸಿ ಸುಖಮಿರುತ್ತುಮಿರ್ದು

ಕಂ|| ಕಡುಗಲಿಗಳಾರೆಯರ್ಕಳ
ಪಡೆಯಂ ಕಾಲ್ದೆಗೆಸಿ ಖಳರಿಗಾಶ್ರಯಮೆನಿಪಾ
ಕಡಲೆಡೆಯೊಳೆಸೆವ ನವಿಲೆಯ
ಗಡಮಂ ತದ್ವಸವಭೂಮಿಪಂ ಸಾಧಿಸಿದಂ ೨

ವ|| ಇಂತು ನಿರ್ವಾಣಯ್ಯನ ಸಹೋದರನಾದ ಚೆನ್ನಬಸವಪ್ಪನೊಡನೆ ಸೇನಾಸಮೂಹಮಂ ತೆರಳ್ಚಿ ಕಳುಹಿ ಕಡಲೆಡೆಯೊಳೆಸೆವ ನವಿಲೆಗಡಮಂ ಸಾಧಿಸಿಯಾ ಗಡಕ್ಕೆ ಬಸವರಾಜದುರ್ಗಮೆಂದು ಸ್ವನಾಮಾಂಕಿತಮಂ ರಚಿಸಿ ಬಲ್ಪುಗೈಸಿದನಂತುಮಲ್ಲದೆ ಆನಂದಪುರದಲ್ಲಿ

ಕಂ|| ಕಲಿಶೇಖುಕುಂದನಂ ಕೊಳು
ಗುಳದೆಡೆಯೊಳ್ ಕೆಡಹಿ ದೇಶಕೋಶವನಲೆವಾ
ಖಳವೇಷಧಾರಿಯಂ ಯಮ
ನಿಳಯವನುರೆ ಪುಗಿಸಿ ರಾಜ್ಯಮಂ ರಕ್ಷಿಸಿದಂ ೩

ಸಮಯದಲ್ಲಿ ಹಾಗೂ ಪ್ಲವ ಸಂವತ್ಸರದ ಮಾರ್ಗಶಿರ ಶುದ್ಧ ೩ರಲ್ಲಿ ಈ ಬಸವಪ್ಪನಾಯಕನು ಜನಿಸಿದನು. ಇದು ಚೆನ್ನಮ್ಮಾಜಿಯವರ ಮಗ ಹಿರಿಯ ಬಸವಪ್ಪನಾಯಕರ ಸಂತಾನ ವಂಶಪರಂಪರಾ ವಿವರಣೆಯಾಗಿದೆ. ಇನ್ನು ಪ್ರಕೃತ ಈ ಕಥಾಸಂದರ್ಭದಲ್ಲಿ ವಿವರಿಸಿದಂತೆ ಹಿರಿಯ ಬಸವಪ್ಪನಾಯಕನು ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಾ ತನಗೆ ಪಟ್ಟವಾದ ಈಶ್ವರ ಸಂವತ್ಸರದ ಫಾಲ್ಗುಣಮಾಸದಲ್ಲಿ ತನ್ನ ತಾಯಿ ಚೆನ್ನಮ್ಮಾಜಿಯವರು ಪುತ್ರಿಯ ಭಾವದಿಂದ ಸಾಕಿದ ಆ ಚೆನ್ನಮ್ಮಾಜಿಯವರ ತಂಗಿ ಮರಿಯಮ್ಮಾಜಿಯೆಂಬ ಕುಮಾರಿಯನ್ನು ಮೋನಪ್ಪಶೆಟ್ಟರ ಮಗ ನಿರ್ವಾಣಯ್ಯನಿಗೆ ಕೊಟ್ಟು ಅತ್ಯಂತ ಸಂಭ್ರಮದಿಂದ ವಿವಾಹವನ್ನು ಮಾಡಿಸಿದರು. ಹೀಗೆ ಸುಖದಿಂದಿರುವಾಗ- ೨. ಸಮರ್ಥರಾದ ಆರೆಯರ ಸೈನ್ಯವನ್ನು ಓಡಿಸಿ ದುಷ್ಟರಿಗೆ ಆಶ್ರಯವಾಗಿದ್ದ ಆ ಸಮುದ್ರತೀರದಲ್ಲಿ ಶೋಭಿಸುವ ನವಿಲೆಯ ಕೋಟೆಯನ್ನು ಆ ಬಸವಪ್ಪನಾಯಕನು ಸಾಧಿಸಿದನು. ವ|| ಈ ರೀತಿ ನಿರ್ವಾಣಯ್ಯನ ಸಹೋದರನಾದ ಚೆನ್ನಬಸವಪ್ಪನ ಸಹಿತ ಸೇನೆಯನ್ನು ಕೂಡಿಸಿ ಕಳುಹಿಸಿ ಸಮುದ್ರದ ತೀರದಲ್ಲಿ ಶೋಭಿಸುವ "ನವಿಲೆಗಡ" (ನವಿಲೆಕೋಟೆ)ವನ್ನು ವಶಪಡಿಸಿಕೊಂಡನು. ಆ ಕೋಟೆಗೆ ಬಸವರಾಜದುರ್ಗವೆಂದು ತನ್ನ ಹೆಸರನ್ನಿಟ್ಟು ಬಲಪಡಿಸಿದನು. ಅಂತೂ ಅಲ್ಲದೆ ಆನಂದಪುರದಲ್ಲಿ-೩. ಶೇಖುಕುಂದ ಎಂಬ ಪರಾಕ್ರಮಿಯನ್ನು ಯುದ್ಧದಲ್ಲಿ ಸೋಲಿಸಿದ್ದಲ್ಲದೆ ಮಾರುವೇಷದಿಂದ ದೇಶಕೋಶಗಳನ್ನು ಬಿಟ್ಟು ಅಲೆದಾಡುತ್ತಿದ್ದ ಆತನನ್ನು ಯಮಲೋಕಕ್ಕೆ

ವ|| ಮತ್ತಮದಲ್ಲದೆ

ಕಂ|| ಅರ್ಕಲಗೋಡವರಿಳೆಯನ
ವರ್ಕಳ್ ಮಾಯಾವಿಗಳ್ ವಶಂಗೆಯ್ದಿರೆ ಕೊಂ
ಡರ್ಕಲಗೋಡನವರ್ಗಿ
ತ್ತರ್ಕನಿಭಂ ಬಸವಭೂಪನುರೆ ಜಸವಡೆದಂ ೪

ವ|| ಮತ್ತಮದಲ್ಲದೆ

ಕಂ|| ಇಳೆಯಧಿಪರೆಲ್ಲರಿಂಗ
ಗ್ಗಳನೆನಿಸುತೆ ತಾಮ್ರಮುಖರ ವಶಮಾಗಿಹ ಪೆ
ರ್ಬೊಳೆಯಪೊನ್ನೂರ ಕೋಂಟೆಯ
ನಳವಿನೊಳಂ ಕೊಂಡು ಸಾಸಮಂ ಮಿಗೆ ಮೆರೆದಂ ೫

ವ|| ಮತ್ತಮದಲ್ಲದೊಂದವಸರದೊಳ್ ಮಲೆಯಾಳದವರ್ ಮಾಯಾವಿಗಳ ಸೈನ್ಯವಂ ಸಹಾಯುವಮಂ ಮಾಡಿಕೊಂಡೈದಿ ಚಂದ್ರಗಿರಿಯ ಕೋಂಟೆಯಂ ವೇಢೈಸಿರಲ್ ಗರಜಿನ ಬಸವಪ್ಪದೇವರೊಡನೆ ಸೈನ್ಯಸಮೂಹಮಂ ತೆರಳ್ಚಿಸಿ ಕಳುಹಿ ಮಾಯಾವಿಗಳ ಸೈನ್ಯಮಂ ಸಂಹರಿಸಿ ಮದೋದ್ರೇಕದಿಂದಿದಿರ್ಚಿದ ಮಲೆಯಾಳರಂ ನಿಗ್ರಹಂಗೆಯ್ಸಿ ಚಂದ್ರಗಿರಿಯ ಕೋಂಟೆಯಂ ಸ್ವಾಧೀನಂಗೆಯ್ದು ಮಾಯಾವಿಗಳ್ ಮುಂಕೊಂಡ ವಸುಧಾರೆ ಕೋಂಟೆಯಂ ಮಗುಳ್ದಾಜಿರಂಗದೊಳ್ ಸ್ವಾಧೀನಂಗೆಯ್ದು ಬಲ್ಪುಗೆಯ್ಸಿ ಉಭಯಸಂಸ್ಥಾನಗಳ್ಗಮನ್ಯೋನ್ಯ ವಿರೋಧಂ ಪುಟ್ಟಿ ವರ್ತಿಸದಂತು

ಕಳುಹಿಸಿ ರಾಜ್ಯವನ್ನು ಕಾಪಾಡಿದನು. ವ|| ಮತ್ತೂ ಅಲ್ಲದೆ ೪. ಅರಕಲಗೂಡಿನವರ ಭೂಮಿಯನ್ನು ಮಾಯಾವಿಗಳು ಮೈಸೂರಿನವರು ವಶಮಾಡಿಕೊಂಡಿದ್ದರು. ಅವರಿಂದ ವಶಪಡಿಸಿಕೊಂಡು ಅರಕಲಗೂಡನ್ನು ಮೊದಲಿನವರಿಗೆ ಕೊಟ್ಟು ಸೂರ್ಯಸಮಾನನಾದ ಬಸವಭೂಪನು ಕೀರ್ತಿಯನ್ನು ಪಡೆದನು. ವ|| ಮತ್ತೂ ಅಲ್ಲದೆ, ೫. ಬಸವಪ್ಪನಾಯಕನು ರಾಜರಲ್ಲೆಲ್ಲಾ ಶ್ರೇಷ್ಠನಾಗಿದ್ದುಕೊಂಡು ಕೆಂಪುಮುಖದ ತುರುಕರ ವಶದಲ್ಲಿದ್ದ ಹಿರಿಯ ಹೊಳೆಹೊನ್ನೂರು ಕೋಟೆಯನ್ನು ಪರಾಕ್ರಮದಿಂದ ವಶಪಡಿಸಿಕೊಂಡು ಸಾಹಸವನ್ನು ಮೆರೆದನು. ವ|| ಮತ್ತೂ ಅಲ್ಲದೆ ಒಂದು ಸಂದರ್ಭದಲ್ಲಿ ಮಲೆಯಾಳದವರು ಮಾಯಾವಿಗಳ (ಮೈಸೂರಿನವರ) ಸೈನ್ಯದ ಸಹಾಯವನ್ನು ಪಡೆದುಕೊಂಡು ಬಂದು ಚಂದ್ರಗಿರಿಯ ಕೋಟೆಯನ್ನು ಆಕ್ರಮಿಸಿದರು. ಇದನ್ನು ಎದುರಿಸಲು ಗರಜಿನ ಬಸವಪ್ಪದೇವರೊಡನೆ ಸೇನಾಸಮೂಹವನ್ನು ಹೊರಡಿಸಿ ಕಳುಹಿಸುತ್ತಾ ಮಾಯಾವಿಗಳ (ಮೈಸೂರವರ) ಸೈನ್ಯವನ್ನು ನಾಶಮಾಡಿದನು. ಮದಾತಿರೇಕದಿಂದ ಬಂದು ಎದುರುಬಿದ್ದ ಮಲೆಯಾಳಿಗಳನ್ನು ಸೋಲಿಸಿ, ಚಂದ್ರಗಿರಿಯ ಕೋಟೆಯನ್ನು ಸ್ವಾಧೀನಪಡಿಸಿಕೊಂಡನು. ಮೈಸೂರಿನವರು ಮೊದಲು ವಶಮಾಡಿಕೊಂಡಿದ್ದ ವಸುಧಾರೆ ಕೋಟೆಯನ್ನು ಯುದ್ಧ ರಂಗದಲ್ಲಿ ತಿರುಗಿ ಸ್ವಾಧೀನಪಡಿಸಿಕೊಂಡು ಅದನ್ನು ಬಲಪಡಿಸಿದನು. ಈ ಉಭಯ ಸಂಸ್ಥಾನಗಳಿಗೂ ಆಗಾಗ್ಗೆ ವಿರೋಧ ಹುಟ್ಟಿದಂತೆ ಮಾಡಲು ನಿಯೋಗಿಯಾದ ಶರಜಾ ನಾಗಪ್ಪಯ್ಯನ ಮುಖಾಂತರ ಅನ್ಯೋನ್ಯವಾಗಿರುವುದಕ್ಕೋಸ್ಕರ ಅನುಕೂಲಕರವಾಗುವಂತೆ

ನಿಯೋಗಿ ಶರಜಾ ನಾಗಪ್ಪಯ್ಯನ ಮುಖದೊಳ್ ಕ್ರಿಯಾಪೂರ್ವಕಮಾಗಿ ಭಾಷಾಪತ್ರಿಕೆಯಂ ರಚಿಯಿಸಿ ನಿರ್ವೈರಮಂ ನಿಮಿರ್ಚಿಸಿದನಂತುಮಲ್ಲದೆಯುಂ

ಕಂ॥ ಕಡುಗಲಿಗಳಪ್ಪ ಮೊಗಲರ್
ಕಡುಹಿಂ ಕೊಂಡಾನೆವಟ್ಟಿ ಮಹದೇವಪುರಂ
ಜಡೆಯ ಹೊನ್ನಾಳಿಯೊಪ್ಪುವ
ಮಿಡಿಜೆಯ ಕೋಂಟೆಗಳ ಮಗುಳ್ದವಂ ಸಾಧಿಸಿದಂ ೬

ವ॥ ಇಂತು ಮೊಗಲರಧೀನಮಾದ ಪರಿಸ್ಥರಣಂಗಳಂ ಸ್ವಾಧೀನಗೈದನಂತುಮಲ್ಲದೆಯುಂ

ಕಂ॥ ಕರಿತುರಗಪತ್ತಿಸಹಿತಂ
ದುರುಶೌರ್ಯೋದ್ರೇಕದಿಂದಮೈದಿದ ಯವನೇ
ಶ್ವರ ಸವಣೂರ ನವಾಬನ
ಗರುವಿಕೆಯಂ ತೀರ್ಚಿ ರಣದೆ ಮುರಿದೋಡಿಸಿದಂ ೭

ವ॥ ಇಂತು ಬಲಶಾಲಿಯಾದ ಸವಣೂರ ನವಾಬನಂ ಗುರುವಪ ಮಂತ್ರಿಯ ಮುಖದಿಂ ಯುದ್ಧರಂಗದೊಳ್ ಪಿಂದೆಗೆಸಿ ಸುಖಸಂಕಥಾ ವಿನೋದದಿಂ ರಾಜ್ಯಪ್ರತಿಪಾಲನಂಗೆಯ್ಯು ತಿರ್ದನಂತುಮಲ್ಲದೆಯುಂ

ಕಂ॥ ಮೆರೆವ ಶಿವತತ್ವರತ್ನಾ
ಕರಮೆಂದೆನಿಪ್ಪಾ ಸುಭಾಷಿತಸುರದ್ರುಮಮೆಂ
ಬುರುತರಕಾವ್ಯದ್ವಯಮಂ
ವಿರಚಿಸಿ ಸದ್ಯಶವನಾಂತನಾ ಬಸವನೃಪಂ ೮

ವ॥ ಇಂತು ಸಂಸ್ಕೃತಗ್ರಂಥನಿಬಂಧದ್ವಯಮಂ ವಿರಚಿಸಿ ಮತ್ತಮದಲ್ಲದನಂತರಂ ಗೀರ್ವಾಣ ಕರ್ಣಾಟಕಭಾಷೆಗಳಿಂ

ಒಡಂಬಡಿಕೆಯ ಕರಾರು ಒಂದನ್ನು ರಚನೆಮಾಡಿಸಿ ವೈರವು ಬಾರದಂತೆ ಏರ್ಪಡಿಸಿದನು. ಅಂತೂ ಅಲ್ಲದೆ, ೬. ಕಡುಗಲಿಗಳಾದ ಮೊಗಲರು ಪರಾಕ್ರಮದಿಂದ ತೆಗೆದುಕೊಂಡಿದ್ದ ಆನೆವಟ್ಟಿ, ಮಹದೇವಪುರ, ಜಡೆಹೊನ್ನಾಳಿ, ಮಿಡಿಜೆಗಳಲ್ಲಿರುವ ಕೋಟೆಗಳನ್ನು ಮರಳಿ ಪಡೆದುಕೊಂಡನು. ವ॥ ಈ ರೀತಿ ಮೊಗಲರ ವಶದಲ್ಲಿದ್ದ ಕೋಟೆಗಳನ್ನು ವಶಪಡಿಸಿಕೊಂಡನು. ಅಂತೂ ಅಲ್ಲದೆ, ೭. ಬಸವಪ್ಪನಾಯಕನು ಆನೆ ಕುದುರೆ ಕಾಲಾಳು ಸಹಿತವಾಗಿ ಪರಾಕ್ರಮಾತಿಶಯದಿಂದ ಎದುರಾದ ಯವನೇಶ್ವರನಾದ ಸವಣೂರು ನವಾಬನ ಗರ್ವವನ್ನು ಮುರಿದು ಯುದ್ಧದಲ್ಲಿ ಸೋಲಿಸಿ ಓಡಿಸಿದನು. ವ॥ ಈ ರೀತಿ ಬಲಶಾಲಿಯಾದ ಸವಣೂರು ನವಾಬನನ್ನು ಗುರುವಪ್ಪ ಮಂತ್ರಿಯ ಮೂಲಕ ರಣರಂಗದಲ್ಲಿ ಹಿಂದಕ್ಕೆ ಓಡಿಸಿ ಸುಖದಿಂದಲೂ ವಿನೋದದಿಂದಲೂ ರಾಜ್ಯವನ್ನು ಪರಿಪಾಲಿಸುತ್ತಿದ್ದನು, ಅಂತೂ ಅಲ್ಲದೆ. ೮. ಆ ಬಸವಪ್ಪನಾಯಕನು ಶಿವತತ್ವರತ್ನಾಕರ ಮತ್ತು ಸುಭಾಷಿತ ಸುರದ್ರುಮ ಎಂಬ ಎರಡು ಕಾವ್ಯಗಳನ್ನು ರಚಿಸಿ ಸತ್ಕೀರ್ತಿಯನ್ನು ಪಡೆದನು. ವ॥ ಈ ರೀತಿ ಸಂಸ್ಕೃತದಲ್ಲಿ ಎರಡು ಮಹಾಪ್ರಬಂಧಗ್ರಂಥಗಳನ್ನು ರಚಿಸಿದನು,

ಕಂ|| ಅನುಪಮಸೂಕ್ತಿಸುಧಾಕರ
ಮೆನಿಪಾ ವಸ್ತುಕಸುಕಾವ್ಯಮಂ ವಿರಚಿಸಿ ಸೂ
ರಿನಿಕರಕಲ್ಪದ್ರುಮನೆಂ
ದೆನಿಪೀ ಬಿರುದಾಂತು ಮೆರೆದನಾ ಬಸವನೃಪಂ ೯

ವ|| ಮತ್ತಮದಲ್ಲದೆ

ಕಂ|| ದಾಸೋಹಂ ಪುರವರ್ಗಂ
ಭಾಸುರಮಠಮಾನ್ಯ ಸತ್ರಮೆಂಬಿವು ಮೊದಲಾ
ದಾ ಸಕಲಧರ್ಮಮಂ ಚಿ
ತ್ಕೋಶಂ ಬಸವಾವನೀಶನುರೆ ವಿರಚಿಸಿದಂ ೧೦

ವ|| ಮತ್ತಮದಲ್ಲದೆ ಪ್ರತಿವರ್ಷದೊಳ್ ಕಾರ್ತಿಕ ಮಾಸದೊಳ್ ಸೋಮವಾರಂಗಳೊಳ್ ಜಂಗಮಪಾದಪೂಜೆಯಂ ಮಾಳ್ಪ ಪದ್ಧತಿಯಂ ರಚಿಸಿ ಸಕಲಜನಹಿತಾರ್ಥಂ ವೇಣುಪುರೀನದಿಗೆ ಶಿಲಾಸೇತುವಂ ಕಟ್ಟಿಸಿ ಪರಮಹಂಸಪಕೀರರ್ಗಂ ಪ್ರತಿದಿನದೊಳ್ ರೊಟ್ಟಿಗಳನೀವ ಧರ್ಮಮುಮಂ ಮತ್ತಂ ಪಸಿದವರ್ಗನ್ನಮಂ ಶಿಶುಗಳ್ಗೆ ಪಾಲ್ಬೆಣ್ಣೆಗಳನೀವಂತು ಕಟ್ಟಳೆಯುಮಂ ರಚಿಸಿ ಮತ್ತಂ ತಮ್ಮ ಮಾತೃ ಚನ್ನಮ್ಮಾಜಿಯವರ ತದ್ದಿವಸದೊಳ್ ಪ್ರತಿವರ್ಷ ಶ್ರಾವಣ ಶುದ್ಧ ೧೪ ಯ ದಿವಸದೊಳನೇಕ ಜಂಗಮಾತಿಥಿ ಪರಮಹಂಸ ಪಕೀರ ರಾಮದಾಸ ಜೋಗಿ ಪರದೇಶಿ ಮುಂತಾದ ಜನರ್ಗನ್ನದಾನ ವಸ್ತ್ರದಾನಂಗಳಂ ಮಾಳ್ಪಂತು ಸ್ಥಿರಮಾದ ಕಟ್ಟಳೆಯಂ ರಚಿಯಿಸಿ ಮತ್ತಂ ಸ್ವರಾಷ್ಟ್ರಂಗಳೊಳಕಾಲಚಕ್ರದೊಳೆತ್ತುವುತ್ತಾರಪಗುದಿಯನೆತ್ತದಂತು ನಿಯಾಮಕಮಂ ರಚಿಸಿ ಕೆಳದಿಯ

ಮತ್ತು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ೯. ಅಸಮಾನವಾದ 'ಸೂಕ್ತಿ ಸುಧಾಕರ' ಎನ್ನುವ ವಸ್ತುಕ ರೀತಿಯ ಕಾವ್ಯವನ್ನು ರಚಿಸಿದ ಬಸವಪ್ಪನಾಯಕನು 'ಸೂರಿನಿಕರ ಕಲ್ಪದ್ರುಮ' (ವಿದ್ವಾಂಸರ ಸಮೂಹಕ್ಕೆ ಕಲ್ಪವೃಕ್ಷದಂತೆ ಇರುವವನು) ಎಂಬ ಬಿರುದನ್ನು ಹೊಂದಿ ಮೆರೆದನು, ವ|| ಮತ್ತೆ ಅದಲ್ಲದೆ ೧೦. ದಾಸೋಹ, ಪುರವರ್ಗ, ಮಠ, ಮಾನ್ಯ, ಛತ್ರ ಮುಂತಾದ ಎಲ್ಲಾ ಧರ್ಮವನ್ನೂ ಚಿತ್ಕೋಶನಾದ (ವಿದ್ವಾಂಸನಾದ) ಬಸವರಾಜನು ರಚಿಸಿದನು. ವ|| ಮತ್ತೆ ಅದಲ್ಲದೆ ಪ್ರತಿವರ್ಷದಲ್ಲೂ ಕಾರ್ತೀಕ ಮಾಸದ ಸೋಮವಾರದಲ್ಲಿ ಜಂಗಮರ ಪಾದಪೂಜೆಯನ್ನು ಮಾಡುವ ಪದ್ಧತಿಯನ್ನು ಏರ್ಪಡಿಸಿದನು. ಎಲ್ಲಾ ಜನರ ಹಿತಕ್ಕಾಗಿ ವೇಣುಪುರದ ನದಿಗೆ ಶಿಲಾಸೇತುವೆಯನ್ನು ಕಟ್ಟಿಸಿದನು. ಪರಮಹಂಸರುಗಳಿಗೆ, ಪಕೀರರುಗಳಿಗೆ ಪ್ರತಿದಿನಗಳಲ್ಲೂ ರೊಟ್ಟಿಯನ್ನು ಕೊಡುವ ಧರ್ಮವನ್ನೂ, ಹಸಿದವರಿಗೆ ಅನ್ನವನ್ನೂ ಮತ್ತು ಶಿಶುಗಳಿಗೆ ಹಾಲುಬೆಣ್ಣೆಗಳನ್ನು ಕೊಡುವ ನೇಮವನ್ನೂ ರಚಿಸಿ ಅದರಂತೆ ನಡೆಯಲು ಕಟ್ಟುಪಾಡುಮಾಡಿದನು. ತಮ್ಮ ತಾಯಿ ಚೆನ್ನಮ್ಮಾಜಿಯವರ ವಾರ್ಷಿಕದಿನವೆನಿಸಿದ ಶ್ರಾವಣ ಶುದ್ಧ ೧೪ನೆಯ ದಿವಸದಲ್ಲಿ ಪ್ರತಿವರ್ಷವೂ ಅನೇಕ ಜಂಗಮಾತಿಥಿಗಳು, ಪರಮಹಂಸರು, ಪಕೀರರು, ರಾಮದಾಸರು, ಜೋಗಿಗಳು, ಪರದೇಶಿಗಳು ಮುಂತಾದ ಜನರುಗಳಿಗೆ ಅನ್ನದಾನ ಹಾಗೂ ವಸ್ತ್ರದಾನಗಳನ್ನು ಮಾಡುವಂತೆ ಶಾಶ್ವತವಾದ ಕಟ್ಟಳೆಗಳನ್ನು ಮಾಡಿಸಿದನು. ಸ್ವರಾಷ್ಟ್ರಗಳಲ್ಲಿ ಬರಗಾಲ

ವೀರಭದ್ರ ದೇವಸ್ಥಾನದ ಶಿಲಾಮಯದ ಕೆಲಸಗತಿಯಂ ಸಂಪೂರ್ಣಮಾಗಿಸಿ ಮತ್ತಂ ತಮ್ಮ ಸೇವಕ ಗುರಿಕಾರ ಹರಿಕಾರ ಮುಖದಿಂದೆಯುಮಗ್ರಹಾರಾದಿ ಧರ್ಮಂಗಳನಾಗಿಸಿ ಶಾಶ್ವತಧರ್ಮ ಕೀರ್ತಿಗಳನುಪಾರ್ಜಿಸಿದನಂತುಮಲ್ಲದೆಯುಂ

ಕಂ॥ ವಿಲಸತ್ಸಮಸ್ತಶಾಸ್ತ್ರಂ
ಗಳನುರೆ ಸಂಗ್ರಹಿಸಿ ಸರ್ವವಿದ್ವಜ್ಜನಸಂ
ಕುಲಮಂ ರಕ್ಷಿಸಿ ಧರ್ಮದೊ
ಳಿಳೆಯಂ ಪಾಲಿಸಿದನೊಲ್ದು ಬಸವಮಹೀಶಂ ೧೧

ವ॥ ಈ ಬಸವಪ್ಪನಾಯಕರ್ ತಮಗೆ ಪಟ್ಟವಾದ ಶಾಲಿವಾಹನ ಶಕ ವರ್ಷ ೧೬೨೦ ನೆಯ ಈಶ್ವರ ಸಂವತ್ಸರದ ಶ್ರಾವಣ ಶುದ್ಧ ೧೪ಯ ಆರಭ್ಯ ಜಯಸಂವತ್ಸರದ ಆಶ್ವಯುಜ....... ವರ್ಷ ೧೭ ತಿಂಗಳು ೪ ದಿನ ೧೧ ಪರ್ಯಂತಂ ರಾಜ್ಯವಾಳಿದರ್.

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೩೬ ನೆಯ ಜಯಸಂವತ್ಸರದ ಪುಷ್ಯ ಬಹುಳ ೧೦ಯಲ್ಲಿ ಬಸವಪ್ಪನಾಯಕರ ಜೇಷ್ಠಪುತ್ರರಾದ ಸೋಮಶೇಖರನಾಯಕರ್ಗೆ ವೇಣುಪುರದರಮನೆಯಲ್ಲಿ ರಾಜಪಟ್ಟಂ ಈ ಸೋಮಶೇಖರನಾಯಕರ್ ರಾಜ್ಯವಾಳಿದ ವಿವರಣಂ ಪದ್ಯರೂಪದಿಂ ಪೇಳ್ವೆನದೆಂತೆಂದೊಡೆ

ಕಂ॥ ಶ್ರೀಮದ್ಬಸವಮಹೀಶಲ
ಲಾಮಾನ್ವಯದುಗ್ಧವಾರ್ಧಿಪೂರ್ಣಶಶಾಂಕಂ
ಸೋಮಶೇಖರನೃಪಂ ರಿಪು
ಭೀಮ ಬಳಿಕೆಸೆವ ರಾಜ್ಯರಮೆಗರಸಾದಂ ೧೨

ಸಂದರ್ಭದಲ್ಲಿ ವಿಶೇಷವಾದ ತೆರಿಗೆಗಳನ್ನು ಎತ್ತದ ಹಾಗೆ ನೇಮಕ ಮಾಡಿದನು. ಕೆಳದಿಯ ವೀರಭದ್ರದೇವರ ದೇವಸ್ಥಾನದ ಶಿಲಾಮಯವಾದ ಕೆಲಸಗಳನ್ನು ತ್ವರಿತಗತಿಯಿಂದ ಸಂಪೂರ್ಣ ಮಾಡಿದನು. ಸೇವಕರು, ಮುಖಂಡರು, ಹರಿಕಾರರು ಮುಂತಾದವರ ಮುಖಾಂತರ ಅಗ್ರಹಾರವೇ ಮೊದಲಾದ ಶಾಶ್ವತ ಧರ್ಮಗಳನ್ನು ನಡೆಸಿ ಕೀರ್ತಿಯನ್ನು ಗಳಿಸಿದನು. ಅಂತೂ ಅಲ್ಲದೆ, ೧೧. ಎಲ್ಲಾ ಶಾಸ್ತ್ರಗಳನ್ನೂ ಸಂಗ್ರಹಿಸಿ, ಸಕಲ ವಿದ್ವಜ್ಜನ ಸಮೂಹವನ್ನು ಕಾಪಾಡಿ ಬಸವರಾಜನು ಧರ್ಮದಿಂದ ಭೂಮಿಯನ್ನು ಪ್ರೀತಿಯಿಂದ ರಕ್ಷಿಸಿದನು. ವ॥ ಈ ಬಸವಪ್ಪನಾಯಕನು ತನಗೆ ಪಟ್ಟಾಭಿಷೇಕವಾದ ಶಾಲಿವಾಹನ ಶಕವರ್ಷ ೧೬೨೦ನೆಯ ಈಶ್ವರ ಸಂವತ್ಸರದ ಶ್ರಾವಣಶುದ್ಧ ೧೪ರ ಆರಂಭದಿಂದ ಜಯಸಂವತ್ಸರದ ಆಶ್ವಯುಜ.... ವರ್ಷ ೧೭ ತಿಂಗಳು ೫ ದಿನ ೧೧ರವರೆಗೂ ರಾಜ್ಯವಾಳಿದನು. ವ॥ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೩೬ನೆಯ ಜಯಸಂವತ್ಸರದ ಪುಷ್ಯಬಹುಳ ೧೦ರಲ್ಲಿ ಬಸವಪ್ಪನಾಯಕರ ಹಿರಿಯಮಗ ಸೋಮಶೇಖರನಾಯಕನಿಗೆ ವೇಣುಪುರದ ಅರಮನೆಯಲ್ಲಿ ರಾಜ್ಯದ ಪಟ್ಟಾಭಿಷೇಕ ವಾಯಿತು. ಈ ಸೋಮಶೇಖರನಾಯಕನು ರಾಜ್ಯವಾಳಿದ ವಿವರಣವನ್ನು ಪದ್ಯರೂಪದಿಂದ ಹೇಳುವೆನು. ಅದು ಯಾವ ರೀತಿಯೆಂದರೆ ೧೨. ಅರಸರಲ್ಲಿ ತಿಲಕಪ್ರಾಯನಾದ ಬಸವಪ್ಪನಾಯಕನ ವಂಶವೆಂಬ ಹಾಲಿನ ಸಮುದ್ರಕ್ಕೆ

ವ|| ಅದೆಂತೆಂದೊಡೆ ಮೋನಪ್ಪಸೆಟ್ಟರ ಮಗ ನಿರ್ವಾಣಯ್ಯನವರ್ ಗುರುವಪ್ಪ ಹುಜೂರು ಪಾರಪತ್ಯಗಾರ ಗರಜಿನ ಶಾಂತಪ್ಪೊಡೆಯರ್ ಎಡವ ಸಿದ್ಧಪ್ಪ ಮಹದೇವಪುರದ ದೇವಪ್ಪ ಸುಬೇದಾರ ಸಿದ್ದಪ್ಪ ಕೋಹಿಲೆ ಲಿಂಗಪ್ಪ ಬೆಳ್ಳಾರೆ ಚನ್ನಪ್ಪಯ್ಯ ಕರಣಿಕ ಕೋಳಾಲದ ವೆಂಕಟೇಶಯ್ಯ ಗಾಜನೂರ ಲಕ್ಷ್ಮರಸಯ್ಯ ಆರಗದ ಪರಮೇಶ್ವರಯ್ಯ ಬಾರಕೂರ ಸೂರಯ್ಯ ಬಾಪೂರ ಮಲ್ಲಪ್ಪಯ್ಯ ರಾಯಸದ ಸೂರಯ್ಯ ಅಶ್ವತ್ಥಯ್ಯ ಗಂಗಾಧರಯ್ಯ ಸುಬ್ಬನೀಸ ಕೃಷ್ಣಪ್ಪಯ್ಯ ಕೋಳಿವಾಡದ ಬೊಮ್ಮರಸಯ್ಯನವರ ಮಗ ತಮ್ಮರಸಯ್ಯ ಮುಂತಾದ ಮಂತ್ರಿ ಮನ್ನೆಯ ನಿಯೋಗಿ ಸಾಮಾಜಿಕಜನರ್ಗೆ ತತ್ತದ್ಯೋಗ್ಯತಾನುಸಾರವರಿದುಚಿತಾಧಿಕಾರಂಗಳನಿತ್ತು ತಮ್ಮ ಜನಕ ಬಸವಪ್ಪನಾಯಕರಾಳಿಬರುತ್ತಿರ್ದ ರಾಜ್ಯರಾಷ್ಟ್ರ ದೇಶಕೋಶ ಪ್ರಜೆ ಪರಿವಾರ ಪರಿಸ್ತರಣ ಪುರಜನ ಬಂಧುಜನ ಸೇವಕಜನರಂ ಸಂರಕ್ಷಿಸುತ್ತುಂ ತಮ್ಮ ಅನುಜ ವೀರಭದ್ರನಾಯಕರಂ ಪ್ರೀತಿಯಿಂ ನಡೆಸಿಕೊಳುತ್ತುಂ ಮಾವ ನಿರ್ವಾಣಯ್ಯನವರರ್ಗೆ ಸರ್ವಾಧಿಕಾರವನಿತ್ತು ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರಲಾ ಕಾಲದೊಳಿತ್ತಂ

ಕಂ|| ವೈರಿಗಳುಪಟಳದಿಂ ಸವ
ಣೂರ ನವಾಬಂ ಸ್ವದೇಶದೊಳ್ ನಿತ್ತರಿಸ
ಲ್ಕಾರದೆ ಸಹಾಯಮಂ ತಾಂ
ಹಾರುತೆ ರಾಯಸವನ್ನೆದೆ ಬರೆದಟ್ಟಲೊಡಂ ೧೩

ಪೂರ್ಣಚಂದ್ರನಂತಿರುವ ಹಾಗೂ ಶತ್ರುಗಳಿಗೆ ಭಯಂಕರನಾದ ಸೋಮಶೇಖರನಾಯಕನು ಆಮೇಲೆ ಶೋಭಿಸುವ ರಾಜ್ಯಲಕ್ಷ್ಮಿಗೆ ಅರಸನಾದನು. ವ|| ಅದು ಯಾವ ರೀತಿ ಎಂದರೆ - ಮೋನಪ್ಪಶೆಟ್ಟಿರ ಮಗ ನಿರ್ವಾಣಯ್ಯನವರು, ಗುರುವಪ್ಪ, ಹುಜೂರು ಪಾರುಪತ್ಯಗಾರ ಗರಜಿನ ಶಾಂತಪ್ಪ ಒಡೆಯರು, ಎಡವ ಸಿದ್ದಪ್ಪ, ಮಹದೇವಪುರದ ದೇವಪ್ಪ, ಸುಬೇದಾರ ಸಿದ್ದಪ್ಪ, ಕೋಹಿಲೆ ಲಿಂಗಪ್ಪ, ಬೆಳ್ಳಾರೆ ಚೆನ್ನಪ್ಪಯ್ಯ, ಕರಣಿಕ ಕೋಳಾಲದ ವೆಂಕಟೇಶಯ್ಯ, ಗಾಜನೂರ ಲಕ್ಷ್ಮರಸಯ್ಯ, ಆರಗದ ಪರಮೇಶ್ವರಯ್ಯ, ಬಾರಕೂರ ಸೂರಯ್ಯ, ಬಾಪೂರ ಮಲ್ಲಪ್ಪಯ್ಯ, ರಾಯಸರ ಸೂರಯ್ಯ, ಅಶ್ವತ್ಥಯ್ಯ, ಗಂಗಾಧರಯ್ಯ, ಸಬ್ಬುನೀಸ ಕೃಷ್ಣಪ್ಪಯ್ಯ ಕೋಳಿವಾಡದ ಬೊಮ್ಮರಸಯ್ಯನವರ ಮಗ ತಮ್ಮರಸಯ್ಯ ಮುಂತಾದ ಮಂತ್ರಿ ಸಾಮಂತರುಗಳು, ನಿಯೋಗಿಜನರು, ಸಾಮಾಜಿಕ ಜನರಿಗೆ ಆಯಾ ಜನರ ಯೋಗ್ಯತೆಯನ್ನು ಅರಿತು ಉಚಿತ ಅಧಿಕಾರಗಳನ್ನು ಕೊಟ್ಟನು. ಈ ರೀತಿ ತಮ್ಮ ತಂದೆ ಆಳಿಕೊಂಡು ಬರುತ್ತಾ ಇದ್ದ ರಾಜ್ಯ, ರಾಷ್ಟ್ರ, ದೇಶ, ಕೋಶ, ಪ್ರಜೆ, ಪರಿವಾರ, ಕೋಟೆ, ಪುರಜನ, ಬಂಧುಜನ, ಸೇವಕಜನ ಮುಂತಾದವರನ್ನು ಕಾಪಾಡುತ್ತಾ, ತಮ್ಮ ಸಹೋದರ ವೀರಭದ್ರನಾಯಕರನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಮಾವ ನಿರ್ವಾಣಯ್ಯನವರಿಗೆ ಸಕಲ ಅಧಿಕಾರಗಳನ್ನೂ ಕೊಟ್ಟು ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದರು. ಹೀಗಿರುವ ಕಾಲದಲ್ಲಿ ಈ ಕಡೆ. ೧೩. ಸವಣೂರ ನವಾಬನು ಶತ್ರುಗಳ ಕಾಟದಿಂದ ತನ್ನ ದೇಶದಲ್ಲಿ ನೆಲೆಸಲು ಅಸಮರ್ಥನಾಗಿ ಬಸವಪ್ಪನಾಯಕನ ಸಹಾಯವನ್ನು ಬಯಸಿ

ಕೋಹಿಲೆಯ ಸಿದ್ಧಪ್ಪನ ಕೂ
ಡಾಹವನಿಸ್ಸೀಮ ಸುಭಟರಂ ತೆರಳಿಸಿ ಸ
ನ್ನಾಹದೊಳ್ಳೆದಿದ ಶತ್ರು
ವ್ಯೂಹವನಂಕದೊಳೆ ಸದೆದು ಮುರಿದೋಡಿಸುತುಂ ೧೪

ಕುಜನರನಲೆದು ಬಳಿಕ್ಕಂ
ನಿಜಪದದೊಳ್ ತನ್ನಬಾಬನಂ ನಿಲಿಸಿ ನೃಪ
ವ್ರಜದೊಳ್ ಮಿಗೆ ಪರಮೋನ್ನತ
ಭುಜಬಲಮಂ ಮೆರೆದನಾ ನೃಪಾಲಕವರ್ಯಂ ೧೫

ವ।। ಆ ಸವಣೂರು ಸಂಸ್ಥಾನಮಂ ಕ್ರಮದಿಂ ಮುನ್ನಾಳ್ದ ವಿಜಾಪುರದ ಪಾತುಶಾಹರ ಬಗೆ : ವಜೀರ ರಗಟೀ ಬಲೂಲಖಾನಂ ಅವನ ಮಗಂ ಚಿಕ್ಕಬಲೂಲಖಾನಂ ಅವನ ಮಗನಬ್ದುಲ್ಲರಹೋಯೆಂಬವಂ ಡಿಳ್ಳಿಯವಂರಗಜೇಬ ಪಾತುಶಾಹಂ ವಿಜಾಪುರದ ಸಂಸ್ಥಾನಮಂ ಸ್ವಾಧೀನಂಗೈದನಂತರಮಾ ಅಬ್ದುಲ್ಲರಹೋಯೆಂಬವಂಗೆ ದಿಲಾಲನೆಂದು ಪ್ರತಿನಾಮವಿತ್ತು ನೀಂ ಮಲೆನಾಡು ಮುಂತಾದ ದಾಕ್ಷಿಣಾತ್ಯ ರಾಜ್ಯದ ಮೇಲುಪರಾಂಬರಿಕೆಯೊಳಿಹುದೆಂದು ನಿಯಾಮಕಂ ಗೆಯ್ದು ನಿಲಿಸಲವಂ ತತ್ಸವಣೂರೊಳ್ ಬಲಿಷ್ಠನಾಗಿ ನಿಂದಂ ಆ ದಿಲಾಲನ ಮಕ್ಕಳ್ ಅಬ್ದುಲ್ಲ ಮಹಮುದ್ದ ಕರೀಮ ಸತಾರ ಗಫಾರರೆಂದು ನಾಲ್ವರ್ ಅವರೊಳ್ ಗಫಾರನ ಮಗಂ ಮದೀಜಂ ಇಂತಿವರ್ ಸವಣೂರನಾಳ್ದವರ್ ಇಂತು ನೆಗಳ್ತೆವೆತ್ತ ಸವಣೂರ ನವಾಬನ ವಂಶಸಂಜಾತರೊಳ್

ರಾಯಸವನ್ನು ಬರೆದು ಕಳುಹಿಸಿದನು. ೧೪. ಆಗ ಸೋಮಶೇಖರನಾಯಕನು ಕೋಹಿಲೆಯ ಸಿದ್ದಪ್ಪನ ಸಂಗಡ ಯುದ್ಧದಲ್ಲಿ ನಿಸ್ಸೀಮರಾದ ಸೈನಿಕರನ್ನು ಕಳುಹಿಸಿ, ಸಾಕಷ್ಟು ಸಿದ್ಧತೆಯಿಂದ ಬಂದಿದ್ದ ಶತ್ರುವ್ಯೂಹವನ್ನು ಯುದ್ಧದಲ್ಲಿ ಹೊಡೆದು, ಸೋಲಿಸಿ, ಓಡಿಸಿದನು. ೧೫. ದುರ್ಜನರನ್ನು ಓಡಿಸಿದ ಬಳಿಕ ಸವಣೂರ ನವಾಬನನ್ನು ಆತನ ಸ್ಥಾನದಲ್ಲಿಯೇ ಮತ್ತೆ ನಿಲ್ಲಿಸಿ ರಾಜಶ್ರೇಷ್ಠನಾದ ಸೋಮಶೇಖರನಾಯಕನು ರಾಜಸಮೂಹದಲ್ಲಿಯೇ ಅತಿಹೆಚ್ಚಿನ ಭುಜಬಲವನ್ನು ಮೆರೆದನು. ವ।। ಆ ಸವಣೂರು ಸಂಸ್ಥಾನವನ್ನು ಕ್ರಮವಾಗಿ ಹಿಂದೆ ಆಳಿದ ಬಿಜಾಪುರದ ಬಾದಷಹರ ವಿವರ :- ಮಂತ್ರಿ ರಗಟೀ ಬಲೂಲಖಾನ್, ಅವನ ಮಗ ಚಿಕ್ಕ ಬಲೂಲ್‌ಖಾನ್, ಅವನ ಮಗ ಅಬ್ದುಲ್‌ರಹೋ. ಡಿಲ್ಲಿಯ ಔರಂಗಜೇಬ್ ಬಾದಷಹನು ಬಿಜಾಪುರ ಸಂಸ್ಥಾನವನ್ನು ಸ್ವಾಧೀನಪಡಿಸಿಕೊಂಡ ನಂತರ ಈ ಅಬ್ದುಲ್ ರಹೋ ಎಂಬವನಿಗೆ ದಿಲಾಲ್ ಎಂದು ಪ್ರತಿನಾಮವಿಟ್ಟು ಮಲೆನಾಡು ಮುಂತಾದ ದಕ್ಷಿಣದ ಪ್ರಾಂತದ ಮೇಲುಸ್ತುವಾರಿಯಲ್ಲಿ ಇರತಕ್ಕುದೆಂದು ನೇಮಕ ಮಾಡಿದನು. ಈ ನವಾಬನು ಸವಣೂರಿನಲ್ಲಿ ಬಲಿಷ್ಠನಾಗಿ ನಿಂತನು. ಆ ದಿಲಾಲನ ಮಕ್ಕಳು ಅಬ್ದುಲ್ ಮಹಮೂದ್, ಕರೀಮ್, ಸತಾರ್ ಮತ್ತು ಗಫಾರ್ ಎಂಬುದಾಗಿ ನಾಲ್ವರಿದ್ದರು. ಅವರಲ್ಲಿ ಗಫಾರನ ಮಗ ಮದೀಜ. ಈ ರೀತಿ ಇವರುಗಳು ಸವಣೂರನ್ನು ಆಳಿದರು. ಹೀಗೆ ಪ್ರಸಿದ್ಧಿಪಡೆದ ಸವಣೂರು ನವಾಬನ ವಂಶದಲ್ಲಿ ಹುಟ್ಟಿದ ಅಬ್ದುಲ್ ಮಹಮೂದ್‌ಖಾನನ ಶತ್ರುವರ್ಗವನ್ನು ಓಡಿಸಿ, ಸೋಲಿಸಿ ಆ ಸಂಸ್ಥಾನವನ್ನು

ಅಬ್ದುಲ್ಲಮಹಮುದ್ದಖಾನನ ಶತ್ರುವರ್ಗಮವಾರೆದೆಗೆಸಿ ಸಂಸ್ಥಾನದೊಳ್ ನಿಲಿಸಿ ಸವಣೂರ ನವಾಬಂ ಕಳುಪಿದ ಪತ್ತೆಲಷ್ಕರಿಯೆಂಬಾನೆ ತುರುಗ ವುಚಿತ ವುಡುಗೊರೆಗಳಂ ಪರಿಗ್ರಹಿಸಿ ಪರಮ ಪ್ರಖ್ಯಾತಿಯಂ ಪಡೆದನಂತುಮಲ್ಲದೆಯುಂ

ಶಾ॥ವಿ॥ ಸೀಮಾಲೋಕನದಿಚ್ಛೆಯಿಂ ಜಡೆಯಕೈತಂದಲ್ಲಿರಲ್ ಕೇಳ್ದತಿ
ಪ್ರೇಮಂಬೆತ್ತು ಸಮಸ್ತಸೈನ್ಯಸಹಿತಂ ಪುತ್ರಾದ್ಯರಿಂ ಕೂಡಿಯುಂ
ತಾಮೆಳ್ತಂದು ಸದಾಶಿವೋರ್ವಿಪತಿಯಂದಾ ಸೋದೆಯಿಂ ಬೇಟಗೊಂ
ಡಾ ಮಾನೋನ್ನತಸೋಮಶೇಖರಧರಾಭೃಚ್ಛೌರ್ಯ ಮಾರ್ತಾಂಡನಂ ೧೬

ವ॥ ಇಂತು ಸೋದೆಸದಾಶಿವನಾಯಕಂ ತಾನ್ಯೆತಂದು ಗುಡ್ಡಣಾಪುರದ ಕೆರೆಯ ಬಯಲೊಳ್ ಭೇಟಿಯಂ ಕೊಂಡನಂತರಂ

ಕಂ॥ ಕರೆದೊಯ್ದು ವಾನವಾಸೀ
ಪುರದೊಳ್ ಮಜ್ಜನಸುಭೋಜನಾದ್ಯುಪಚಾರೋ
ತ್ಕರದಿಂ ಮನ್ನಿಸಿ ದಿವ್ಯಾಂ
ಬರಭೂಷಣಗಜಹಯಾದಿಗಳನೊಸೆದಿತ್ತಂ ೧೭

ಅವನಂಗೀಕರಿಸಿ ಬಳಿ
ಕ್ಕವನಿಪಕುಲತಿಲಕ ಸೋಮಶೇಖರಭೂಪಂ
ತವೆ ಸೀಮೆಯನಭಿವೀಕ್ಷಿಸು
ತವಿರಳಹರ್ಷದೊಳೆ ವೇಣುಪುರಮಂ ಪೊಕ್ಕಂ ೧೮

ಕಾಪಾಡಿದನು. ಸವಣೂರು ನವಾಬನು ಕಳುಹಿಸಿಕೊಟ್ಟ ಪತ್ತೆ ಲಷ್ಕರಿ ಎಂಬ ಆನೆ, ಕುದುರೆ ಮುಂತಾದ ಉಚಿತವಾದ ಉಡುಗೊರೆಗಳನ್ನು ಸ್ವೀಕರಿಸಿ ಪರಮ ಕೀರ್ತಿಯನ್ನು ಪಡೆದನು. ಅಂತೂ ಅಲ್ಲದೆ, ೧೬. ಸೋಮಶೇಖರನಾಯಕನು ತನ್ನ ರಾಜ್ಯದ ಸೀಮೆಯನ್ನು ನೋಡುವ ಆಸೆಯಿಂದ ಜಡೆಗೆ ಬಂದು ನೆಲೆಸಲು, ಈ ವಾರ್ತೆಯನ್ನು ಕೇಳಿದ ಸೋದೆಯ ಸದಾಶಿವನಾಯಕನು ಅತ್ಯಂತ ಪ್ರೀತಿಯಿಂದ ಸಮಸ್ತ ಸೈನ್ಯಸಹಿತನಾಗಿ ಮಕ್ಕಳು ಮುಂತಾದ ಬಂಧುವರ್ಗದವರನ್ನು ಕೂಡಿಕೊಂಡು, ಸೋದೆಯಿಂದ ಹೊರಟುಬಂದು ಪರಾಕ್ರಮದಲ್ಲಿ ಸೂರ್ಯನಂತಿರುವ, ಅತ್ಯಂತ ಗೌರವಶಾಲಿಯಾದ ಸೋಮಶೇಖರನಾಯಕನನ್ನು ಭೇಟಿ ಮಾಡಿದನು. ವ॥ ಈ ರೀತಿ ಸೋದೆಯ ಸದಾಶಿವನಾಯಕನು ತಾನು ಬಂದು ಗುಡ್ಡಣಾಪುರದ ಕೆರೆಯ ಬಯಲಿನಲ್ಲಿ ಭೇಟಿಯನ್ನು ಕೈಕೊಂಡನಂತರ ೧೭. ಸ್ವಾದಿಯ ಸದಾಶಿವ ನಾಯಕನು ಸೋಮಶೇಖರನಾಯಕನನ್ನು ಬನವಾಸಿಗೆ ಕರೆದುಕೊಂಡು ಹೋಗಿ ಸ್ನಾನ, ಊಟ ಮುಂತಾದ ಉಪಚಾರಗಳಿಂದ ಮನ್ನಿಸಿ ದಿವ್ಯವಾದ ಬಟ್ಟೆಗಳು, ಆಭರಣಗಳು, ಆನೆ, ಕುದುರೆ ಮುಂತಾದುವುಗಳನ್ನು ಕಾಣಿಕೆಯಾಗಿ ಪ್ರೀತಿಯಿಂದ ಕೊಟ್ಟನು. ೧೮. ರಾಜರ ಸಮೂಹಕ್ಕೆ ತಿಲಕಪ್ರಾಯನಾದ ಸೋಮಶೇಖರ ನಾಯಕನು ಆ ಎಲ್ಲಾ ಉಡುಗೊರೆ ಗಳನ್ನು ಸ್ವೀಕರಿಸಿ, ಸೀಮೆಯನ್ನೆಲ್ಲಾ ನೋಡಿ ಸಂತೋಷದಿಂದ ಬಿದರೂರಿಗೆ

ವ|| ಮತ್ತಮದಲ್ಲದೆ ಹೇವಿಳಂಬಿ ಸಂವತ್ಸರದೊಳ್

ಕಂ|| ದುರುಳ ಮೈಸೂರ ಮನ್ನೆಯ
ನುರುಮದಮಂ ತವಿಸವೇಳ್ಕೆನುತ್ತಗ್ರಜನೊಳ್
ಗುರುವಪನಾಳೋಚನೆಯಂ
ವಿರಚಿಸಿ ತದ್ರಾಜಕಾರ್ಯಮಂ ಮಿಗೆ ತೊಡಗಲ್ ೧೯

ಬಲವತ್ಸಹಾಯಮಿಲ್ಲದೆ
ನೆಲೆಗೊಳದೀ ಕಾರ್ಯಮಾಸಹಾಯಕೆ ತಮ್ಮಿಂ
ತೊಲಗದೆ ನಿಲ್ವೊಡಮೊರ್ಮೆಗೆ
ಬಿಳಿಜೋಡಿಯ ಬರಮನಾಯಕನೆ ಮಿಗೆ ಪಾತ್ರಂ ೨೦

ಎಂದಾಳೋಚನೆಯಂ ತಾಂ
ಕುಂದದೆ ನಿಶ್ಚಯಿಸಿ ರಾಯಸದ ಸೂರಪಗಾ
ಪೊಂದಿಗೆಯನೊರೆದು ಬೀಳ್ಕೊಡೆ
ಮುಂದಾಗಿರಲಾತನೈದಿ ಚಿಂತನಕಲ್ಲಂ ೨೧

ಬರಮಣನಾಯಕನಂ ಕಂ
ಡೊರೆಯಲ್ಕೀ ರಾಜಕಾರ್ಯದಿರವನೊಡಂಬ
ಟ್ಟಿರುವವೊಲಂತಾಗಲ್ಕೆಂ
ದೊರೆಯಲ್ ದಿಟಮೆಂದು ಸೂರಪಂ ಬರೆದಟ್ಟಲ್ ೨೨

ಕುಟಿಲನೆಂದರಿಯದಾ ನುಡಿ
ದಿಟಮೆಂದೇ ಬಗೆದು ನಂಬಿ ಗುರುವಪನಾಗಲ್
ಕಟಕಸಹಿತೈದಿ ಬೇಟಿಯ
ನಟನೆಯೊಳಂ ಕೊಂಡು ಚನ್ನಗಿರಿಗಡಿಯೆಡೆಯೊಳ್ ೨೩

ಬಂದನು. ವ|| ಮತ್ತೆ ಅದಲ್ಲದೆ ಹೇವಿಳಂಬಿ ಸಂವತ್ಸರದಲ್ಲಿ ೧೯. ದುಷ್ಟನಾದ ಮೈಸೂರರಸನ ಮದವನ್ನು ತಗ್ಗಿಸಬೇಕೆಂದು ಮಂತ್ರಿ ಗುರುವಪ್ಪನೊಡನೆ ಆಲೋಚನೆ ಮಾಡಿ ಆ ರಾಜಕಾರ್ಯಕ್ಕೆ ತೊಡಗಿದನು. ೨೦. "ಈ ಕಾರ್ಯವು ಬಲವಂತರ ಸಹಾಯವಿಲ್ಲದೆ ಸಾಧ್ಯವಾಗಲಾರದು. ನಮ್ಮ ಜೊತೆಗೆ ಎಂದೆಂದೂ ಸ್ಥಿರವಾಗಿ ನಿಲ್ಲುವ ಬಿಳಿಜೋಡಿಯ ಭರಮನಾಯಕನು ನಮಗೆ ಸಹಾಯ ಮಾಡಲು ತಕ್ಕವನಾಗಿದ್ದಾನೆ." ೨೧. ಹೀಗೆಂದು ಯೋಚಿಸಿದ ಸೋಮಶೇಖರನಾಯಕನು ರಾಯಸದ ಸೂರಪ್ಪನಿಗೆ ಆ ಯೋಜನೆಯನ್ನು ವಿವರಿಸಿ ಕಳುಹಿಸಿ ಕೊಡಲು ಆತನು ಚಿಂತನಕಲ್ಲಿಗೆ ಹೋದನು. ೨೨. ಭರಮಣ್ಣ ನಾಯಕನನ್ನು ಕಂಡು ಈ ರಾಜಕಾರ್ಯವನ್ನು ಹೇಳಿದನು. ಇದಕ್ಕೆ ಒಡಂಬಟ್ಟವನ ಹಾಗೆ ಅವನು 'ಆಗಲಿ' ಎಂದಾಗ ಇದೇ ಸತ್ಯವೆಂದು ಸೂರಪ್ಪನು ಬರೆದು ಕಳುಹಿಸಿದನು. ೨೩. ಇದನ್ನು ಮೋಸವೆಂದು ತಿಳಿಯದೆ ಸತ್ಯವೆಂದೇ ತಿಳಿದು ನಂಬಿದ ಗುರುವಪ್ಪನು

ವ|| ಇಂತು ಬೇಟಿಗೊಂಡು ಮುಂತಣ ರಾಜಕಾರ್ಯವಿಷಯಂಗಳನೊರೆದಿದಕ್ಕೆ ನೀಂ ಸಹಾಯಮಮಂ ವಿರಚಿಸಿದೆಯಾದೊಡೆ ಸೂರಯ್ಯನ ಕೂಡೊರೆದು ಕಳುಪಿದಂತೆ ನಿನ್ನ ಕಜ್ಜಂಗಳೇ ನಿರ್ದೋಷಂ ವಹಿಸಿ ನಡೆಸಿದಪೆವಾವುದರಲ್ಲಿಯುಂ ನಾವಿರ್ವರುಮೇಕಮತರಾಗಿ ಮಾಯಾವಿಗಳ ಮದನಿವಾರಣಂ ಮಾಳ್ಪೆವೆಂದುಸಿರಲೀ ಮಂತ್ರಾಳೋಚನೆಯಂ ಕೇಳ್ದದಕ್ಕೆ ಮಾರುತ್ತರಂಗೊಡದಾ ಬರಮನಾಯಕನತ್ಯಂತದುರಾಸೆ ಪುಟ್ಟೆ ವಕ್ರೋಕ್ತಿಗಳಂ ನುಡಿದು ವಾಗ್ವಾದದಿಂ ಕೆಣಕಿ ಗಜಬಜಮಂ ಪುಟ್ಟಿಸಿ ಮುನ್ನಂ ಮಾಡಿದ ತಹಬಂದು ಕಟ್ಟುಗಳ್ ಮುರಿದುವೆಂಬ ಭಾವಮಂ ಮಾಡಿ ಮುನ್ನೊರೆದಂತಸಿಬಲದಿಂ ತನ್ನೆಡೆಗೈತಂದ ಗುರುವಪಮಂತ್ರಿಯುಂ ವೇಢೈಸವೇಳ್ಕುಂದು ಯೋಚಿಪುದರೊಳ್ ಸಂಧಿ ವಿಸಂಚಿಸಲಾಗಳಾ ಅವನ ಕಪಟವೃತ್ತಿಯಂ ಗುರುವಪ ಮಂತ್ರಿಯರಿದಾಗಣ ವೇಲೆಯೊಳವನೇನೇನನಪೇಕ್ಷಿಸಿ ನುಡಿದನದಕಂತಾಗಲಿದೇತರ ಕಜ್ಜಮೆಂದೊಡಂಬಟ್ಟಾಗತನಾಗಿ ತತ್ಕಿರಾತಪತಿಯೊಳ್ ಮಧುರವಚನಮಂ ನುಡಿದಧಿಕಮಾದುಡುಗೊರೆ ವುಚಿತಗಳನಿತ್ತು ಪಿರಿದು ಮನ್ನಿಸಿ ಕಳುಹಿ ತಾಂ ಪಿಂದೆಗೆದು ಬಂದು ಕತಿಪಯದಿನಂಗಳ್ ಪೋಗಲೊಡನೆ

ಕಂ|| ಧುರಧೀರಂ ಚಿಂತನಕ<br>
ಲ್ಲೆರೆಯಂ ಬಳಿಜೋಡಿಬರಮನಾಯಕನೆಸೆವಾ<br>
ಹರಪುರದರಸನ ಸುಪರಿ<br>
ಸ್ತರಣಗಳಂ ಕೊಂಡು ದಾಳಿಯಿಡಲತಿಚಲದಿಂ ೨೪

ಸೈನ್ಯಸಹಿತನಾಗಿ ಹೋಗಿ ಚನ್ನಗಿರಿಯ ಗಡಿಪ್ರದೇಶದಲ್ಲಿ ಭೇಟಿಯಾದನು. ವ|| ಈ ರೀತಿ ಭೇಟಿಯಾಗಿ ಮುಂದಿನ ರಾಜಕಾರ್ಯ ವಿಷಯಗಳನ್ನು ಹೇಳಿ, ನೀನು ಸಹಾಯವನ್ನು ಎಸಗಿದೆಯಾದರೆ, ಸೂರಯ್ಯನ ಕೂಡ ಹೇಳಿ ಕಳುಹಿಸಿದಂತೆ ನಿನ್ನ ಕಾರ್ಯಗಳೇನಿದ್ದರೂ ನಾವು ನಡೆಸಿಕೊಡುವೆವು. ಎಲ್ಲ ರೀತಿಯಲ್ಲಿಯೂ ನಾವಿಬ್ಬರೂ ಐಕಮತ್ಯದಿಂದ ಇದ್ದುಕೊಂಡು ಮೈಸೂರಿನವರ ಮದವನ್ನು ನಿವಾರಣೆ ಮಾಡಲು ಆಗುತ್ತದೆ ಎಂದು ಹೇಳಲು, ಈ ಮಂತ್ರಾಲೋಚನೆಯನ್ನು ಕೇಳಿ ಇದಕ್ಕೆ ಮಾರುತ್ತರ ಕೊಡದೆ ಬರಮನಾಯಕನು ದುರಾಸೆಯಿಂದ ಪಿತೂರಿ ಹೂಡಿದನು. ದುರಾಶಾಗ್ರಸ್ತನಾದ ಬರಮನಾಯಕನು ವ್ಯಂಗ್ಯವಾಗಿ ಮಾತಾಡುತ್ತಾ, ಮಾತಿನಲ್ಲಿ ಗಡಿಬಿಡಿಯನ್ನುಂಟುಮಾಡಿ, ಈ ಮುಂಚೆ ಒಪ್ಪಿಕೊಂಡ ಕರಾರು ಮುರಿದುಹೋಯ್ತೆಂಬ ಭಾವವನ್ನು ಸೃಷ್ಟಿಸಿದನು. ಅಂತೆಯೇ ಮುಂಚೆ ಕಡಮೆ ಬಲದೊಡನೆ ತನ್ನೆಡೆಗೆ ಬಂದ ಗುರುವಪ್ಪ ಮಂತ್ರಿಯನ್ನು ಸೆರೆಹಿಡಿಯಬೇಕೆಂದು ಯೋಚಿಸಿದನು. ಅಷ್ಟರಲ್ಲಿಯೇ ಗುರುವಪ್ಪ ಮಂತ್ರಿಯು ಅವನ ಮೋಸವನ್ನು ಅರಿತುಕೊಂಡನು. ಆಗಿನ ವೇಳೆಯಲ್ಲಿ ಅವನು ಏನೇನು ಹೇಳಿದರೂ "ಅದರಂತೆಯೇ ಆಗಲಿ; ನೀನು ಹೇಳಿದ ಕಾರ್ಯವು ನಡೆಯುವುದು ಎಷ್ಟರ ಮಾತು?" ಎಂಬ ರೀತಿಯಲ್ಲಿ ಸಾಂತ್ವನಗೊಳಿಸುತ್ತಾ ಒಡಂಬಟ್ಟು, ಆ ಕಿರಾತರಾಜನಲ್ಲಿ ಮಧುರವಾಗಿ ಮಾತನಾಡುತ್ತಾ, ಹೆಚ್ಚಾದ ಉಡುಗೊರೆ ಮುಂತಾದುವುಗಳನ್ನು ಕೊಟ್ಟು ಹೆಚ್ಚಾಗಿ ಮನ್ನಿಸಿ ಕಳುಹಿಸಿದನು. ತಾನು ಹಿಂದಕ್ಕೆ ಬಂದು ಹಲವು ದಿವಸಗಳು ಕಳೆಯಲು ೨೪. ಯುದ್ಧದಲ್ಲಿ ಧೀರನಾದ ಚಿಂತನಕಲ್ಲಿನ ದೊರೆಯಾದ ಬಳಿಜೋಡಿ ಬರಮನಾಯಕನು ಹರಪುರದ

ವ॥ ಹಿಂತೆ ಕ್ರಮದಿಂ ಚಿಂತನಕಲ್ಲುದುರ್ಗದ ಸಂಸ್ಥಾನವಂ ಕಸ್ತೂರಿ ತಿಮ್ಮಪ್ಪನಾಯಕ ಸರ್ಜಪ್ಪನಾಯಕ ಹಿರಿಯಚಿಕ್ಕಣ್ಣನಾಯಕ ಹಿರಿಯ ಮದಕೆರೆ ನಾಯಕ, ಮದಕೆರೆನಾಯಕ ಚಿಕ್ಕಣ್ಣನಾಯಕ ಮದಕೆರೆ ನಾಯಕ ರಂಗಪ್ಪನಾಯಕ ರಘುವಪ್ಪನಾಯಕ ರಂಗಪ್ಪನಾಯಕರೆಂಬ ವರಾಳ್ದರ್ ಆ ತರುವಾಯಮಾ ದುರ್ಗವನಾಳುತಿರ್ದ ಬಿಳಿಜೋಡಿ ಬರಮನಾಯಕನತ್ಯಂತ ಗರ್ವೋದ್ರೇಕ ದಿನಾದಿಯೊಳುಚ್ಚಂಗಿಯೆಂಬ ಸ್ಥಳದೊಳಿರ್ದನಂತರಂ ಹರಪುರ (ಪ್ರತಿನಾಮ ಹರಪನಹಳ್ಳಿ) ಯೆಂಬ ಕೋಂಟೆಯಂ ಬಲಿಸಿ ಆ ಕೋಂಟೆಯೊಳಿರ್ದು ರಾಜ್ಯಂಗೆಯ್ದು ದಾದೆನಾಯಕ ರಂಗರಾಜಯ್ಯ ಹಿರಿಯಬಸಂತರಾಯ ಇಮ್ಮಡಿ ಬಸವಪ್ಪನಾಯಕ ಕೊಟ್ಟೂರಪ್ಪನಾಯಕ ಹಿರಿಯ ಬಸವಪ್ಪನಾಯಕ ಕೊಟ್ಟೂರಪ್ಪನಾಯಕರೆಂಬಿವರಾಳ್ದನಂತರಂ ಬಸವಪ್ಪನಾಯಕನಾಳ್ದು ಬರುತ್ತಿರಲ್ (ಮುಂಪೇಳ್ದ ಚಿಂತನಕಲ್ಲು ಬರಮಣ್ಣ ನಾಯಕಂ) ಆ ಹರಪನ ಹಳ್ಳಿ ಬಸವಪ್ಪನಾಯಕನ ಪರಿಸ್ತರಣಂಗಳಂ ಕೊಂಡು ರಾಜ್ಯಂಗಳನಾಕ್ರಮಿಸುತ್ತುಂ ಮಿಕ್ಕುಮೀರಿ ಕೈಗೆಯ್ಯುತ್ತುಂ ಬರಲಾ ಬರಮನಾಯಕನದಟನಾಂ ಪೊಡಶಕ್ಯಮಾಗಿ ಹರಪನಹಳ್ಳಿಯ ಬಾಗಳಿಬಸವಪ್ಪನಾಯಕಂ ದೈನ್ಯೋಕ್ತಿಯಿಂ ರಾಯಸಮಂ ಬರೆದು ಕಳುಪಿ ತಮ್ಮ ಸಂಸ್ಥಾನಮನುದ್ಧರಿಸವೇಳ್ಕೆಂದು ಪೇಳಿಸಲಂತಾಗಲೆಂದು ಗುರುವಪ್ಪ ಮಂತ್ರಿಯೊಡನ ಸಂಖ್ಯಾತಮಾದ ಸೈನ್ಯಮಂ ತೆರಳ್ಚಿ ಕಳುಹಿ ಯುದ್ಧರಂಗದೊಳಾ ಬರಮನಾಯಕನ ಪರಾಕ್ರಮಾತಿ ಶಯಮಂ ಮುರಿದಾ ಪರಿಸ್ತರಣಗಳಂ ಕೊಂಡು ಬಸವಪ್ಪನಾಯಕಂಗಿತ್ತು ಪರಮಪ್ರಖ್ಯಾತಿಯಂ ಪಡೆದಿಂತಿರುತ್ತುಮಿರಲ್ ಮಗುಳ್ದಾ ಬರಮನಾಯಕಂ ಗುತ್ತಳದ ಹನುಮಂತಗೌಡಂ ಹಿಂದೂರಾಯರ ವಂಶೋದ್ಭವನಾದ ಸಿದ್ದೋಜಿ ಮುಂತಾದವರಂ ಸಹಾಯಕ್ಕೆ ಬರಿಸಿಕೊಂಡೈದಿ ರಣರಂಗಕಿದಿರ್ಚಿ ನಿಲಲಾಹವದೊಳಾ ಹನುಮಂತಗೌಡನಂ ಮಸೆಗಾಣಿಸಿಯನಂತರಂ

ಅರಸನ ಕೋಟೆಗಳನ್ನು ಹಿಡಿದು ಛಲದಿಂದ ಧಾಳಿಮಾಡಿದನು. ವ॥ ಹಿಂದೆ ಹೇಳಿದ ಕ್ರಮದಂತೆ ಚಿಂತನಕಲ್ಲು ದುರ್ಗದ (ಚಿತ್ರದುರ್ಗದ) ಸಂಸ್ಥಾನವನ್ನು ಕಸ್ತೂರಿ ತಿಮ್ಮಪ್ಪನಾಯಕ, ಸರ್ಜಪ್ಪನಾಯಕ, ಹಿರಿಯ ಚಿಕ್ಕಣ್ಣನಾಯಕ, ಹಿರಿಯ ಮದಕೆರೆನಾಯಕ, ಮದಕೆರೆನಾಯಕ, ಚಿಕ್ಕಣ್ಣನಾಯಕ, ಮದಕೆರೆನಾಯಕ, ರಂಗಪ್ಪನಾಯಕ, ರಘುವಪ್ಪನಾಯಕ ಮತ್ತು ರಂಗಪ್ಪನಾಯಕರೆಂಬುವರು ಆಳಿದರು. ಆ ಬಳಿಕ ಆ ದುರ್ಗವನ್ನು ಆಳುತ್ತಿದ್ದ ಬಿಳಿ ಜೋಡಿ ಬರಮನಾಯಕನು ಅತ್ಯಂತ ಗರ್ವದಿಂದ ಮುಂಚಿನಿಂದಲೂ ಉಚ್ಚಂಗಿಯೆಂಬ ಸ್ಥಳದಲ್ಲಿದ್ದನು. ಹರಪನಹಳ್ಳಿಯಲ್ಲಿ ದಾದೆನಾಯಕ, ರಂಗರಾಜಯ್ಯ, ಹಿರಿಯ ಬಸಂತರಾಯ, ಇಮ್ಮಡಿ ಬಸವಪ್ಪನಾಯಕ, ಕೊಟ್ಟೂರಪ್ಪನಾಯಕ, ಹಿರಿಯ ಬಸವಪ್ಪ ನಾಯಕ, ಕೊಟ್ಟೂರಪ್ಪನಾಯಕ ಎಂಬುವರು ಆಳುತ್ತಿದ್ದರು. ಅನಂತರ ಬಸವಪ್ಪ ನಾಯಕನು ಅಲ್ಲಿಗೆ ದೊರೆಯಾಗಿದ್ದನು. ಮುಂಚೆ ಹೇಳಿದ ಚಿಂತನಕಲ್ಲು ಬರಮಣ್ಣ ನಾಯಕನು ಹರಪನಹಳ್ಳಿಯ ಬಸವಪ್ಪನಾಯಕನ ಕೋಟೆಯನ್ನೂ ಹಾಗೂ ರಾಜ್ಯವನ್ನೂ ಆಕ್ರಮಿಸುತ್ತಾ ಹದ್ದುಮೀರಿ ವರ್ತಿಸುತ್ತಿದ್ದನು. ಇವನ ಅಟಾಟೋಪವನ್ನು ಸಹಿಸಲು ಸಾಧ್ಯವಾಗದೆ ಹರಪನಹಳ್ಳಿಯ ಬಾಗಳಿ ಬಸವಪ್ಪನಾಯಕನು ದೈನ್ಯದಿಂದ ರಾಯಸವನ್ನು ಬರೆದು ಸಹಾಯ ನೀಡಲು ಪ್ರಾರ್ಥಿಸಿ ಕೆಳದಿ ಅರಸನಿಗೆ ಕಳುಹಿಸಿದನು. ಈ ಪ್ರಾರ್ಥನೆಯ ಮೇರೆಗೆ ಸೋಮಶೇಖರನಾಯಕನು ಹರಪನಹಳ್ಳಿಯ ಸಂಸ್ಥಾನವನ್ನು ಉದ್ಧಾರ ಮಾಡಲು ಗುರುವಪ್ಪ ಮಂತ್ರಿಯೊಡನೆ ಅಸಂಖ್ಯಾತವಾದ ಸೈನ್ಯವನ್ನು ಹೊರಡಿಸಿ ಕಳುಹಿಸಿ, ರಣರಂಗದಲ್ಲಿ ಬರಮನಾಯಕನ ಪರಾಕ್ರಮವನ್ನು ಮುರಿದನು. ಆ ಕೋಟೆಯನ್ನು ವಶಪಡಿಸಿಕೊಂಡು ಬಸವಪ್ಪನಾಯಕನಿಗೆ ಕೊಟ್ಟು ಪರಮ ಪ್ರಖ್ಯಾತಿಯನ್ನು ಹೊಂದಿದನು. ಪುನಹ

ಕಂ|| ಚಿಂತನಕಲ್ಲರಸನ ಮದ
ಮಂ ತಗ್ಗಿಸಿ ಧುರದೊಳಾಂತ ಸಿದ್ದೋಜಿಯ ಸ
ದ್ದಂತಿಯುಮಂ ಪಿಡಿದೊಪ್ಪುವ
ಸಂತೆಯಬೆನ್ನೂರ ಕೋಂಟೆಯಂ ವಶಗೈದಂ ೨೫

ವ|| ಇಂತು ಚಿಂತನಕಲ್ಲ ಬರಮನಾಯಕನ ಮದಮಂ ತಗ್ಗಿಸಿ ಸಂತೆಬೆನ್ನೂರ ಕೋಂಟೆಯಂ ಕೊಂಡು ಸುಖದಿಂ ರಾಜ್ಯವಾಳುತ್ತಿರಲಾ ಪ್ರಸ್ತಾವದೊಳ್

ಕಂ|| ಮರಳ್ದಾ ಬರಮಣನಾಯಕ
ನುರುಬೆಗೆ ನಿತ್ತರಿಸಲಮ್ಮದಳವಳಿದು ತರೀ
ಕೆರೆ ರಾಯದುರ್ಗದರಸರ್
ಮರೆವುಗೆ ಮನ್ನಿಸುತುಮಭಯಮಿತ್ತತಿದಯೆಯಿಂ ೨೬

ವ|| ಇಂತಭಯಮಿತ್ತಪರಿಮಿತಸೇನಾಸಮೂಹಮಂ ತೆರಳ್ಚಿ ಕಳುಹಿ ಬರಮನಾಯಕಂಗೆ ಸಹಾಯಮಾಗಿ ಬಂದ ದರದಾಖುಲ್ಲಿಯಂ ಯುದ್ಧದೊಳ್ ಪಿಂದೆಗೆಸಿ ತರಿಕೆರೆಯ ಸಂಸ್ಥಾನಮಂ ಕ್ರಮದಿಂ ಮುನ್ನಾಳ್ದ ಕಾಪಿನಾಯಕ ಬುಳ್ಳನಾಯಕ ಕೆಂಗಾನಾಯಕ ರಡ್ಡಿಹನುಮಪ್ಪನಾಯಕ ಕುಂಟಹನುಮಪ್ಪನಾಯಕ ಇಮ್ಮಡಿ ಹನುಮಪ್ಪನಾಯಕ ನಿಚ್ಚಮದವಣಿಗ ಹನುಮಪ್ಪನಾಯಕ ಶರಜಾ ಹನುಮಪ್ಪನಾಯಕ ಸೀತಾರಾಮಪ್ಪನಾಯಕ ಪಟ್ಟಾಭಿರಾಮಪ್ಪ ನಾಯಕರೆಂಬವರಾಳ್ದನಂತರಮಾ

ಬರಮನಾಯಕನು ಗುತ್ತಳದ ಹನುಮಂತಗೌಡ ಮತ್ತು ಹಿಂದೂರಾಯರ ವಂಶೋದ್ಭವನಾದ ಸಿದ್ದೋಜಿ ಮುಂತಾದವರನ್ನು ಸಹಾಯಕ್ಕೆ ಬರಮಾಡಿಕೊಂಡು ರಣರಂಗಕ್ಕೆ ಎದುರಾದನು. ಯುದ್ಧರಂಗದಲ್ಲಿ ಕೆಳದಿ ನಾಯಕನು ಹನುಮಂತಗೌಡನನ್ನು ಸೋಲಿಸಿದನು. ಅನಂತರ ೨೫. ಚಿಂತನಕಲ್ಲಿನ ಅರಸನ ಮದವನ್ನು ತಗ್ಗಿಸಿ ಯುದ್ಧದಲ್ಲಿ ಎದುರಾದ ಸಿದ್ದೋಜಿಯ ಒಳ್ಳೆಯ ಆನೆಯನ್ನು ಹಿಡಿದು ಸಂತೇಬೆನ್ನೂರ ಕೋಟೆಯನ್ನು ವಶಪಡಿಸಿಕೊಂಡನು ವ|| ಈ ರೀತಿ ಚಿತ್ರದುರ್ಗದ ಬರಮನಾಯಕನ ಅಹಂಕಾರವನ್ನು ಮುರಿದು, ಸಂತೇ ಬೆನ್ನೂರು ಕೋಟೆಯನ್ನು ತೆಗೆದುಕೊಂಡು ಸುಖದಿಂದ ರಾಜ್ಯವನ್ನಾಳುತ್ತಿರುವ ಸಂದರ್ಭದಲ್ಲಿ-೨೬. ಮತ್ತೊಮ್ಮೆ ಆ ಬರಮಣ್ಣನಾಯಕನ ಕಾಟವನ್ನು ತಡೆದುಕೊಳ್ಳಲಾರದೆ ಶಕ್ತಿಗುಂದಿದ ತರೀಕೆರೆ ರಾಯದುರ್ಗದ ಅರಸರು ಮೊರೆ ಹೋಗಲು ಅವರನ್ನು ಮನ್ನಿಸಿ ಅತ್ಯಂತ ದಯೆಯಿಂದ ಅಭಯವನ್ನಿತ್ತನು, ವ|| ಈ ರೀತಿ ಅಭಯವಚನವಿತ್ತು ಲೆಖ್ಖವಿಲ್ಲದಷ್ಟು ಸೇನಾಸಮೂಹಗಳೊಡನೆ ಸೇನೆಯನ್ನು ಹೊರಡಿಸಿ ಕಳಿಸಿ ಬರಮನಾಯಕನಿಗೆ ಸಹಾಯಮಾಡಲು ಬಂದ ದರದಖುಲ್ಲಿಯನ್ನು ಯುದ್ಧರಂಗದಲ್ಲಿ ಹಿಂದಕ್ಕೋಡಿಸಿದನು. ತರಿಕೆರೆಯ ಸಂಸ್ಥಾನವನ್ನು ಕ್ರಮವಾಗಿ ಮೊದಲು ಆಳಿದ್ದ ಕಾಪಿನಾಯಕ, ಬುಳ್ಳನಾಯಕ, ಕೆಂಗಾನಾಯಕ, ರಡ್ಡಿಹನುಮಪ್ಪನಾಯಕ, ಕುಂಟು ಹನುಮಪ್ಪನಾಯಕ, ಶರಜಾ ಹನುಮಪ್ಪನಾಯಕ, ಸೀತಾರಾಮಪ್ಪನಾಯಕ, ಮತ್ತು ಪಟ್ಟಾಭಿರಾಮಪ್ಪನಾಯಕ-ಈ ರೀತಿ ಅರಸರು ಆಳಿದರು, ಅನಂತರದಲ್ಲಿ ಆ

ಸಂಸ್ಥಾನಮನಾಳುತಿರ್ದ ಹನುಮಪ್ಪನಾಯಕನುಮಂ ರಾಯದುರ್ಗದ ಸಂಸ್ಥಾನಮಂ ಕ್ರಮದಿಂ ಮುನ್ನಾಳ್ದವರನಂತರಮಾಸಂಸ್ಥಾನಂ ವಿಸ್ಖಲಿತಮಾಗುತ್ತಿರಲ್ ಸಹಾಯಮಾಗಿ ಬಂದದರರಸನುಮಂ ಇಂತುಭಯಸಂಸ್ಥಾನಾಧಿಪತಿಗಳುಮಂ ಸ್ವಸ್ಥಾನಂಗಳೊಳ್ ನಿಲಿಸಿ ಪರಮಪ್ರಖ್ಯಾತಿಯಂ ಪಡೆದನಂತು ಮಲ್ಲದೆಯುಂ

ಕಂ॥ ಶೃಂಗಪುರಸ್ವಾಮಿಗಳು
ತ್ತುಂಗಮಠಕ್ಕಧಿಕಮಾದ ಋಣಮಾಗಿರೆ ತ
ತ್ಸಂಗತಿಯಂ ಕೇಳ್ದಲ್ಲಿಗೆ
ಪಿಂಗದೆ ಶರಜಾಖ್ಯವೆಂಕಟಯ್ಯನನೊಲವಿಂ ೨೭

ತೆರಳಿಸುತುಂ ಪ್ಲವಸಂವ
ತ್ಸರದೊಳ್ ಶೃಂಗೇರಿಯಿಂದೆ ತತ್ಸ್ವಾಮಿಗಳಂ
ಬರಿಯಿಸಿ ತಚ್ಚೈತ್ರದ ಭಾ
ಸುರಮೇಚಕಪಕ್ಷದಾ ತ್ರಯೋದಶಿದಿನದೊಳ್ ೨೮

ವ॥ ಇಂತು ಶೃಂಗಪುರದಿಂ ಸಚ್ಚಿದಾನಂದಭಾರತೀಸ್ವಾಮಿಗಳಂ ಬರಿಸಿ ಬಣ್ಣದ ಚಾವಡಿಯ ಸದರೊಳ್ ಬೇಟಿಗೊಂಡು ಭಿಕ್ಷಾದ್ಯುಪಚಾರಂಗಳಂ ನಿಮಿರ್ಚಿ ಋಣಭಾರಮಂ ತೀರ್ಚಿಯಧಿಕ ಸನ್ಮಾನಂಬಡಿಸಿ ತೆರಳ್ಚಿ ಕಳುಪಿ ಬಳಿಕ್ಕಾ ಪ್ಲವಸಂವತ್ಸರದ ಮಾರ್ಗಶಿರ ಶುದ್ಧತದಿಗೆಯೊಳ್ ತಮ್ಮನುಜರಾದ ವೀರಭದ್ರನಾಯಕರ್ಗೊರ್ವ ಕುಮಾರನುದಿಸಲಾ ಕುಮಾರಂಗೆ ಬಸವಪ್ಪನಾಯಕನೆಂದು ನಾಮಕರಣಮಂ ರಚಿಸಿ ಪೋಷಣೆಯಂ ಮಾಡಿ ಅಧಿಕ ವ್ಯಾಮೋಹದಿಂ ನಡೆಸಿಕೊಳುತ್ತುಂ ಮತ್ತಮಾ ಸಂವತ್ಸರದ

ಸಂಸ್ಥಾನವನ್ನಾಳುತ್ತಿದ್ದ ಹನುಮಪ್ಪನಾಯಕನನ್ನು ಹಾಗೂ ರಾಯದುರ್ಗದ ಸಂಸ್ಥಾನವನ್ನು ಕ್ರಮವಾಗಿ ಮುಂಚೆ ಆಳಿದವರ ನಂತರ ಆ ಸಂಸ್ಥಾನವೂ ತಪ್ಪಿ ಹೋಗುತ್ತಿರಲು ಸಹಾಯವಾಗಿ ಬಂದ ಅದರ ಅರಸನನ್ನೂ, ಈ ರೀತಿ ಈ ಎರಡು ಸಂಸ್ಥಾನಾಧಿಪತಿಗಳನ್ನೂ ಅವರವರ ಸ್ಥಾನದಲ್ಲಿ ನಿಲ್ಲಿಸಿ ಸೋಮಶೇಖರನಾಯಕನು ಪರಮ ಕೀರ್ತಿಯನ್ನು ಗಳಿಸಿದನು, ಅಂತೂ ಅಲ್ಲದೆ-೨೭. ಶೃಂಗೇರಿಯ ಸ್ವಾಮಿಗಳ ಶ್ರೇಷ್ಠವಾದ ಮಠಕ್ಕೆ ಬಹಳವಾಗಿ ಸಾಲವುಂಟಾಗಿದ್ದು ಆ ಸಂಗತಿಯನ್ನು ಕೇಳಿ ಅಲ್ಲಿಗೆ ಶರಜಾ ವೆಂಕಟಯ್ಯನನ್ನು ಪ್ರೀತಿಯಿಂದ ೨೮. ಕಳುಹಿಸಿಕೊಟ್ಟು ಪ್ಲವಸಂವತ್ಸರದಲ್ಲಿ ಶೃಂಗೇರಿಯಿಂದ ಆ ಸ್ವಾಮಿಗಳನ್ನು ಬರಮಾಡಿಕೊಂಡು ಅದೇ ಚೈತ್ರಮಾಸದ ಕೃಷ್ಣಪಕ್ಷದ ತ್ರಯೋದಶಿ ದಿವಸದಲ್ಲಿ ವ॥ ಈ ರೀತಿ ಶೃಂಗೇರಿಯಿಂದ ಸಚ್ಚಿದಾನಂದ ಭಾರತೀ ಸ್ವಾಮಿಗಳನ್ನು ಬರಮಾಡಿ ಬಣ್ಣದ ಚಾವಡಿಯ ಸನ್ನಿಧಾನದಲ್ಲಿ ಅವರನ್ನು ಭೇಟಿಮಾಡಿದನು. ಶ್ರೀ ಸ್ವಾಮಿಗಳಿಗೆ ಭಿಕ್ಷಾದಿ ಉಪಚಾರಗಳನ್ನು ಏರ್ಪಡಿಸಿ, ಅವರಿಗೆ ಆಗಿದ್ದ ಸಾಲದ ಋಣವನ್ನು ತೀರಿಸಿ, ಅಧಿಕವಾಗಿ ಸನ್ಮಾನಿಸಿ ಕಳುಹಿಸಿದನು. ಅನಂತರ ಪ್ಲವಸಂವತ್ಸರದ ಮಾರ್ಗಶಿರ ಶುದ್ಧ ತದಿಗೆಯಲ್ಲಿ ಅವನ ತಮ್ಮ ವೀರಭದ್ರನಾಯಕನಿಗೆ ಒಬ್ಬ ಮಗನು ಹುಟ್ಟಿದನು, ಆ ಶಿಶುವಿಗೆ ಬಸವಪ್ಪನಾಯಕನೆಂದು ಹೆಸರಿಟ್ಟು ಅಧಿಕ ವ್ಯಾಮೋಹದಿಂದ ಕಾಪಾಡಿದನು, ಅದೇ ಸಂವತ್ಸರದ ಫಾಲ್ಗುಣ ಬಹುಳ ತದಿಗೆಯಲ್ಲಿ ನಿರ್ವಾಣಯ್ಯನವರ ಕುವರಿ

ಫಾಲ್ಗುಣ ಬಹುಳ ತದಿಗೆಯೊಳ್ ನಿರ್ವಾಣಯ್ಯನವರ ಕುಮಾರಿ ನೀಲಮ್ಮಾಜಿಯವರನತ್ಯಂತೋತ್ಸವದಿಂ ವಿವಾಹಮಾಗಿ ಸುಖಮಿರುತಿರ್ದು

ಕಂ॥ ಮಗಗಂ ಪೆಸರಿಟ್ಟುರೆ ಪದ
ಯುಗದರ್ಶನಗೈದ ಹರಪುರಾಧೀಶ್ವರಗಂ
ದಗಣಿತ ಪೊನ್ನುಡುಗೊರೆ ತೊಡ
ವುಗಳನವನಿತ್ತು ಪೆರ್ಮೆಯಿಂ ಮನ್ನಿಸಿದಂ ೨೯

ವ॥ ಇಂತು ಮನ್ನಿಸಿದನಂತರಮಾ ಹರಪುರದ ಸಂಸ್ಥಾನಕ್ಕೊದಗಿದ ಹೇರಳ ಋಣಭಾರಮಂ ತೀರ್ಚಿ ಕಳುಪಲಾ ವಾರ್ತೆಯಂ ಕೇಳ್ದು ಸೇನಾಸಮೂಹಂವೆರಸೈತಂದು ಗುತ್ತಳದ ಹನುಮಂತನಾಯಕನಂ ಗಗನಮಹಲ ಚಾವಡಿಯೊಳ್ ಬೇಡಿಕೊಂಡು ಸನ್ಮಾನಂಬಡಿಸಿ ತೆರಳ್ಚಿಸಿದ ನಂತರಂ

ಕಂ॥ ಶುಭಕೃದ್ವತ್ಸರದೊಳ್ ಭೂ
ವಿಭು ತಾಂ ಕೊಲ್ಲೂರಿಗೈದಿ ಮೂಕಾಂಬಿಕೆಯಂ
ವಿಭವದೆ ಪೂಜಿಸಿ ಬೀಳ್ಕೊಂ
ಡಭಿವೃದ್ಧಿಯನೀವ ಕೆಳದಿಪುರಮಂ ಸಾರ್ದಂ ೩೦

ರಾಮೇಶವೀರಭದ್ರ
ಸ್ವಾಮಿಯ ಪದಯುಗವ ಭಜಿಸಿ ಬಳಿಕಲ್ಲಿಂದಂ
ಸೋಮಶೇಖರನೃಪಂ ತೆರ
ಳ್ದಾ ಮಂಜುಲವೇಣುಪುರವನಂದುರೆ ಸಾರ್ದಂ ೩೧

ಅಲ್ಲಿಂ ತೆರಳ್ದು ತನ್ನೃಪ
ಮಲ್ಲಂ ತಾಂ ತೀರ್ಥರಾಜಪುರಕ್ಕೈದಿ ಬಳಿ
ಕ್ಕಲ್ಲಿಂದಂ ಮುಂತೈದಿ ಸ
ಮುಲ್ಲಾಸದೆ ಶೃಂಗಪುರವನಂದುರೆ ಸಾರ್ದಂ ೩೨

ನೀಲಮ್ಮಾಜಿಯವರನ್ನು ಅತ್ಯಂತ ವೈಭವದಿಂದ ಮದುವೆಯಾಗಿ ಸುಖದಿಂದಿದ್ದನು- ೨೯. ಹೀಗೆ (ತಮ್ಮನ) ಮಗನಿಗೆ ಹೆಸರಿಟ್ಟು ಆ ಸಂದರ್ಭದಲ್ಲಿ ಚರಣದರ್ಶನಕ್ಕಾಗಿ ಬಂದ ಹರಪನ ಹಳ್ಳಿಯ ರಾಜನಿಗೆ ಲೆಖ್ಖವಿಲ್ಲದಷ್ಟು ಚಿನ್ನದ ಉಡುಗೊರೆ ಹಾಗೂ ಆಭರಣಗಳನ್ನು ಕೊಟ್ಟು ಅತ್ಯಧಿಕವಾಗಿ ಮನ್ನಿಸಿದನು. ವ॥ ಈ ರೀತಿ ಮನ್ನಿಸಿದ ನಂತರ ಹರಪನ ಹಳ್ಳಿಯ ಸಂಸ್ಥಾನಕ್ಕೆ ಒದಗಿದ ಹೇರಳ ಸಾಲವನ್ನು ತೀರಿಸಿದನು. ಈ ಸಮಾಚಾರವನ್ನು ಕೇಳಿದ ಗುತ್ತಳದ ಹನುಮಂತನಾಯಕನು ಸೇವಾಸಮೂಹಗಳೊಡನೆ ಬರಲು, ಅವನನ್ನು ಕೆಳದಿ ಅರಸನು "ಗಗನಮಹಲ್ ಚಾವಡಿ" ಎಂಬಲ್ಲಿ ಭೇಟಿಮಾಡಿ ಸನ್ಮಾನಿಸಿ ಕಳುಹಿಸಿಕೊಟ್ಟನು. ಅನಂತರ-೩೦. ಶುಭಕೃತು ಸಂವತ್ಸರದಲ್ಲಿ ರಾಜನಾದ ಸೋಮಶೇಖರನಾಯಕನು ಕೊಲ್ಲೂರಿಗೆ ಹೋಗಿ ಶ್ರೀ ಮೂಕಾಂಬಿಕೆಯನ್ನು ವೈಭವದಿಂದ ಪೂಜಿಸಿ ಅಲ್ಲಿಂದ ಹೊರಟು ಅಭಿವೃದ್ಧಿಯನ್ನು ಕೊಡುವ ಕೆಳದಿ ಪಟ್ಟಣವನ್ನು ಸೇರಿದನು. ೩೧. ಶ್ರೀರಾಮೇಶ್ವರ, ವೀರಭದ್ರಸ್ವಾಮಿಯವರ ಪಾದಗಳನ್ನು ಭಜಿಸಿ, ಅಲ್ಲಿಂದ ಹೊರಟು ಸೋಮಶೇಖರನಾಯಕನು ಸುಂದರವಾದ ಬಿದನೂರಿಗೆ ಹೋದನು. ೩೨. ಅಲ್ಲಿಂದ ಹೊರಟ ಆ ರಾಜಶ್ರೇಷ್ಠನು ತೀರ್ಥರಾಜಪುರಕ್ಕೆ ಹೋಗಿ ಆಮೇಲೆ ಮುಂದೆ ಸಾಗುತ್ತಾ

ವ|| ಮತ್ತಮದಲ್ಲದಾ ಸೋಮಶೇಖರರಾಜೇಂದ್ರ ಚಂದ್ರಂ ಶೃಂಗಪುರದೊಳ್ ಶಾರದಾಂಬಾಪೀಠಸನ್ನಿಧಿಯೊಳೆಸೆವ ಚೌಕಿಯೊಳ್ ಸರ್ವಸಂಭ್ರಮದಿಂ ಸಚ್ಚಿದಾನಂದಭಾರತೀ ಸ್ವಾಮಿಯವರಂ ಬೇಟಗೊಂಡಾಪುರದೊಳ್ ನಾಲ್ದಿವಸಮಿರ್ದಾ ಯತೀಂದ್ರನನುಚಿತಮಾದುಡುಗೊರೆ ಮುಂತಾದುಪಚಾರಂಗಳಿಂ ಸನ್ಮಾನಿಸಿಯವರಿಂ ತಾನುಂ ಸನ್ಮಾನಂಬೆತ್ತನಂತರಮಲ್ಲಿಂ ತೆರಳ್ದು

ಕಂ|| ಚಳಕದೆ ಕಳಸದ ಘಟ್ಟವ
ನಿಳಿದಾ ಭೂಮೀಶವರ್ಯ ಸುಬ್ರಹ್ಮಣ್ಯಾ
ಸ್ಥಳಕ್ಕೈದಿ ಪೆರ್ಮೆಯಿಂ ಮಂ
ಜುಳಸುಬ್ರಹ್ಮಣ್ಯದೇವರಂ ಭಜಿಯಿಸಿದಂ ೩೩

ಪೊರಮಟ್ಟಲ್ಲಿಂ ಕೋಟೀ
ಶ್ವರಕ್ಕೈದುತೆ ದಿವ್ಯಕೋಟಲಿಂಗೈಶ್ವರನಂ
ಧರಣೀಶಂ ಪೂಜಿಸಿ ವಸು
ಪುರದೆ ಮಹಾದೇವಲಿಂಗಮಂ ಭಜಿಯಿಸಿದಂ ೩೪

ಅಲ್ಲಿಂದ ತೆರಳ್ದೊಪ್ಪುವ
ಕೊಲ್ಲೂರಿಂಗೈದಿ ತನ್ನೃಪಾಲಂ ಪುರಜಿ
ದ್ವಲ್ಲಭೆ ಮೂಕಾಂಬೆಯ ಪದ
ಪಲ್ಲವಮಂ ಪರಮಭಕ್ತಿಯಿಂದರ್ಚಿಸಿದಂ ೩೫

ಬಳಿಕಲ್ಲಿಂ ಗೋಕರ್ಣ
ಕ್ಕಿಳಿದಾಕ್ಷೇತ್ರದ ಮಹಾಬಲೇಶ್ವರನಂ ತಾಂ
ನಲವಿಂದರ್ಚಿಸಿ ಕೇರಳ
ಕಿಳಿದೊಡನೆಳ್ತಂದು ವೇಣುಪುರಮಂ ಸಾರ್ದಂ ೩೬

ಸಂತೋಷದಿಂದ ಶೃಂಗೇರಿಯನ್ನು ಸೇರಿದನು. ವ|| ಮತ್ತೆ ಅದಲ್ಲದೆ ಸೋಮಶೇಖರ ರಾಜೇಂದ್ರನು ಶೃಂಗೇರಿಯಲ್ಲಿ ಶ್ರೀ ಶಾರದಾಂಬಾ ಪೀಠಸನ್ನಿಧಿಯ ಹತ್ತಿರ ಶೋಭಿಸುವ ಚಾವಡಿಯಲ್ಲಿ ಸಕಲ ಸಂಭ್ರಮಗಳೊಡನೆ ಸಚ್ಚಿದಾನಂದ ಭಾರತೀಸ್ವಾಮಿಗಳವರನ್ನು ಭೇಟಿಮಾಡಿದನು, ಅಲ್ಲಿ ನಾಲ್ಕು ದಿನಗಳಿದ್ದು ಯತೀಂದ್ರನು ಉಚಿತವಾದ ಉಡುಗೊರೆ ಮುಂತಾದ ಉಪಚಾರಗಳಿಂದ ಮರ್ಯಾದೆ ಮಾಡಿ ಅವರಿಂದ ತಾನೂ ಸನ್ಮಾನಹೊಂದಿ ಅಲ್ಲಿಂದ ಹೊರಟು-೩೩. ರಾಜಶ್ರೇಷ್ಠನಾದ ಸೋಮಶೇಖರನಾಯಕನು ಚಾತುರ್ಯದಿಂದ ಕಂಸದ ಘಟ್ಟವನ್ನು ಇಳಿದು ಸುಬ್ರಹ್ಮಣ್ಯಕ್ಷೇತ್ರಕ್ಕೆ ಹೋಗಿ ಸುಂದರನಾದ ಸುಬ್ರಹ್ಮಣ್ಯದೇವರನ್ನು ಭಜಿಸಿದನು. ೩೪. ಅಲ್ಲಿಂದ ಹೊರಟು ಕೋಟೀಶ್ವರಕ್ಕೆ ಹೋಗಿ ದಿವ್ಯಕೋಟಿ ಲಿಂಗೇಶ್ವರನನ್ನು ಆ ರಾಜನು ಪೂಜಿಸಿ ವಸುಪುರ (ಬಸ್ರೂರು) ಮಹಾದೇವಲಿಂಗವನ್ನು ಭಜಿಸಿದನು. ೩೫. ಅಲ್ಲಿಂದ ಸಾಗಿದ ಆ ರಾಜನು ಕೊಲ್ಲೂರಿಗೆ ಹೋಗಿ ಶಿವಪತ್ನಿಯಾದ ಶ್ರೀಮೂಕಾಂಬಿಕೆಯ ಚಿಗುರಿನಂತಹ ಪಾದವನ್ನು ಭಕ್ತಿಯಿಂದ ಅರ್ಚಿಸಿದನು. ೩೬. ಬಳಿಕ ಅಲ್ಲಿಂದ ಗೋಕರ್ಣಕ್ಕೆ ಇಳಿದು ಆ ಕ್ಷೇತ್ರದ ಶ್ರೀಮಹಾಬಲೇಶ್ವರನನ್ನು

ವ|| ಮತ್ತಮದಲ್ಲದಾನ್ಯಪಾಲಪುಂಗವಂ ಪರಶುರಾಮಕ್ಷೇತ್ರದತ್ತಣಿಂ ಮಾತೃಗಳ್ವೆರಸಿರ್ವರ್ ಪಾರ್ವಕುಮಾರರಂ ಬರಿಸಿಯವರ್ಗೆ ಷಡಕ್ಷರಿ ಪಂಚಾಕ್ಷರಿಯೆಂದು ಪೆಸರಿಟ್ಟು ಲಿಂಗಧಾರಣಮಂ ಮಾಡಿಸಿ ಪೋಷಿಸಿಯವರ್ಗೆ ವಿದ್ಯಾಭ್ಯಾಸಮಂ ಮಾಡಿಸಿ ಷಡಕ್ಷರಿಯೆಂಬ ಸಣ್ಣವನ ವಾಕ್ಪಟುತ್ವಮಂ ನೋಡಿ ಚಿತ್ತಾಸಕ್ತಿಯಿಟ್ಟು ವರ್ತಿಸುತ್ತಿರ್ದೊಂದವಸರದೊಳ್

ಕಂ|| ರಾಣೋಜೀಘೋರ್ಪಡೆಯಂ
ಮಾಣದೆ ತಾಂ ಪೈಜೆಯಲ್ಲಿಖಾನಂ
ಕ್ಷೀಣಬಲನೈದಿ ರಾಜ್ಯ
ಪ್ರಾಣಿಗಳಂ ಬಾಧಿಸುತ್ತುಮೊಳಪುಗಲಾಗಳ್ ೩೭

ಸಂಗರರಂಗದೊಳವರಂ
ಭಂಗಿಸಿ ಪಿಂದೆಗೆಸಿ ಚತುರನಹ ರಾಯಸದಾ
ಗಂಗಾಧರಯ್ಯನ ಮುಖದೆ
ಪೊಂಗಳುವಂ ಕೊಡಿಸಿ ಸೀಮೆಯಂ ದಾಂಟಿಸಿದಂ ೩೮

ವ|| ಮತ್ತಮದಲ್ಲದೊಂದವಸರದೊಳ್ ತರಿಕೆರೆಯರಸನಪ್ಪ ಪಟ್ಟಾಭಿರಾಮಪ್ಪ ನಾಯಕನಿಂ ದಿವಾಣಕ್ಕೆ ಸಲ್ವರ್ಥಕ್ಕೋಸುಗಂ ದರದಾಖುಲ್ಲಿಯೆಂದು ವಜೀರಂ ಭೂರಿಸೈನ್ಯಂವೆರಸೆಳ್ತಂದು ಸೀಮೆಯಂ ಲೂಟಿಸಿ ತರಿಕೆರೆಗಿಳಿದು ಪರಮೋಪದ್ರವಮಂ ರಚಿಸುತ್ತಿರಲಲ್ಲಿಗೆ ಸೈನ್ಯಮಂ ತೆರಳ್ಚಿಸಿ ಕಳುಪಿ ಅವನಿಂ ಸಲ್ವರ್ಥಮಂ ತಾನೆ ವಹಿಸಿಕೊಂಡು ಕೊಡಿಸಿ ದರದಾಖುಲ್ಲಿಯುಂ ಪಿಂದೆಗೆಸಿ ಪಟ್ಟಾಭಿರಾಮಪ್ಪನಾಯಕನಂ ಸಂಸ್ಥಾನದೊಳ್ ನಿಲಿಸಿ ಪ್ರಖ್ಯಾತಿಯಂ ಪಡೆದನಂತುಮಲ್ಲದೆಯುಂ

ಪ್ರೀತಿಯಿಂದ ಪೂಜಿಸಿ ಕೇರಳಕ್ಕೆ ಹೋಗಿ ಅನಂತರ ಬಿದನೂರಿಗೆ ಮರಳಿದನು. ವ|| ಮತ್ತೆ ಅದಲ್ಲದೆ ಆ ರಾಜಶ್ರೇಷ್ಠನು ದಕ್ಷಿಣ ಕನ್ನಡದ ಪ್ರದೇಶದಿಂದ ತಾಯಿಯೊಡನೆ ಆಗಮಿಸಿರುವ ಇಬ್ಬರು ಬ್ರಾಹ್ಮಣಕುಮಾರರನ್ನು ಬರಮಾಡಿಕೊಂಡು ಅವರಿಗೆ ಷಡಕ್ಷರಿ ಮತ್ತು ಪಂಚಾಕ್ಷರಿ ಎಂದು ಹೆಸರಿಟ್ಟು ಲಿಂಗಧಾರಣವನ್ನು ಮಾಡಿಸಿ ಕಾಪಾಡಿದನು. ಅವರಿಗೆ ವಿದ್ಯಾಭ್ಯಾಸವನ್ನೂ ಮಾಡಿಸಿದನು; ಚಿಕ್ಕವನ ವಾಕ್ಚಾತುರ್ಯವನ್ನು ಕಂಡು ಆಸಕ್ತಿಯಿಂದ ಗಮನಿಸುತ್ತಿದ್ದನು. ಆ ಸಂದರ್ಭದಲ್ಲಿ ೩೭. ರಾಣೋಜೀ ಘೋರ್ಪಡೆಯನ್ನು ಗಣ್ಯಮಾಡದೆ ಪೈಜೆಯಲ್ಲೀಖಾನನು ಬಲಹೀನನಾಗಿದ್ದರೂ ರಾಜ್ಯದಲ್ಲಿದ್ದವರನ್ನು ಬಾಧಿಸುತ್ತಾ ಒಳನುಗ್ಗಿ ಬಂದಾಗ ೩೮. ಯುದ್ಧರಂಗದಲ್ಲಿ ಅವರನ್ನು ಸದೆಬಡಿದು, ಹಿಂದಕ್ಕೆ ಓಡಿಸಿ, ಚತುರನಾದ ರಾಯಸದ ಗಂಗಾಧರಯ್ಯನ ಮೂಲಕ ಹೊನ್ನುಗಳನ್ನು ಕೊಡಿಸಿ ಸೀಮೆಯನ್ನು ದಾಟಿಸಿದನು. ವ|| ಮತ್ತೆ ಅದಲ್ಲದೆ ಒಂದು ಸಂದರ್ಭದಲ್ಲಿ ತರೀಕೆರೆಯ ರಾಜನಾದ ಪಟ್ಟಾಭಿರಾಮಪ್ಪ ನಾಯಕನಿಂದ ಖಜಾನೆಗೆ ಸಲ್ಲುವ ಹಣಕ್ಕೋಸ್ಕರ ದರದಾಖುಲ್ಲಿ ಎಂಬ ವಜೀರನು (ಮಂತ್ರಿಯು) ಭಾರಿ ಸೈನ್ಯವನ್ನು ಕೂಡಿಕೊಂಡು ಸೀಮೆಯನ್ನು ಲೂಟಿ ಮಾಡುತ್ತಾ ತರೀಕೆರೆಗೆ ಬಂದಿಳಿದು ಹಾವಳಿಯನ್ನೆಸಗಿದನು. ಸೋಮಶೇಖರ ನಾಯಕನು ಅಲ್ಲಿಗೆ ಸೈನ್ಯವನ್ನು ಹೊರಡಿಸಿ ಕಳುಹಿಸಿ ಅವನಿಂದ ಸಲ್ಲುವ ಹಣವನ್ನು ತಾನೇ ವಹಿಸಿಕೊಂಡು ಕೊಡಿಸಿದನು. ದರದಾಖುಲ್ಲಿಯನ್ನು ಹಿಂದೆ ಹೋಗುವಂತೆ ಮಾಡಿ ಪಟ್ಟಾಭಿರಾಮಪ್ಪ ನಾಯಕನನ್ನು ಅವನ ಸಂಸ್ಥಾನದಲ್ಲಿ ಪುನಃ ನಿಲ್ಲಿಸಿ ಯಶಸ್ಸನ್ನು

ಕಂ॥ ಸೇನಾಸಮೂಹಕೊಪ್ಪಿಗೆ
ತಾನಪ್ಪಂತೇಕಕಾಲದೊಳ್ ವಿಕ್ರಯಕಂ
ದಾ ನೃಪವರನಿಪ್ಪತ್ತೊಂ
ದಾನೆಗಳಂ ಕೊಂಡು ಪಾಕರವನಾಗಿಸಿದಂ ೩೯

ಆರೆಯರ ಮೊಗಲರುಪಟಳ
ಕಾರದೆಯಳವಳಿದು ರಾಯದುರ್ಗದ ರಾಜಂ
ಹಾರಿ ಸಹಾಯವ ದೈನ್ಯಂ
ದೋರಿಯೆ ಬಿನ್ನವಿಸಿ ಕಳುಹೆ ಕೇಳ್ದವನಾಗಳ್ ೪೦

ಹಾರೋವೇದಪನಂ ನ
ಲ್ಲೂರಾ ಲಕ್ಷ್ಮೀಪತಿಪ್ರಮುಖಸಚಿವರುಮಂ
ಆರ್ಯೆದವರಿರ್ವರೊಡನೆ
ವಾರಣತುರಗಾದಿಸೈನ್ಯಮಂ ತೆರಳಿಸುತುಂ ೪೧

ಸಮರಸಂಧಾನಮುಖದಿಂ
ದಮದಾರೆಯರಂ ತುರುಷ್ಕ ಸೈನ್ಯವ್ರಜಮಂ
ಕ್ರಮದೆ ಪಿಂದೆಗೆಸಿ ಧಾತ್ರೀ
ರಮಣರೊಳತ್ಯಂತ ಕೀರ್ತಿಯಂ ಮಿಗೆ ಪಡೆದಂ ೪೨

ಹೊಂದಿದನು. ಅಂತೂ ಅಲ್ಲದೆ ೩೯. ಸೇನಾಸಮೂಹಕ್ಕೆ ಒಪ್ಪಿಗೆಯಾಗುವಂತೆ ಆ ರಾಜನು ಇಪ್ಪತ್ತೊಂದು ಆನೆಗಳನ್ನು ಕ್ರಯಕ್ಕೆ ತೆಗೆದುಕೊಂಡು (ಬಿದನೂರಿಗೆ) ಪ್ರಾಕಾರವನ್ನು ಕಟ್ಟಿಸಿದನು. ೪೦. ರಾಯದುರ್ಗದ ರಾಜನು ಆರೆಯರ ಮತ್ತು ಮೊಗಲರ ಉಪದ್ರವಗಳನ್ನು ತಡೆಯಲಾರದೆ ಶಕ್ತಿಗುಂದಿ ಸಹಾಯವನ್ನು ಬೇಡಿ ದೈನ್ಯದಿಂದ ವಿಜ್ಞಾಪನೆಯನ್ನು ಕಳುಹಿಸಿಕೊಟ್ಟಾಗ ಅದನ್ನು ಕೇಳಿದ ಸೋಮಶೇಖರನಾಯಕನು, ೪೧. ಹಾರೋವೇದಪ್ಪ ನನ್ನು ಹಾಗೂ ನಲ್ಲೂರ ಲಕ್ಷ್ಮೀಪತಿ ಮುಂತಾದ ಮಂತ್ರಿಗಳನ್ನು ಅವರಿಬ್ಬರ ಜೊತೆಯಲ್ಲಿ ಆನೆ ಕುದುರೆ ಮುಂತಾದ ಸೈನ್ಯವನ್ನು ಪರಿಶೀಲಿಸಿ ಕಳುಹಿಸುತ್ತಾ, ೪೨. ಯುದ್ಧ ಹಾಗೂ ಸಂಧಾನದ ಮೂಲಕ ಆರೆಯರನ್ನೂ, ತುರುಕರ ಸೈನ್ಯಸಮೂಹವನ್ನೂ ಕ್ರಮವಾಗಿ ಹಿಂದಕ್ಕಟ್ಟಿ ರಾಜರಲ್ಲಿ ಹೆಚ್ಚಿನ ಕೀರ್ತಿಯನ್ನು ಪಡೆದನು. ವ॥ ಮತ್ತೆ ಅದಲ್ಲದೆ ಪುಂಗನೂರಿನ ಒಡೆಯನು ಸೋಮಶೇಖರ ರಾಜನ ಪ್ರಭಾವವನ್ನೂ ಹಾಗೂ ಕೀರ್ತಿಯನ್ನೂ ಕೇಳಿ ತಿಳಿದು ತನಗೆ ಇವರೊಡನೆ ಹೊಂದಾಣಿಕೆಯಿದ್ದರೆ ಬರವುಂಟಾಗುತ್ತದೆ ಎಂಬುದಾಗಿ ಆಲೋಚಿಸಿದನು. ಅದಕ್ಕೆ ತಕ್ಕ ಹಾಗೆ ಉಚಿತವಾದ ನಿರೂಪವನ್ನು ಬರೆದು ನಿಯೋಗಿಗಳ ಮುಖಾಂತರ ಕಳುಹಿಸಿದ್ದನು. ಕೆಳದಿ ದೊರೆಯು ಅವರುಗಳನ್ನು ಮನ್ನಿಸಿ ವಿಶ್ವಾಸದಿಂದ ರಾಯಸವನ್ನು ಬರೆಸಿ, ಚಿನ್ನ ಭಂಡಾರದ ರಂಗಯ್ಯನ ಕೈಯಲ್ಲಿ ಉಚಿತ ಉಡುಗೊರೆಗಳೊಡನೆ ಕಳುಹಿಸಿ,

ವ|| ಮತ್ತಮದಲ್ಲದೆ ಪುಂಗನೂರಾಣ್ಮನಾ ಸೋಮಶೇಖರನಾಯಕ ನೃಪಾಲನ ಪ್ರಭವಾತಿಶಯಮಂ ಕೇಳ್ದು ತನಗಿವರೊಳಗಣನುಸಂಧಾನವಿದ್ದೊಡೆ ಬಲಮಾಗಿರ್ದಪುದೆಂದಾಲೋಚಿಸಿ ಅದಕ್ಕೆ ತಕ್ಕಂತುಚಿತ ಲಿಖಿತಮಂ ಬರೆಸಿ ನಿಯೋಗಿಗಳಂ ಕಳುಪಿರಲವರ್ಗಳಂ ಮನ್ನಿಸಿ ದಿಲಾಸನಿತ್ತು ರಾಯಸಮಂ ಬರೆಸಿ ಚಿನ್ನಭಂಡಾರದ ರಂಗಪ್ಪಯ್ಯನ ಕಯ್ಯೊಳುಚಿತವುಡುಗೊರೆಗಳನಿತ್ತು ಕಳುಪಿಯವರ ಮನದಿಷ್ಟಮಂ ಸಲ್ಲಿಸಿದನಂತುಮಲ್ಲದೆಯುಂ

ಕಂ|| ದುರುಳರಹ ನಾಯಿಮಾರರ
ನುರುಕೂಡಿಸಿ ಕುಹಕಗೆಯ್ಯುತಿಹ ಕುಂಬಳೆಯಾ
ವರಸಾಮಂತರನುರೆ ಪಿಡಿ
ತರಿಸುತೆ ದುರ್ಗದೊಳಗಂಕೆಯಂ ಮಾಡಿಸಿದಂ ೪೩

ತೊಳಪರ್ಕಲಗೋಡರಸುಗ
ಳೊಳತೋಟಿಯ ನಿಲಿಸಿ ವೆಂಕಟೇಂದ್ರನನಲ್ಲಿಂ
ತಳುವದೆ ಬರಿಯಿಸಿ ತದನುಜ
ಗೊಲವಿಂದಂ ರಾಜ್ಯಪಟ್ಟಮಂ ಕಟ್ಟಿಸಿದಂ ೪೪

ವ|| ಇಂತು ಬೇಲೂರ ಸಂಸ್ಥಾನದೊಳುನ್ಮದಾವಸ್ಥೆಯಿಂದವ್ಯವಸ್ಥಿತನಾಗಿ ವರ್ತಿಸುತಿರ್ದ ವೆಂಕಟಾದ್ರಿನಾಯಕನಂ ಕದಲ್ಚಿ ತದನುಜ ಗೋಪಾಲನಾಯಕನಂ ಸಂಸ್ಥಾನದೊಳ್ ನಿಲಿಸಲ್ ತದೀಯನಿಯೋಗಿ ಮಲ್ಲಪ್ಪನ ಕುಮಂತ್ರದಿಂದೈದಿದ ಮಾಯಾವಿಗಳ ಸೈನ್ಯಮಂ ಕೂಡಿಕೊಂಡೈದಿದ ಸುಬ್ಬರಾಯನೆಂಬ ಸೇನಾಧಿಪತಿಯಂ ರಾಯಪಾಳ್ಯದ ಚನ್ನವೀರಪ್ಪನ ಮುಖದಿಂ ರಣರಂಗದೊಳ್ ಪಿಂದೆಗೆಸಿ ಗೋಪಾಲನಾಯಕನಂ ಸಂಸ್ಥಾನದೊಳ್ ನಿಲಿಸಿ ಪರಮಪ್ರಖ್ಯಾತಿಯಂ ಪಡೆದನಂತುಮಲ್ಲದೆಯುಂ

ಅವರ ಮನಸ್ಸಿನ ಇಷ್ಟವನ್ನು ಪೂರ್ತಿಮಾಡಿದನು. ಅಂತೂ ಅಲ್ಲದೆ-೪೩. ಕುಂಬಳೆಯ ಸಾಂತರಾಜರು ದುಷ್ಟರಾದ ನಾಯಿಮಾರರನ್ನು ಕೂಡಿಕೊಂಡು ವಂಚನೆ ಮಾಡುತ್ತಿರಲು ಅವರನ್ನು ಹಿಡಿತರಿಸಿ ದುರ್ಗದಲ್ಲಿ ನಿರ್ಬಂಧಿಸಿದನು. ೪೪. ತೊಳಪ (?) ಮತ್ತು ಅರಕಲಗೂಡಿನ ಅರಸರುಗಳಲ್ಲಿ ಇದ್ದ ಒಳಜಗಳಗಳನ್ನು ನಿಲ್ಲಿಸಿ, ಅಲ್ಲಿಂದ ವೆಂಕಟಾದ್ರಿನಾಯಕನನ್ನು ಬರಮಾಡಿಕೊಂಡು ಅವನ ತಮ್ಮನಿಗೆ ಪ್ರೀತಿಯಿಂದ ರಾಜ್ಯದ ಪಟ್ಟವನ್ನು ಕಟ್ಟಿಸಿದನು. ವ|| ಹೀಗೆ ಬೇಲೂರು ಸಂಸ್ಥಾನದಲ್ಲಿ ಹುಚ್ಚಿನ ಮದಾವಸ್ಥೆಯಿಂದ ಅವಿವೇಕವಾಗಿ ನಡೆದುಕೊಳ್ಳುತ್ತಿದ್ದ ವೆಂಕಟಾದ್ರಿನಾಯಕನನ್ನು ಬಿಡಿಸಿ, ಅವನ ಸಹೋದರನಾದ ಗೋಪಾಲನಾಯಕನನ್ನು ಸಂಸ್ಥಾನದಲ್ಲಿ ಕೂಡಿಸಿದನು. ಅವನ ನಿಯೋಗಿ ಮಲ್ಲಪ್ಪನ ಕುತಂತ್ರದಿಂದ ಬಂದು ಎರಗಿದ ಮೈಸೂರಿನ ಸೈನ್ಯವನ್ನು ಕೂಡಿಕೊಂಡು ಇದಿರಾದ ಸುಬ್ಬರಾಯನೆಂಬ ಸೇನಾಪತಿಯನ್ನು ರಾಯಪಾಳ್ಯದ ಚನ್ನವೀರಪ್ಪನ ಮುಖಾಂತರ ರಣರಂಗದಲ್ಲಿ ಹಿಂದಕ್ಕೆ ಹೋಗುವಂತೆ ಮಾಡಿ ಗೋಪಾಲನಾಯಕನನ್ನು ಸಂಸ್ಥಾನದಲ್ಲಿ

ಮ|| ವರಡಿಳ್ಳೀಶ್ವರನಾಜ್ಞೆಯಿಂದುರೆ ನಿಜಾಮಂ ಲೇಖನಂಗೆಯ್ಸಿ ನೀಂ
ಮಿರಿಜಾಅದ್ದಮಖಾನನಂ ತೆಗೆಸಿ ಸೀರೇದುಜ್ಜ್ವಲತ್ಕೋಂಟೆಯೊಳ್
ಮೆರೆವಾ ತಾಯರಖಾನನಂ ನಿಲಿಪುದೆಂದಟ್ಟಲ್ ಸುಬೇದಾರಶೇ
ಖರನಂ ಲಿಂಗಪನಂ ರಿಪುದ್ವಿಪಮಹೋದ್ಯತ್ಸಿಂಹನಂ ಬೀಳ್ಕೊಡಲ್ ೪೫

ವ|| ಇಂತು ಸುಬೇದಾರ ರೋಹಿಲೆಗಂಗನ ಕೋಟೆಲಿಂಗಪ್ಪನಂ ತೆರಳ್ಚಿಸಿ ಕಳುಪಲಾತನಸಂಖ್ಯಾತಸೇನೆವೆರಸು ಮಾಯಾವಿಗಳ ನಾಡೊಳಗಣ ಕಂದುಗೆರೆ ಚಿಕ್ಕನಾಯಕನಹಳ್ಳಿಯ ಪ್ರಾಂತದೊಳ್ ಪಾಳೆಯಮಂ ಬಿಡಿಸಿ ಮಿರಿಜಾಅದ್ದಮಂಗೆ ಸಹಾಯಮಾಗೈದಿದ ಮೈಸೂರವರ ಸೇನಾಸಮೂಹಮಂ ಬಹುಮುಖದೊಳ್ ಸಂಹರಿಸಿ ಪಲಾಯನಂಗೊಳಿಸಿ ಮತ್ತಮಲ್ಲಿಂದಂ ತೆರಳ್ದೈದಿ ಸೀರೆದ ಪರಿಸ್ತರಣಕ್ಕೆ ಮುತ್ತಿಗೆಯನಿಕ್ಕಿಸಿ ಕ್ರೋಧಿಸಂವತ್ಸರದ ಆಷಾಢ ಶುದ್ಧ ೧೩ ಯೊಳ್ ಸೀರೆಯ ಕೋಂಟೆಯಂ ಕೊಂಡು ಮಿರಿಜಾಅದ್ದಮನಂ ವಾರೆದೆಗೆಸಿ ಆ ಸ್ಥಳದೊಳ್ ತಾಯರಖಾನನಂ ನಿಲಿಸಿ ಪಾತುಶಾಹನ ಕಜ್ಜಮಂ ಬಲ್ಪುಗೆಯ್ಸಿ ಬರಲ್ ಬಳಿಕ್ಕಂ ವೇಣುಪುರ ವರದೊಳಿಡೆವಿಡದೆ ಪಗಲಿರುಳ್ ಮೂರುದಿನಂಬರಂ ನವಬತ್ತುಗಳ ನಿನಾದಮಂ ಪೂರ್ಣಂಗೆಯ್ಸಿ ತತ್ಪುರದ ಪ್ರತಿಗೃಹಂ ತಪ್ಪದೆ ಸಕ್ಕರೆಯಂ ತಿದ್ದಿಸಿ ಬಳಿಕ್ಕಂ ಶಾದುಲ್ಲಖಾನನ ಫೌಜುವೆರಸು ಸುಬೇದಾರಲಿಂಗಪ್ಪನಂ ಮಾಯಾವಿಗಳ ಸೀಮೆಯ ಮೇಲೆ ದಾಳಿವರಿಸಲಾತಂ ಪಟ್ಟಣದ ಕೋಂಟೆಯ ಸಮೀಪಮಂ ಸಾರ್ದು ನೀರಜಬಿಯಂ (?) ಕಟ್ಟಲವರ್ಗಳ್ ಭಯಸ್ಥರಾಗಿ ಪರಸಂಧಾನಮಂ

ನಿಲ್ಲಿಸಿ ಪರಮ ಪ್ರಖ್ಯಾತಿಯನ್ನು ಹೊಂದಿದನು. ಅಲ್ಲದೆ, ೪೫. ಡಿಲ್ಲಿಯ ಬಾದಷಹನ ಅಪ್ಪಣೆಯಂತೆ ನಿಜಾಮನು ಒಂದು ಪತ್ರವನ್ನು ಬರೆದು "ನೀವು ಮಿರ್ಜಾ ಅದ್ದಮಖಾನನನ್ನು ಸೀರ್ಯದ ಕೋಟೆಯಿಂದ ತೆಗೆದುಹಾಕಿ ಅಲ್ಲಿ ತಾಯರಖಾನನನ್ನು ನೆಲೆಗೊಳಿಸಬೇಕು" ಎಂದು ತಿಳಿಸಿ ಹೇಳಿ ನಿರೂಪ ಕಳುಹಿಸಿದನು. ಆಗ ನಾಯಕನು ಸುಬೇದಾರ ಶ್ರೇಷ್ಠನಾದ ಹಾಗೂ ಶತ್ರುಗಳೆಂಬ ಆನೆಗಳಿಗೆ ಸಿಂಹದಂತಿರುವ ಲಿಂಗಪ್ಪನನ್ನು ಹೊರಡಿಸಿ ಕಳುಹಿಸಿದನು. ಆತನು ಲೆಖ್ಖವಿಲ್ಲದಷ್ಟು ಸೈನ್ಯವನ್ನು ಕೂಡಿಕೊಂಡು ಮೈಸೂರಿನವರ ಸೀಮೆಗೆ ಸೇರಿದ ಕಂದುಗೆರೆ, ಚಿಕ್ಕನಾಯಕನ ಹಳ್ಳಿಯ ಪ್ರಾಂತ್ಯದಲ್ಲಿ ಪಾಳೆಯವನ್ನು ಹಾಕಿದನು. ಮಿರಿಜಾ ಅದ್ದಮನಿಗೆ ಸಹಾಯವಾಗುವಂತೆ ಬಂದ ಮೈಸೂರವರ ಸೇನಾಸಮೂಹವನ್ನು ನಾನಾ ಮುಖದಿಂದ ಸಂಹರಿಸಿ ಪಲಾಯನ ಮಾಡಿಸಿದನು. ಅಲ್ಲಿಂದ ತೆರಳಿ ಸೀರ್ಯದ ಕೋಟೆಗೆ ಮುತ್ತಿಗೆಯನ್ನು ಹಾಕಿಸಿ ಕ್ರೋಧಿ ಸಂವತ್ಸರದ ಆಷಾಢ ಶುದ್ಧ ೧೩ರಲ್ಲಿ ಆ ಕೋಟೆಯನ್ನು ವಶಪಡಿಸಿಕೊಂಡನು. ಮಿರಿಜಾ (ಮಿರ್ಜಾ) ಅದ್ದಮನನ್ನು ತೆಗೆದು ಹಾಕಿ ಆ ಸ್ಥಳದಲ್ಲಿ ತಾಯರಖಾನನನ್ನು ನೇಮಿಸುವಂತೆ ಮಾಡಿ ಬಾದಷಹನ ಕಾರ್ಯವನ್ನು ನೆರವೇರಿಸಿದನು. ಆ ಬಳಿಕ ವೇಣುಪುರಕ್ಕೆ (ರಾಜಧಾನಿಗೆ) ಬಂದು ಹಗಲಿರುಳು ಎಡೆಬಿಡದೆ ಮೂರು ದಿನಗಳವರೆಗೂ ಭೇರೀವಾದ್ಯವು ನಡೆಯುವಂತೆ ಮಾಡಿದನು. ರಾಜಧಾನಿಯಲ್ಲಿ ಪ್ರತಿ ಮನೆಗೂ ಸಕ್ಕರೆಯನ್ನು ಹಂಚಿದನು. ಅನಂತರ ಶಾದುಲ್ಲಖಾನನ ಸೇನೆಯೊಂದಿಗೆ ಸುಬೇದಾರ ಲಿಂಗಪ್ಪನನ್ನು ಮೈಸೂರವರ ಸೀಮೆಯ ಗಡಿಯ ಮೇಲೆ ದಾಳಿ ನಡೆಸಲು, ಕಳಿಸಿದನು. ಆತನು ಪಟ್ಟಣದ (ಶ್ರೀರಂಗಪಟ್ಟಣದ?) ಕೋಟೆಯ ಸಮೀಪಕ್ಕೆ ಬಂದು ಕಟ್ಟಲು ಅವರುಗಳು ಭಯಗ್ರಸ್ತರಾಗಿ ಸಂಧಾನಕ್ಕೆ ಬಂದರು. ಆಗಲಿ ಎಂದು ಅವರು

ನಿಶ್ಚಯಿಸಲಾಗಲೆಂದವರ್ಗಳಿಂ ಭೂರಿದ್ರವ್ಯಾಭರಣಾಂಬರವಸ್ತುವಾಹನಂಗಳಂ ಕೊಂಡು ತಂದೊಪ್ಪಿಸಲೀ ವಾರ್ತೆಯಂ ಲಿಖಿತಮುಖದಿಂ ಚಿಕಲೀಸಖಾನಂಗೆ ತಿಳುಪಲಾ ನಿಜಾಮಂ ಕೇಳ್ದು ಸಂತಸಂದಳೆದು ಕಳುಪಿದಶ್ವಮುಚಿತಮುಡುಗೊರೆಗಳಂ ಪರಿಗ್ರಹಿಸಿ ನಾಲ್ದೆಸೆಯ ದೊರೆಗಳೊಳ್ ಪರಮಪ್ರಸಿದ್ಧಿಯಂ ಪಡೆದೊಡನಾ ಚಿಕಲೀಸಖಾನನನುಮತಿಯಿಂ

ಕಂ॥ ಮೆರೆವ ತುರುಷ್ಕರ ವಶವಾ
ಗಿರುವಜ್ಜಂಪುರದ ಪೊಳೆಯಪೊನ್ನೂರ ಸುವಿ
ಸ್ತರದ ಸಾಸುವೆಯಹಳ್ಳಿಯ
ವರಕೋಟಾತ್ರಯವನಾನ್ನೃಪಂ ವಶಗೈದಂ ೪೬

ವ॥ ಮತ್ತಮದಲ್ಲದೆ ಕ್ರೋಧಿನಾಮಸಂವತ್ಸರದ ಫಾಲ್ಗುಣಮಾಸದೊಳ್

ಕಂ॥ ರಾಜಿಪ ಕೊಲ್ಲೂರ್ಗೆ ತೆರ
ಳ್ದಾ ಜನಪತಿವರ್ಯನೆಸೆವ ಮೂಕಾಂಬಿಕೆಯಂ
ಪೂಜಿಸುತಿರುತಿರಲಿತ್ತಂ
ಭೂಜಾನಿಗಳೆರೆಯಪಾತುಶಾಹನ ಮುಖದಿಂ ೪೭

ವ॥ ಇಂತು ಪಾತುಶಾಹನನುಜ್ಞೆಯಿಂದಾರೆಯರರಸನೆನಿಪ ಶಾಹುರಾಜನ ವಜೀರಂ ಶ್ರೀಪತಿರಾಯನಂ ಕೂಡಿಕೊಂಡು ತತ್ಸೈನ್ಯ ಸಮೂಹಮಾತ್ಮಸೈನ್ಯಂವೆರಸು

ಕಂ॥ ಅತಿಧನಾಪೇಕ್ಷೆಯಿಂದ
ಪ್ರತಿಮಂ ಚಿಕಲೀಸಖಾನನೈತರೆ ಮುನ್ನಂ
ಧೃತಿಗೆಡಿಸಿ ಲಿಂಗಪನ ಮುಖ
ದೆ ತದರ್ಥವ ಸಲಿಸಿ ರಾಜ್ಯಮಂ ರಕ್ಷಿಸಿದಂ ೪೮

ಗಳಿಗೆ ಅಭಯ ನೀಡಿ ಅವರುಗಳಿಂದ ಅನೇಕ ವಿಧವಾದ ಹಣ, ಆಭರಣ ಹಾಗೂ ವಸ್ತುವಾಹನಾದಿಗಳನ್ನು ಪಡೆದುಕೊಂಡನು. ಈ ವಾರ್ತೆಯನ್ನು ನಿರೂಪದ ಮೂಲಕ ಚಿಕಲೀಸಖಾನನಿಗೆ ತಿಳಿಸಲು ನಿಜಾಮನು ಕೇಳಿ ಸಂತೋಷಪಟ್ಟನು. ಆತನು ಕಳಿಸಿದ ಉಚಿತ ಉಡುಗೊರೆಗಳನ್ನು ಕೆಳದಿ ಅರಸನು ಸ್ವೀಕರಿಸಿ ನಾಲ್ಕು ದಿಕ್ಕಿನ ದೊರೆಗಳಲ್ಲಿ ಪರಮ ಪ್ರಸಿದ್ಧಿಯನ್ನು ಹೊಂದಿದನು. ಆ ಚಿಕಲೀಸ್‌ಖಾನನ ಅನುಮತಿಯಿಂದ ೪೬. ತುರುಕರ ವಶದಲ್ಲಿದ್ದ ಅಜ್ಜಂಪುರ, ಹೊಳೆಹೊನ್ನೂರು ಮತ್ತು ಸಾಸುವೆಹಳ್ಳಿಯೆಂಬ ಮೂರು ಕೋಟೆಗಳನ್ನು ಆ ಸೋಮಶೇಖರ ನಾಯಕನು ವಶಪಡಿಸಿಕೊಂಡನು. ವ॥ ಮತ್ತೆ ಅದಲ್ಲದೆ ಕ್ರೋಧಿನಾಮ ಸಂವತ್ಸರದ ಫಾಲ್ಗುಣಮಾಸದಲ್ಲಿ-೪೭. ಶೋಭಿಸುತ್ತಿರುವ ಕೊಲ್ಲೂರಿಗೆ ಹೋಗಿ ಆ ರಾಜಶ್ರೇಷ್ಠನು ಶ್ರೀ ಮೂಕಾಂಬಿಕೆಯನ್ನು ಪೂಜಿಸುತ್ತಿರಲು, ಇತ್ತ ಬಾದಷಹನ ಮೂಲಕ ವ॥ ಈ ರೀತಿ ಬಾದಷಹನ ಅಪ್ಪಣೆಯಿಂದ ಆರೆಯರ ದೊರೆ ಶಾಹುರಾಜನ ಮಂತ್ರಿಯು (ಚಿಕಲೀಸಖಾನನು) ಶ್ರೀಪತಿರಾಯನನ್ನು ಕೂಡಿಕೊಂಡು ಅವನ ಸೈನ್ಯ ಮತ್ತು ತನ್ನ ಸೈನ್ಯಗಳನ್ನು ಸೇರಿಸಿ, ೪೮. ಅಸಮಾನನಾದ ಚಿಕಲೀಸಖಾನನು ಹೆಚ್ಚಿನ ಹಣದ ಆಸೆಯಿಂದ ಬಂದಾಗ ಅವರ ಧೈರ್ಯವನ್ನು ಕೆಡಿಸಿ, ಲಿಂಗಪ್ಪನ ಮುಖಾಂತರ ಅವನ

ವ॥ ಮತ್ತಮದಲ್ಲದಾ ಸೋಮಶೇಖರನಾಯಕಂ ರಾಕ್ಷಸಸಂವತ್ಸರದ ಮಾರ್ಗಶಿರ ಶುದ್ಧ ಸಪ್ತಮಿಯಲ್ಲಿ ನಾಲಕಿಯೆಂಬ ಮನೋಹರಮಾದ ಮಹಾಯಾನಮನಾರೂಢನಾಗಿ ಸಮಸ್ತ ಸೈನ್ಯಸಹಿತಂ ಸರ್ವಸಂಭ್ರಮದಿಂ ಮಹಾನವಮಿಯ ಬಯಲ್ಗೆ ತೆರಳ್ದಾಸ್ಥಾನದೊಳೋಲಗಂಗೊಟ್ಟು ಸ್ಥಳಪರಸ್ಥಳದ ಮನ್ನೆಯರ್ಕಳಿಂದುವುಚಿತವುಡುಗೊರೆ ಮುಂತಾದುಪಚಾರಂಗಳಿಂ ಸನ್ಮಾನಂಬೆತ್ತು ಮರಳ್ದು ರಾಜಾಲಯಮಂ ಸಾರ್ದು ವರ್ತಿಸುತ್ತುಮಿರಲ್ ನಳಸಂವತ್ಸರದ ಚೈತ್ರದೊಳ್

ಕಂ॥ ನಾಲಕಿಯನೇರ್ದ ವಾರ್ತೆಯ
ಕೇಳಿ ಕನಲ್ದಾ ನಿಜಾಮನೈತರೆ ಧುರದೊಳ್
ತೇಲಿಸಿ ಪಣಮಿತ್ತುರೆ ಪಿಡಿ
ದೂಳಿಗಮಂ ನಡೆಸಿ ಮೆರೆದನತಿಚಲಪದಮಂ ೪೯

ವ॥ ಮತ್ತಮದಲ್ಲದೆ ಪಿಂತೆ ಪರಾಭವ ಸಂವತ್ಸರದೊಳ್

ಕಂ॥ ಶಾಹುರಾಜನ ಹುಕುಮದಿಂ
ಮೋಹರಸಹಿತೈದಿ ತಗುಳ್ದ ಬಾಜೀರಾಯಂ
ಗಾಹವಮಂ ಪೊನ್ನಂ ನಿ
ರ್ವಾಹಕಲಿಂಗಪನ ಮುಖದೊಳಿತ್ತು ತೆಗೆಸಿದಂ ೫೦

ಕೀಲಕಾಬ್ದದೊಳೆ ತದ್ಭೂ
ಪಾಲಂ ಕೊಲ್ಲೂರಿಗೈದಿ ಮೂಕಾಂಬಿಕೆಯಂ
ಲೀಲೆಯೊಳರ್ಚಿಸಿ ಭೂಸುರ
ಜಾಲವನತಿತುಷ್ಟಿಬಡಿಸಿದಂ ಭೋಜನದಿಂ ೫೧

ಅಭೀಷ್ಟವನ್ನು ಸಲ್ಲಿಸಿ ರಾಜ್ಯವನ್ನು ರಕ್ಷಿಸಿದನು. ವ॥ ಮತ್ತೆ ಅದಲ್ಲದೆ ಸೋಮಶೇಖರ ನಾಯಕನು ರಾಕ್ಷಸ ಸಂವತ್ಸರದ ಮಾರ್ಗಶಿರ ಶುದ್ಧ ಸಪ್ತಮಿಯಲ್ಲಿ "ನಾಲಕಿ" ಎಂಬ ಮನೋಹರವಾದ ಯಾನವನ್ನು ಏರಿದನು. ಸಮಸ್ತ ಸೈನ್ಯಸಹಿತನಾಗಿ ಸರ್ವಸಂಭ್ರಮಗಳೊಡನೆ ಮಹಾನವಮಿಯ ಬಯಲಿಗೆ ಹೊರಟು ಆ ಪ್ರದೇಶದಲ್ಲಿ ದೊಡ್ಡ ಸಭೆಯನ್ನು ನಡೆಸಿದನು. ಸ್ಥಳದ ಹಾಗೂ ಪರಸ್ಥಳದ ಸಾಮಂತರುಗಳಿಂದ ಉಚಿತವಾದ ಉಡುಗೊರೆ ಮುಂತಾದ ಉಪಚಾರಗಳಿಂದ ಸನ್ಮಾನ ಹೊಂದಿ ಗೌರವಿಸಲ್ಪಟ್ಟನು. ಅನಂತರ ಅರಮನೆಯನ್ನು ಸೇರಿದನು. ಹೀಗಿರಲು ನಳ ಸಂವತ್ಸರದ ಚೈತ್ರಮಾಸದಲ್ಲಿ- ೪೯. ಸೋಮಶೇಖರನಾಯಕನು ನಾಲಕಿಯನ್ನು ಏರಿದ ವಾರ್ತೆಯನ್ನು ಕೇಳಿ ಕಡು ಕೋಪಗೊಂಡ ನಿಜಾಮನು ಯುದ್ಧಕ್ಕೆ ಬರಲು ಅವನನ್ನು ಸೋಲಿಸಿ ಹಠಹಿಡಿದು ಶಪಥಗೈದಂತೆ ಕಾರ್ಯವನ್ನು ನಡೆಸಿ ತನ್ನ ಛಲವನ್ನು ಮೆರೆದನು. ವ॥ ಹಿಂದೆ ಪರಾಭವ ಸಂವತ್ಸರದಲ್ಲಿ, ೫೦. ಶಾಹುರಾಜನ ಅಪ್ಪಣೆಯಂತೆ ಸೇನೆಯೊಂದಿಗೆ ಬಂದು ತಗುಲಿದ ಬಾಜೀರಾಯನಿಗೆ ಯುದ್ಧವನ್ನೂ ಹಾಗೂ ಹೊನ್ನನ್ನೂ ಲಿಂಗಪ್ಪನ ಮುಖಾಂತರ ಕೊಟ್ಟು ಕಳುಹಿಸಿದನು. ೫೧. ಕೀಲಕ ಸಂವತ್ಸರದಲ್ಲಿ ಆ ರಾಜನು ಕೊಲ್ಲೂರಿಗೆ ಹೋಗಿ ಶ್ರೀ ಮೂಕಾಂಬಿಕೆಯನ್ನು ಲೀಲೆಯಿಂದ ಪೂಜಿಸಿ ಬ್ರಾಹ್ಮಣ ಸಮೂಹವನ್ನು ಭೋಜನದ ಮೂಲಕ

ಕಂ॥ ಮರೆವ ಸಹಸ್ರಸುವಾಸಿನಿ
ಯರಿಗಂ ವರಕಂಚುಕಂಗಳಂ ನಲಿದಿತ್ತಾ
ದರಿಸಿ ಮೂಕಾಂಬಿಕೆಗೆ ತ
ದ್ಧರಣಿಪನುನ್ನತರಥೋತ್ಸವವನಾಗಿಸಿದಂ ೫೨

ನೆರೆ ರಂಗಪೂಜೆಯಂ ಭಾ
ಸುರತರವರ ಲಕ್ಷದೀಪಪೂಜೆಯನನುವಿಂ
ವಿರಚಿಸಿ ತನ್ಮೂಕಾಂಬೆಯ
ಚರಣಾಬ್ಜವನಧಿಕಭಕ್ತಿಯಿಂದರ್ಚಿಸಿದಂ ೫೩

ವರಮೂಕಾಂಬಿಕೆಯಡಿದಾ
ವರೆಯಂ ಬೀಳ್ಕೊಂಡು ತನ್ನೃಪಾಲಂ ಕೆಳದೀ
ಪುರಮಂ ಸಾರುತೆ ರಾಮೇ
ಶ್ವರಲಿಂಗವನಧಿಕಭಕ್ತಿಯಿಂದರ್ಚಿಸಿದಂ ೫೪

ಶ್ರೀ ವೀರಭದ್ರನೆಸೆವಡಿ
ದಾವರೆಯಂ ಪರಮಭಕ್ತಿಯಿಂ ಪೂಜಿಸಿ ತ
ದ್ದೇವರದೇವಂಗವನಿಪ
ದೇವಂ ತಾಂ ಕೆಂಡದರ್ಚನೆಯನರ್ಪಿಸಿದಂ ೫೫

ವ॥ ಇಂತಾ ಕೆಳದಿಯ ವೀರಭದ್ರೇಶ್ವರಂಗೆ ಕೆಂಡದರ್ಚನಾದಿಪೂಜೆಗಳಂ ಸಮರ್ಪಿಸಿ ಬೀಳ್ಕೊಂಡನಂತರಂ ವೇಣುಪುರದರಮನೆಯಂ ಸಾರ್ದು ವರ್ತಿಸುತ್ತುಮಿರಲ್ಕೆ ಭುಜಬಲ ಪರಾಕ್ರಮಾತಿಶಯದೇಳ್ಗೆಯಂ ಕೇಳ್ದು ಸಂದರ್ಶನೌತ್ಸುಕ್ಯದಿಂ ನಿಜಕುಟುಂಬಸಹಿತಮಾಗೆಳ್ತಂದ

ಸಂತೋಷಗೊಳಿಸಿದನು. ೫೨. ಶೋಭಿಸುವ ಸಾವಿರ ಮಂದಿ ಸುಮಂಗಲಿಯರಿಗೆ ಶ್ರೇಷ್ಠವಾದ ಕುಪ್ಪಸಗಳನ್ನು ಕೊಟ್ಟು ಮನ್ನಿಸಿ ಶ್ರೀ ಮೂಕಾಂಬಿಕೆಗೆ ಆ ರಾಜನು ಉನ್ನತವಾದ ರಥೋತ್ಸವವನ್ನು ಮಾಡಿಸಿದನು. ೫೩. ರಂಗಪೂಜೆಯನ್ನೂ, ಲಕ್ಷದೀಪ ಪೂಜೆಯನ್ನೂ ಮಾಡಿ ಆ ಶ್ರೀ ಮೂಕಾಂಬೆಯ ಪಾದಕಮಲವನ್ನು ಹೆಚ್ಚು ಭಕ್ತಿಯಿಂದ ಪೂಜಿಸಿದನು. ೫೪. ಶ್ರೀ ಮೂಕಾಂಬಿಕೆಯ ಪಾದಕಮಲವನ್ನು ಬೀಳ್ಕೊಂಡು ಆ ರಾಜನು ಕೆಳದಿಪುರಕ್ಕೆ ಹೋಗಿ ಶ್ರೀ ರಾಮೇಶ್ವರ ಲಿಂಗವನ್ನು ಹೆಚ್ಚು ಭಕ್ತಿಯಿಂದ ಪೂಜಿಸಿದನು. ೫೫. ಶ್ರೀ ವೀರಭದ್ರನ ಪಾದಕಮಲವನ್ನು ಭಕ್ತಿಯಿಂದ ಪೂಜಿಸಿ ಆ ಸೋಮಶೇಖರನಾಯಕನು ಆ ದೇವರ ದೇವನಿಗೆ ಕೆಂಡದರ್ಚನೆಯನ್ನು ಮಾಡಿಸಿದನು. ವ॥ ಈ ರೀತಿ ಕೆಳದಿಯ ಶ್ರೀ ವೀರಭದ್ರೇಶ್ವರನಿಗೆ ಕೆಂಡದರ್ಚನಾದಿ ಪೂಜೆಗಳನ್ನು ಸಮರ್ಪಣೆ ಮಾಡಿ ರಾಜಧಾನಿಗೆ ಹಿಂದಿರುಗಿದನು. ಹೀಗಿರಲು ಇವನ ಭುಜಬಲ ಪರಾಕ್ರಮವನ್ನೂ, ಕೀರ್ತಿಯನ್ನೂ, ಹಾಗೂ ಏಳಿಗೆಯನ್ನೂ ಕೇಳಿದ ಪ್ರಸಿದ್ಧ ನಿಯೋಗಿಯೆನಿಸಿದ್ದ ಕಾಪಿ ಕೋನಯ್ಯನು ತನ್ನ

ಪ್ರಸಿದ್ಧನಿಯೋಗಿಯೆನಿಪ್ಪರ್ ಕಾಪಿಕೋನಯ್ಯನಂ ಬೇಟಿಗೊಂಡು ಭೂಸ್ವಾಸ್ಥ್ಯಮುಮನುಚಿತ ಮಾದುಡುಗೊರೆಗಳುಮನಿತ್ತು ಮನ್ನಿಸಿ ಬೀಳ್ಕೊಟ್ಟು ಸುಖದಿಂ ರಾಜ್ಯಂಗೆಯ್ಯುತ್ತುಮಿರ್ದ ನಂತುಮಲ್ಲದೆಯುಂ

ಕಂ॥ ಬಳಿಕ ಕಿರಾತಾದಿಗಳುಪ
ಟಳದಿಂದಳವಳಿದ ಗುಡಿಯ ಕೋಂಟೆಯಧೀಶಂ
ಗೊಲವಿಂ ಸಹಾಯಮಂ ರಚಿ
ಸಿ ಲಸದ್ವಿಖ್ಯಾತಿಯಾಂತನಾ ನೃಪವರ್ಯಂ ೫೬

ವ॥ ಮತ್ತಮದಲ್ಲದೆ

ಕಂ॥ ಅಗಣಿತಸೈನ್ಯಸಮೇತಂ
ಸೊಗಯಿಪ ಪೊನ್ನಾಳಿಗೈದಿ ರಾಜ್ಯವನಲೆವಾ
ಸುಗುಣಾಬಾಯಿಯ ದಂಡಂ
ತೆಗೆಸಿ ವಿರಾಜಿಸುತೆ ರಾಜ್ಯಮಂ ರಕ್ಷಿಸಿದಂ ೫೭

ವ॥ ಮತ್ತಮದಲ್ಲದೆ

ಕಂ॥ ವೇಣುಪುರವರದ ಪಶ್ಚಿಮ
ದಾಣದೊಳತಿರಮ್ಯಮಾದ ರಾಜಾಲಯಮಂ
ಜಾಣರಿನೊಪ್ಪಮೆನಲ್ ನಿ
ರ್ಮಾಣವನಾಗಿಸಿದನಾನೃಪಾಲವರೇಣ್ಯಂ ೫೮

ವ॥ ಮತ್ತಮಾ ರಾಜಾಲಯಮಂ

ಕುಟುಂಬ ಸಹಿತನಾಗಿ ಈತನ ಸಂದರ್ಶನ ಮಾಡಲು ಬಂದನು. ಆತನಿಗೆ ಸಂದರ್ಶನ ನೀಡಿ, ಉಚಿತವಾದ ಉಡುಗೊರೆಗಳು ಹಾಗೂ ಭೂಮಿಯನ್ನೂ ನೀಡಿ ಮನ್ನಿಸಿ ಬೀಳ್ಕೊಟ್ಟನು. ಹೀಗೆ ರಾಜ್ಯವನ್ನು ಸುಖದಿಂದ ಪರಿಪಾಲಿಸುತ್ತಿರುವಲ್ಲಿ- ೫೬. ಆಮೇಲೆ ಬೇಡಜನಾಂಗವೇ ಮುಂತಾದವರ ಉಪದ್ರವಗಳಿಂದ ಸೋತುಹೋದ ಗುಡಿಕೋಟೆಯ ಒಡೆಯನಿಗೆ ಸಹಾಯವನ್ನು ಮಾಡಿ ಆ ರಾಜಶ್ರೇಷ್ಠನು ಪ್ರಖ್ಯಾತಿ ಪಡೆದನು. ವ॥ ಮತ್ತೆ ಅದಲ್ಲದೆ ೫೭. ಲೆಕ್ಕವಿಲ್ಲದಷ್ಟು ಸೈನ್ಯದೊಂದಿಗೆ ಸುಂದರವಾದ ಹೊನ್ನಾಳಿಗೆ ಹೋಗಿ ರಾಜ್ಯದಲ್ಲಿ ಸುತ್ತಾಡುತ್ತಿರುವ ಸುಗುಣಾಬಾಯಿಯ ಸೈನ್ಯವನ್ನು ಓಡಿಸಿ ರಾಜ್ಯವನ್ನು ಕಾಪಾಡಿದನು. ವ॥ ಮತ್ತೆ ಅದಲ್ಲದೆ ೫೮. ಬಿದನೂರಿನ ಪಶ್ಚಿಮ ಭಾಗದಲ್ಲಿ ಅತಿ ಸುಂದರವಾದ ಅರಮನೆಯನ್ನು ಜಾಣರು ಚೆನ್ನಾಗಿದೆಯೆಂದು ಹೊಗಳುವ ಹಾಗೆ ಆ ರಾಜಶ್ರೇಷ್ಠನು ನಿರ್ಮಾಣ ಮಾಡಿಸಿದನು. ವ॥ ಮತ್ತೆ ಆ ರಾಜಾಲಯವನ್ನು

ಕಂ|| ದಾಳಿಂಬಂ ನವರಂಗಂ
ಪೇಳಲ್ಕಂ ಬಿರಿದುದೆಂಬ (?) ನಾಮಾಂಕಿತದಿಂ
ಮೇಳವಿಸಿದ ಚೌಕಿಯ ಸೌ
ಧಾಳಿಗಳಿಂ ರಚನೆಗೆಯ್ಸಿದಂ ಸಂತಸದಿಂ ೫೯

ಇನಿತಲ್ಲದೆ ಕೆರೆ ಕಾಳ್ಪುರ
ಮಿನಿಗರ್ಬು ಸುಪುಷ್ಪವಾಟಿ ಕೊಳಮುರುಶಾಲೀ
ವನ ವಾಪಿ ಕೂಪ ತೋಪುಗ
ಳನುದಿನಮುಜ್ಜ್ವಲಿಸೆ ರಚನೆಗೆಯ್ಸಿದನನುವಿಂ ೬೦

ವ|| ಇಂತು ರಚನೆಗೆಯ್ಸಿ ಬಳಿಕ್ಕಾ ಸ್ಥಳಕ್ಕೆ ಚಂದ್ರಶೇಖರಪುರಮೆಂದು ನಾಮಾಂಕಿತಮಂ ಮಾಡಿಯದಕ್ಕೆ ತಕ್ಕ ಕೆಲವು ಸೀಮೆ ಭೂಮಿಗಳಂ ವಿಂಗಡಿಸಿ ಮನಬಂದ ವೇಳೆಯೊಳ್ ತಾನಲ್ಲಿಗೆ ವಿನೋದದಿಂ ವೈಹಾಳಿಯನೆಸಗಿ ವಿಹರಿಸುತ್ತುಂ ಮತ್ತಂ ವೇಣುಪುರದರಮನೆಯಂ ಕಾಜಿನ ಭವಂತಿ ಹೊಸ ಭವಂತಿ ಐದಂಕಣದುಪ್ಪರಿಗೆ ವಸಂತಮಹಲ್ ಚಂದ್ರಮಹಲ್ಲೆಂಬೀ ಸ್ಥಾನಗಳಿಂ ವಿಸ್ತಾರಂಗೆಯ್ಸಿ ಕಟ್ಟಿಸಿ ಪೊಸತಾಗಿ ಗಜತುರಗಶಾಲೆಗಳಂ ಕಟ್ಟಿಸಿ ಮತ್ತಮಾ ವೇಣುಪುರದೊತ್ತಿನೊಳಾ ವೇಣುಪುರಕ್ಕುಪಪುರಮಾಗಿರ್ಪಂತು ಸಾಧಾರಣಸಂವತ್ಸರದಲ್ಲಿ ನಾಗಪಟ್ಟಣಮೆಂಬ ಪೇಟೆಯಂ ನಿರ್ಮಾಣಂಗೆಯ್ಸಿ ಶ್ರೀಮನ್ನೀಲಕಂಠೇಶ್ವರ ಸ್ವಾಮಿಯ ದೇವಸ್ಥಾನದ ರಂಗಮಂಟಪಂ ಮುಂತಾದ

೫೯. ದಾಳಿಂಬ, ನವರಂಗ, ಬಿರಿದು (?) ಎಂಬ ಹೆಸರಿನಿಂದ[1] ಕೂಡಿದ ಚಾವಡಿಯ ಮಹಡಿಗಳ ಸಾಲುಗಳನ್ನೂ ಸಂತೋಷದಿಂದ ರಚಿಸಿದನು. ೬೦. ಇಷ್ಟಲ್ಲದೆ ಕೆರೆ, ಕಾಲುವೆ, ಕಬ್ಬಿನ ತೋಟ, ಹೂವಿನ ತೋಟ, ಕೊಳ, ಭತ್ತದ ಹೊಲ, ಭಾವಿಗಳು ಮತ್ತು ತೋಪುಗಳನ್ನೂ ಪ್ರತಿದಿನವೂ ಶೋಭಿಸುವ ರೀತಿಯಲ್ಲಿ ಕ್ರಮದಿಂದ ಮಾಡಿಸಿದನು. ವ|| ಈ ರೀತಿ ನಿರ್ಮಾಣ ಮಾಡಿಸಿದ ಬಳಿಕ ಆ ಸ್ಥಳಕ್ಕೆ ಚಂದ್ರಶೇಖರಪುರವೆಂದು ನಾಮಾಂಕಿತವಿಟ್ಟನು. ಅದಕ್ಕೆ ಬೇಕಾಗುವಂತೆ ತಕ್ಕ ಕೆಲವು ಭೂಮಿ, ಸೀಮೆಗಳನ್ನು ವಿಂಗಡಿಸಿ ಆಗಾಗ ಮನಸ್ಸಿಗೆ ಬಂದ ವೇಳೆಯಲ್ಲಿ ಕುದುರೆ ಸವಾರಿಯ ಮೂಲಕ ಅಲ್ಲಿಗೆ ಹೋಗಿ ವಿಹಾರ ಮಾಡುತ್ತಾ ಆನಂದಪಡುತ್ತಿದ್ದನು. ವೇಣುಪುರದ ಅರಮನೆಯನ್ನು ಗಾಜಿನ ಭವಂತಿ, (ಗೋಪುರ) ಹೊಸಭವಂತಿ, (ಗೋಪುರ) ಐದು ಅಂಕಣದ ಉಪ್ಪರಿಗೆ, ವಸಂತಮಹಲ್, ಚಂದ್ರಮಹಲ್ ಮುಂತಾದ ಹೆಸರಿನಿಂದ ವಿಸ್ತಾರಗೊಳಿಸಿ ಕಟ್ಟಿಸಿದನು. ರಾಜಧಾನಿಯಲ್ಲಿ ಆನೆ, ಕುದುರೆಗಳಿಗೆ ಬೇಕಾಗುವಂತೆ ಅಶ್ವಶಾಲೆ, ಗಜಶಾಲೆಗಳನ್ನು ನಿರ್ಮಿಸಿದನು. ವೇಣುಪುರದ ಹತ್ತಿರದಲ್ಲಿ ಉಪನಗರವಿರುವ ರೀತಿಯಲ್ಲಿ ಸಾಧಾರಣ ಸಂವತ್ಸರದಲ್ಲಿ ನಾಗಪಟ್ಟಣವೆಂಬ ಪೇಟೆಯನ್ನು ನಿರ್ಮಾಣಮಾಡಿಸಿದನು. ಶ್ರೀ ನೀಲಕಂಠೇಶ್ವರ ಸ್ವಾಮಿಯ ದೇವಸ್ಥಾನದ ರಂಗಮಂಟಪವೇ ಮುಂತಾದುವನ್ನು ಜೀರ್ಣೋದ್ಧಾರ ಮಾಡಿಸಿದನು.

---

೧. ದಾಡಿಂಬ ವಿಕಾಸ, ನಾರಂಗ ವಿಕಾಸ ಎಂಬ ಹೆಸರುಗಳನ್ನು ಈ ಬಗೆಯಲ್ಲಿ ಸೂಚಿಸಿರಬಹುದೆ?

ಕೆಲವು ಪ್ರದೇಶಂಗಳಂ ಜೀರ್ಣೋದ್ಧಾರವಂ ಮಾಡಿಸಿ ತಚ್ಛಿಖರವಂ ಚಾಮೀಕರರಸ ಲಾಂಛನಲಾಂಛಿತಮಾದ ಲೋಹಪತ್ರಿಪಟ್ಟಿಕೆಗಳ ಕೆಲಸಗತಿಯಿಂ ರಂಜಿಪಂತು ರಚನೆಗೆಯ್ಸಿ ಮತ್ತಮದಲ್ಲದೆ ಮುತ್ತಿನ ಸತ್ತಿಗೆ ಕರಿಬೆಗರಿಯ ಪಚ್ಚೆಯ ಸುವರ್ಣದ ಸುರುಗಿದಂಡೆ ಚಿನ್ನದ ಶಿಖರ ಮುಂತಾದ ವಿಚಿತ್ರನೂತನ ಪದಾರ್ಥಂಗಳಂ ನಿರ್ಮಾಣಂಗೆಯ್ಸಿ ಮತ್ತಂ ಭುವನಗಿರಿಯ ದುರ್ಗದರಮನೆಯ ಭವಂತಿಗಳೊಳ್ ಶಾರಾಬ್ದಾರನಾಗಪ್ಪನ ಮುಖದಿಂ ಶಿಲಾಸ್ತಂಭಂಗಳಂ ನಿಲಿಸಿ ಜೀರ್ಣೋದ್ಧಾರಮಂ ಮಾಡಿಸಿ ಗಾಳಿಯುಪ್ಪರಿಗೆಯಂ ಕಟ್ಟಿಸಿ ಇಂತಾ ರಾಜಾಲಯಮಂ ದೃಢತರಮನಾಗಿಸಿ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರ್ದನಂತುಮಲ್ಲದೆಯುಂ

ಕಂ|| ಪಿಂಗಳಾಬ್ದದೊಳಿ ತನ್ನೃಪ
ಪುಂಗವನುರುಭುವನಗಿರಿಯನೈದೆ ಬಳಿಕ್ಕಂ
ಶೃಂಗಪುರಕ್ಕಾಗಿಯೇ ಮೇ
ಲ್ಬಂಗಾಡಿಯ ಘಟ್ಟವಿಳಿದು ಮುಂತೈದುತ್ತುಂ ೬೧

ಕಂ|| ಸುರುಚಿರಸುಬ್ರಹ್ಮಣ್ಯಾ
ಕ್ಕರದಾನೃಪವರ್ಯನೈದಿ ಸುಬ್ರಹ್ಮಣ್ಯೇ
ಶ್ವರನಂ ಸದ್ಭಕ್ತಿಯೊಳಂ
ದಿರದರ್ಚಿಸಿ ತಳರ್ದು ಮಂಗಲೂರಂ ಸಾರ್ದಂ ೬೨

ಎಸೆವ ಕೊಡೆಯಾಲದಿಂದಂ
ವಸುಪುರಕೈತಂದು ತನ್ಮಹಾಲಿಂಗೇಶಂ
ಗೊಸೆದು ಮಹಾಪೂಜೆಯು ವಿರ
ಚಿಸಿ ಬೀಳ್ಕೊಂಡಾ ಹೊಸಂಗಡಿಯ ಸಾರ್ದಿರುತುಂ ೬೩

ಅದರ ಶಿಖರವನ್ನು ಚಿನ್ನದ ರಸಲೇಪದಿಂದಲೂ, ಲೋಹಪಟ್ಟಿಗಳಿಂದಲೂ ರಮ್ಯವಾಗಿ ಶೋಭಿಸುವಂತೆ ರಚನೆಮಾಡಿಸಿದನು. ಮತ್ತೂ ಅಲ್ಲದೆ ಮುತ್ತಿನ ಕೊಡೆ, ಕರಿಬೆಗರಿಯ (?) ಪಚ್ಚೆರತ್ನ, ಭಂಗಾರದ ಸುರಗಿ ಮಾಲೆ, ಚಿನ್ನದ ಶಿಖರ ಮುಂತಾದ ವಿಚಿತ್ರವಾದ ನೂತನ ಪದಾರ್ಥಗಳನ್ನು ನಿರ್ಮಾಣ ಮಾಡಿಸಿದನು. ಭುವನಗಿರಿದುರ್ಗದ ಅರಮನೆಯ ಗೋಪುರದಲ್ಲಿ ಶಿಲ್ಪಿಯಾದ ನಾಗಪ್ಪನ ಮುಖಾಂತರ ಶಿಲಾಸ್ತಂಭಗಳನ್ನು ನಿಲ್ಲಿಸಿ ಜೀರ್ಣೋದ್ಧಾರ ಮಾಡಿಸಿದನು. ಮಹಡಿಗಳನ್ನು ಕಟ್ಟಿಸಿ- ಈ ರೀತಿ ಅರಮನೆಯನ್ನು ಗಟ್ಟಿಯಾಗಿ ನಿಲ್ಲುವಂತೆ ಮಾಡಿ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅಂತೂ ಅಲ್ಲದೆ-೬೧. ಆ ರಾಜಶ್ರೇಷ್ಠನು ಪಿಂಗಳ ಸಂವತ್ಸರದಲ್ಲಿ ಭುವನಗಿರಿಗೆ ಹೋಗಿ ಆಮೇಲೆ ಶೃಂಗೇರಿಗಾಗಿ ಬಂಗಾಡಿಯ ಘಟ್ಟವನ್ನು ಇಳಿದು ಮುಂದೆ ಹೋಗುತ್ತಾ, ೬೨. ಸುಂದರವಾದ ಸುಬ್ರಹ್ಮಣ್ಯಕ್ಷೇತ್ರಕ್ಕೆ ಹೋಗಿ, ಸುಬ್ರಹ್ಮಣ್ಯೇಶ್ವರನನ್ನು ಭಕ್ತಿಯಿಂದ ಪೂಜಿಸಿ, ಅಲ್ಲಿಂದ ಹೊರಟು ಮಂಗಳೂರಿಗೆ ಹೋದನು. ೬೩. ಶೋಭಿಸುವ ಕೊಡೆಯಾಲದಿಂದ (ಮಂಗಳೂರಿನಿಂದ) ವಸುಪುರಕ್ಕೆ (ಬಸ್ರೂರಿಗೆ) ಬಂದು ಅಲ್ಲಿನ ಮಹಾಲಿಂಗೇಶ್ವರನಿಗೆ

ಆ ರಾಜೇಂದ್ರಂ ಶಂಕರ
ನಾರಾಯಣಕ್ಕೆಯ್ದಿ ನಿಂದು ತತ್ಸ್ವಾಮಿಯ ಪಾ
ದಾರವಿಂದಗಳನರ್ಚಿಸಿ
ಭೂರಮಣಂ ಸೈನ್ಯವೆರಸು ಮುಂತೆಯ್ದುತ್ತುಂ ೬೪

ಸಾರಿ ಕುಂದಾಪುರವ ಬೈಂ
ದೂರನಭೀಕ್ಷಿಸುತ ಸಾರ್ದು ಗೋಕರ್ಣಕ್ಕಾ
ಧಾರಿಣಿಯಧಿಪತಿ ಭಾಗ್ಯಕು
ಬೇರಂ ರಿಪುಭಯವಿದೂರನತಿಭಕ್ತಿಯೊಳಂ ೬೫

ಪಿಂಗದೆ ಮಹಾಬಲೇಶ್ವರ
ಲಿಂಗವರ್ಚಿಸಿ ಬಳಿಕ್ಕಮಲ್ಲಿಂ ತೆರಳ್ದು
ತುಂಗಯಶೋನಿಧಿ ಕೊಲ್ಲೂ
ರಿಂಗೈದುತೆ ಪೂಜೆಗೆಯ್ದು ಮೂಕಾಂಬಿಕೆಯಂ ೬೬

ಕಂ|| ಭಜಿಯಿಸಿ ತತ್ಪದಮಂ ಬಳಿ
ಕ ಜನಪಶಾರ್ದೂಲನೇರ್ದು ಘಟ್ಟವನಖಿಲ
ಪ್ರಜೆಯಿಂ ಕಾಣಿಕೆಗೊಳುತುಂ
ನಿಜಸೈನ್ಯಂವೆರಸು ಸಾಗರಕ್ಕೈತಂದಂ ೬೭

ಆನಂದಪುರಕ್ಕಾಗಿ ಮ
ಹಾನಂದದೊಳೈದುತುಂ ಮಹಾದೇವಪುರ
ಕ್ಕಾ ನರಪತಿ ಪೊನ್ನಾಳಿಗೆ
ತಾನೈದುತ್ತೆಸೆವ ಸೀಮೊಗೆಯನುರೆ ಸಾರ್ದಂ ೬೮

ಮಹಾಪೂಜೆಯನ್ನು ಮಾಡಿಸಿ, ಅಲ್ಲಿಂದ ಹೊರಟು ಹೊಸಂಗಡಿಗೆ ಬಂದನು. ೬೪. ಆ ರಾಜಶ್ರೇಷ್ಠನು ಶಂಕರನಾರಾಯಣಕ್ಕೆ ಹೋಗಿ ಅಲ್ಲಿನ ದೇವರ ಪಾದಾರವಿಂದಗಳನ್ನು ಪೂಜಿಸಿ ಸೈನ್ಯಸಹಿತನಾಗಿ ಮುಂದುವರಿಯುತ್ತಾ, ೬೫. ಕುಂದಾಪುರಕ್ಕೆ ಹೋಗಿ ಬೈಂದೂರನ್ನು ನೋಡಿ ಗೋಕರ್ಣಕ್ಕೆ ಬಂದನು. ಭಾಗ್ಯದಲ್ಲಿ ಕುಬೇರನೂ ಶತ್ರುಭಯವಿಲ್ಲದವನೂ ಆದ ಆ ಅರಸನು ಭಕ್ತಿಯಿಂದ ೬೬. ಮಹಾಬಲೇಶ್ವರ ಲಿಂಗವನ್ನು ಪೂಜಿಸಿದನು. ಅಲ್ಲಿಂದ ಹೊರಟು, ಉನ್ನತವಾದ ಕೀರ್ತಿಯೇ ಸಂಪತ್ತಾಗಿರುವ ಸೋಮಶೇಖರನು ಕೊಲ್ಲೂರಿಗೆ ಹೋಗಿ ಶ್ರೀ ಮೂಕಾಂಬಿಕೆಯನ್ನು ಪೂಜೆಮಾಡಿ, ೬೭. ಆಕೆಯ ಪಾದಗಳನ್ನು ಭಜಿಸಿ ಆ ರಾಜಶ್ರೇಷ್ಠನು ಘಟ್ಟವನ್ನು ಹತ್ತಿ ತನ್ನ ಪ್ರಜೆಗಳಿಂದ ಕಾಣಿಕೆಗಳನ್ನು ಸ್ವೀಕರಿಸುತ್ತಾ ಸೈನ್ಯದೊಂದಿಗೆ ಸಾಗರಕ್ಕೆ ಬಂದನು. ೬೮. ಆನಂದಪುರಕ್ಕಾಗಿ ಹೆಚ್ಚಿನ ಆನಂದದಿಂದ ಮಹಾದೇವಪುರಕ್ಕೆ ಹೋಗಿ ಆ ರಾಜನು ಹೊನ್ನಾಳಿಯನ್ನು ಸೇರಿ ಶೋಭಿಸುವ ಶಿವಮೊಗ್ಗೆಗೆ ಬಂದನು. ೬೯. ರಾಜಶ್ರೇಷ್ಠನೂ, ಯುದ್ಧದಲ್ಲಿ ಭಯಂಕರನೂ,

ಭೂಮಿಪವರೇಣ್ಯಸಾಹವ
ಭೀಮಂ ರಿಪುಗಜವಿದಾರಣೋದ್ಧತಸಿಂಹಂ
ಸೋಮಶೇಖರನೃಪಂ ತ
ತ್ತ್ರೀಮೊಗ್ಗೆಯೊಳಿರ್ದು ಸಾಂಬಶಿವನೊಳ್ ಬೆರೆದಂ ೬೯

ಆ ಸೋಮಶೇಖರೇಂದ್ರಮ
ಹೀಶಂ ತಾನಿಂತು ಸರ್ವಪೃಥ್ವೀಶ್ವರರೊಳ್
ಭಾಸುರಕೀರ್ತಿಯನಾಂತು ವಿ
ಲಾಸದಿ ವರ್ತಿಸುತೆ ರಾಜ್ಯಮಂ ಪಾಲಿಸಿದಂ ೭೦

**ವ॥ ಈ ಸೋಮಶೇಖರನಾಯಕರ್ ಪಟ್ಟವಾದ ಶಾಲಿವಾಹನ ಶಕ ವರ್ಷ ೧೬೩೭ನೆಯ ಜಯಸಂವತ್ಸರದ ಪುಷ್ಯ ಬಹುಳ ೧೦ ಆರಭ್ಯ ಸಿದ್ಧಾರ್ಥಿಸಂವತ್ಸರದ ವೈಶಾಖ ಬಹುಳ ೩ ಯಲ್ಲಿಗೆ ವರ್ಷ ೨೪ ತಿಂಗಳು ೪ ದಿನ ೨೩ ಪರ್ಯಂತಂ ರಾಜ್ಯವಾಳಿ ಶಿಮೊಗ್ಗೆ ಮಂಡಳಿ ಮಠದಲ್ಲಿ ಐಕ್ಯವಾದರ್**

ಶತ್ರುಗಳೆಂಬ ಆನೆಗಳನ್ನು ಸೀಳುವುದರಲ್ಲಿ ಪ್ರಬಲವಾದ ಸಿಂಹವೂ ಆದ ಆ ಸೋಮಶೇಖರನಾಯಕನು ಶಿವಮೊಗ್ಗೆಯಲ್ಲಿರುತ್ತಾ ಶಿವೈಕ್ಯನಾದನು. ೭೦. ಆ ಸೋಮಶೇಖರನಾಯಕನು ಈ ರೀತಿಯಾಗಿ ಎಲ್ಲಾ ರಾಜರಲ್ಲಿ ಪ್ರಕಾಶಿಸುವ ಕೀರ್ತಿಯನ್ನು ಪಡೆದು ವಿಲಾಸದಿಂದ ಇರುತ್ತಾ ರಾಜ್ಯವನ್ನು ಪಾಲಿಸಿದನು. ವ॥ ಈ ಸೋಮಶೇಖರನಾಯಕನು ಪಟ್ಟವಾದ ಶಾ. ಶಕ ವರ್ಷ ೧೬೩೭ನೆಯ ಜಯ ಸಂವತ್ಸರದ ಪುಷ್ಯ ಬಹುಳ ೧೦ ರಿಂದ ಸಿದ್ಧಾರ್ಥಿ ಸಂವತ್ಸರದ ವೈಶಾಖ ಬಹುಳ ೩ ರವರೆಗೆ ೨೪ ವರ್ಷ ೪ ತಿಂಗಳು ೨೩ ದಿನಗಳ ಪರಿಯಂತ ರಾಜ್ಯವನ್ನಾಳಿ ಶಿವಮೊಗ್ಗೆಯ ಮಂಡಳಿ ಮಠದಲ್ಲಿ ಶಿವಾಧೀನರಾದರು.

# ಏಕಾದಶಾಶ್ವಾಸಂ

ವ|| ಆ ಸೋಮಶೇಖರನಾಯಕರ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೬೨ನೆಯ ಸಿದ್ಧಾರ್ಥಿ ಸಂವತ್ಸರದ ಜೇಷ್ಠ ಬಹುಳ ೫ಯೊಳ್ (ವೀರಭದ್ರನಾಯಕರ ಪುತ್ರರಾದ ಬಸವಪ್ಪನಾಯಕರ್ಗೆ ರಾಜಪಟ್ಟಂ)

ಚಂ || ಪದುಳದಿ ಸೋಮಶೇಖರಧರಾಧಿಪನಿಂತಿಳೆಯಾಳ್ದನಂತರಂ
ತದನುಜ ವೀರಭದ್ರನೃಪನಾತ್ಮಭವಂ ರಿಪುವರ್ಗಭೈರವಂ
ಸದಮಳ ದಾನಧರ್ಮ ನಯನೀತಿ ಸಮಸ್ತಲಸತ್ಕಲಾವಿಶಾ
ರದ ಬಸವಾವನೀಶನರಸಾದನಿಳಾತಳಕಿಂದ್ರವೈಭವಂ ೧

ವ|| ಇಂತೆಸೆವ ಬಸವೇಂದ್ರನೃಪಾಲಂ ತನ್ನ ಹಿರಿಯಪ್ಪನಾದ ಸೋಮಶೇಖರ ನಾಯಕರಾಳಿಬರುತ್ತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಮಂತ್ರಿ ನಿಯೋಗಿ ಸಾಮಾಜಿಕ ಸುಭಟ ಸಾಮಂತ ಬಾಂಧವ ಭೃತ್ಯಜನ ಪುರಜನ ಪರಿಜನಂಗಳಂ ಸಂರಕ್ಷಿಸುತ್ತುಂ ರಾಜ್ಯಪ್ರತಿಪಾಲನಂಗೆಯ್ಯುತ್ತುಮಿರಲೊಡನೆ ಕ್ವಚಿತ್ಕಾಲದೊಳ್

ಕಂ|| ಮಲಮಾತೆ ನೆನೆದ ದುರ್ಮತ
ಕೊಳಗಾದಾರಗದ ಕುಮತಿ ಪರಮೇಶ್ವರನಂ
ಚಲಿಸದೆ ತತ್ಸಹಭವನಂ
ಚಳಕದೆ ಪಿಡಿತರಿಸಿ ಶಾಸ್ತಿಯಂ ಮಾಡಿಸಿದಂ ೨

ವ|| ಆ ಸೋಮಶೇಖರನಾಯಕರ ತರುವಾಯ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೬೨ನೆಯ ಸಿದ್ಧಾರ್ಥ ಸಂವತ್ಸರದ ಜ್ಯೇಷ್ಠ ಬಹುಳ ೫ರಲ್ಲಿ ವೀರಭದ್ರ ನಾಯಕರ ಮಗ ಬಸವಪ್ಪ ನಾಯಕರಿಗೆ ಪಟ್ಟಾಭಿಷೇಕವಾಯಿತು. ೧. ಹೀಗೆ ಸೋಮ ಶೇಖರನಾಯಕನು ಕ್ಷೇಮವಾಗಿ ರಾಜ್ಯವನ್ನು ಆಳಿದ ಬಳಿಕ ಅವನ ತಮ್ಮನಾದ ವೀರಭದ್ರ ನಾಯಕನ ಮಗನೂ, ಶತ್ರುಸಮೂಹಕ್ಕೆ ಭಯಂಕರನೂ, ನಿರ್ಮಲವಾದ ದಾನ, ಧರ್ಮ, ನಯ, ನೀತಿ ಮುಂತಾದ ಸಮಸ್ತ ಕಲೆಗಳಲ್ಲಿ ವಿಶಾರದನೂ ಆದ ಬಸವಪ್ಪನಾಯಕನು ಇಂದ್ರನಂತಹ ವೈಭವವುಳ್ಳವನಾಗಿ ಭೂಮಿಗೆ ಅರಸನಾದನು. ವ|| ಈ ರೀತಿ ಶೋಭಿಸುವ ಬಸವೇಂದ್ರರಾಜನು ತನ್ನ ದೊಡ್ಡಪ್ಪ ಸೋಮಶೇಖರನಾಯಕನು ಆಳಿಕೊಂಡು ಬರುತ್ತಾ ಇದ್ದ ರಾಜ್ಯ, ರಾಷ್ಟ್ರ, ದೇಶ, ಭಂಡಾರ, ಪ್ರಜೆಗಳು, ಪರಿವಾರಗಳು, ಕೋಟೆಗಳು, ಮಂತ್ರಿಗಳು, ನಿಯೋಗಿಗಳು, ಸಾಮಾಜಿಕರು, ಸುಭಟರು, ಸಾಮಂತರಾಜರುಗಳು, ಬಂಧುಗಳು, ಸೇವಕರು, ಪುರಜನರುಗಳು, ಪರಿವಾರಗಳು ಮುಂತಾದವರನ್ನು ರಕ್ಷಿಸಿ ಕಾಪಾಡುತ್ತಾ ರಾಜ್ಯವನ್ನು ಪಾಲಿಸುತ್ತಾ ಇರಲು ಸ್ವಲ್ಪ ಕಾಲದಲ್ಲಿಯೇ-೨. ಮಲತಾಯಿಯು ದುರ್ಬುದ್ಧಿಯನ್ನು ನೆನೆದ ಮೇರೆಗೆ ಕುಹಕತನದಿಂದ ವರ್ತಿಸಿದ ಹಾಗೂ ದುಷ್ಟನಾದ ಆರಗದ ಪರಮೇಶ್ವರನನ್ನೂ ಮತ್ತು ಅವನ ಸಹೋದರನನ್ನೂ ಚತುರತೆಯಿಂದ ಹಿಡಿದು

ಹುಗುಡಿಯ ಭೈರಪನಂ ಬ
ಲ್ವಿಗಡರುಮಂ ಬಂಧಿಸಿಕ್ಕಿ ಮಲತಾಯಿಯುಮಂ
ತೆಗೆದಂಕೆಯೊಳಿಟ್ಟರೆ ಖತಿ
ಯೊಗೆದಾಕೆ ಗತಾಸುವಾಗಲತಿಮೂರ್ಖತೆಯಿಂ ೩

ಬಳಿಕಾ ಬಲತಾಯಿಗೆ ಕೊ
ಪ್ಪಲ ಮಠದೊಳ್ ಸಾಂಗಮೆನೆ ಸಮಾಧಿಕ್ರಿಯೆಯಂ
ತಳುವದೆ ನಿರ್ಮಿಸಿದನಾ
ಗಳೆ ತನ್ನೃಪವರ್ಯನಾಗಮೋಕ್ತಕ್ರಮದಿಂ ೪

ವ॥ ಇಂತು ನಿಷ್ಕಾರಣಂ ತನಗೆ ವಿಘಾತಿಯಂ ನೆನೆದ ದುಷ್ಟಜನರ್ಗೆ ಶಾಸ್ತಿಗೈಸಿ ರಾಜಮುದ್ರಾಧಿಕಾರಮಂ ಸ್ವಾಧೀನಂಗೈದು ಮಾತೃ ಮಲ್ಲಮ್ಮಾಜಿಯವರಂ ಸಂತಸಂಬಡಿಸುತ್ತುಂ ವರ್ತಿಸುತ್ತುಮಿರ್ದು

ಕಂ॥ ಆ ರಾಜಾಧೀಶಂ ಕೊ
ಲ್ಲೂರಿಂಗಂ ತೆರಳ್ದು ದೇವಿ ಮೂಕಾಂಬೆಯನೊ
ಲ್ದಾರಾಧಿಸಿ ಕೆಳದಿಗೆ ತೆರ
ಳ್ದಾ ರಾಮೇಶ್ವರನ ವೀರಭದ್ರೇಶ್ವರನಂ ೫

ಕಂ॥ ಭಜಿಸಿ ಸದ್ಭಕ್ತಿಯಿಂ ನೃಪ
ತಿಜನಾಗ್ರೇಸರನೆನಿಪ್ಪ ಬಸವಮಹೀಶಂ
ನಿಜಸೈನ್ಯಂವೆರಸು ತೆರ
ಳ್ದು ಜಗದ್ವಿಖ್ಯಾತ ವೇಣುಪುರಮಂ ಪೊಕ್ಕಂ ೬

ತರಿಸಿ ಶಾಸ್ತಿ ಮಾಡಿಸಿದನು. ೩. ಹುಗುಡಿಯ ಭೈರಪ್ಪ ಹಾಗೂ ಮತ್ತಿತರ ದುಷ್ಕರ್ಮಿಗಳನ್ನೂ ಮತ್ತು ಮಲತಾಯಿಯನ್ನೂ ಬಂಧಿಸಿ ತನ್ನ ಅಧೀನದಲ್ಲಿಟ್ಟುಕೊಂಡಿರುವಾಗ ಕೋಪಗೊಂಡ ಆಕೆಯು ಅತಿ ಮೂರ್ಖತನದಿಂದ ಸತ್ತುಹೋದಳು. ೪. ಆಮೇಲೆ ಕೊಪ್ಪಲಮಠದಲ್ಲಿ ಆ ಮಲತಾಯಿಗೆ ಸಾಂಗವಾಗಿ ಸಮಾಧಿಯನ್ನು ಮಾಡಿಸಿ ಆಗಮೋಕ್ತ ರೀತಿಯಲ್ಲಿ ಆಕೆಯ ಉತ್ತರಕ್ರಿಯೆಗಳನ್ನು ಏರ್ಪಡಿಸಿದನು. ವ॥ ಈ ರೀತಿ ನಿಷ್ಕಾರಣವಾಗಿ ತನಗೆ ಕೇಡು ಬಗೆದ ದುಷ್ಟಜನರಿಗೆ ಶಿಕ್ಷೆ ನೀಡಿ ರಾಜಮುದ್ರಾಧಿಕಾರವನ್ನು ಸ್ವಾಧೀನಪಡಿಸಿಕೊಂಡನು. ಹಾಗೂ ತನ್ನ ತಾಯಿ ಮಲ್ಲಮ್ಮಾಜಿಯವರನ್ನು ಸಂತೋಷಪಡಿಸುತ್ತಾ ಕಾಲಯಾಪನೆ ಮಾಡುತ್ತಿದ್ದನು. ೫. ರಾಜಾಧೀಶನಾದ ಆ ಬಸವಪ್ಪನಾಯಕನು ಕೊಲ್ಲೂರಿಗೆ ಹೋಗಿ ಶ್ರೀದೇವಿ ಮೂಕಾಂಬೆಯನ್ನು ಭಕ್ತಿಯಿಂದ ಆರಾಧಿಸಿ, ಕೆಳದಿಗೆ ಹೋಗಿ ಶ್ರೀ ರಾಮೇಶ್ವರನನ್ನೂ ಶ್ರೀ ವೀರಭದ್ರೇಶ್ವರನನ್ನೂ ೬. ಸದ್ಭಕ್ತಿಯಿಂದ ಭಜಿಸಿದನು. ರಾಜರಲ್ಲೇ ಶ್ರೇಷ್ಠನಾದ ಆ ಬಸವಪ್ಪನಾಯಕನು ತನ್ನ ಸೈನ್ಯದೊಂದಿಗೆ ಲೋಕವಿಖ್ಯಾತವಾದ ಬಿದನೂರು ನಗರವನ್ನು ಪ್ರವೇಶಿಸಿದನು. ವ॥ ಈ ರೀತಿ ವೇಣುಪುರಕ್ಕೆ ಬಂದನಂತರ ಹಲವು ಕಾಲದ

ವ|| ಇಂತು ವೇಣುಪುರಮಂ ಸಾರ್ದು ವರ್ತಿಸುತ್ತಿರ್ದಾ ಮಾಘ ಬಹುಳ ತದಿಗೆಯೊಳ್ ಕೋಟಿಪುರದ ಸಿದ್ದಪ್ಪಸೆಟ್ಟರ ಪುತ್ರ ಶಿವಯ್ಯನ ಕುಮಾರಿ ಚನ್ನಮ್ಮಾಜಿ ಫಾಳ್ಯದ ಶಿವಲಿಂಗಪ್ಪನವರ ಕುಮಾರಿ ಚನ್ನವೀರಮ್ಮಾಜಿ ಎಂಬಿರ್ವರ್ ಕನ್ಯಾರತ್ನಂಗಳನತ್ಯಂತೋತ್ಸವದಿಂ ವಿವಾಹಮಾಗಿ ತದ್ಧರ್ಮಪತ್ನಿಯರ್ವೆರಸು ರಾಜ್ಯಭಾರವಿಚಾರತತ್ಪರನಾಗಿ ಶಿವಲಿಂಗಪ್ಪನವರ್ಗೆ ಸರ್ವಾಧಿಕಾರಮನಿತ್ತು ನಡೆಸಿಕೊಳುತ್ತುಂ

ಮ|| ಮದಮುಖದುಷ್ಕಿರಾತನಿಕರಾಧಿಪಚಿಂತನಕಲ್ಲಧೀಶನಾ
ಮೆದೆಕೆರೆನಾಯಕಂ ಹರಪುರಾಧಿಪನಂ ಮುರಿದೊತ್ತಿ ನಿಲ್ವೊಡಾ
ಸ್ಪದಗಳನೀಯದಂತವನ ರಾಜ್ಯವನಾಕ್ರಮಿಸುತ್ತುಮಾಜಿರಂ
ಗದೊಳಿದಿರಾಂತುಪದ್ರವಗಳಂ ರಚಿಸುತ್ತಿರೆ ಶೌರ್ಯದೇಳ್ಗೆಯಿಂ ೭

ಕಂ|| ಮೆದೆಕೆರೆನಾಯಕನುರವಣೆ
ಗಿದಿರಾಂಪೊಡಶಕ್ಯಮಾಗಿ ಹರಪುರದರಸಂ
ಸದಯಬಸವುರ್ವಿಪಂಗೀ
ಹದನಂ ಬಿನ್ನೈಸಿ ಕಳುಪಿ ಮರೆವುಗಲಾಗಲ್ ೮

ವ|| ಇಂತು ಹರಪುರಾಧಿಪನೆನಿಪ ಬಸಂತರಾಯಂ ಮೆದೆಕೆರೆನಾಯಕನದಟನಾಂಪೊಡಶಕ್ಯ ಮಾಗಿ ನಿಮ್ಮಪುತ್ರವರ್ಗದ ಮನೆತನದವರೆನಿಸಿ ವರ್ತಿಸುತ್ತಿರ್ಪೆಮ್ಮ ಸಂಸ್ಥಾನಮನುದ್ಧರಿಸವೇಳ್ಕೆಂದು ಲಿಖಿತಮುಖದಿಂ ಬಿನ್ನವಿಸಿ ಕಳುಪಲ್ ಕೇಳ್ದು ಸಿದ್ದೋಜಿಯೊಡನನುಸಂಧಾನಮಂ ರಚಿಸಿ ತತ್ಸೈನ್ಯಮಂ

ಮೇಲೆ ಮಾಘ ಬಹುಳ ತದಿಗೆಯಲ್ಲಿ ಕೋಟಿಪುರದ ಸಿದ್ದಪ್ಪಶೆಟ್ಟರ ಮಗನಾದ ಶಿವಯ್ಯನ ಕುಮಾರಿ ಚೆನ್ನಮ್ಮಾಜಿ, ಪಾಳ್ಯದ ಶಿವಲಿಂಗಪ್ಪನವರ ಕುಮಾರಿ ಚನ್ನವೀರಮ್ಮಾಜಿ ಎಂಬ ಇಬ್ಬರು ಕನ್ಯಾರತ್ನಗಳನ್ನು ಅತ್ಯಂತ ವೈಭವದಿಂದ ವಿವಾಹವಾದನು. ಈ ರೀತಿ ಈ ಪತ್ನಿಯರನ್ನು ಕೂಡಿಕೊಂಡು ಧರ್ಮದಿಂದ ರಾಜ್ಯಭಾರ ವಿಚಾರದಲ್ಲಿ ತಲ್ಲೀನನಾಗಿ ಶಿವಲಿಂಗಪ್ಪನವರಿಗೆ ಸರ್ವಾಧಿಕಾರವನ್ನು ನೀಡಿ ನಡೆಸಿಕೊಳ್ಳುತ್ತಿದ್ದನು. ೭. ಆಗ ದುಷ್ಟನೂ, ಕೆಟ್ಟ ಕಿರಾತರ ಒಡೆಯನೂ, ಚಿಂತನಕಲ್ಲಿನ ದೊರೆಯೂ ಆದ ಮೆದೆಕೆರೆನಾಯಕನು ಹರಪುರದ ಅರಸನನ್ನು ಸೋಲಿಸಿ, ಅವನಿಗೆ ನೆಲೆಯೂರಲು ಅವಕಾಶ ಕೊಡದೆ, ಅವನ ರಾಜ್ಯವನ್ನು ಆಕ್ರಮಿಸಿಕೊಂಡು ಯುದ್ಧರಂಗದಲ್ಲಿ ಎದುರಾಗಿ ಹೆಚ್ಚಿನ ಪರಾಕ್ರಮದಿಂದ ಉಪಟಳವನ್ನು ಕೊಡುತ್ತಿದ್ದನು. ೮. ಮೆದೆಕೆರೆನಾಯಕನ ಉಪದ್ರವವನ್ನು ತಡೆದುಕೊಳ್ಳಲಾರದೆ ಹರಪುರದ ಅರಸನು ದಯಾವಂತನಾದ ಬಸವಪ್ಪನಾಯಕನಿಗೆ ಈ ವಿಚಾರವನ್ನು ಬಿನ್ನವಿಸಿ, ಪತ್ರ ಕಳುಹಿಸಿ ಶರಣುಹೊಕ್ಕನು. ವ|| ಈ ರೀತಿ ಹರಪನಹಳ್ಳಿಯ ಅಧಿಪತಿಯೆನಿಸಿದ ವಸಂತರಾಯನು ಮೆದೆಕೆರೆನಾಯಕನ ಉಪಟಳವನ್ನು ಸಹಿಸಲು ಸಾಮರ್ಥ್ಯವಿಲ್ಲದವನಾದ್ದರಿಂದ ಕೆಳದಿ ಅರಸನಿಗೆ ಬಿನ್ನವಿಸುತ್ತಾ, "ನಿಮ್ಮ ಪುತ್ರವರ್ಗದ ಮನೆತನದವರಾಗಿರುವ ನಮ್ಮ ಸಂಸ್ಥಾನವನ್ನು ರಕ್ಷಿಸಬೇಕು" ಎಂಬುದಾಗಿ ನಿರೂಪದ ಮುಖಾಂತರ ಕೇಳಿಕೊಂಡನು. ಇದನ್ನು ಕೇಳಿ ಸಿದ್ದೋಜಿಯೊಡನೆ ಸಂಧಾನವನ್ನು ನಡೆಸಿ, ಅವನ ಸೈನ್ಯವನ್ನು ಬರಮಾಡಿಕೊಂಡು ಸುಬೇದಾರ ಲಿಂಗಪ್ಪನೊಡನೆ ಅಸಂಖ್ಯಾತ

ಬರಿಸಿ ಸುಬೇದಾರ ಲಿಂಗಪ್ಪನೊಡನೆ ಅಸಂಖ್ಯಾತ ಸೇನಾಸಮೂಹಮಂ ತೆರಳ್ಚಿಸಿ ಕಳುಪಿ ತನ್ಮೆದೆಕೆರೆನಾಯಕನ ರಾಜ್ಯಮಂ ನಿಪಾತನಂಗೆಯ್ಸಿದನಂತುಮಲ್ಲದೆಯುಂ

ಕಂ॥ ಹೊದಿಗೆರೆಯ ಸುಕೋಟೆಯನವ
ನಾದಂ ಕೊಂಡೊಡನೆ ಮೆರೆವ ಮೊರವಂಜಿಯ ಬ
ಲ್ಪಾದ ಪರಿಸ್ತರಣವನೆಸೆ
ವಾ ದುಮ್ಮಿಯೆನಿಪ್ಪ ಕೋಂಟೆಯಂ ವಶಗೈದಂ ೯

ವ॥ ಮತ್ತಮದಲ್ಲದೆ

ಕಂ॥ ಮೀಟಾದ ನಂದಿಗಾವೆಯ
ಕೋಟೆಯನುರೆ ಕೊಂಡು ತತ್ಕಿರಾತನ ಫೌಜಂ
ಲೂಟಿಸಿ ಬಸವನೃಪಂ ಕ
ರ್ಣಾಟಾಧಿಪನತಿಪರಾಕ್ರಮವನುರೆ ಮೆರೆದಂ ೧೦

ವ॥ ಇಂತು ಹೊದಿಗೆರೆ ನಂದಿಗಾವೆ ಮೊರವಂಜಿಯೆಂಬ ಕೋಂಟೆಗಳಂ ಸ್ವಾಧೀನಂಗೆಯ್ದಲೀವರ್ತಮಾನಮಂ ಕೇಳ್ದು ಪತ್ತೆಸಿಂಗನೊಡನನುಸಂಧಾನಮಂ ರಚಿಸಿ ರಘೋಜಿಭೌಸಲ್ಯಾ ಮುಂತಾದ ಪಟುಪರಾಕ್ರಮಶಾಲಿಗಳಿಂ ಯುಕ್ತಮಾದಸಂಖ್ಯಾತ ಸೇನಾಸಮೂಹಂವೆರಸತ್ಯಂತ ಗರ್ವೋದ್ರೇಕದಿಂ ದಾಳಿಯಿಡುತ್ತುಂ ತೆರಳ್ದೈತಂದು ಸಂತೆಬೆನ್ನೂರ ಪರಿಸ್ತರಣಮಂ ವೇಢೈಸಿ ತಳಿಸುರಂಗಗಳಂ ನಡೆಸುತಿರ್ದ ತನ್ಮೆದೆಕೆರೆನಾಯಕನ ಪ್ರತಾಪಾತಿಶಯಮಂ ಮುರಿದು ಮುತ್ತಿಗೆ

ಸೇನೆಯನ್ನು ಹೊರಡಿಸಿದನು. ಈ ರೀತಿ ಸೇನೆಯನ್ನು ಕಳುಹಿಸಿ ಮೆದೆಕೆರೆನಾಯಕನ ರಾಜ್ಯವನ್ನು ಧ್ವಂಸಮಾಡಿಸಿದನು. ಅಂತೂ ಅಲ್ಲದೆ- ೯. ಹೊದಿಗೆರೆಯ ಕೋಟೆಯನ್ನು ವಶಪಡಿಸಿಕೊಂಡು ಕೂಡಲೇ ಮೊರವಂಜಿಯ ಬಲವಾದ ಕೋಟೆಯನ್ನೂ, ದುಮ್ಮಿ ಎಂಬ ಕೋಟೆಯನ್ನೂ ಸ್ವಾಧೀನಪಡಿಸಿಕೊಂಡನು, ವ॥ ಮತ್ತು ಅದಲ್ಲದೆ-೧೦. ಕರ್ಣಾಟಕದ ದೊರೆಯಾದ ಬಸವಪ್ಪನಾಯಕನು ಅಚ್ಚುಕಟ್ಟಾದ ನಂದಿಗಾವೆಯ ಕೋಟೆಯನ್ನು ವಶಪಡಿಸಿಕೊಂಡು ಆ ಕಿರಾತನ ಸೈನ್ಯವನ್ನು ಲೂಟಿಮಾಡಿ ಹೆಚ್ಚಿನ ಪರಾಕ್ರಮವನ್ನು ಮೆರೆದನು. ವ॥ ಈ ರೀತಿ ಹೊದಿಗೆರೆ, ನಂದಿಗಾವೆ, ಮೊರವಂಜಿಯೆಂಬ ಕೋಟೆಗಳನ್ನು ಸ್ವಾಧೀನಪಡಿಸಿಕೊಂಡ ವರ್ತಮಾನವನ್ನು ಮೆದೆಕೆರೆನಾಯಕನು ಕೇಳಿ ಪತ್ತೆಸಿಂಗನೊಡನೆ ಸಂಧಾನವನ್ನು ಏರ್ಪಡಿಸಿ ರಘೋಜೀ ಭೌಸಲ್ಯಾ ಮುಂತಾದ ವೀರರುಗಳಿಂದ ಕೂಡಿದ ಅಸಂಖ್ಯಾತ ಸೇನಾಸಮೂಹವನ್ನು ಸೇರಿಕೊಂಡು ಅಹಂಕಾರದಿಂದಲೂ ಹಾಗೂ ಉದ್ರೇಕದಿಂದಲೂ ದಾಳಿಯಿಡುತ್ತಾ ಹೊರಟುಬಂದನು. ಹೀಗೆ ಸಂತೇಬೆನ್ನೂರು ಕೋಟೆಯನ್ನು ಆಕ್ರಮಿಸಿ, ತಳಿಸುರಂಗಗಳನ್ನು ನಡೆಸುತ್ತಿದ್ದ ಆ ಮೆದೆಕೆರೆನಾಯಕನ ಪ್ರತಾಪವನ್ನು ಮುರಿದು ಅವನು ಹಾಕಿದ್ದ ಮುತ್ತಿಗೆಯನ್ನು ತೆಗೆಸಿ ಅವನನ್ನು ಪಲಾಯನಗೊಳಿಸಿದನು. ತನ್ನ ಸೈನ್ಯವು ಕೋಟೆಯ ಒಳಹೋಗುವಂತೆ ಮಾಡಿ, ಭುಜಬಲಪರಾಕ್ರಮದಿಂದ ಅತಿಶಯವಾಗಿ ಮೆರೆದನು. ಅಂತೂ ಅಲ್ಲದೆ-

ದೆಗೆಸಿ ಪಲಾಯನಂಗೊಳಿಸಿ ದುರ್ಗಮಂ ಪೊಗಿಸಿ ಭುಜಬಲಪರಾಕ್ರಮಾತಿಶಯಮಂ ಮೆರೆದನಂತು ಮಲ್ಲದೆಯುಂ

ಕಂ|| ವರವೇಣುಪುರದ ಮಧ್ಯದ
ವರಬಾಳೆಯಕೊಪ್ಪದೆಡೆಯ ಪಶ್ಚಿಮದೆಸೆಯೊಳ್
ಸುರುಚಿರಮಠಮಂ ಭೂಮೀ
ಶ್ವರಮಣಿ ಬಸವಾವನೀಶ್ವರಂ ಕಟ್ಟಿಸಿದಂ ೧೧

ವ|| ಇಂತು ಮಠಮಂ ನಿರ್ಮಾಣಂಗೆಯ್ಸಿ ಆ ಸ್ಥಳಕ್ಕೆ ಭದ್ರರಾಜಪುರಮೆಂದು ನಾಮಾಂಕಿತಂಗೆಯ್ದು ಭೂರಿಭೂಸ್ವಾಸ್ಥೆಯಂ ಕಲ್ಪಿಸಿ ದುರ್ಮತಿ ಸಂವತ್ಸರದ ಕಾರ್ತಿಕ ಮಾಸದೊಳ್ ಡಂಬಳದ ಸಿದ್ಧೇಶ್ವರ ದೇವರ ಗದ್ದುಗೆ ತೋಂಟದ ಸ್ವಾಮಿಗಳ್ಗೆ ಶಿವಾರ್ಪಿತಮಾಗಿ ಧಾರೆಯನೆರೆದು ಶಾಶ್ವತಮಾದ ಧರ್ಮಕೀರ್ತಿಯಂ ಸಂಪಾದಿದಸಿನಂತುಮಲ್ಲದೆಯುಂ

ಕಂ|| ಉಡುಪಿನ ಬಳಿಯೊಳ್ ಮಲಪಿನ
ಪೊಡವಿಯೊಳಂ ಪಶ್ಚಿಮಾಂಬುಧಿಯ ತೀರದೊಳು
ಗ್ಗಡಮೆನೆ ದರಿಯಾಬಾದಿನ
ಗಡಮಂ ನಿರ್ಮಾಣಗೆಯ್ಸಿದಂ ಬಸವನೃಪಂ ೧೨

ಈ ಪರಿಯಲ್ಲದೆ ಪಡುವಣ
ಕೂಪಾರದ ತೀರದೊಳ್ ವಿರಾಜಿಸುತಿರ್ಪಾ
ಕಾಪಿನ ಸಮೀಪದೊಳ್ ತ
ದ್ಭೂಪಂ ನೆಲೆಗೊಳಿಸಿದಂ ಮನೋಹರಗಡಮಂ ೧೩

೧೧. ವೇಣುಪುರದ ಮಧ್ಯದಲ್ಲಿರುವ ಬಾಳೆಯಕೊಪ್ಪ ಎಂಬ ಸ್ಥಳದ ಪಶ್ಚಿಮದಿಕ್ಕಿನಲ್ಲಿ ಸುಂದರವಾದ ಮಠವೊಂದನ್ನು ರಾಜರಲ್ಲಿ ರತ್ನಪ್ರಾಯನಾದ ಬಸವಪ್ಪನಾಯಕನು ಕಟ್ಟಿಸಿದನು. ವ|| ಈ ರೀತಿ ಮಠವನ್ನು ನಿರ್ಮಾಣಮಾಡಿಸಿ ಆ ಸ್ಥಳಕ್ಕೆ ಭದ್ರರಾಜಪುರವೆಂದು ಹೆಸರಿಟ್ಟು ಭೂಮಿಯನ್ನು ಉಂಬಳಿಯಾಗಿ ಕೊಟ್ಟನು. ಇದನ್ನು ದುರ್ಮತಿಸಂವತ್ಸರದ ಕಾರ್ತಿಕ ಮಾಸದಲ್ಲಿ ಡಂಬಳದ ಸಿದ್ಧೇಶ್ವರ ದೇವರ ಗದ್ದುಗೆ ತೋಟದ ಸ್ವಾಮಿಗಳಿಗೆ ಶಿವಾರ್ಪಣವೆಂದು ಧಾರೆಯನ್ನೆರೆದನು. ಈ ರೀತಿ ಶಾಶ್ವತವಾದ ಧರ್ಮವನ್ನು ನಡೆಸಿ ಕೀರ್ತಿಯನ್ನು ಪಡೆದನು, ಅಂತೂ ಅಲ್ಲದೆ-೧೨. ಉಡುಪಿಯ ಬಳಿ ಮಲ್ಪೆ ಎಂಬ ಸ್ಥಳದಲ್ಲಿ ಪಶ್ಚಿಮ ಸಮುದ್ರದ ತೀರದಲ್ಲಿಯೇ ಉತ್ಕೃಷ್ಟವೆನ್ನುವ ದರಿಯಾಬಾದಿನ ಕೋಟೆಯನ್ನು ಆ ಬಸವಪ್ಪನಾಯಕನು ನಿರ್ಮಾಣ ಮಾಡಿಸಿದನು. ೧೩. ಇಷ್ಟು ಮಾತ್ರವಲ್ಲದೆ ಪಶ್ಚಿಮ ಸಮುದ್ರದ ತೀರದಲ್ಲಿ ಶೋಭಿಸುತ್ತಿರುವ ಕಾಪು ಎಂಬ ಊರಿನ ಸಮೀಪದಲ್ಲಿ ಆ ರಾಜನು ಸುಂದರವಾದ ಕೋಟೆಯನ್ನು ನೆಲೆಗೊಳಿಸಿದನು.

ವ|| ಈ ಪರಿಯಲ್ಲದೆ

ಕಂ || ಭೂನುತ ಕಲ್ಯಾಣಪುರ
ಸ್ಥಾನದೊಳತಿರಮ್ಯಮಾಗೆ ಬಸವಮಹೀಶಂ
ತೋನಸೆಯೆಂಬ ಸುಕೋಟೆಯ
ತಾನುರೆ ನಿರ್ಮಾಣಗೆಯ್ಸಿದಂ ಸಂತಸದಿಂ ೧೪

ವ|| ಮತ್ತಮದಲ್ಲದೆ

ಕಂ|| ವರಕುಂದಾಪುರದೆಡೆಯೊಳ್
ಸ್ಥಿರಮಪ್ಪಂತೆಸೆವ ಬೆಣ್ಣೆಗೆರೆಯೆನಿಪ ಪರಿ
ಸ್ಫುರಣವನತಿಶಯಮೆನಲೆಸೆ
ವರಮನೆಯಂ ರಚನೆಗೆಯ್ಸಿದಂ ಬಸವನೃಪಂ ೧೫

ವ|| ಮತ್ತಮದಲ್ಲದೆ

ಕಂ|| ಇಂದ್ರವಿಭವನಿಭವಿಭವನ
ರೇಂದ್ರಂ ತಾಂ ಮಂಗಲೂರ ತಾಣದೆ ಶಿವರಾ
ಜೇಂದ್ರಗಿರಿಯೆಂಬ ಗಡಮಂ
ಸಾಂದ್ರಯಶಂ ರಚನೆಗೆಯ್ಸಿದಂ ಪೊಸಬಗೆಯಿಂ ೧೬

ವ|| ಮತ್ತಮದಲ್ಲದಾ ಬಸವನರೇಂದ್ರಂ ಪರಶುರಾಮಕ್ಷೇತ್ರದೊಳೆಸೆವ ಸಿದ್ಧಾಪುರದ ಪೇಟೆಯ ಸಮೀಪದೊಳೊಪ್ಪುವ ಸ್ಥಳದೊಳ್..................... ಆ ಸ್ಥಳಕ್ಕೆ ಮಂತ್ರರಾಜಪುರಮೆಂದು ನಾಮಾಂಕಿತಮಂ ಮಾಡಿ ಷಡಕ್ಷರಯ್ಯನ ಮುಖದಿನಾಸ್ಥಳದೊಳತ್ಯದ್ಭುತಮಾದ ಮಠಮಂ ಕಟ್ಟಿಸಿ

ವ|| ಈ ರೀತಿಯಲ್ಲದೆ ೧೪. ಭೂಮಿಯಲ್ಲಿ ಶೋಭಿಸುವ ಕಲ್ಯಾಣಪುರವೆಂಬ ಸ್ಥಳದಲ್ಲಿ ಬಸವಪ್ಪ ನಾಯಕನು ಅತಿಸುಂದರವಾದ ತೋನಸೆಯೆಂಬ ಕೋಟೆಯನ್ನು ಸಂತೋಷದಿಂದ ನಿರ್ಮಾಣಮಾಡಿಸಿದನು. ವ|| ಮತ್ತು ಅದಲ್ಲದೆ ೧೫. ಶ್ರೇಷ್ಠವೆಂದು ಕುಂದಾಪುರದಲ್ಲಿ ಸ್ಥಿರವಾಗಿ ಶೋಭಿಸುವ ಬೆಣ್ಣೆಗೆರೆ ಎಂಬ ಕೋಟೆಯನ್ನೂ ಅತಿಶಯವೆಂದು ಹೇಳಲಾಗುವ ಅರಮನೆಯನ್ನೂ ಆ ಬಸವಪ್ಪನಾಯಕನು ನಿರ್ಮಾಣಮಾಡಿಸಿದನು. ವ|| ಮತ್ತು ಅಲ್ಲದೆ-೧೬. ಇಂದ್ರನ ವೈಭವಕ್ಕೆ ಸಮಾನವಾದ ವೈಭವವುಳ್ಳ ಮತ್ತು ಘನಕೀರ್ತಿಯುಳ್ಳ ಆ ರಾಜನು ಮಂಗಳೂರಿನಲ್ಲಿ "ಶಿವರಾಜೇಂದ್ರಗಿರಿ"ಯೆಂಬ ಕೋಟೆಯನ್ನು ಹೊಸ ರೀತಿಯಿಂದ ನಿರ್ಮಾಣ ಮಾಡಿಸಿದನು. ವ|| ಮತ್ತೆ ಅದಲ್ಲದೆ ಆ ಬಸವರಾಜೇಂದ್ರನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಸಿದ್ಧಾಪುರದ ಪೇಟೆಯ ಸಮೀಪದಲ್ಲಿರುವ ಪ್ರದೇಶವೊಂದರಲ್ಲಿ............ ಆ ಸ್ಥಳಕ್ಕೆ ಮಂತ್ರರಾಜಪುರ ಎಂಬುದಾಗಿ ಹೆಸರಿಟ್ಟು, ಷಡಕ್ಷರಯ್ಯನ ಮುಖದಿಂದ ಆ ಸ್ಥಳದಲ್ಲಿ ಅತ್ಯುದ್ಭುತವಾದ ಮಠವೊಂದನ್ನು ಕಟ್ಟಿಸಿದನು, ಆ ಮಠಕ್ಕೆ ವಿಶೇಷವಾದ ಭೂಮಿಯನ್ನು ಉಂಬಳಿಯಾಗಿ ಕೊಡಿಸಿ, ಶಿವಜಂಗಮ

ವಿಶೇಷ ಭೂಸ್ವಾಸ್ಥೆಯಂ ಬಿಡಿಸಿ ಶಿವಜಂಗಮಧರ್ಮಾರ್ಥಮಾಗಿ ಆ ಮಠಮಂ ಗುರು ನಂಜುಂಡಸ್ವಾಮಿಗಳ್ಗೆ ಧಾರೆಯನೆರೆದು ಶಿವಾರ್ಪಿತಮಾಗೆ ಸ್ಥಿರಶಾಸನಮಂ ಬರೆಸಿತ್ತು ಸದ್ಧರ್ಮ ಕೀರ್ತಿಯಂ ಸಂಪಾದಿಸಿದನಂತುಮಲ್ಲದೆಯುಂ

ಕಂ॥ ಆ ಮಂತ್ರರಾಜಪುರದೊಳ್
ಶ್ರೀಮತ್ಸಿದ್ಧೇಶ್ವರಂಗೆ ಪ್ರತಿವರ್ಷದೊಳು
ದ್ದಾಮ ರಥೋತ್ಸವವಿಭವಂ
ನೇಮದೆ ನಡೆವಂತೆ ಕಟ್ಟಳೆಯನಾಗಿಸಿದಂ ೧೭

ವ॥ ಮತ್ತಮಂತಲ್ಲದೆ

ಕಂ॥ ಮಿರುಗುವಾನಂದಪುರದೊಳ್
ಮುರಿಗೆಯ ದೇವರ್ಗೆ ವರರಥೋತ್ಸವಮಂ ವ
ತ್ಸರವತ್ಸರದೊಳ್ ನಡೆಸುವ
ಪರಿಯನೊಡರ್ಚಿಸಿದನಿಂತು ಬಸವಮಹೀಶಂ ೧೮

ವ॥ ಮತ್ತಮಂತಲ್ಲದೆ

ಕಂ॥ ಡಂಬಳದೊಳ್ ಸಿದ್ಧೇಶ್ವರ
ಗಿಂಬಾದಭಿನವರಥೋತ್ಸವಂ ಪ್ರತಿವರ್ಷಂ
ತಾಂ ಬಿಡದೆ ನಡೆವ ಪದ್ಧತಿ
ಯಂ ಬಸವನರೇಂದ್ರನಾಜ್ಞೆಯಿಂ ವಿರಚಿಸಿದಂ ೧೯

ವ॥ ಮತ್ತಮಂತಲ್ಲದೆ

ಕಂ॥ ಪೊಸತೆರಮೀಪರಿ ಬಕುತಿಯೆ
ನಿಸಿ ಚಂಪಾಷಷ್ಠಿಯಲ್ಲಿ ಸುಬ್ರಹ್ಮಣ್ಯಂ
ಗೆಸೆವ ತದುತ್ಸವಮಂ ನಡೆ
ಯಿಸಿದಂ ಪ್ರತಿವರ್ಷಗಳೊಳೆ ತಪ್ಪದ ತೆರದಿಂ ೨೦

ಧರ್ಮಾರ್ಥವಾಗಿ ಗುರು ನಂಜುಂಡಸ್ವಾಮಿಗಳಿಗೆ ಆ ಮಠವನ್ನು ಧಾರೆಯನ್ನೆರೆದನು. ಈ ರೀತಿ ಶಿವಾರ್ಪಣೆಮಾಡಿ ಶಾಶ್ವತವಾದ ಶಾಸನವನ್ನು ಬರೆಸಿ ಸದ್ಧರ್ಮದಿಂದ ಇರುತ್ತಾ ಕೀರ್ತಿಯನ್ನು ಪಡೆದನು. ಅಂತೂ ಅಲ್ಲದೆ-೧೭. ಆ ಮಂತ್ರರಾಜಪುರದಲ್ಲಿ ಶ್ರೀ ಸಿದ್ಧೇಶ್ವರನಿಗೆ ಪ್ರತಿವರ್ಷವೂ ವಿಜೃಂಭಣೆಯ ರಥೋತ್ಸವದ ವೈಭವವನ್ನು ನಿಯಮ ಪ್ರಕಾರ ನಡೆಯುವಂತೆ ಕಟ್ಟಳೆಯನ್ನು ಮಾಡಿಸಿದನು. ವ॥ ಮತ್ತು ಅಂತೂ ಅಲ್ಲದೆ- ೧೮. ಶೋಭಿಸುವ ಆನಂದಪುರದಲ್ಲಿ ಶ್ರೀಮುರಿಗೆಯ ದೇವರಿಗೆ ರಥೋತ್ಸವವನ್ನು ಪ್ರತಿವರ್ಷವೂ ನಡೆಸುವ ಕ್ರಮವನ್ನು ಬಸವಪ್ಪನಾಯಕನು ವ್ಯವಸ್ಥೆಗೊಳಿಸಿದನು. ವ॥ ಮತ್ತು ಅಂತೂ ಅಲ್ಲದೆ ೧೯. ಡಂಬಳ ಎಂಬಲ್ಲಿ ಸಿದ್ಧೇಶ್ವರನಿಗೆ ಒಪ್ಪುವ ಹೊಸತಾದ ರಥೋತ್ಸವವು ಪ್ರತಿವರ್ಷವೂ ಬಿಡದೇ ನಡೆಯುವ ಪದ್ಧತಿಯನ್ನು ಬಸವರಾಜನು ಆಜ್ಞಾಪೂರ್ವಕವಾಗಿ ಮಾಡಿದನು. ವ॥ ಮತ್ತು ಅಂತೂ ಅಲ್ಲದೆ ೨೦. ಪ್ರತಿವರ್ಷವೂ ಕೂಡ ಚಂಪಾಷಷ್ಠಿಯ ದಿನ ಶ್ರೀಸುಬ್ರಹ್ಮಣ್ಯಸ್ವಾಮಿಗೆ ಉತ್ಸವವನ್ನು ತಪ್ಪದೆ ನಡೆಯಿಸುತ್ತಾ ಭಕ್ತಿಯ ಹೊಸ

ವ॥ ಮತ್ತಮದಲ್ಲದೆ

ಕಂ॥ ನೆರೆ ಷಣ್ಣವತಿಸಹಸ್ರೋ
ತ್ತರಲಕ್ಷಸುಜಂಗಮಕ್ಕಭೀಷ್ಟಪದಾರ್ಥೋ
ತ್ಕರಗಳನೊದವಿಸಿ ನೀಡಿಸಿ
ಪಿರಿದೆನೆ ಸಂತುಷ್ಟಿವಡಿಸಿದಂ ಬಸವನೃಪಂ ೨೧

ವ॥ ಇಂತು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಮೂರ್ತಿಗಳ್ಗೆ ನಾನಾವಿಧ ಭಕ್ಷ್ಯ ಭೋಜ್ಯ ರಸಾಯನ ಫಲಂಗಳ್ ಮುಂತಾದ ಇಚ್ಛಾಪದಾರ್ಥಂಗಳಂ ನೀಡಿಸಿ ಸಂತುಷ್ಟಿವಡಿಸಿಯವರ್ಗೆ ನಾನಾವಿಧ ವಿಚಿತ್ರತರ ವಸ್ತ್ರ ಕಂಬಳಿ ಕಂಥೆ ಶಿವಧಾರ ವಿಭೂತಿಯಾಧಾರ ಭಸ್ಮ ರುದ್ರಾಕ್ಷಿ ಆಗಮ ಶಿವಶಾಸ್ತ್ರ ಲಿಖಿತಪುಸ್ತಕ ಪಾವಡ ಛತ್ರ ಪಾದುಕೆ ಹಸ್ತಾಧಾರ ದಂಡ ಮುಂತಾದ ಇಚ್ಛಾಪದಾರ್ಥಂಗಳಂ ಕೊಡಿಸಿ ಪೇಟೆಯಲ್ಲಿ ಆರಾಧನಪೂರ್ವಕಂ ಮಹೋತ್ಸವ ಮೆರೆವಣಿಗೆಗಳಂ ಮಾಡಿಸಿ ಶಾಶ್ವತ ಧರ್ಮಕೀರ್ತಿಗಳಂ ಸಂಪಾದಿಸಿ ರಾಜ್ಯಂಗೆಯ್ಯುತಿರ್ದ ಬಸವ ನರೇಂದ್ರನೊಂದವಸರದೊಳ್

ಕಂ॥ ಬಿಂಕದೆ ಸೈನ್ಯಸಮೇತಂ
ವೆಕಂಟರಾಯಂ ದಳ್ಳೆದಿ ರಾಜ್ಯವನಲೆಯು
ತ್ತಂಕದೊಳಿದಿರ್ಚೆ ಗಡಿಯೊಳ್
ತೇಂಕಿಸೆಯೊಡವಡಿಸಿ ಸೀಮೆಯಂ ದಾಂಟಿಸಿದಂ ೨೨

ಪದ್ಧತಿಯೊಂದನ್ನು ತೋರಿಸಿಕೊಟ್ಟನು. ವ॥ ಮತ್ತೂ ಅದಲ್ಲದೆ ೨೧. ಆ ಬಸವಪ್ಪನಾಯಕನು ೧,೯೬,೦೦೦ ಜಂಗಮರಿಗೆ ಇಷ್ಟವಾದ ಪದಾರ್ಥಗಳೆಲ್ಲವನ್ನೂ ಒದಗಿಸಿ, ದಾನಮಾಡಿ ಹೆಚ್ಚಿನ ರೀತಿಯಲ್ಲಿ ಸಂತೋಷಗೊಳಿಸಿದನು. ವ॥ ಈ ರೀತಿ ೧,೯೬,೦೦೦ ಜಂಗಮಮೂರ್ತಿಗಳಿಗೆ ನಾನಾ ವಿಧವಾದ ಭಕ್ಷ್ಯ, ಭೋಜ್ಯ, ರಸಾಯನ ಫಲಗಳು ಮುಂತಾದ ಅವರಿಗೆ ಬೇಕಾದ ಪದಾರ್ಥಗಳನ್ನು ನೀಡಿಸಿ ಸಂತೋಷಪಡಿಸಿದನು. ಅವರೆಲ್ಲರಿಗೂ ನಾನಾವಿಧವಾದ ವಿಚಿತ್ರತರ ಬಟ್ಟೆಗಳು, ಕಂಬಳಿ, ಕಂಥೆ, ಶಿವದಾರ, ವಿಭೂತಿ, ಭಸ್ಮ, ರುದ್ರಾಕ್ಷಿ, ಶಿವಶಾಸ್ತ್ರಲಿಖಿತ ಆಗಮಶಾಸ್ತ್ರದ ಪುಸ್ತಕಗಳು, ಹಾಸಿಗೆ, ಛತ್ರ, ಪಾದುಕೆ, ಹಸ್ತಾಧಾರ, ದಂಡ ಮುಂತಾದ ಬೇಕಾದ ಪದಾರ್ಥಗಳನ್ನು ಕೊಡಿಸಿದನು. ಅವರೆಲ್ಲರನ್ನೂ ಆರಾಧನ ಪೂರ್ವಕವಾಗಿ ಪೇಟೆಗಳಲ್ಲಿ ಮಹೋತ್ಸವಗಳನ್ನು ಮಾಡಿಸಿದನು. ಹೀಗೆ ಶಾಶ್ವತವಾಗಿ ಧರ್ಮಕಾರ್ಯಗಳನ್ನು ನಡೆಸಿ ಕೀರ್ತಿಯನ್ನು ಪಡೆದನು. ಹೀಗೆ ರಾಜ್ಯವನ್ನು ಪಾಲಿಸುತ್ತಿದ್ದ ಬಸವರಾಜನು ಒಂದಾನೊಂದು ಸಂದರ್ಭದಲ್ಲಿ ೨೨. ಆರೆಯರ ಮಂತ್ರಿಯಾದ ವೆಂಕಟರಾಯನು ಗರ್ವದಿಂದ ಸೈನ್ಯಸಮೇತನಾಗಿ ರಾಜ್ಯವನ್ನು ಸುತ್ತಾಡುತ್ತಾ ಗಡಿಯಲ್ಲಿ ಯುದ್ಧಕ್ಕೆ ಎದುರಾಗಲು ಅವನನ್ನು ಒಪ್ಪಿಸಿ ಸೀಮೆಯಿಂದ ಹೊರಕ್ಕೆ ಕಳುಹಿಸಿದನು. ವ॥ ಈ ರೀತಿ ದಾಳಿಮಾಡುತ್ತಾ ಸೊರಬದಲ್ಲಿ ಧಾಳಿ ನಡೆಸಿ, ಕುಂಬಸೆ

ವ|| ಇಂತು ದಾಳಿವರಿಯುತ್ತೈದಿ ಸುರಭಿಪುರಮಂ ಸೂರೆಗೊಂಡು ಕುಂಬಸೆ ಪ್ರಾಂತದೊಳಿಳಿದು ಪರಮೋಪದ್ರವಮಂ ರಚಿಸುತಿರ್ದಾರೆಯರ ವಜೀರ ವೆಕಂಟರಾಯನಂ ಪಿಂದೆಗೆಸಿ ರಾಜ್ಯಂಗೆಯ್ಯುತ್ತಿರಲತ್ತಂ ರಕ್ತಾಕ್ಷಿ ಸಂವತ್ಸರದ ಪುಷ್ಯಮಾಸದೊಳ್

ಕಂ|| ತಪ್ಪದೆ ಶಾಹುವ ನೇಮದೊ
ಳೊಪ್ಪುವ ಸಾಗರದೊಳಿಳಿದ ಬಾಪೂರಾಯನೆ
ನಿಪ್ಪನ ನಯಭಯದಿಂದಂ
ತಪ್ಪಿಸಿ ಗಡಿಯಿಂದೆ ರಾಜ್ಯಮಂ ಪಾಲಿಸಿದಂ ೨೩

ವ|| ಇಂತೈದಿ ರಾಜ್ಯಮಂ ಬಾಧಿಸುತಿರ್ದ ಬಾಪೂರಾಯನಂ ತೊಲಗಿಸಿ ರಾಜ್ಯವನಾಳುತ್ತು ಮಿರಲೊಡನೆ ಪ್ರಭವಸಂವತ್ಸರದ ಚೈತ್ರಮಾಸದೊಳೈತಂದು

ಕಂ|| ನಾನಾಜಿಯನುಜನಗಣಿತ
ಸೇನಾಢ್ಯಂ ದಾಳಿಯಿಡೆ ಸದಾಶಿವರಾಯಂ
ತಾನವನಂ ಸಂಗರಸಂ
ಧಾನದೆ ಪಿಂದೆಗೆಸಿ ರಾಜ್ಯಮಂ ರಕ್ಷಿಸಿದಂ ೨೪

ವ|| ಇಂತು ರಾಜ್ಯವನಲೆಯುತಿರ್ದಾರೆಯರ ವಜೀರ ಸದಾಶಿವರಾಯನಂ ಪಿಂದೆಗೆಸಲೊಡನಾಂಗಿರಸ ಸಂವತ್ಸರದ ಫಾಲ್ಗುಣಮಾಸದೊಳಂ ಮಗುಳ್ದು ಭಾವ ಸಂವತ್ಸರದ ಚೈತ್ರಮಾಸದೊಳಂ ಪೊಳೆಯ ಪೊನ್ನಾಳಿಯ ಪ್ರಾಂತಕ್ಕೈತಂದು ನಿಂದು

ಕಂ|| ನಾನಾರಾಯನೆರಳ್ಪೊಳ್
ತಾನೈತಂದಿಳಿದು ದಾಳಿಯಿಡುತಿರಲಾಗಳ್
ನಾನಾನಯಭಯ ಧನಸಂ
ಧಾನದೆ ಪಿಂದೆಗೆಸಿ ರಾಷ್ಟ್ರಮಂ ರಕ್ಷಿಸಿದಂ ೨೫

ಪ್ರಾಂತದಲ್ಲಿಳಿದು ಹೆಚ್ಚಿನ ಉಪಟಳವನ್ನು ಕೊಡುತ್ತಿದ್ದ ಆರೆಯರ ಮಂತ್ರಿಯಾದ ವೆಂಕಟರಾಯನನ್ನು ಹಿಂದಕ್ಕಟ್ಟಿಸಿದನು. ಹೀಗಿರುತ್ತಾ ರಾಜ್ಯವನ್ನು ಪಾಲಿಸುತ್ತಿರಲು ಈ ಕಡೆಯಲ್ಲಿ ರಕ್ತಾಕ್ಷಿ ಸಂವತ್ಸರದ ಪುಷ್ಯಮಾಸದಲ್ಲಿ ೨೩. ಶಾಹುರಾಜನ ಅಪ್ಪಣೆಯಂತೆ ಸಾಗರದಲ್ಲಿ ಬಂದಿಳಿದ ಬಾಪೂರಾಯನೆಂಬವನನ್ನು ನಯಭಯಗಳಿಂದ ಗಡಿಯನ್ನು ದಾಟಿಸಿ ರಾಜ್ಯವನ್ನು ಪಾಲಿಸಿದನು. ವ|| ಈ ರೀತಿ ಹೊರಟು ರಾಜ್ಯಕ್ಕೆ ಉಪಟಳವನ್ನು ಕೊಡುತ್ತಿದ್ದ ಬಾಪೂರಾಯನನ್ನು ಹಿಂದಕ್ಕಟ್ಟಿಸಿ ರಾಜ್ಯವನ್ನು ಪಾಲಿಸುತ್ತಿರಲು ಒಡನೆ ಪ್ರಭವ ಸಂವತ್ಸರದ ಚೈತ್ರ ಮಾಸದಲ್ಲಿ ಬಂದು ೨೪. ನಾನಾಜಿಯ ತಮ್ಮನಾದ ಸದಾಶಿವರಾಯನು ಲೆಕ್ಕವಿಲ್ಲದಷ್ಟು ಸೈನ್ಯದೊಂದಿಗೆ ಬಂದು ದಾಳಿಯಿಟ್ಟಾಗ ಅವನನ್ನು ಯುದ್ಧದಲ್ಲಿ ಹಾಗೂ ಸಂಧಾನದ ಮೂಲಕ ಹಿಂದಕ್ಕೆ ಕಳುಹಿಸಿ ರಾಜ್ಯವನ್ನು ಕಾಪಾಡಿದನು. ವ|| ಈ ರೀತಿ ರಾಜ್ಯದಲ್ಲಿ ಅಲೆಯುತ್ತಿದ್ದ ಆರೆಯರ ವಜೀರನಾದ ಸದಾಶಿವರಾಯನನ್ನು ಹಿಂದಕ್ಕೆ ಓಡಿಸಿದನು. ಮತ್ತೆ ಆಂಗೀರಸ ಸಂವತ್ಸರದ ಫಾಲ್ಗುಣ ಮಾಸದಲ್ಲಿಯೂ ಭಾವ ಸಂವತ್ಸರದ ಚೈತ್ರ ಮಾಸದಲ್ಲಿಯೂ ಹೊಳೆಯ ಹೊನ್ನಾಳಿ ಪ್ರಾಂತಕ್ಕೆ ಬಂದು ನಿಂತು ೨೫. ನಾನಾರಾಯನು ಎರಡು ಬಾರಿ ಧಾಳಿಯಿಟ್ಟಾಗ ನಾನಾವಿಧವಾದ ನಯಭಯಗಳಿಂದಲೂ, ಹಣಕೊಡುವ

ವ|| ಇಂತಡಿಗಡಿಗೆಳ್ತಂದು ರಾಷ್ಟ್ರಮಂ ಬಾಧಿಸುತಿರ್ದಾರೆಯರ ವಜೀರರಂ ಪಿಂದೆಗೆಸಿ ರಾಜ್ಯಮಾಳುತಿರ್ದ ಬಸವನಾಯಕಂ ಸಿದ್ಧಾರ್ಥಿ ರಕ್ತಾಕ್ಷಿ ಪ್ರಭವ ವಿಭವ ಶುಕ್ಲ ಪ್ರಮೋದೂತ ಪ್ರಜೋತ್ಪತ್ತಿ ಸಂವತ್ಸರಂಗಳೊಳ್ ಸೈನ್ಯ ಸಮೇತಂ ವೇಣುಪುರದಿಂ ತೆರಳ್ದು ಕೊಲ್ಲೂರ್ ಕೋಟೀಶ್ವರ ವಸುಪುರ ಶಂಕರನಾರಾಯಣ ಕಮಲಶಿಲೆ ಕೆಳದಿ ಮುಂತಾದ ಪುಣ್ಯಕ್ಷೇತ್ರಸ್ಥಳಂಗಳನೈದಿ ತತ್ತದ್ದೇವತಾದರ್ಶನಂಗೈದು ಮಹಾಪೂಜೆ ಮುಂತಾದುಪಚಾರಂಗಳನೊಡರ್ಚಿಸುತ್ತುಮಲ್ಲಿಂ ತೆರಳ್ದೈತಂದು ಮಂತ್ರರಾಜಪುರದ ರಥೋತ್ಸವಮನೀಕ್ಷಿಸುತ್ತುಮಲ್ಲಿಂ ಮುಂತಳರ್ದು ಕೊಡೆಯಾಲ ಮಂಗಲೂರ್ ಕುಂದಾಪುರ ಕಾರಕಳ ಮುಂತಾದ ಸ್ಥಳಂಗಳನವಲೋಕನಂಗೆಯ್ಯುತ್ತುಂ ವೈಹಾಳಿಯನೆಸಗುತ್ತೆ ಮರಳ್ದು ವೇಣುಪುರದರಮನೆಯಂ ಸಾರ್ದು ಸಂತತಂ ಶಿವಪೂಜೆ ಸತ್ಪುರಾಣಶ್ರವಣ ಸುಖಸಂಕಥಾವಿನೋದಗೋಷ್ಠಿಗಳಿಂ ಗುರುಲಿಂಗಜಂಗಮಸೇವಾ ತತ್ಪರನೆನಿಸಿ ವರ್ತಿಸುತ್ತುಮಿರಲ್ ತರಿಕೆರೆಯವರ್ ಮಾಯಾವಿಗಳೊಡನನುಸಂಧಾನಮಂ ರಚಿಸುತಿರ್ಪರೆಂಬ ವರ್ತಮಾನಮಂ ಕೇಳ್ದು ಸಬ್ಬುನೀಸ ಕೃಷ್ಣಪ್ಪಯ್ಯನೊಡನೆ ಸೇನಾ ಸಮೂಹಮಂ ತೆರಳ್ಚಿಸಿ ಕಳುಹಿ

ಕಂ|| ಮೆರೆವ ತರೀಕೆರೆಯಧಿಪನ
ಗರುವಿಕೆಯಂ ಮುರಿದು ಶೋಭಿಪುಬ್ರಾಣಿಯ ಭಾ
ಸುರರಂಗಯ್ಯನ ಹನುಮನ
ವರದುರ್ಗತ್ರಯವನಾ ನೃಪಂ ವಶಗೈದಂ ೨೬

ಸಂಧಾನದಿಂದಲೂ ಅವನನ್ನು ಹಿಂದಕ್ಕೆ ಕಳುಹಿಸಿ ರಾಷ್ಟ್ರವನ್ನು ಕಾಪಾಡಿದನು. ವ|| ಈ ರೀತಿ ಬಾರಿಬಾರಿಗೂ ರಾಷ್ಟ್ರವನ್ನು ಬಾಧಿಸುತ್ತಿದ್ದ ಆರೆಯರ ವಜೀರರನ್ನು ಹಿಂದಕ್ಕಟ್ಟಿಸಿ ರಾಜ್ಯವನ್ನಾಳುತ್ತಿದ್ದನು. ಬಸವಪ್ಪನಾಯಕನು ಸಿದ್ಧಾರ್ಥಿ, ರಕ್ತಾಕ್ಷಿ, ಪ್ರಭವ, ವಿಭವ, ಶುಕ್ಲ, ಪ್ರಮೋದೂತ, ಪ್ರಜೋತ್ಪತ್ತಿ ಸಂವತ್ಸರಗಳಲ್ಲಿ ಸೈನ್ಯಸಹಿತ ವೇಣುಪುರದಿಂದ ಹೊರಟು ಕೊಲ್ಲೂರು, ಕೋಟೀಶ್ವರ, ಬಸ್ರೂರು, ಶಂಕರನಾರಾಯಣ, ಕಮಲಶಿಲೆ, ಕೆಳದಿ ಮುಂತಾದ ಪುಣ್ಯಕ್ಷೇತ್ರಸ್ಥಳಗಳನ್ನು ಸಂದರ್ಶಿಸಿದನು. ಆಯಾ ಸ್ಥಳಗಳಲ್ಲಿರುವ ದೇವತಾದರ್ಶನವನ್ನು ಕೈಗೊಂಡು, ಮಹಾಪೂಜೆ ಮುಂತಾದುವುಗಳನ್ನು ನೆರವೇರಿಸುತ್ತಾ, ಅಲ್ಲಿಂದ ಬಂದು ಮಂತ್ರರಾಜಪುರದ ರಥೋತ್ಸವವನ್ನು ಈಕ್ಷಿಸಿದನು; ಮುಂದುವರಿದು ಕೊಡೆಯಾಲ, ಮಂಗಳೂರು, ಕುಂದಾಪುರ, ಕಾರ್ಕಳ ಮುಂತಾದ ಸ್ಥಳಗಳಿಗೆ ಹೋಗುತ್ತಾ, ಕುದುರೆ ಸವಾರಿಯ ಮುಖಾಂತರ ವೈಹಾಳಿಯನ್ನೆಸಗುತ್ತಾ ವೇಣುಪುರದ ಅರಮನೆಗೆ ಮರಳಿದನು.ಅನವರತವೂ ಶಿವಪೂಜೆ ಪುರಾಣಶ್ರವಣ ಮುಂತಾದುವುಗಳಿಂದ ಸತ್ಕಥಾಕಾಲಕ್ಷೇಪ ಮಾಡುತ್ತಾ, ವಿನೋದ ಗೋಷ್ಠಿಗಳನ್ನು ಏರ್ಪಡಿಸುತ್ತಾ ಗುರುಲಿಂಗಜಂಗಮರ ಸೇವಾತತ್ಪರನಾಗಿ ಇದ್ದನು. ಹೀಗಿರಲು ತರೀಕೆರೆಯವರು ಮಾಯಾವಿ (ಮೈಸೂರು)ಗಳವರೊಡನೆ ಸಂಧಾನವನ್ನು ಮಾಡಿಕೊಳ್ಳುತ್ತಿದ್ದಾರೆಂಬ ವಾರ್ತೆಯನ್ನು ಕೇಳಿ, ಸಬ್ಬುನೀಸ ಕೃಷ್ಣಯ್ಯನ ಸಂಗಡ ಸೇನೆಯನ್ನು ಹೊರಡಿಸಿ ಕಳುಹಿಸಿ-೨೬. ಮೆರೆಯುತ್ತಿರುವ ತರೀಕೆರೆಯ ರಾಜನ ಗರ್ವವನ್ನು ಮುರಿದು ಶೋಭಿಸುವ ಉಬ್ರಾಣಿಯ ದುರ್ಗ, ಹೊಳೆಯುವ ರಂಗಯ್ಯನ ದುರ್ಗ ಮತ್ತು ಹನುಮನದುರ್ಗವೆಂಬ

ವ|| ಇಂತು ಕೋಟಾತ್ರಯಂಗಳಂ ಸ್ವಾಧೀನಂಗೈಯಲ್ ಮದವಳಿದು ವೇಣುಪುರವರಕ್ಕೆಳ್ತಂದು ಸಂದರ್ಶನಂಗೆಯ್ದು ತನ್ನ ಸಂಸ್ಥಾನದ ಆರಭಾರ ಸುಖದುಃಖಾದಿವಿವರಣಂಗಳನುಸಿರ್ದು ದೈನ್ಯೋಕ್ತಿಗಳಂ ನುಡಿದಾ ತರಿಕೆರೆಯ ನಾಯಕನಂ ನಯೋಕ್ತಿಯಿಂ ಮನ್ನಿಸಿ ಗಜಾಶ್ವ ವಸ್ತ್ರಾಭರಣಾದಿಗಳನಿತ್ತು ಸನ್ಮಾನಿಸಿ ಕಳುಪಿ ಸುಖದಿಂ ರಾಜ್ಯಂಗೆಯ್ಯುತ್ತುಮಿರ್ದನಂತುಮಲ್ಲದೆಯುಂ

ಕಂ|| ಹರಪುರದರಸನುಮಂ ಭಾ
ಸುರತರ ಸವಣೂರ ಪತಿ ನವಾಬನ ಫೌಜಂ
ಬರಿಸಿ ಬಹುಸೈನ್ಯಸಹಿತಂ
ತೆರಳಿಸಿ ವರ ಸಬ್ಬುನೀಸ ಕೃಷ್ಣಪ್ಪನುಮಂ ೨೭

ಮ|| ಪದುಳಿಸಿ ಮಾಯಾಕೊಂಡದೆಡೆಯೊಳ್ ಬಹುಸೈನ್ಯಸಮೇತನಾಗುತು
ನ್ಮದದಿನಿದಿರ್ಚಿ ಮಾರ್ಮಲೆತು......... ವೊಳಪೊಕ್ಕು ಪೊರ್ದದಾ
ಮೆದೆಕೆರೆನಾಯಕಾಖ್ಯನೃಪನಂ ರಣದೊಳ್ ವಶಗೆಯ್ದು ಶಿಕ್ಷೆಗೆ
ಯ್ದಿದನಮರಾಳಿ ಮೆಚ್ಚಲದಟಂ ಬಸವೇಂದ್ರಭೂಮಿಪಂ ೨೮

ವ|| ಇಂತು ಮೆದೆಕೆರೆನಾಯಕನಂ ಜಯಿಸಿದ ಮಹೋತ್ಸವ ಕಾಲದೊಳ್ ನಿಜಸೈನ್ಯ ಸಮೇತನಾಗುತ್ತುಮೆಳ್ತಂದು ಸಂದರ್ಶನಂಗೆಯ್ದು ಹರಪುರದರಸನಂ ಸನ್ಮಾನಿಸಿ ಗಜಾಶ್ವವಸ್ತ್ರಾಭರಣಾದಿ ಗಳನಿತ್ತು ಬಹಳ ಸಂತೋಷಂಬಡಿಸಿ ಕಳುಪಿ ರಾಜ್ಯಂಗೆಯ್ಯುತ್ತುಮಿರಲೊಂದ ವಸರದೊಳ್

ಮೂರು ಕೋಟೆಗಳನ್ನು ಆ ರಾಜನು ವಶಪಡಿಸಿಕೊಂಡನು. ವ|| ಈ ರೀತಿ ಮೂರು ಕೋಟೆಗಳನ್ನೂ ಸ್ವಾಧೀನಪಡಿಸಿಕೊಂಡು ಮರಳಿ ವೇಣುಪುರಕ್ಕೆ ಬಂದನು. ಪ್ರಜೆಗಳಿಗೆ ಸಂದರ್ಶನವಿತ್ತು ತನ್ನ ಸಂಸ್ಥಾನದ ಆಡಳಿತ, ಸುಖ ದುಃಖಾದಿಗಳನ್ನು (ಪ್ರಜೆಗಳಿಗೆ) ವಿಚಾರಿಸಿ ನೋಡಿಕೊಳ್ಳುತ್ತಿದ್ದನು, ತನ್ನೆಡೆಗೆ ದೈನ್ಯೋಕ್ತಿಗಳಿಂದ ಬಂದ ತರೀಕೆರೆಯ ನಾಯಕನನ್ನು ಸಮಾಧಾನಪಡಿಸಿ, ಅವನಿಗೆ ಆನೆ, ಕುದುರೆ, ವಸ್ತ್ರ ಹಾಗೂ ಆಭರಣಗಳನ್ನು ಕೊಟ್ಟು ಸನ್ಮಾನಿಸಿ ಕಳುಹಿಸಿ ಸುಖದಿಂದ ರಾಜ್ಯವನ್ನು ಪಾಲಿಸುತ್ತಿದ್ದನು. ಅಂತೂ ಅಲ್ಲದೆ ೨೭. ಹರಪುರದ ರಾಜನನ್ನೂ ಸವಣೂರಿನ ದೊರೆ ನವಾಬನ ಸೈನ್ಯವನ್ನೂ ಬರಮಾಡಿ ಸಬ್ಬುನೀಸ ಕೃಷ್ಣಪ್ಪನನ್ನು ಹೆಚ್ಚಿನ ಸೈನ್ಯದೊಂದಿಗೆ ಕಳುಹಿಸಿ ೨೮. ಮಾಯಕೊಂಡ ಎಂಬಲ್ಲಿ ಅತ್ಯಧಿಕ ಸೈನ್ಯದಿಂದ ಕೂಡಿ, ಗರ್ವದಿಂದ ಕೊಬ್ಬಿ ಎದುರಾಗಿ ನುಗ್ಗಿ ಬರುತ್ತಿದ್ದ ಮೆದೆಕೆರೆನಾಯಕನೆಂಬ ಅರಸನನ್ನು ಯುದ್ಧದಲ್ಲಿ ಸೆರೆಹಿಡಿದು, ದೇವತೆಗಳ ಸಮೂಹವು ಮೆಚ್ಚುವ ರೀತಿಯಲ್ಲಿ ಪರಾಕ್ರಮಿಯಾದ ಬಸವಪ್ಪನಾಯಕನು ಶಿಕ್ಷೆಮಾಡಿದನು. ವ|| ಈ ರೀತಿ ಮೆದಕೆರೆನಾಯಕನನ್ನು ಗೆದ್ದ ಮಹೋತ್ಸವ ಕಾಲದಲ್ಲಿ ತನ್ನ ಸೈನ್ಯ ಸಹಿತ ಬಂದು, ತನ್ನನ್ನು ಸಂದರ್ಶಿಸಿದ ಹರಪುರದ ರಾಜನನ್ನು ಸನ್ಮಾನಿಸಿದನು. ಅವನಿಗೆ ಆನೆ, ಕುದುರೆ, ವಸ್ತ್ರ ಹಾಗೂ ಆಭರಣಾದಿಗಳನ್ನು ಕೊಟ್ಟು ಬಹಳ ಸಂತೋಷಪಡಿಸಿ ಕಳುಹಿಸಿದನು. ಈ ರೀತಿ ರಾಜ್ಯವನ್ನು ಕಾಪಾಡುತ್ತಿರಲು ಒಂದು ಕಾಲದಲ್ಲಿ

ಕಂ|| ಮೆದೆಕೆರೆನಾಯಕನ ಸುತಂ
ಮದಮುಖಂ ಕಸ್ತೂರಿರಂಗನಾಯಕನೈತಂ
ದಿದಿರ್ಚಿಸಿ ಸಂತೆಯಬೆನ್ನೂ
ರದುಭುತಮಾಗಿರ್ಪ ಕೋಂಟೆಯಂ ವೇಢೈಸಲ್ ೨೯

ಕದನದೆ ಬಹಿರಾಯತಮೋ
ಹಿದಖಾನ ವಜೀರನದಟನುರೆ ಮುರಿದೊಡನಾ
ಮೆದೆಕೆರೆನಾಯಕಸುತನಂ
ಸದೆದೋಡಿಸಿ ಜಯವನಾಂತನಾ ಬಸವನೃಪಂ ೩೦

ವ|| ಮತ್ತಮದಲ್ಲದೊಂದವಸರದೊಳ್ ಸಂದರ್ಶನಾಪೇಕ್ಷೆಯಿಂ ನಿಜಸೈನ್ಯಸಮೇತನಾಗೈತಂದು ಬೇಟಿಗೊಂಡು ತಮ್ಮ ಸಂಸ್ಥಾನದ ಸುಖದುಃಖಾದಿಗಳ ವಿವರಣಮನುಸಿರ್ದ ರಾಯದುರ್ಗದರಸನ ದೈನ್ಯೋಕ್ತಿಗಳಂ ಲಾಲಿಸಿ ಆವುದೊಂದು ಕಜ್ಜಕವಾವಿರ್ಪೆವೆಂದು ಧೈರ್ಯಂ ಪೇಳ್ದು ದಿಲಾಸನಿತ್ತುಚಿತಾಭರಣಾಂಬರಾದಿಗಳಿಂ ಪಿರಿದು ಸನ್ಮಾನಿಸಿ ಬೀಳ್ಕೊಟ್ಟನಂತುಮಲ್ಲದೆಯುಂ

ಕಂ|| ಆಳವಿಯೊಳಿದಿರ್ಚಿದರಿಗಳ
ತಲೆಗಳುಮಂ ಕೇಣಿಗೊಂಡು ರಾರಾಜಿಪ ಗು
ತ್ತಳದಧಿನಾಥನ........
ಹೋಳೆಯ ಪರಿಸ್ತರಣಮಂ ಕರಂ ವಶಗೈದಂ ೩೧

ವ|| ಮತ್ತಮದಲ್ಲದೊಂದವಸರದೊಳ್ ನಾಯಿಮಾರರ್ಕಳ್ ಮಾರ್ಮಲೆತು

ಕಂ|| ವರಚಂದ್ರಗಿರಿಯ ಸುಪರಿ
ಸ್ತರಣವನಾಕ್ರಮಿಸಿರಲ್ಕೆ ಸೈನ್ಯಸಮೇತಂ
ಧುರವಿಜಯನನಿಕ್ಕೇರಿಯ
ಮರಿಯಪನಂ ಕಳುಹಿ ಮಗುಳ್ದದಂ ವಶಗೆಯ್ದಂ ೩೨

೨೯. ಮೆದೆಕೆರೆನಾಯಕನ ಮಗನೂ ಹಾಗೂ ದುಷ್ಟನೂ ಆದ ಕಸ್ತೂರಿರಂಗಪ್ಪನಾಯಕನು ಬಂದು ಸಂತೆಯ ಬೆನ್ನೂರಿನ ಅದ್ಭುತವಾದ ಕೋಟೆಯನ್ನು ಮುತ್ತಿಗೆ ಹಾಕಿದಾಗ ೩೦. ಬಸವಪ್ಪನಾಯಕನು ಯುದ್ಧದಲ್ಲಿ ಬಹಿರಾಯತ ಮೋಹಿದಖಾನ್ ಮಂತ್ರಿಯ ಪರಾಕ್ರಮವನ್ನು ಕುಗ್ಗಿಸಿ ಮೆದೆಕೆರೆನಾಯಕನ ಮಗನನ್ನು ಹೊಡೆದು ಓಡಿಸಿ ಕೀರ್ತಿಯನ್ನು ಪಡೆದನು. ವ|| ಮತ್ತೂ ಅಲ್ಲದೆ ಒಂದು ಕಾಲದಲ್ಲಿ ರಾಯದುರ್ಗದ ಅರಸನು ತನ್ನ ಸೈನ್ಯಸಹಿತನಾಗಿ, ತನ್ನ ಸಂಸ್ಥಾನದ ಸುಖದುಃಖಾದಿಗಳನ್ನು ನಿವೇದಿಸಲು ಬಸವಪ್ಪನಾಯಕನನ್ನು ಸಂದರ್ಶಿಸಿದನು. ಆತನ ಬೇಡಿಕೆಗಳನ್ನು ಮನ್ನಿಸಿ, ಧೈರ್ಯವಿತ್ತು, ಎಲ್ಲಾ ಕಾರ್ಯಗಳಿಗೂ ತಾವು ಬೆಂಗಾವಲಾಗಿರುವುದಾಗಿ ಆಶ್ವಾಸನೆಯಿತ್ತನು. ಅವನಿಗೆ ಉಚಿತವಾದ ಆಭರಣಗಳು ಹಾಗೂ ಬಟ್ಟೆಗಳು ಮುಂತಾದುವುಗಳನ್ನು ಕೊಟ್ಟು ಸನ್ಮಾನಿಸಿ ಬೀಳ್ಕೊಟ್ಟನು. ಅಂತೂ ಅಲ್ಲದೆ, ೩೧. ಪರಾಕ್ರಮದಿಂದ ಎದುರಾದ ಶತ್ರುಗಳ ತಲೆಗಳನ್ನು ಬಲಿತೆಗೆದುಕೊಂಡು ಶೋಭಿಸುತ್ತಿದ್ದ ಗುತ್ತಲದ ಒಡೆಯನ..... ಹೋಳೆಯ ಕೋಟೆಯನ್ನು ವಶಪಡಿಸಿಕೊಂಡನು. ವ|| ಅಲ್ಲದೆ ಒಂದು ಕಾಲದಲ್ಲಿ ನಾಯಿಮಾರರುಗಳು ಕೊಬ್ಬಿ ಬಂದು ೩೨. ಚಂದ್ರಗಿರಿಯ ಕೋಟೆಯನ್ನು ಆಕ್ರಮಿಸಿಕೊಂಡಿರಲು ಯುದ್ಧದಲ್ಲಿ

ವ|| ಇಂತು ನಾಯಿಮಾರರಾಕ್ರಮಿಸಿದ ಚಂದ್ರಗಿರಿಯ ಕೋಂಟೆಯಂ ವಶಗೆಯ್ದು ಸುಖಮಿರುತ್ತುಂ

ಕಂ|| ಪನ್ನಿರ್ಛಾಸಿರ ಸಂಖ್ಯೆಯ
ಪೊನ್ನುಗಳುಮನಿತ್ತು ಪದಕಕೊಪ್ಪುವ ಧರೆಗ
ತ್ಯುನ್ನತವಾಗಿಹ ಪಚ್ಚೆಯ
ರನ್ನವನಾ ಬಸವನೃಪತಿ ಸಂಪಾದಿಸಿದಂ ೩೩

ವ|| ಮತ್ತಮೊಂದವಸರದೊಳ್

ಕಂ|| ವರಕರಿಯ ಮೇಲೆ ಮದುವೆಯ
ಮೆರವಣಿಗೆಯ ಮಾಡೆ ಜನರಿಗಪ್ಪಣೆಯಂ ತಾ
ನಿರದಿತ್ತ ಬಿಳಿಗಿಯರಸಗೆ
ಹರಮತಚರ ಶೀಲವಂತನೆನಿಪಪ್ಪಣನಿಂ ೩೪

ದೊರೆತನಂ ನಡೆಯದೊಲ್ವಿ
ಡ್ದುರಮಡಸಿಸೆ ತಾನೆಬಂದು ಬಿಳಿಗಿಯ ಭೂಪಂ
ನೆರೆ ಬೇಟಿಗೊಂಡು ದೈನ್ಯದೊ
ಳೊರೆಯಲ್ಕಪ್ಪಣನ ಮುಖದೆ ಬಂದಾ ದೆಸೆಯಂ ೩೫

ಲಾಲಿಸಿಯಪ್ಪಣನುಸುರಿದ
ಶೀಲಂ ನಡೆವಂತು ಮಾಡಿ ತತ್ತಿಷ್ಠೆಯುಮುಂ (?)
ತೇಲಿಸಿಯವರಂ ಮನ್ನಿಸಿ
ಲೀಲೆಯೊಳಂ ಬಸವನೃಪವರಂ ಬೀಳ್ಕೊಟ್ಟಂ ೩೬

ವಿಜಯಶಾಲಿಯಾದ ಇಕ್ಕೇರಿಯ ಮರಿಯಪ್ಪನನ್ನು ಸೇನೆಯೊಂದಿಗೆ ಕಳುಹಿಸಿ ಪುನಹ ಅದನ್ನು ವಶಪಡಿಸಿಕೊಂಡನು. ವ|| ಈ ರೀತಿ ನಾಯಿಮಾರರು ಆಕ್ರಮಿಸಿದ್ದ ಚಂದ್ರಗಿರಿಯ ಕೋಟೆಯನ್ನು ಸ್ವಾಧೀನ ಮಾಡಿಕೊಂಡು ಸುಖದಿಂದಿರಲು ೩೩. ೧೨,೦೦೦ ಹೊನ್ನುಗಳನ್ನು ಕೊಟ್ಟು ಪದಕಕ್ಕೆ-ಒಪ್ಪುವಂತಹ, ಭೂಮಿಯಲ್ಲೇ ಅತ್ಯುತ್ಕೃಷ್ಟವಾದ ಪಚ್ಚೆಯ ರತ್ನವನ್ನು ಆ ಬಸವಪ್ಪನಾಯಕನು ಸಂಪಾದಿಸಿದನು. ಮತ್ತು ಒಂದು ಕಾಲದಲ್ಲಿ- ೩೪. ಆನೆಯ ಮೇಲೆ ಮದುವೆಯ ಮೆರವಣಿಗೆಯನ್ನು ಮಾಡುವುದಕ್ಕೆ ಜನರಿಗೆ ಅಪ್ಪಣೆಯನ್ನು ಕೊಟ್ಟಿದ್ದ ಬಿಳಿಗಿಯ ಅರಸನಿಗೆ ಶಿವಾಚಾರಶೀಲವಂತನಾದ ಅಪ್ಪಣ್ಣ ಎಂಬವನಿಂದ ೩೫. ಅರಸುತನವು ನಡೆಯದ ಹಾಗೆ ಅಡ್ಡಿಯನ್ನುಂಟು ಮಾಡಿಸಲು ಬಿಳಿಗಿಯ ಅರಸನು ತಾನೇ ಬಂದು ಭೇಟಿ ಮಾಡಿ ದೈನ್ಯದಿಂದ ವಿಜ್ಞಾಪಿಸಿಕೊಂಡಾಗ ಅಪ್ಪಣ್ಣನ ಮೂಲಕ ಬಂದಿರುವ ಆ ಅವಸ್ಥೆಯನ್ನು ೩೬. ಕೇಳಿ ಅಪ್ಪಣ್ಣನು ಹೇಳಿದಂತೆ ನಡೆಯುವಂತೆ ಮಾಡಿ ಬಿಳಿಗಿಯ ಅರಸನ ನಿಲುವನ್ನು ಉಳಿಸಿ, ಅವನನ್ನು ಬಸವರಾಜನು

ವ|| ಮತ್ತಮದಲ್ಲದೆ

ಕಂ|| ಶ್ರೀಮುಖದ ಮಾಘಮಾಸದೊ
ಳಾಮಹಿಪಂ ಸಕಲಜನಹಿತಾರ್ಥಂ ಪರಮೋ
ದ್ದಾಮ ಶಾಸ್ತ್ರೋಕ್ತವಿಧಿಯಂ
ನೇಮದೊಳಂ ಗ್ರಾಮಶಾಂತಿಯಂ ವಿರಚಿಸಿದಂ ೩೭

ವ|| ಇಂತು ಗ್ರಾಮಶಾಂತಿಯನೊಡರ್ಚಿಸಿ ಸುಖದಿಂದ ರಾಜ್ಯಂಗೆಯ್ಯುತಿರ್ದಾ ಬಸವ ನರೇಂದ್ರಚಂದ್ರಂ ತನಗೆ ಸಂತಾನಮಿಲ್ಲದುದರಿಂ ಚಿಂತಿಸಿ ಮುಂದೆ ಸಂಸ್ಥಾನಾಧಿಪತಿತ್ವಕರ್ಹರಂ ಕಾಣದಾಳೋಚಿಸಿ ಭಾವಸಂವತ್ಸರದ ಭಾದ್ರಪದ ಶುದ್ಧ ನವಮಿಯ ದಿವಸದೊಳ್ ನಿರ್ವಾಣಯ್ಯನವರ ಮಗ ಗುರುವಪ್ಪನವರ ಕುಮಾರನಾದ ಚನ್ನಪ್ಪನವರಂ ಸರ್ವಸಂಭ್ರಮದಿಂ ಪಲ್ಲಕ್ಕಿಯಮೇಲರಮನೆಗೆ ಬಿಜಯಂಗೆಯ್ಸಿ ತಂದು ಮನೆದೇವರ ಸನ್ನಿಧಿಯೊಳ್ ಆ ಕುಮಾರನಂ ತಮ್ಮ ಪತ್ನಿ ವೀರಮ್ಮಾಜಿಯವರ ಮಡಿಲೊಳಿಡಿಸಿ ಗೃಹೀತಪುತ್ರನಂ ಮಾಡಿಕೊಂಡಾ ಚನ್ನಪ್ಪನವರ್ಗೆ ಚನ್ನಬಸವಪ್ಪನಾಯಕನೆಂದು ನಾಮಕರಣಂ ರಚಿಸಿ ಓದು ಸಾಧನೆ ಮುಂತಾದ ರಾಜೋಪಯುಕ್ತಮಾದ ವಿದ್ಯಾಭ್ಯಾಸಂಗಳ ನೊಡರ್ಚಿಸುತ್ತಾ ಕುಮಾರನಂ ಪೋಷಿಸಿ ಸಂತಸವಡುತ್ತುಂ

ಕಂ|| ಇಂತಾ ಬಸವನೃಪಾಲಂ
ಸಂತತಮರಿಜಾಲಕಾಲನತಿಶುಭಶೀಲಂ
ಸಂತಸದೆ ಸುಜನರೊಡಬಡು
ವಂತಿರೆ ಕರಮಾಳ್ದನೊಪ್ಪುವವನೀತಳಮಂ ೩೮

ಮನ್ನಿಸಿ ಕಳುಹಿಸಿಕೊಟ್ಟನು. ವ|| ಮತ್ತು ಅಲ್ಲದೆ ೩೭. ಶ್ರೀ ಮುಖ ಸಂವತ್ಸರದ ಮಾಘ ಮಾಸದಲ್ಲಿ ಆ ರಾಜನು ಎಲ್ಲಾ ಜನರ ಹಿತಕ್ಕಾಗಿ ಅತಿ ಶ್ರೇಷ್ಠವಾದ ಶಾಸ್ತ್ರೋಕ್ತ ಪದ್ಧತಿಯಿಂದ ಹಾಗೂ ನೇಮಪ್ರಕಾರ ಗ್ರಾಮಶಾಂತಿಯನ್ನು ಮಾಡಿಸಿದನು. ವ|| ಈ ರೀತಿ ಗ್ರಾಮಶಾಂತಿಯನ್ನು ಬಸವಪ್ಪನಾಯಕನು ನಡೆಸಿ ಸುಖದಿಂದ ರಾಜ್ಯವನ್ನು ಪಾಲಿಸುತ್ತಿದ್ದನು. ಈತನಿಗೆ ಸಂತಾನವಿರಲಿಲ್ಲ. ಇದನ್ನು ಯೋಚಿಸಿ, ಮುಂದೆ ಸಂಸ್ಥಾನದ ಅಧಿಪತಿಗೆ ಅರ್ಹರಾದ ಒಬ್ಬರನ್ನು ಆರಿಸಬೇಕೆಂದು ನಿರ್ಧರಿಸಿದನು. ಭಾವ ಸಂವತ್ಸರದ ಭಾದ್ರಪದ ಶುದ್ಧ ನವಮಿಯ ದಿವಸದಲ್ಲಿ ನಿರ್ವಾಣಯ್ಯನವರ ಮೊಮ್ಮಗನೂ, ಗುರುವಪ್ಪನವರ ಕುಮಾರನೂ ಆದ ಚನ್ನಪ್ಪನನ್ನು ದತ್ತು ಮಾಡಿಕೊಂಡನು. ಈ ಕುಮಾರನನ್ನು ಸಕಲ ಸಂಭ್ರಮದಿಂದ ಅರಮನೆಗೆ ಪಲ್ಲಕ್ಕಿಯಲ್ಲಿ ಕರೆತಂದು ಮನೆದೇವರ ಸನ್ನಿಧಿಯಲ್ಲಿ ತನ್ನ ಪತ್ನಿ ವೀರಮ್ಮಾಜಿಯವರ ಮಡಿಲಲ್ಲಿ ಇಡಿಸಿದರು. ಈ ದತ್ತು ಪುತ್ರನಿಗೆ ಚೆನ್ನಬಸವಪ್ಪ ನಾಯಕನೆಂದು ಹೆಸರಿಟ್ಟರು. ಕುಮಾರನಿಗೆ ವಿದ್ಯಾಭ್ಯಾಸ ಹಾಗೂ ಶಸ್ತ್ರಾಭ್ಯಾಸಗಳನ್ನು ಮತ್ತು ರಾಜೋಪಯುಕ್ತವಾದ ವಿದ್ಯಾಭ್ಯಾಸಗಳನ್ನೂ ಕಲಿಸಲು ಏರ್ಪಡಿಸಿ ಪೋಷಣೆ ಮಾಡುತ್ತಾ ಸಂತೋಷಪಡುತ್ತಿದ್ದರು. ೩೮. ಹೀಗೆ ಆ ಬಸವಪ್ಪನಾಯಕನು ಸಂತೋಷದಿಂದ ಯಾವಾಗಲೂ ಶತ್ರು ಸಮೂಹಕ್ಕೆ ಮೃತ್ಯುವಾಗಿ, ಒಳ್ಳೆಯ ಶೀಲವಂತನಾಗಿ, ಸಜ್ಜನರು

ವ|| ಆ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೭೭ನೆಯ ಭಾವಸಂವತ್ಸರದ ಕಾರ್ತಿಕ ಶುದ್ಧ ೫ ರವಿವಾಸರದೊಳ್

ಕಂ|| ಉನ್ನತಸದ್ಗುಣಗಣಸಂ
ಪನ್ನಂ ಬಸವೇಂದ್ರನೃಪನ ತರುವಾಯಿಯೊಳಂ
ಚನ್ನಬಸವೇಂದ್ರನವನಿಪ
ರನ್ನಂ ರಂಜಿಸುವ ರಾಜ್ಯಕಧಿಪತಿಯಾದಂ ೩೯

ವ|| ಆ ಚನ್ನಬಸವಪ್ಪನಾಯಕನೃಪಾಲಂ ಮಾತೃ ಚನ್ನವೀರಮ್ಮಾಜಿಯವರ್ ನಿರೂಪಿಸಿದ ಬುದ್ಧಿಮಾರ್ಗಂಬಿಡಿದು ವರ್ತಿಸುತ್ತುಂ ತಂದೆ ಬಸವಪ್ಪನಾಯಕರಾಳಿ ಬರುತ್ತಿರ್ದ ರಾಜ್ಯರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಮಂತ್ರಿ ನಿಯೋಗಿ ಸಾಮಾಜಿಕ ಸಾಮಂತ ಮಿತ್ರ ಸುಭಟ ಪುರಜನ ಪರಿಜನ ಸೇವಕಜನರ್ ಮುಂತಾದ ಸಮಸ್ತಜನರಂ ಸಂರಕ್ಷಿಸುತ್ತುಂ ಸದ್ಧರ್ಮದಿಂ ರಾಜ್ಯವಾಳುತ್ತುಮಿರಲ್ ಯುವಸಂವತ್ಸರದ ಫಾಲ್ಗುಣ ಮಾಸದೊಳ್ ನಾನಾರಾಯನ ಪ್ರೇರಣೆಯಿಂ ಮಾಧೋಜಿ ಪುರಂದರನೆಂಬ ವಜೀರಂ ಭೂರಿಸೈನ್ಯಸಮೇತನಾಗಿ ದಾಳಿವರಿಯುತ್ತೈದಿ

ಕಂ|| ಇಕ್ಕೇರಿಯ ಕೋಂಟೆಗೆ ಬಂ
ದಿಕ್ಕಿರೆ ಮುತ್ತಿಗೆಯ ಸಮರಸಂಧಾನದೊಳಾ
ಇಕ್ಕೇರಿಯ ಮುತ್ತಿಗೆಯಂ
ಗಕ್ಕನೆ ತೆಗೆಸುತ್ತೆ ಸೀಮೆಯಂ ದಾಂಟಿಸಿದಂ ೪೦

ಕೊಂಡಾಡುವಂತೆ ಭೂಮಂಡಲವನ್ನು ಚೆನ್ನಾಗಿ ಆಳಿದನು. ವ|| ಆ ಬಳಿಕ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೭೭ನೆಯ ಭಾವಸಂವತ್ಸರದ ಕಾರ್ತಿಕ ಶುದ್ಧ ೫ ಭಾನುವಾರದಲ್ಲಿ ೩೯. ಮೇಲುಮಟ್ಟದ ಸದ್ಗುಣಗಳ ಸಮೂಹಗಳಿಂದ ಕೂಡಿದವನಾದ ಚನ್ನಬಸವಪ್ಪನಾಯಕನು ಬಸವಪ್ಪನಾಯಕನ ತರುವಾಯು ಮೆರೆಯುತ್ತಿರುವ ರಾಜ್ಯಕ್ಕೆ ಒಡೆಯನಾದನು. ವ|| ಆ ಚನ್ನಬಸವಪ್ಪನಾಯಕರಾಜನು ತಾಯಿ ಚೆನ್ನವೀರಮ್ಮಾಜಿಯವರು ಹೇಳಿದಂತೆ ವಿವೇಕದಿಂದಲೂ ಬುದ್ಧಿಚಾತುರ್ಯ ದಿಂದಲೂ, ತನ್ನ ತಂದೆ ಬಸವಪ್ಪನಾಯಕರು ಆಳುತ್ತಿದ್ದಂತೆ ರಾಜ್ಯವನ್ನು ಕಾಪಾಡುತ್ತಿದ್ದನು. ತನ್ನ ರಾಜ್ಯ, ರಾಷ್ಟ್ರ, ದೇಶ, ಭಂಡಾರ, ಪ್ರಜೆಗಳು, ಪರಿವಾರಗಳು, ಕೋಟೆಗಳು, ಮಂತ್ರಿ ಹಾಗೂ ನಿಯೋಗಿಗಳು, ಸಾಮಾಜಿಕರು, ಸಾಮಂತರು, ಸ್ನೇಹಿತರು, ಸುಭಟರು, ಪುರಜನರು, ಪರಿವಾರಜನರು, ಸೇವಕರು ಮುಂತಾದ ಸಮಸ್ತರನ್ನೂ ಸಂರಕ್ಷಿಸಿ, ಕಾಪಾಡಿಕೊಂಡು ಸದ್ಧರ್ಮದಿಂದ ರಾಜ್ಯವನ್ನಾಳುತ್ತಿದ್ದನು. ಹೀಗಿರಲು ಯುವನಾಮ ಸಂವತ್ಸರದ ಫಾಲ್ಗುಣ ಮಾಸದಲ್ಲಿ ನಾನಾರಾಯನ ಪ್ರೇರಣೆಯಿಂದ ಮಾಧೋಜಿ ಪುರಂದರನೆಂಬ ವಜೀರನು ಹೇರಳ ಸೈನ್ಯದೊಡನೆ ಬಂದು ಧಾಳಿ ಮಾಡುತ್ತಾ- ೪೦. ಇಕ್ಕೇರಿಯ ಕೋಟೆಗೆ ಬಂದು ಮುತ್ತಿಗೆ ಹಾಕಿದನು. ಚನ್ನಬಸವನಾಯಕನು ಮಾಧೋಜಿ ಪುರಂದರನನ್ನು ಸಂಧಿವಿಗ್ರಹದ ಮೂಲಕ ಮುತ್ತಿಗೆಯನ್ನು ತೆಗೆಯಿಸಿ

ವ|| ಇಂತು ದಾಳಿವರಿಯುತ್ತೈದಿ ರಾಜ್ಯಮಂ ಬಾಧಿಸುತಿರ್ದ ಮಾಧೋಜೀ ಪುರಂದರನಂ ಪಿಂದೆಗೆಸಿ ರಾಜ್ಯವಾಳುತಿರ್ದನಂತುಮಲ್ಲದೆಯುಂ

ಕಂ|| ಮೆರೆವ ಡಂಬಳದ ಸಿದ್ಧೇ
ಶ್ವರಗಂ ವಿಲಸದ್ರಥೋತ್ಸವಾದ್ಯುಪಚಾರೋ
ತ್ಕರಗಳ್ ನಡೆವಂತಿರೆ ಸ
ದ್ಧರಣಿಯನುತ್ತಾರಗೆಯ್ಸಿದಂ ತದ್ಭೂಪಂ ೪೧

ವ|| ಇಂತು ಡಂಬಳದ ಸಿದ್ಧೇಶ್ವರದೇವರ್ಗೆ ಭೂಸ್ವಾಸ್ಥೆಯನುತ್ತಾರಂಗೆಯ್ಸಿ ಸುಖದಿಂ ರಾಜ್ಯಮಾಳುತ್ತಿರಲ್ ಕ್ವಚಿತ್ಕಾಲದೊಳ್

ಕಂ|| ಮಾದೇವಪುರದ ದೇವಪ
ನ್ನೈದಲ್ ಪಂಚತ್ವಮಂ ಕುವೃತ್ತಿಯಿನಾ ಸ
ರ್ವಾಧಿಕಾರಮನೆ ನಡೆಸಿದ
ನಾದರದಿಂ ಬಸವಲಿಂಗಪಾರ್ಯನ ಮುಖದಿಂ ೪೨

ವ|| ಇಂತು ಬಸವಲಿಂಗಪಮಂತ್ರಿಯ ಮುಖದೊಳ್ ಸರ್ವಾಧಿಕಾರಮಂ ನಡೆಸುತ್ತುಂ ವರ್ತಿಸುತ್ತುಮಿರಲ್ ಕ್ವಚಿತ್ಕಾಲಂ ಪೋಗಲೊಡನೆ

ಕಂ|| ವರನಾನಾಜೀರಾಯನ
ನಿರೂಪದಿಂದಧಿಕಮಾದ ಸೈನ್ಯಸಮೂಹಂ
ವೆರಸು ಗೋಪಾಲರಾಯಂ
ತೆರಳ್ದೈತಂದೊಡನೆ ನಿಲಲವಂ ಗಡಿಮುಖದೊಳ್ ೪೩

ವ|| ಮತ್ತಮಾಗಲ್

ಸೀಮೆಯಿಂದ ಆಚೆಗೆ ದಾಟಿಸಿದನು. ವ|| ಈ ರೀತಿ ದಾಳಿ ಮಾಡುತ್ತಾ ಬಂದು ರಾಜ್ಯಕ್ಕೆ ಉಪದ್ರವವನ್ನು ಕೊಡುತ್ತಿದ್ದ ಮಾಧೋಜೀ ಪುರಂದರನನ್ನು ಹಿಂದಕ್ಕಟ್ಟಿಸಿ ರಾಜ್ಯವನ್ನು ಆಳುತ್ತಿದ್ದನು. ಅಂತೂ ಅಲ್ಲದೆ-೪೧. ಆ ರಾಜನು ಮೆರೆಯುತ್ತಿದ್ದ ಡಂಬಳದ ಸಿದ್ಧೇಶ್ವರನಿಗೆ ಶೋಭಿಸುವಂತೆ ರಥೋತ್ಸವ ಮುಂತಾದ ಉಪಚಾರಾತಿಶಯಗಳು ನಡೆದುಕೊಂಡು ಬರುವ ಹಾಗೆ ಭೂಮಿಯನ್ನು ಧರ್ಮದತ್ತಿಯಾಗಿ ಬಿಟ್ಟುಕೊಟ್ಟನು. ವ|| ಹೀಗೆ ಡಂಬಳದ ಸಿದ್ಧೇಶ್ವರ ದೇವರಿಗೆ ಭೂಸ್ವಾಸ್ಥೆಯನ್ನು ಉಂಬಳಿಯಾಗಿ ಕೊಟ್ಟು ಸುಖದಿಂದ ರಾಜ್ಯವಾಳುತ್ತಿರಲು, ಸ್ವಲ್ಪಕಾಲದಲ್ಲಿಯೇ, ೪೨. ಮಾದೇವಪುರದ ದೇವಪ್ಪನು ಕಪಟಮಾರ್ಗಕ್ಕೆ ಸಿಕ್ಕಿ ಮರಣ ಹೊಂದಲು, ಬಸವಲಿಂಗಪ್ಪಾರ್ಯನ ಮುಖಾಂತರ ಸರ್ವಾಧಿಕಾರವನ್ನು ತಾನೇ ನಡೆಸಿದನು. ವ|| ಹೀಗೆ ಬಸವಲಿಂಗಪ್ಪ ಮಂತ್ರಿಯ ಮುಖದಿಂದ ಸರ್ವಾಧಿಕಾರವನ್ನು ನಡೆಸುತ್ತಾ ಇರುವಾಗ ಹಲವು ಕಾಲ ಕಳೆಯಲು ೪೩. ಶ್ರೇಷ್ಠನಾದ ನಾನಾಜಿರಾಯನ ನಿರೂಪದಂತೆ ಹೆಚ್ಚು ಸೈನ್ಯದೊಂದಿಗೆ ಗೋಪಾಲರಾಯನೆಂಬವನು ರಾಜ್ಯದ ಗಡಿಯಲ್ಲಿ ಬಂದು ನಿಂತು ವ|| ಮತ್ತೆ ಆಗ

ಕಂ॥ ಬಸವಲಿಂಗಾಖ್ಯಮಂತ್ರಿ
ಪ್ರಸರಶಿರೋಮಣಿಯನಧಿಕಚತುರಾಗ್ರಣಿಯಂ
ಒಸೆದಖಿಲಸೈನ್ಯಮಂ ಕೂ
ಡಿಸಿ ತೆರಳಿಸಿ ಕಳುಪಿ ಚನ್ನಗಿರಿ ಗಡಿಯೆಡೆಯೊಳ್ ೪೪

ಇರೆ ಭೇಟಿಮುಖದೆ ಕಾರ್ಯದ
ನಿರುಗೆಯನರಿದುಚಿತ ವಚನರಚನೆಗಳಿಂದಂ
ಗುರುವಾತ್ಸಲ್ಯವ ತೋರಿಸಿ
ನೆರೆ ಸಂತಸವಡಿಸಿ ತೆಗೆಸಿ ಗಡಿಮುಖದಿಂದಂ ೪೫

ವರಮೈಸೂರ ಮುಖಕ್ಕಂ
ಮೆರೆವಾ ಗೋಪಾಲರಾಯನಂ ಬಲಸಹಿತಂ
ತೆರಳಿಸಿ ನಿಜರಾಜ್ಯವನಂ
ದುರೆ ರಕ್ಷಿಸಿ ಜಸವನಾಂತನಾ ನೃಪತಿಲಕಂ ೪೬

ವ॥ ಇಂತು ದಾಳಿಯಿಡುತ್ತಿದಿದ ಗೋಪಾಲರಾಯನಂ ಹೊರೆದೆಗೆಸಿ ರಾಜ್ಯಂಗೆಯ್ಯುತ್ತಿರಲೊಂದವಸರದೊಳ್

ಕಂ॥ ಬೇಲೂರ ಕೃಷ್ಣಪೇಂದ್ರಂ
ಮೂಲಚ್ಯುತನಾಗಿ ಬಂದು ಕೊಡಗನ ದೆಸೆಯಿಂ
ಮೇಲಹ ಕಳಸದ ಕೋಟೆಯೊ
ಳಾಲೋಚಿಸುತಲ್ಲಿ ನಿಂದು ತನ್ನಯ ಕಥೆಯಂ ೪೭

ಕಂ॥ ಚನ್ನಬಸವೇಂದ್ರನೆಡೆಗಂ
ಬಿನ್ನಪವಂ ಬರೆದು ನಿಮ್ಮ ಪೊಂದಿದ ಸುತನಾ
ದೆನ್ನಂ ಸಂಸ್ಥಾನದೊಳಂ
ಚೆನ್ನಾಗಿರೆ ನಿಲಿಸಿ ಪೊರೆಯಬೇಹುದೆನುತ್ತುಂ ೪೮

೪೪. ಮಂತ್ರಿ ಸಮೂಹದಲ್ಲೇ ಶ್ರೇಷ್ಠನಾದ ಹಾಗೂ ಚತುರರಲ್ಲಿ ಅಗ್ರಗಣ್ಯನಾದ ಬಸವಲಿಂಗಪ್ಪನನ್ನು ಹೆಚ್ಚು ಸೈನ್ಯದೊಂದಿಗೆ ಚೆನ್ನಗಿರಿ ಗಡಿಯ ಕಡೆಗೆ ಕಳುಹಿಸಿಕೊಟ್ಟನು. ೪೫. ಆ ಗೋಪಾಲರಾಯನನ್ನು ಅಲ್ಲಿ ಮುಖತಃ ಭೇಟಿ ಮಾಡಿ, ಕಾರ್ಯವಿಸ್ತಾರವನ್ನು ತಿಳಿದು, ಉಚಿತ ಮಾತುಗಳಿಂದ ಹೆಚ್ಚು ವಾತ್ಸಲ್ಯವನ್ನು ಪ್ರದರ್ಶಿಸಿ, ಅವನನ್ನು ಸಂತೋಷಪಡಿಸಿ ಗಡಿಯಾಚೆಗೆ ಕಳುಹಿಸಿಕೊಟ್ಟನು. ೪೬. ಸೈನ್ಯಸಹಿತನಾದ ಆ ಗೋಪಾಲರಾಯನನ್ನು ಮೈಸೂರಿನ ಕಡೆಗೆ ಕಳುಹಿಸಿಕೊಟ್ಟು, ತನ್ನ ರಾಜ್ಯವನ್ನು ರಕ್ಷಿಸಿ ಕಾಪಾಡುತ್ತಾ ಆ ರಾಜಶ್ರೇಷ್ಠನು ಕೀರ್ತಿಯನ್ನು ಪಡೆದನು. ವ॥ ಈ ರೀತಿ ಧಾಳಿ ಮಾಡುತ್ತಿದ್ದ ಗೋಪಾಲರಾಯನನ್ನು ಹೊರಡಿಸಿ ರಾಜ್ಯವನ್ನು ಪಾಲಿಸುತ್ತಿರಲು ಒಂದು ಕಾಲದಲ್ಲಿ- ೪೭. ಬೇಲೂರಿನ ಕೃಷ್ಣಪ್ಪನಾಯಕನು ಕೊಡಗನ ದೆಸೆಯಿಂದ ರಾಜ್ಯಭ್ರಷ್ಟನಾಗಿ ಕಳಸದ ಕೋಟೆಗೆ ಬಂದು ಅಲ್ಲಿ ತನ್ನ ಪರಿಸ್ಥಿತಿಯನ್ನು ಆಲೋಚಿಸುತ್ತಿದ್ದನು. ೪೮. ಆ ಕೃಷ್ಣಪ್ಪನು ತನ್ನ ಕಥೆಯನ್ನೂ ಹಾಗೂ ವಿಜ್ಞಾಪನೆಯನ್ನೂ ಚನ್ನಬಸವಪ್ಪನಾಯಕನ ಬಳಿಗೆ ನಿರೂಪದ

ಬಿನ್ನವಿಸಿ ಕಳುಪೆ ಲಾಲಿಸಿ
ತನ್ನಂ ಮರೆವೊಕ್ಕನಾವನಾಗಿರಲವನಂ
ನನ್ನಿಯುದ್ಧರಿಪುದಿದು ನೃಪ
ರನ್ನರ್ಗಂ ನೀತಿಯೆಂದು ನಿಶ್ಚಯಿಸುತ್ತುಂ ೪೯

ವ|| ಇಂತೆಂದು ನಿಶ್ಚಯಂಗೆಯ್ದೊಡನೆ ರಾಯಸದ ಶಂಕರನಾರಾಯಣಯ್ಯನೊಡನೆ ಭೂರಿಸೈನ್ಯಮಂ ತೆರಳ್ಚಿಸಿ ಕಳುಹಿಸಿ ಬಲಮಂ ವೇಢೈಸಿದ ಕೊಡಗಸೈನ್ಯಮಂ ಪಿಂದೆಗೆಸಿಯಾ ಕೊಡಗರ ವೀರರಾಜನಂ ನಾನಾವಿಧ ನಯಭಯೋಕ್ತಿಗಳಿಂದೊಡಬಡಿಸಿ ಕುಮಾರ ಕೃಷ್ಣಪ್ಪನಾಯಕನಂ ಭಲ್ಯದಿಂ ಹೊರದೆಗೆಸಿ ತಮ್ಮಂ ಮರೆವೊಕ್ಕ ಕೃಷ್ಣಪ್ಪನಾಯಕನಂ ಬೇಲೂರ ಸಂಸ್ಥಾನದ ರಾಜತ್ವಕ್ಕೆ ನಿಲಿಸಿ ಪರಮ ಪ್ರಖ್ಯಾತಿಯಂ ಪಡೆದನಂತುಮಲ್ಲದೆಯುಂ

ಕಂ|| ಮುರಿಗೆಯ ಸಮಯದೆ ವರ್ತಿಸು
ತಿರುತಿಹ ವರಚನ್ನವೀರದೇವರನುರುಹಂ
ಗರದ ಮಠದಾಧಿಪತ್ಯಕೆ
ಚಿರಮೆನೆ ನೆಲೆಗೊಳಿಸಿ ನಿಲಿಸಿದಂ ತದ್ಭೂಪಂ ೫೦

ಕಂ|| ಇಂತಾ ಚನ್ನಬಸವಭೂ
ಕಾಂತಂ ಸುಯಶೋದಿಗಂತನಮಲಸ್ವಾಂತಂ
ಸಂತಸದಿಂ ರಿಪುನಿಕರಕೃ
ತಾಂತಂ ಧರ್ಮದೊಳ್ ರಾಜ್ಯಮಂ ಪಾಲಿಸಿದಂ ೫೧

ಮುಖಾಂತರ ಬರೆದು ಕಳುಹಿಸುತ್ತಾ "ನಿಮ್ಮನ್ನು ಮೊರೆ ಹೊಕ್ಕ ಮಗನಾದ ನನ್ನನ್ನು ನಿಮ್ಮ ಸಂಸ್ಥಾನದಲ್ಲಿ ನಿಲ್ಲಿಸಿಕೊಂಡು ಕಾಪಾಡಬೇಕೆಂಬುದಾಗಿ" - ೪೯. ಬಿನ್ನಹವನ್ನು ಕಳುಹಿಸಲು ಇದನ್ನು ಕೇಳಿ ನಾಯಕನು "ತನ್ನ ಮೊರೆ ಹೊಕ್ಕವನು ಯಾರೇ ಆಗಿರಲಿ; ಅವನನ್ನು ಕಾಪಾಡಿ ಉದ್ಧರಿಸುವುದು ರಾಜಶ್ರೇಷ್ಠರಿಗೆ ನೀತಿ ಮತ್ತು ತತ್ವವಾಗಿದೆ" ಎಂಬುದಾಗಿ ಮನಸ್ಸಿನಲ್ಲಿ ನಿಶ್ಚೈಸಿಕೊಂಡನು. ವ|| ಹೀಗೆ ನಿರ್ಧರಿಸಿ ಕೂಡಲೇ ರಾಯಸದ ಶಂಕರನಾರಾಯಣಯ್ಯನೊಡನೆ ಹೇರಳ ಸೈನ್ಯವನ್ನು ಹೊರಡಿಸಿ ಕಳುಹಿಸಿ, ಬಲದಿಂದ ಆಕ್ರಮಿಸಿದ ಕೊಡಗ ಸೈನ್ಯವನ್ನು ಹಿಂದಕ್ಕಟ್ಟಿಸಿದನು. ಆ ಕೊಡಗದ ವೀರರಾಜನನ್ನು ನಾನಾವಿಧವಾದ ನಯ, ಭಯ ಮತ್ತು ಚತುರೋಕ್ತಿಗಳಿಂದ ಒಡಂಬಡಿಸಿ, ಕುಮಾರ ಕೃಷ್ಣಪ್ಪನಾಯಕನನ್ನು ಭಲ್ಯವೆಂಬ ಕೋಟೆಯಿಂದ ಬಿಡಿಸಿದನು. ತಮ್ಮನ್ನು ಮೊರೆಹೊಕ್ಕ ಕೃಷ್ಣಪ್ಪನಾಯಕನನ್ನು ಬೇಲೂರ ಸಂಸ್ಥಾನಕ್ಕೆ ಅರಸನನ್ನಾಗಿ ನಿಲ್ಲಿಸಿ ಅಪಾರ ಕೀರ್ತಿಯನ್ನು ಹೊಂದಿದನು. ಅಂತೂ ಅಲ್ಲದೆ-೫೦. ಮುರಿಗೆಯ ಸಂಪ್ರದಾಯದಲ್ಲಿ ವ್ಯವಹರಿಸುತ್ತಿದ್ದ ಚನ್ನ ವೀರದೇವರನ್ನು ಹಂಗರ ಮಠದ ಒಡೆತನಕ್ಕೆ ಆ ರಾಜನು ಶಾಶ್ವತವಾಗಿ ನೆಲೆಗೊಳಿಸಿ ನಿಲ್ಲಿಸಿದನು. ೫೧. ಹೀಗೆ ಆ ಚನ್ನಬಸವಪ್ಪನಾಯಕನು ಸತ್ಕೀರ್ತಿಯನ್ನು ದಿಗಂತಗಳಿಗೆ ಹರಡಿಸಿದವನೂ, ನಿರ್ಮಲ ಮನಸ್ಸುಳ್ಳವನೂ, ಶತ್ರುಸಮೂಹಕ್ಕೆ ಯಮನೂ ಆದವನಾಗಿ

ಇರುತಿರುತುಂ ತದ್ಧರಣೀ
ಶ್ವರನುರುವಿಧಿವಶದೆ ತಾಂ ಚತುರ್ದಶವರ್ಷಾಂ
ತರದೊಳ್ ಪರಿಣಯಮಿಲ್ಲದೆ
ನೆರೆ ರೋಗಾರ್ತಿಯೊಳ್ ಶಿವನೊಳ್ಳೈಕ್ಯಂಬಡೆದಂ ೫೨

ವ॥ ಈ ಚನ್ನಬಸವಪ್ಪನಾಯಕರ್ ತಮಗೆ ಪಟ್ಟಮಾದ ಶಾಲಿವಾಹನ ಶಕವರ್ಷ ೧೬೭೭ನೆಯ ಭಾವಸಂವತ್ಸರದ ಕಾರ್ತಿಕ ಶುದ್ಧ ೫ ಯಾರಭ್ಯ ಈಶ್ವರಸಂವತ್ಸರದ ಶ್ರಾವಣ ಶುದ್ಧ ೨ಯವರೆಗೆ ವರ್ಷ ೨ ತಿಂಗಳು ೮ ದಿನ ೨೭ ಪರ್ಯಂತಂ ರಾಜ್ಯವನಾಳಿ ಐಕ್ಯವಾದರ್

ಸಂತೋಷದಿಂದ ರಾಜ್ಯವನ್ನು ಧರ್ಮದಿಂದ ಪಾಲಿಸಿದನು. ೫೨. ಹೀಗಿರಲು ಆ ರಾಜನು ಹದಿನಾಲ್ಕು ವರ್ಷಗಳಲ್ಲಿ ದೈವಗತಿಯಿಂದ ಮದುವೆಯಾಗದೆ ರೋಗಬಾಧೆಯಿಂದ ಶಿವೈಕ್ಯನಾದನು. ವ॥ ಈ ಚೆನ್ನಬಸವಪ್ಪನಾಯಕರು ತಮಗೆ ಪಟ್ಟಾಭಿಷೇಕವಾದ ಶಾಲಿವಾಹನ ಶಕವರ್ಷ ೧೬೭೭ನೆಯ ಭಾವಸಂವತ್ಸರದ ಕಾರ್ತೀಕ ಶುದ್ಧ ೫ ರಿಂದ ಈಶ್ವರಸಂವತ್ಸರದ ಶ್ರಾವಣ ಶುದ್ಧ ೨ ರವರೆಗೆ ೨ ವರ್ಷ ೮ ತಿಂಗಳು ೨೭ ದಿನಗಳವರೆಗೂ ರಾಜ್ಯವನ್ನಾಳಿ ಪರಂಧಾಮವನ್ನು ಹೊಂದಿದರು.

# ದ್ವಾದಶಾಶ್ವಾಸಂ

ವ|| ಆ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೮೦ನೆಯ ಈಶ್ವರಸಂವತ್ಸರದ ಶ್ರಾವಣ ಬಹುಳ ೫ ಗುರುವಾರದೊಳ್ ಬಸವಪ್ಪನಾಯಕರ ಪತ್ನಿ ಚೆನ್ನವೀರಮ್ಮಾಜಿಯವರ್ಗೆ ಗೃಹೀತಪುತ್ರನಾದ ಸೋಮಶೇಖರನಾಯಕರ್ಗೆ ರಾಜಪಟ್ಟಮಾದುದಾ ವಿವರಣಮೆಂತೆಂದೊಡೆ

ಕಂ|| ಚೆನ್ನಬಸವೇಂದ್ರ ಭೂಪಂ
ಪನ್ನಗಭೂಷಣನೊಳೈಕ್ಯಮಾಗಲ್ಕೊಡನಾ
ಚೆನ್ನವೀರಾಂಬೆ ಸಂಸ್ಥಾ
ನನ್ನಡೆವೊಡೆ ಮುಂತೆ ಮಾರ್ಗಮಂ ಕಾಣದಣಂ ೧

ಪಿರಿದುಂ ಚಿಂತಿಸಿ ಬಳಿಕೊಂ
ದುರುಪಥಮಂ ಕಂಡು ತಮ್ಮ ಸೋದರಮಾವಂ
ಗುರೆ ಪುತ್ರರ್ ನಾಲ್ವರಿರ್ಪರ್
ಪರಿಕಿಪೊಡಾ ನಾಲ್ವರೊಳ್ ಕನಿಷ್ಠಾತ್ಮಜನಂ ೨

ಸುಲಭದೆ ಗೃಹೀತಪುತ್ರನ
ನೊಲವಿಂದಂ ಮಾಡಿಕೊಂಡು ಸಂಸ್ಥಾನಕ್ಕಂ
ನಿಲಿಪುದೆ ಸುಮಂತ್ರಮೆಂದಾ
ಲಲನಾಮಣಿ ತನ್ನ ಮನದೆ ನಿಶ್ಚಯಿಸುತ್ತುಂ ೩

ವರಬಸವಲಿಂಗಪಾಗ್ರೇ
ಸರ ಸಿದ್ದಪನಾಯಕಾರ್ಯ ಶಿವಲಿಂಗಪಮು
ಖ್ಯರೊಳಿದನಾಳೋಚಿಸಿ ಸ
ರ್ವರ ಸಮ್ಮತದಿಂದೆ ತಹುದ ನಿಶ್ಚಯಗೈದಳ್ ೪

ವ|| ಅನಂತರ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೮೦ನೇ ಈಶ್ವರ ಸಂವತ್ಸರದ ಶ್ರಾವಣ ಬಹುಳ ಪಂಚಮಿ ಗುರುವಾರದಲ್ಲಿ ಬಸವಪ್ಪನಾಯಕರ ಹೆಂಡತಿ ಚೆನ್ನವೀರಮ್ಮಾಜಿಯವರಿಗೆ ದತ್ತುಪುತ್ರನಾದ ಸೋಮಶೇಖರನಾಯಕರಿಗೆ ಪಟ್ಟಾಭಿಷೇಕವಾಯಿತು. ಆ ವಿವರಣವು ಹೇಗೆ ನಡೆಯಿತೆಂದರೆ ೧. ಚೆನ್ನಬಸವಪ್ಪ ನಾಯಕನು ಶಿವೈಕ್ಯನಾದ ಬಳಿಕ ಚೆನ್ನವೀರಮ್ಮಾಜಿಯು ಮುಂದೆ ಸಂಸ್ಥಾನವು ನಡೆಯುವುದಕ್ಕೆ ಸರಿಯಾದ ಮಾರ್ಗವನ್ನು ಕಾಣದೆ, ೨. ಬಹಳವಾಗಿ ಯೋಚಿಸಿದ ಬಳಿಕ ಒಂದು ಸೂಕ್ತವಾದ ದಾರಿಯನ್ನು ಕಂಡುಕೊಂಡಳು. ತಮ್ಮ ಸೋದರಮಾವನಿಗೆ ನಾಲ್ಕು ಜನ ಗಂಡುಮಕ್ಕಳು ಇದ್ದಾರೆ. ಆ ನಾಲ್ಕು ಮಂದಿಯಲ್ಲಿ ಕಿರಿಯ ಮಗನನ್ನು ೩. ಸುಲಭವಾಗಿ ದತ್ತುಮಗನನ್ನಾಗಿ ಪ್ರೀತಿಯಿಂದ ಮಾಡಿಕೊಂಡು ಸಂಸ್ಥಾನಕ್ಕೆ ಅವನನ್ನೇ ರಾಜನನ್ನಾಗಿ ಮಾಡುವುದು ಒಳ್ಳೆಯ ಆಲೋಚನೆ ಎಂಬುದಾಗಿ ಆ ನಾರೀರತ್ನವು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ, ೪. ಶ್ರೇಷ್ಠರಾದ ಬಸವಲಿಂಗಪ್ಪ, ಅಗ್ರಗಣ್ಯನಾದ ಸಿದ್ದಪ್ಪನಾಯಕ,

**ವ|| ಇಂತು ನಿಶ್ಚಯಂಗೈದನಂತರಮಾ ಚನ್ನವೀರಮ್ಮಾಜಿ ಈಶ್ವರ ಸಂವತ್ಸರದ ಶ್ರಾವಣ ಬಹುಳ ಪಂಚಮಿ ಗುರುವಾರದೊಳ್ ತಮ್ಮ ಸೋದರಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ಚನ್ನವೀರಪ್ಪನವರ ಕನಿಷ್ಠಪುತ್ರನಂ ಸರ್ವಸಂಭ್ರಮದೊಳರಮನೆಯ ದೇವರ ಭವಂತಿಗೆ ಬಿಜಯಂಗೈಸಿ ತಂದ ಶೇಷಗುರಿಕಾರರಂ ಮುಂದಿಟ್ಟು ಕುಮಾರನಂ ಶಾಸ್ತ್ರೋಕ್ತಪ್ರಕಾರದಿಂ ತನಗೆ ಗೃಹೀತಪುತ್ರನಂ ಮಾಡಿಕೊಂಡಾ ಕುಮಾರಂಗಂ ಸೋಮಶೇಖರನಾಯಕನೆಂದು ನಾಮಕರಣಮಂ ರಚಿಯಿಸಿ ಗಗನಮಹಲ ಚಾವಡಿಯ ಸದರಿನೊಳ್ ಕುಳ್ಳಿರಿಸಿ ರಾಜಪಟ್ಟಮಂ ಕಟ್ಟಿಸಿ ಸಂಸ್ಥಾನಾಧಿಪತ್ಯಕ್ಕೆ ನಿಲಿಸಿ ತದಾರಭ್ಯಮಾಸೋಮಶೇಖರನಾಯಕರ್ ಬಾಲಕರಾದ ಕಾರಣದಿಂದಾ ಕುಮಾರನಂ ಮುಂದಿಟ್ಟುಕೊಂಡು ತಮ್ಮರಸನಾಳಿಬರುತಿರ್ದ ರಾಜ್ಯ ರಾಷ್ಟ್ರ ದೇಶ ಕೋಶ ಪ್ರಜೆ ಪರಿವಾರ ಪರಿಸ್ತರಣ ಮಂತ್ರಿ ನಿಯೋಗಿ ಸಾಮಾಜಿಕ ಸಾಮಂತ ಗುರಿಕಾರ ಪುರಜನ ಪರಿಜನ ಮಿತ್ರಜನ ಸೇವಕಜನರ್ ಮುಂತಾದ ಸಮಸ್ತ ಜನರಂ ಸಂರಕ್ಷಿಸುತ್ತುಂ ಸಂಸ್ಥಾನದೊಳಗುಂಟಾದ ಕಾರ್ಯಗಳ ನೆಲ್ಲಮಂ ತಾನೆ ವಹಿಸಿ ವಿಚಾರಂಗೆಯ್ದು ನಿರ್ವಹಿಸಿ ನಡೆಸುತ್ತುಂ ಸದ್ಧರ್ಮದಿಂ ರಾಜ್ಯಪ್ರತಿಪಾಲನ ಗೆಯ್ಯುತ್ತುಮಿರ್ದು ಶೃಂಗಪುರದ ಧರ್ಮಸಂಸ್ಥಾನದ ಸ್ವಾಮಿಗಳ ಮಠಕ್ಕೆ ಬಹಳ ಋಣಭಾರಮಾಗಿರ್ಪುದೆಂಬ ವರ್ತಮಾನಮಂ ಕೇಳ್ದಲ್ಲಿಗೆ ಚಿನ್ನಭಂಡಾರದ ಪುರುಷೋತ್ತಮಯ್ಯನ**

ಆರ್ಯನಾದ ಶಿವಲಿಂಗಪ್ಪ ಮುಂತಾದವರೊಡನೆ ಇದನ್ನು ಆಲೋಚಿಸಿ, ಎಲ್ಲರ ಒಪ್ಪಿಗೆಯಿಂದ ದತ್ತು ತಂದುಕೊಳ್ಳುವುದನ್ನು ನಿಶ್ಚಯಮಾಡಿಕೊಂಡಳು: ವ|| ಈ ರೀತಿ ನಿಶ್ಚಯವನ್ನು ಕೈಗೊಂಡ ಚನ್ನವೀರಮ್ಮಾಜಿಯು ಈಶ್ವರ ಸಂವತ್ಸರದ ಶ್ರಾವಣ ಬಹುಳ ಪಂಚಮಿ ಗುರುವಾರದಲ್ಲಿ ಬಂಕಾಪುರದಲ್ಲಿರುವ ತಮ್ಮ ಸೋದರಮಾವನಾದ ಪಟ್ಟಣಶೆಟ್ಟಿ ಚನ್ನವೀರಪ್ಪನವರ ಚಿಕ್ಕ ಮಗನನ್ನು ಸಕಲಜನರ ಸಂಭ್ರಮಗಳೊಡನೆ ದೇವರ ಸನ್ನಿಧಿಗೆ ಕರೆತಂದರು. ಎಲ್ಲಾ ಊರ ಮುಖಂಡರನ್ನೂ ಮುಂದೆ ಇಟ್ಟುಕೊಂಡು ಆ ಕುಮಾರನನ್ನು ವಿಧಿವತ್ತಾದ ಶಾಸ್ತ್ರದ ಪ್ರಕಾರ ತನಗೆ ದತ್ತು ಪುತ್ರನನ್ನಾಗಿ ಮಾಡಿಕೊಂಡಳು. ಆ ಕುಮಾರನಿಗೆ "ಸೋಮಶೇಖರನಾಯಕ"ನೆಂದು ನಾಮಕರಣವಿಟ್ಟು, ಗಗನಮಹಲ್ ಚಾವಡಿಯ ಸಮೀಪದಲ್ಲಿ ಕುಳಿತುಕೊಳ್ಳುವಂತೆ ಮಾಡಿ ಆತನಿಗೆ ಪಟ್ಟಾಭಿಷೇಕ ಮಾಡಿದಳು. ಈ ರೀತಿ ಸೋಮಶೇಖರನಾಯಕನನ್ನು ಸಂಸ್ಥಾನಕ್ಕೆ ಅಧಿಪತಿಯನ್ನಾಗಿ ಮಾಡಿದಳು, ಸೋಮಶೇಖರನಾಯಕನು ಬಾಲಕನಾದ ಕಾರಣದಿಂದ, ಆ ಕುಮಾರನನ್ನು ಆ ಮೊದಲು ಮುಂದಿಟ್ಟುಕೊಂಡು ರಾಜ್ಯವನ್ನಾಳಲು ಪ್ರಾರಂಭಿಸಿದಳು. ತನ್ನ ಗಂಡನಾದ ಅರಸನು ಆಳಿಕೊಂಡು ಬರುತ್ತಿದ್ದ ರಾಜ್ಯ, ರಾಷ್ಟ್ರ, ದೇಶ, ಕೋಶ, (ಭಂಡಾರ) ಪ್ರಜೆಗಳು, ಪರಿವಾರಗಳು, ಕೋಟೆಗಳು, ಮಂತ್ರಿಗಳು, ನಿಯೋಗಿಜನರು, ಸಾಮಾಜಿಕರು, ಸಾಮಂತರು, ಊರಮುಖಂಡರುಗಳು, ಪುರಜನರು, ಪರಿವಾರದವರು, ಸ್ನೇಹಿತರುಗಳು ಸೇವಕರು ಮುಂತಾದ ಸಮಸ್ತರನ್ನೂ ಕಾಪಾಡುತ್ತಾ ರಕ್ಷಿಸುತ್ತಿದ್ದಳು. ಸಂಸ್ಥಾನದಲ್ಲಿ ಒದಗಿದ ರಾಜ್ಯಕಾರ್ಯಗಳನ್ನೆಲ್ಲವನ್ನು ತಾನೇ ನಿರ್ವಹಿಸಿಕೊಂಡು ವಿಚಾರ ಮಾಡುತ್ತಾ ರಾಜ್ಯವನ್ನು ನಡೆಸಿದಳು. ಹೀಗೆ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದಾಗ, ಶೃಂಗೇರಿಯ ಧರ್ಮಸಂಸ್ಥಾನಕ್ಕೆ ಹಾಗೂ ಸ್ವಾಮಿಗಳ ಮಠಕ್ಕೆ ಬಹಳವಾಗಿ ಸಾಲವಾಗಿದೆಯೆಂಬುದಾಗಿ ವರ್ತಮಾನವು ಬಂದಿತು. ಅದನ್ನು ಕೇಳಿ ತಿಳಿದ ರಾಣಿಯು ಅಲ್ಲಿಗೆ ಚಿನ್ನಭಂಡಾರದ

ಮಗ ಹೂವಯ್ಯನಂ ಕಳುಪಿ ಅಭಿನವಸಚ್ಚಿದಾನಂದಸ್ವಾಮಿಯವರಂ ವೇಣುಪುರಕ್ಕೆ ಬಿಜಯ ಮಾಡಿಸಿದಳ್

ಇನ್ನಾ ಅಭಿನವ ಸಚ್ಚಿದಾನಂದಸ್ವಾಮಿಯವರಾರೆಂದೊಡೆ ಸರ್ವಜಗತ್ಕರ್ತೃವಪ್ಪ ಶ್ರೀಮತ್ಪರಮೇಶ್ವರನಿಂ ಹರಿ ಹರಿಯಿಂ ಬ್ರಹ್ಮನಾ ಬ್ರಹ್ಮನಿಂ ವಸಿಷ್ಠನಾ ವಸಿಷ್ಠನಿಂ ಶಕ್ತಿಯಾಶಕ್ತಿಯಿಂ ಪರಾಶರನಾ ಪರಾಶರನಿಂ ವ್ಯಾಸನಾ ವ್ಯಾಸನಿಂ ಶುಕಯೋಗೀಂದ್ರನಾ ಶುಕಯೋಗೀಂದ್ರನ ಶಿಷ್ಯರ್ ಗೌಡಪಾದಾಚಾರ್ಯರಾ ಗೌಡಪಾದಾಚಾರ್ಯರ ಶಿಷ್ಯರ್ ಗೋವಿಂದ ಭಗವತ್ಪಾದಾಚಾರ್ಯರಾ ಗೋವಿಂದಭಗವತ್ಪಾದಾಚಾರ್ಯರಿಂದಿತ್ತಮಯೋನಿಜರೆಂದೆನಿಸಿ ಭೂಮಿಯೊಳವತರಿಸಿದ ಈಶ್ವರಾಂಶೀಭೂತರಾದ ಕಾರಣರೂಪವಾದ ಶ್ರೀಮಚ್ಛಂಕರಾಚಾರ್ಯರಾ ಶಂಕರಾಚಾರ್ಯರ್ಗೆ ನಾಲ್ವರ್ ಶಿಷ್ಯರವರಾರೆಂದೊಡೆ ಹಸ್ತಾಮಳಕಾಚಾರ್ಯರ್ ತೋಟಕಾಚಾರ್ಯರ್ ಪಾದಪದ್ಮಾಚಾರ್ಯರ್ ಸುರೇಶ್ವರಾಚಾರ್ಯರ್ ಇಂತೀ ನಾಲ್ವರ್ ಶಿಷ್ಯರ್ಗೆ ಪೂರ್ವಪಶ್ಚಿಮದಕ್ಷಿಣೋತ್ತರಂಗಳೊಳ್ ದಿಗಂತವಾಗಿ ತಾವು ನಿರ್ಮಾಣಂಗೆಯ್ದಿದ ಸಂಕೇತಮಠಗಳಂ ಹಸುಗೆಯಂ ಮಾಡಿಕೊಟ್ಟು ತತ್ತನ್ಮತಗಳಾಚಾರ ವಿಚಾರಂಗಳಂ ವಿಚಾರಮಂ ಮಾಡಿ ಕೊರತೆ ಹುಗದಂತೆ ನಡೆಸುವುದೆಂದು ನಿಯಮಾಕಂಗೆಯ್ದು ತಾವು ಪನ್ನೆರಡು ಪದಿನಾರು ವತ್ಸರಂಗಳೊಳಗೆ ಸಮಸ್ತವಿದ್ಯಾಪಾರಂಗತರೆನಿಸಿ ಚಿಕ್ಕತನದಲ್ಲಿಯೇ

ಪುರುಷೋತ್ತಮಯ್ಯನ ಮಗ ಹೂವಯ್ಯನನ್ನು ಕಳುಹಿಸಿ ಅಭಿನವ ಸಚ್ಚಿದಾನಂದ ಭಾರತೀಸ್ವಾಮಿಯವರನ್ನು ವೇಣುಪುರಕ್ಕೆ ಬರಮಾಡಿಕೊಂಡಳು. ವ॥ ಇನ್ನು ಅಭಿನವ ಸಚ್ಚಿದಾನಂದ ಭಾರತೀಸ್ವಾಮಿಯವರು ಯಾರು ಎಂದರೆ ಸಕಲ ಜಗತ್ತಿನ ಸೃಷ್ಟಿಗೂ ಕಾರಣನು ಪರಮೇಶ್ವರ; ಈತನಿಂದ ವಿಷ್ಣು; ವಿಷ್ಣುವಿನಿಂದ ಬ್ರಹ್ಮ; ಬ್ರಹ್ಮನಿಂದ ವಸಿಷ್ಠ; ಆ ವಸಿಷ್ಠಋಷಿಯಿಂದ ಶಕ್ತಿ; ಶಕ್ತಿಯಿಂದ ಪರಾಶರ, ಆ ಪರಾಶರನಿಂದ ವ್ಯಾಸ, ಆ ವ್ಯಾಸನಿಂದ ಶುಕಯೋಗೀಂದ್ರ, ಆ ಶುಕಯೋಗೀಂದ್ರನ ಶಿಷ್ಯರು ಗೌಡಪಾದಾಚಾರ್ಯರು, ಗೌಡಪಾದಾಚಾರ್ಯರ ಶಿಷ್ಯರು ಗೋವಿಂದ ಭಗವತ್ಪಾದಾಚಾರ್ಯರು; ಗೋವಿಂದ ಭಗವತ್ಪಾದಾಚಾರ್ಯರಿಂದ ಈ ಕಡೆಯಲ್ಲಿ ಅಯೋನಿಜರೆನಿಸಿಕೊಂಡು ಭೂಮಿಯಲ್ಲಿ ಅವತಾರ ಮಾಡಿದ ಈಶ್ವರನ ಅಂಶಸಂಭೂತರೂ, ಕಾರಣರೂಪರೂ ಆದ ಶ್ರೀಮತ್ ಶಂಕಕರಾಚಾರ್ಯರು. ಈ ಶಂಕರಾಚಾರ್ಯರಿಗೆ ನಾಲ್ಕುಜನ ಶಿಷ್ಯರು; ಅವರು ಯಾರು ಎಂದರೆ, ಹಸ್ತಾಮಳಕಾಚಾರ್ಯರು, ತೋಟಕಾಚಾರ್ಯರು, ಪಾದಪದ್ಮಾಚಾರ್ಯರು,[೧] ಸುರೇಶ್ವರಾಚಾರ್ಯರು; ಹೀಗೆ ನಾಲ್ಕು ಜನ ಶಿಷ್ಯರಿಗೆ ಪೂರ್ವ, ಪಶ್ಚಿಮ, ದಕ್ಷಿಣ ಹಾಗೂ ಉತ್ತರಗಳಲ್ಲಿರುವ ದಿಕ್ಕುಗಳಿಗೆ ತಾವು ರಚಿಸಿದ ಮಠಗಳನ್ನು ಹಂಚಿಕೊಟ್ಟರು. ಆಯಾ ಮತಗಳಿಗೆ ಅನುಸಾರವಾಗಿ ಆಚರಣೆ ಹಾಗೂ ವಿಚಾರಣೆಗಳನ್ನು ಮಾಡಿಕೊಂಡು ಧರ್ಮಗಳಿಗೆ ಕೊರತೆಯಾಗದಂತೆ ನಡೆಸತಕ್ಕುದೆಂದು ನಿಯಾಮಕ ಮಾಡಿದರು. ತಾವು ಹನ್ನೆರಡು-ಹದಿನಾರು ವರ್ಷಗಳಲ್ಲಿಯೇ ಎಲ್ಲಾ ವಿದ್ಯೆಗಳಲ್ಲಿಯೂ ಪಾರಂಗತರೆನ್ನಿಸಿಕೊಂಡು ಬಾಲ್ಯದಲ್ಲಿಯೇ ಸಂನ್ಯಾಸಾಶ್ರಮವನ್ನು ಸ್ವೀಕಾರಮಾಡಿದರು. ಶ್ರೀ ಶಂಕರಾಚಾರ್ಯರು

---

೧ ಪದ್ಮಪಾದಚಾರ್ಯರೆಂದು ಪ್ರಸಿದ್ಧಿ

ಆಶ್ರಮವಂ ತೆಗೆದುಕೊಂಡು ಸಮಸ್ತದಿಗ್ದೇಶಂಗಳೊಳ್ ಸಂಚರಿಸಿ ಬಹುವಿಧ ವಿಚಿತ್ರಚರಿತ್ರಂಗಳಿಂ ಮಹಿಮೆಯಂ ಮೆರೆದು ಸೌಂದರ್ಯಲಹರಿ ಮುಂತಾದ ಗ್ರಂಥಗಳಂ ಮಾಡಿ ಬ್ರಹ್ಮಾಂಶೀಭೂತನಾಗೊಗೆದ ಮಂಡನಮಿಶ್ರನೊಡನೆ ವಿದ್ಯಾವಾದಮಂ ಮಾಡಿ ಮತ್ತಮಾ ಪಣದೊಳ್ ಪರಕಾಯಪ್ರವೇಶಮಂ ಮಾಡಿ ಮಗಳ್ದು ಸ್ವಕಾಯಮಂ ಸಾರ್ದು ಅಮರುಕವೆಂಬ ಗ್ರಂಥಮಂ ಮಾಡಿ ಬಳಿಕ್ಕಾ ಶಾರದಾಂಶೀಭೂತೆಯಾದ ಮಂಡನಮಿಶ್ರನ ಧರ್ಮಪತ್ನಿಯಂ ವಿದ್ಯಾವಾದದಿಂ ಗೆಲ್ದು ಬಳಿಕ್ಕಂ ಶಾರದಾದೇವಿಯಂ ಕರ್ಣಾಟದೇಶದೆಡೆಯೊಳೊಪ್ಪುವ ತುಂಗಭದ್ರಾನದೀತೀರದೊಳೆಸೆವ ವಿಭಾಂಡಕರ್ಷೀಶ್ವರನ ಪುತ್ರನಾದ ಋಷ್ಯಶೃಂಗಮುನಿಯಾಶ್ರಮ ಮಧ್ಯದೊಳ್ ತಾವು ನಿರ್ಮಾಣಂಗೆಯ್ದಿದ ಶೃಂಗಪುರದ ಮಠಕ್ಕೆ ಬಿಜಯಂಗೆಯ್ಸಿ ತಂದು ಶಾರದಾಪೀಠದೊಳ್ ಸ್ಥಿರಮಾಗಿ ನೆಲೆಗೊಳಿಸಿ ನಿಲಿಸಿ ಶಾರದಾಪೀಠದಿಂ ಯುಕ್ತವಾದ ಧರ್ಮಸಂಸ್ಥಾನಮೆಂದು ಸಮಸ್ತ ದಿಗ್ದೇಶದೊಳ್ ಪ್ರಖ್ಯಾತಿಗೆ ತಂದು ಸಾಂಖ್ಯತ್ರಯಪ್ರತಿಪಾದಕ ವಿಶುದ್ಧಾದ್ವೈತ ಸಿದ್ಧಾಂತ ಮತಸ್ಥಾಪಕ ಪದವಾಕ್ಯ ಪಾರವಾರಪಾರೀಣ ಅಷ್ಟಾಂಗಯೋಗಾನುಸಂಧಾನ ನಿರತಷಣ್ಮತ ಸ್ಥಾಪನಾಚಾರ್ಯ ಜಗದ್ಗುರು ಪರಮಹಂಸಪರಿವ್ರಾಜಕಾಚಾರ್ಯ ಶಂಕರಾಚಾರ್ಯರೆಂಬಿವು ಮೊದಲಾದ ಬಿರುದಂ ಪಡೆದು ಪರಮಪ್ರಸಿದ್ಧಿವೆತ್ತು ಮತ್ತಮಾ ಶೃಂಗಪುರದೊಳ್ ತಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರಂ ನೆಲೆಗೊಳಿಸಿ ತಾವು ಸ್ವತಂತ್ರಸಂಚಾರ ವಿನೋದಶೀಲರಾಗಿರುತಿಂತು ವರ್ತಿಸುತ್ತುಂ ಕೆಲವು ವತ್ಸರಮಿರ್ದು ಮುಕ್ತಿಗೆ ಸಂದರ್

ಸಮಸ್ತ ದಿಕ್ಕಿನ ದೇಶಗಳಲ್ಲಿಯೂ ಸಂಚರಿಸಿ, ನಾನಾ ವಿಧವಾದ ವಿಚಿತ್ರತರ ಮಹಿಮೆಗಳಿಂದ ಪ್ರಕಾಶಿಸಿದರು, 'ಸೌಂದರ್ಯಲಹರಿ' ಮುಂತಾದ ಗ್ರಂಥಗಳನ್ನು ರಚಿಸಿ ಬ್ರಹ್ಮನ ಅಂಶ ಸಂಭೂತರಾಗಿ ಶೋಭಿಸಿದ್ದ ಮಂಡನಮಿಶ್ರನೊಡನೆ ಶಾಸ್ತ್ರದಲ್ಲಿ ವಾಗ್ವಾದ ಮಾಡಿದರು. ಮತ್ತೆ ಆ ಪಂಥದಲ್ಲಿ ಪರಕಾಯ ಪ್ರವೇಶಮಾಡಿ ತಿರುಗಿ ತಮ್ಮ ದೇಹವನ್ನು ಸೇರಿದರು. 'ಅಮರುಕ'ವೆಂಬ ಪ್ರಸಿದ್ಧ ಗ್ರಂಥವನ್ನು ರಚಿಸಿ ಬಳಿಕ ಸರಸ್ವತಿಯ ಅಂಶಸಂಭೂತೆಯಾದ ಮಂಡನಮಿಶ್ರನ ಧರ್ಮಪತ್ನಿಯನ್ನು ಶಾಸ್ತ್ರಾರ್ಥವಾದಗಳಿಂದ ಗೆದ್ದರು. ಅನಂತರ ಶಾರದಾದೇವಿಯನ್ನು ಕರ್ಣಾಟಕ ದೇಶದಲ್ಲಿ ಶೋಭಿಸುವ ತುಂಗಭದ್ರಾನದೀತೀರದಲ್ಲಿ ವಿಭಾಂಡಕ ಮಹರ್ಷಿಯ ಪುತ್ರನಾದ ಋಷ್ಯಶೃಂಗಮುನಿಯ ಆಶ್ರಮದ ಮಧ್ಯದಲ್ಲಿ ತಾವು ನಿರ್ಮಿಸಿದ ಶೃಂಗೇರಿ ಮಠಕ್ಕೆ ಕರೆತಂದರು. ಅಲ್ಲಿರುವ ಶಾರದಾಪೀಠದಲ್ಲಿ ಶಾಶ್ವತವಾಗಿ ನೆಲೆಗೊಳಿಸಿ ಸ್ಥಾಪಿಸಿದರು. ಈ ಪೀಠದಿಂದ ನೇಮಕಮಾಡಿದ ಧರ್ಮಸಂಸ್ಥಾನವೆಂದು, ಸಮಸ್ತ ದಿಕ್ಕಿನ ದೇಶಗಳಿಗೂ ಪ್ರಖ್ಯಾತವಾಗುವಂತೆ ಮಾಡಿದರು. "ಸಾಂಖ್ಯತ್ರಯ ಪ್ರತಿಪಾದಕ, ವಿಶುದ್ಧಾದ್ವೈತ ಸಿದ್ಧಾಂತ ಮತಸ್ಥಾಪಕ, ಪದವಾಕ್ಯ ಪಾರಾವಾರ ಪಾರೀಣ, ಅಷ್ಟಾಂಗಯೋಗಾನುಸಂಧಾನನಿರತ, ಷಣ್ಮತಸ್ಥಾಪನಾಚಾರ್ಯ, ಜಗದ್ಗುರು ಪರಮಹಂಸ ಪರಿವ್ರಾಜಕಾಚಾರ್ಯ ಶಂಕರಾಚಾರ್ಯರೆಂಬಿವೇ ಮೊದಲಾದ ಬಿರುದನ್ನು ಹೊಂದಿ ಪ್ರಸಿದ್ಧಿ ಪಡೆದರು. ಆ ಶೃಂಗೇರಿಯಲ್ಲಿ ತಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರನ್ನು ನೇಮಿಸಿ, ತಾವು ಸ್ವತಂತ್ರವಾಗಿ ಸಂಚರಿಸುತ್ತಾ ಹಲವು ವರ್ಷಗಳ ಮೇಲೆ ಮುಕ್ತಿಯನ್ನೈದಿದರು.

ಇನ್ನಾ ಸುರೇಶ್ವರಾಚಾರ್ಯಕರಕಮಲಸಂಜಾತರಾರೆಂದೊಡೆ ಅವರ ನಾಮಂಗಳ್ :- ನಿತ್ಯಬೋಧಘನಾಚಾರ್ಯರ್ ಅವರ ತರುವಾಯ ನೃಸಿಂಹಾಚಾರ್ಯರ್ ಆ ತರುವಾಯ ಜ್ಞಾನೋತ್ತಮ ಶಿವಾಚಾರ್ಯರ್ ಆ ತರುವಾಯ ಜ್ಞಾನಗಿರ್ಯಾಚಾರ್ಯರ್ ಆ ತರುವಾಯ ನೃಸಿಂಹಗಿರ್ಯಾಚಾರ್ಯರ್ ಆ ತರುವಾಯ ಈಶ್ವರತೀರ್ಥಾಚಾರ್ಯರ್ ಆ ತರುವಾಯ ನೃಸಿಂಹಾಚಾರ್ಯರ್ ಆ ತರುವಾಯ ವಿದ್ಯಾತೀರ್ಥಾಚಾರ್ಯರ್ ಆ ತರುವಾಯ ಭಾರತೀತೀರ್ಥ ಕೃಷ್ಣಾಚಾರ್ಯರ್ ಆ ತರುವಾಯ ವಿದ್ಯಾರಣ್ಯ ಯೋಗೀಂದ್ರರ್

ಮತ್ತಮಾ ವಿದ್ಯಾರಣ್ಯರೆಂಬವರ್ ಪಂಪಾಕ್ಷೇತ್ರದೊಳಿರ್ದ ಶ್ರೀಚಕ್ರೋಪಾಸನೆಯಿಂ ದೇವಿಯಂ ಮೆಚ್ಚಿಸಿ ಬಳಿಕ್ಕಾ ಶೃಂಗೇರಿಯ ಮಠದೊಳ್ ವರ್ತಿಸುತ್ತಿರ್ದ ವಿದ್ಯಾಶಂಕರರಿಂದಮಾಶ್ರಮುವಂ ಕೈಕೊಂಡು ಭಾಗ್ಯಮಂ ಪಡೆದು ಬಳಿಕ್ಕಾ ದೇವಿಯ ನಿರೂಪದಿಂ ಪಂಪಾಕ್ಷೇತ್ರ ಸಮೀಪದೊಳ್ ವಿದ್ಯಾನಗರಿಯೆಂಬ ಪಟ್ಟಣಮಂ ನಿರ್ಮಾಣಂಗೆಯ್ಸಿ ಆ ರತ್ನಸಿಂಹಾಸನದಲ್ಲಿ ಹರಿಹರ ಬುಕ್ಕರೆಂಬಿರ್ವರ್ ಸಹೋದರರೊಳ್ ಪಿರಿಯನಾದ ಹರಿಹರರಾಯಂಗೆ ಪಟ್ಟಮಂ ಕಟ್ಟಿಸಿ ಪಂಪಾಕ್ಷೇತ್ರಮಾರಭ್ಯ ಕೃಷ್ಣವೇಣೀ ಪರ್ಯಂತಮಾದ ರಾಜ್ಯಕ್ಕೆಲ್ಲಂ ಶ್ರೀ ವಿರೂಪಾಕ್ಷನೆ ಕರ್ತೃ ನೀವಾ ಸ್ವಾಮಿಯ ಹೆಸರಿನಲ್ಲಿ ಒಪ್ಪವಂ ಹಾಕಿಕೊಂಡು ಆ ಸ್ವಾಮಿಯಲ್ಲಿ ಪರಮ ಭಕ್ತಿಯೊಳ್ ನಡೆದುಕೊಂಡು ಸದ್ಧರ್ಮದಿಂ ರಾಜ್ಯಪ್ರತಿಪಾಲನಂಗೆಯ್ವುದೆಂದು ನಿಯಾಮಿಸಿ ನಿಲಿಸಿ ಆ ಬಳಿಕಂ ತಾವು ರೇವಣಸಿದ್ಧೇಶ್ವರನೆಂಬ ಗಣಾಧೀಶ್ವರನಿಂ ಚಂದ್ರಮೌಳೀಶ್ವರನೆಂಬ ಲಿಂಗಮಂ ಪಡೆದು ಶೃಂಗಪುರವರಕ್ಕೈತಂದಾಮಠದೊಳ್ ನಿಂದು ಕೆಲಕಾಲಂ ವರ್ತಿಸುತ್ತುಮಿರ್ದು ಮುಕ್ತರಾದರ್

ವ|| ಇನ್ನು ಸುರೇಶ್ವರಾಚಾರ್ಯರ ನಂತರ ಅವರ ಕರಕಮಲದಿಂದ ಹುಟ್ಟಿದವರ ಹೆಸರುಗಳು: ಅವರು ಯಾರೆಂದರೆ-ನಿತ್ಯಬೋಧಘನಾಚಾರ್ಯರು; ಅವರ ನಂತರ ನರಸಿಂಹಾಚಾರ್ಯರು; ಆ ಬಳಿಕ ಜ್ಞಾನೋತ್ತಮ ಶಿವಾಚಾರ್ಯರು; ಅನಂತರ ಜ್ಞಾನಗಿರ್ಯಾಚಾರ್ಯರು; ಆಮೇಲೆ ನರಸಿಂಹಗಿರಿ ಆಚಾರ್ಯರು; ಆ ಬಳಿಕ ಈಶ್ವರ ತೀರ್ಥಾಚಾರ್ಯರು; ಆ ತರುವಾಯ ನರಸಿಂಹಾಚಾರ್ಯರು; ಆಮೇಲೆ ವಿದ್ಯಾತೀರ್ಥಾಚಾರ್ಯರು; ಆ ಬಳಿಕ ಭಾರತೀ ತೀರ್ಥಕೃಷ್ಣಾಚಾರ್ಯರು; ಆಮೇಲೆ ವಿದ್ಯಾರಣ್ಯ ಯೋಗೀಂದ್ರರು, ಮತ್ತೆ ಆ ವಿದ್ಯಾರಣ್ಯರೆಂಬವರು ಪಂಪಾಕ್ಷೇತ್ರದಲ್ಲಿದ್ದ ಶ್ರೀ ಚಕ್ರವನ್ನು ಉಪಾಸನೆ ಮಾಡಿ ದೇವಿಯನ್ನು ಮೆಚ್ಚಿಸಿದರು. ಅನಂತರ ಇವರು ಶೃಂಗೇರಿ ಮಠದಲ್ಲಿದ್ದ ವಿದ್ಯಾಶಂಕರದಿಂದ ಸಂನ್ಯಾಸಾಶ್ರಮವನ್ನು ಕೈಗೊಂಡು ಭಾಗ್ಯವನ್ನು ಪಡೆದರು. ಆಮೇಲೆ ಶ್ರೀದೇವಿಯ ಆಜ್ಞೆಯಂತೆ ಪಂಪಾಕ್ಷೇತ್ರದ ಸಮೀಪದಲ್ಲಿ ವಿದ್ಯಾನಗರವೆಂಬ ಪಟ್ಟಣವನ್ನು ನಿರ್ಮಾಣಮಾಡಿಸಿದರು. ಅಲ್ಲಿರುವ ರತ್ನಸಿಂಹಾಸನದಲ್ಲಿ ಹರಿಹರ ಹಾಗೂ ಬುಕ್ಕರೆಂಬ ಇಬ್ಬರು ಸಹೋದರರಲ್ಲಿ ಹಿರಿಯನಾದ ಹರಿಹರರಾಯನಿಗೆ ಪಟ್ಟವನ್ನು ಕಟ್ಟಿಸಿ, "ಪಂಪಾಕ್ಷೇತ್ರದ ಆರಂಭದಿಂದ ಕೃಷ್ಣವೇಣೀ ಪರಿಯಂತದವರೆಗೂ ಇರುವ ರಾಜ್ಯಕ್ಕೆಲ್ಲ ವಿರೂಪಾಕ್ಷನೇ ಒಡೆಯ; ನೀವು ಆ ಸ್ವಾಮಿಯ ಹೆಸರಿನಲ್ಲಿ ಅಂಕಿತವನ್ನು ಹಾಕಿಸಿಕೊಂಡು, ಆ ಸ್ವಾಮಿಯಲ್ಲಿ ಪರಮಭಕ್ತಿಯಿಂದ ನಡೆದುಕೊಂಡು ಸದ್ಧರ್ಮದಿಂದ ರಾಜ್ಯವನ್ನು ಪಾಲಿಸತಕ್ಕದ್ದೆಂದು" ನೇಮಿಸಿ ನಿಲ್ಲಿಸಿದರು. ತರುವಾಯ ತಾವು ರೇವಣಸಿದ್ಧೇಶ್ವರನೆಂಬ ಗಣಾಧೀಶ್ವರನಿಂದ ಚಂದ್ರಮೌಳೀಶ್ವರ ಲಿಂಗವನ್ನು ಪಡೆದು ಶೃಂಗೇರಿಗೆ ತಂದು ಆ ಮಠದಲ್ಲಿ

ಆ ವಿದ್ಯಾರಣ್ಯರ ತರುವಾಯ ಚಂದ್ರಶೇಖರಭಾರತೀಂದ್ರರ್ ಆ ತರುವಾಯ ನೃಸಿಂಹ ಭಾರತಿಗಳ್ ಆ ತರುವಾಯ ಪುರುಷೋತ್ತಮ ಭಾರತಿಗಳ್ ಆ ತರುವಾಯ ಶಂಕರಭಾರತಿಗಳ್ ಆ ತರುವಾಯ ಚಂದ್ರಶೇಖರಭಾರತಿಗಳ್ ಆ ತರುವಾಯ ನೃಸಿಂಹಭಾರತಿಗಳ್ ಆ ತರುವಾಯ ಪುರುಷೋತ್ತಮಭಾರತಿಗಳ್ ಆ ತರುವಾಯ ರಾಮಚಂದ್ರಭಾರತಿಗಳ್ ಆ ತರುವಾಯ ನೃಸಿಂಹಭಾರತಿಗಳ್ ಆ ತರುವಾಯ ಮತ್ತಂ ನೃಸಿಂಹಭಾರತಿಗಳ್ ಆ ತರುವಾಯ ಅಭಿನವ ನೃಸಿಂಹಭಾರತಿಗಳ್ ಆ ತರುವಾಯ ಸಚ್ಚಿದಾನಂದ ಭಾರತಿಗಳ್ ಆ ತರುವಾಯ ಸಚ್ಚಿದಾನಂದ ಭಾರತೀಸ್ವಾಮಿಗಳ ಕರಕಮಲಸಂಜಾತರಾದ ಅಭಿನವ ಸಚ್ಚಿದಾನಂದ ಭಾರತಿಗಳ್

ಇಂತಪ್ಪ ಅಭಿನವ ಸಚ್ಚಿದಾನಂದಭಾರತೀಸ್ವಾಮಿಯವರಂ ಈಶ್ವರ ಸಂವತ್ಸರದ ಮಾರ್ಗಶಿರ ಬಹುಳ ೧೨ಯೊಳ್

ಕಂ॥ ಭಾವಿಸೆ ಬರ್ಪಾ ನಾಮದ
ಚಾವಡಿಗೈತಂದು ನಿಂದು ಕರದೊಯ್ದೊಲವಿಂ
ದಾ ವಿಲಸಿತವಹ ಬಣ್ಣದ
ಚಾವಡಿಯೊಳ್ ಭೇಟಿಗೊಂಡು ಪರಮೋತ್ಸವದಿಂ ೫

ನೆರೆಯುಚಿತಮಾದ ಮಿಗಿಲುಡು
ಗೊರೆಗಳನಿತ್ತವರನ್ನೆದೆ ಸನ್ಮಾನಿಸಿಯಾ
ದರಿಸಿ ಬೀಳ್ಕೊಟ್ಟು ಬಳಿಕಂ
ವರವೃಷವನದೆಡೆಯನ್ನೆದೆ ಶೃಂಗರಿಸುತ್ತುಂ ೬

ನೆಲೆಯಾಗಿ ಹಲವು ಕಾಲ ಇದ್ದು ಮುಕ್ತರಾದರು. ಆ ವಿದ್ಯಾರಣ್ಯರ ಅನಂತರ ಚಂದ್ರಶೇಖರಭಾರತೀಂದ್ರರು; ಆಮೇಲೆ ನರಸಿಂಹಭಾರತಿಗಳು; ಅನಂತರ ಪುರುಷೋತ್ತಮ ಭಾರತಿಗಳು; ಆ ಬಳಿಕ ಶಂಕರಭಾರತಿಗಳು; ಅನಂತರ ಚಂದ್ರಶೇಖರಭಾರತಿಗಳು; ತರುವಾಯ ನರಸಿಂಹಭಾರತಿಗಳು; ಆಮೇಲೆ ಪುರುಷೋತ್ತಮ ಭಾರತಿಗಳು; ಆ ಬಳಿಕ ರಾಮಚಂದ್ರಭಾರತಿಗಳು; ಆಮೇಲೆ ನರಸಿಂಹಭಾರತಿಗಳು; ಆ ತರುವಾಯ ಪುನಃ ನರಸಿಂಹಭಾರತಿಗಳು; ಆ ಬಳಿಕ ಅಭಿನವ ನರಸಿಂಹಭಾರತಿಗಳು; ಅನಂತರ ಸಚ್ಚಿದಾನಂದ ಭಾರತಿಗಳು; ಆಮೇಲೆ ಸಚ್ಚಿದಾನಂದ ಭಾರತೀಸ್ವಾಮಿಗಳ ಕರಕಮಲ ಸಂಜಾತರಾದ ಅಭಿನವ ಸಚ್ಚಿದಾನಂದಭಾರತಿಗಳು. ಈ ರೀತಿ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಯವರನ್ನು ಈಶ್ವರ ಸಂವತ್ಸರದ ಮಾರ್ಗಶಿರ ಬಹುಳ ೧೨ರಲ್ಲಿ - ೫. ಸ್ವಾಮಿಗಳು ಬರುತ್ತಿದ್ದಾಗ ಆ ನಾಮದ ಚಾವಡಿಗೆ ಬಂದು ನಿಂತು ಅಲ್ಲಿಂದ ಪ್ರೀತಿಯಿಂದ ಕರೆದೊಯ್ದು ಮೆರೆಯುತ್ತಿರುವ ಬಣ್ಣದ ಚಾವಡಿಯಲ್ಲಿ ಹೆಚ್ಚಿನ ಉತ್ಸವದಿಂದ ಸಂದರ್ಶನ ಮಾಡಿ. ೬. ಉಚಿತವಾದ ಹಾಗೂ ಶ್ರೇಷ್ಠವಾದ ಉಡುಗೊರೆಗಳನ್ನು ಕೊಟ್ಟು ಅವರನ್ನು ಸಂಮಾನಿಸಿ, ಆದರಿಸಿದಳು. ಆಮೇಲೆ ಶ್ರೇಷ್ಠವಾದ ವೃಷವನದ ಪ್ರದೇಶದಲ್ಲಿ ಚೆನ್ನಾಗಿ ಅಲಂಕರಿಸಿ,

ನೆರೆರಮ್ಯವಾಗಿ ಸತತಂ
ಮಿರುಪಾ ಸ್ಥಳಕಾ ಯತೀಂದ್ರನಂ ಕರೆದೊಯ್ದಾ
ದರದಿಂ ಭಿಕ್ಷವನಾಗಿಸಿ
ಪಿರಿದೆನೆ ಸಂತುಷ್ಟಿವಡಿಸಿ ಕಳುಪಿ ಬಳಿಕ್ಕಂ ೭

ಪುರದೊಳ್ ಪ್ರತಿದಿನಗಳೊಳಂ
ಗುರಿಕಾರರಿನೆಸೆವ ಪರದರಿಂದಂ ಹೆಜ್ಜೇ
ಬರಿನುರುಭಿಕ್ಷವನಾಗಿಸಿ
ನೆರೆ ಸಂತಸವಡಿಸಿದಳ್ ದಲಾ ಯತಿವರನಂ ೮

ವ|| ಮತ್ತಮದಲ್ಲದಾ ತರುವಾಯಿಯೊಳಾ ಸ್ವಾಮಿಗಳ್ಗತ್ಯಂತ ದಿವ್ಯಮಾದ ಸ್ಫಟಿಕ ಲಿಂಗಮುಮಂ ಅನರ್ಘ್ಯರತ್ನಖಚಿತಗೋಪಾಲಕೃಷ್ಣಮೂರ್ತಿಯುಮಂ ಪದಕ ತಾಳಿ ಸರಪಣಿ ಸಹಿತಂ ಶಿವಾರ್ಪಿತಮಾಗಿ ಧಾರೆಯನೆರೆದು ಮತ್ತಮಾದೇವರ್ಗೆಪ್ಪತ್ತುನಾಲ್ಕುವರಹದ ಭೂಸ್ವಾಸ್ಥೆಯಂ ನಿರೂಪಮಂ ಬರೆಸಿತ್ತು ಮತ್ತಮಂತುಮಲ್ಲದೆ ಶೃಂಗಪುರದ ಮಠಕ್ಕೋಸುಗಂ ತನ್ನ ಭಕ್ತಿಯಿಂ ಬೇರೆ ಮುನ್ನೂರು ವರಹದ ಭೂಸ್ವಾಸ್ಥೆಯಂ ಶಿವಾರ್ಪಿತಮಾಗಿ ಉತ್ತಾರಮಂ ಮಾಡಿಸಿ ಅಕಾಲಚಕ್ರದೊಳ್ ಕೊಳುತ್ತಿರ್ದುತ್ತಾರಪಗುದಿಯಂ ಬಿಡಿಸಿ ಆ ಮಠದ ರುಣಭಾರಕ್ಕಂ ಉಚಿತವರಿತು ಖಂಡಿತ ಕಾಯಕಂಗಳಂ ಮಾಡಿಸಿಕೊಟ್ಟು ಮೇಲೆನಿಪ್ಪುಡುಗೊರೆಯುಚಿತ ಮುಂತಾದುಪಚಾರಂಗಳಿಂ ಪಿರಿದು ಸನ್ಮಾನಿಸಿ ಸಂತಸಂಬಡಿಸಿ ತೆರಳ್ಚಿ ಕಳುಪಿದಳಂತುಮಲ್ಲದೆಯುಂ

೭. ಸುಂದರವಾಗಿ ಶೋಭಿಸುವ ಆ ಸ್ಥಳಕ್ಕೆ ಯತೀಂದ್ರರನ್ನು ಕರೆದುಕೊಂಡು ಹೋಗಿ, ಆದರದಿಂದ ಅವರಿಗೆ ಭಿಕ್ಷವನ್ನು ಮಾಡಿಸಿ ಹೆಚ್ಚು ಸಂತೋಷಪಡಿಸಿ ಕಳುಹಿಸಿಕೊಟ್ಟಳು.
೮. ತನ್ನ ಪಟ್ಟಣದಲ್ಲಿ ಪ್ರತಿದಿನವೂ ಗುರಿಕಾರರುಗಳಿಂದಲೂ, ರತ್ನ ವ್ಯಾಪಾರಿಗಳಿಂದಲೂ, ಗಣ್ಯರುಗಳಿಂದಲೂ ಭಿಕ್ಷವನ್ನು ಮಾಡಿಸಿ ಆ ಯತಿಶ್ರೇಷ್ಠರನ್ನು ಸಂತೋಷಗೊಳಿಸಿದಳು,
ವ|| ಮತ್ತು ಅದಲ್ಲದೆ ಸ್ವಾಮಿಗಳಿಗೆ ದಿವ್ಯವಾದ ಸ್ಫಟಿಕಲಿಂಗವನ್ನೂ, ಅನರ್ಘ್ಯವಾದ ರತ್ನಖಚಿತ ಗೋಪಾಲಕೃಷ್ಣಮೂರ್ತಿಯನ್ನೂ, ಪದಕ, ತಾಳಿ ಹಾಗೂ ಸರಪಣಿ ಸಹಿತವಾಗಿ ಶಿವಾರ್ಪಣೆಯೆಂದು ಧಾರೆಯನ್ನೆರೆದಳು. ಮತ್ತೆ ಆ ದೇವರಿಗೆ ಎಪ್ಪತ್ತನಾಲ್ಕು ವರಹದ ಭೂಸ್ವಾಸ್ಥೆಗೆ ನಿರೂಪವನ್ನು ಬರೆಸಿದಳು; ಇದೂ ಅಲ್ಲದೆ ಶೃಂಗೇರಿಯ ಮಠಕ್ಕೋಸ್ಕರ ತನ್ನ ಭಕ್ತಿಯನ್ನು ಪ್ರದರ್ಶಿಸಿ ಬೇರೆ ಮೂನ್ನೂರು ವರಹ ಬೆಲೆಬಾಳುವ ಭೂಸ್ವಾಸ್ಥೆಯನ್ನು ಶಿವಾರ್ಪಿತವಾಗಿ ಉಂಬಳಿಯನ್ನಿತ್ತಳು. ಸಮಯವಲ್ಲದೆ ಅಕ್ರಮವಾಗಿ ಸಲ್ಲಿಸುತ್ತಿದ್ದ ಉತ್ತಾರವನ್ನೂ ಪಗುದಿಯನ್ನು ತಪ್ಪಿಸಿದಳು. ಮಠಕ್ಕೆ ಆಗಿದ್ದ ಸಾಲವನ್ನು ತೀರಿಸಿ, ಉಚಿತವರಿತು ಜೀವನಾಂಶವನ್ನು ಒದಗಿಸಿಕೊಟ್ಟು, ಶ್ರೇಷ್ಠವಾದ ಉಡುಗೊರೆ ಮತ್ತು ಉಚಿತ ಉಪಚಾರಗಳಿಂದ ಹೆಚ್ಚಾಗಿ ಸನ್ಮಾನಿಸಿ, ಸಂತೋಷಪಡಿಸಿ ಕಳುಹಿಸಿಕೊಟ್ಟಳು.

ಕಂ॥ ಅಡಸಿದಾರೆಯರ ಫೌಜಂ
ಕಡೆದೆಗೆಸುತೆ ವೀರಭದ್ರಪೇಂದ್ರನ ಮುಖದಿಂ
ಪಡುಗಡಲೆಡೆಯೊಳಗೊಪ್ಪುವ
ಮಿಡಿಜೆಯ ಕೋಂಟೆಯನೆ ಮಗುಳೆ ತಾಂ ವಶಗೈದಳ್ ೯

ವ॥ ಈ ವೀರಮ್ಮಾಜಿ ಸೋಮಶೇಖರನಾಯಕರ್ ರಾಜ್ಯವಾಳಿದುದು ಈಶ್ವರ ಸಂವತ್ಸರದ ಶ್ರಾವಣ ಬಹುಳ ೫ ಯಾರಭ್ಯ ಚಿತ್ರಭಾನು ಸಂವತ್ಸರದ ಮಾಘ ಶುದ್ಧ..... ವರೆಗೆ ವರ್ಷ ೫ ತಿಂಗಳು ೬ ಪರ್ಯಂತಂ

ದ್ವಾದಶಾಶ್ವಸಂ ಸಂಪೂರ್ಣಂ

ಶಕವರ್ಷ ೧೬೮೫ನೆಯ ಚಿತ್ರಭಾನು ಸಂವತ್ಸರದ ಮಾಘ ಶುದ್ಧ ೫ಯೊಳ್ ನಗರ ಸಂಸ್ಥಾನಂ ವಿಸ್ಖಲಿತಮಾಯ್ತು ಈ ಶಿವಭಕ್ತರ ಸಂಸ್ಥಾನಂ ಇಲ್ಲಿಗೆ ಸಮಾಪ್ತಂ

ಕೆಳದಿನೃಪ ವಿಜಯಂ ಸಂಪೂರ್ಣಂ
ಮಂಗಳಮಸ್ತು

ಅಂತೂ ಅಲ್ಲದೆ-೯. ಆಕ್ರಮಿಸಿದ ಆರೆಯರ ಸೈನ್ಯವನ್ನು ವೀರಭದ್ರಪ್ಪ ನಾಯಕನ ಮೂಲಕ ಹಿಂದಕ್ಕೆ ಓಡಿಸಿ, ಪಶ್ಚಿಮ ಸಮುದ್ರದ ತೀರದಲ್ಲಿ ಶೋಭಿಸುವ ಮಿಡಿಜೆಯ ಕೋಟೆಯನ್ನು ಮತ್ತೆ ತನ್ನ ಸ್ವಾಧೀನಪಡಿಸಿಕೊಂಡಳು, ಈ ವೀರಮ್ಮಾಜಿ ಹಾಗೂ ಸೋಮಶೇಖರ ನಾಯಕರು ಈಶ್ವರ ಸಂವತ್ಸರದ ಶ್ರಾವಣ ಬಹುಳ ೫ ರಿಂದ ಚಿತ್ರಭಾನು ಸಂವತ್ಸರದ ಮಾಘ ಶುದ್ಧ..... ವರೆಗೆ ೫ ವರ್ಷಗಳು ಮತ್ತು ಆರು ತಿಂಗಳ ಪರಿಯಂತ ರಾಜ್ಯವಾಳಿದರು.

-ಹನ್ನೆರಡನೆಯ ಆಶ್ವಾಸವು ಸಂಪೂರ್ಣವಾದುದು-

ಶಾಲಿವಾಹನ ಶಕ ವರ್ಷ ೧೬೮೫ನೆಯ ಚಿತ್ರಭಾನು ನಾಮಸಂವತ್ಸರದ ಮಾಘ ಶುದ್ಧ ೫ರಲ್ಲಿ ನಗರ ಸಂಸ್ಥಾನವು ಅಂತ್ಯಗೊಂಡಿತು. ಈ ಶಿವಭಕ್ತರ ಸಂಸ್ಥಾನವು ಇಲ್ಲಿಗೆ ಸಮಾಪ್ತವಾಯಿತು.

ಕೆಳದಿನೃಪ ವಿಜಯವು ಸಂಪೂರ್ಣವಾದುದು
ಮಂಗಳವಾಗಲಿ

# ಅನುಬಂಧ ೧

## ಕೆಳದಿನೃಪ ವಿಜಯದಲ್ಲಿ ಉಲ್ಲೇಖಗೊಂಡ ಅರಸರುಗಳ ವಂಶಾವಳಿ ಮತ್ತು ಹೋಲಿಕೆ

### I ದೆಹಲಿ ಬಾದಷಹರು

| ಕೆ.ನೃ.ವಿ ಪುಟ | ಕೆ.ನೃ.ವಿದಲ್ಲಿ ಹೇಳಿದ ಅರಸರುಗಳ ಹೆಸರು. | Rulers of Indiaದಲ್ಲಿನ ಪುಟ | Rulers of India by Stanley Lane Poole. B.A. 1893, Edited by Sir William Wilson Hunter ಆಧಾರದ ಮೇರೆಗೆ | ವಿಶೇಷ ವಿಷಯ |
|---|---|---|---|---|
| ೧ | ೨ | ೩ | ೪ | ೫ |
| ೧೨೫ | ಬಾಬರ್ | ೨೧ | ಬಾಬರ್ | |
| | ಹಮ್ಮಾವ | | ಹುಮಾಯೂನ್ | |
| | ಅಕಬರ | | ಅಕ್ಬರ್ | |
| | ಜಾಂಗೀರ | | ಜಾಹಂಗೀರ್ | |
| | ಶರಜಾನ್ | | ಷಹಜಹಾನ್ | |
| | ಔರಂಗಜೇಬ | | ಔರಂಗಜೇಬ್ | |
| | ಅಕ್ಬರ | | ಅಕ್ಬರ್ | |
| | ಶಹಲ | | ಶಹ ಆಲಂ | |
| | ಬೇಗಂ | | ಜಬುನ್ನೀಸಾ | ೪ ನೇಕಾಲಂನಲ್ಲಿ ಹೇಳಿದ ಗ್ರಂಥದಲ್ಲಿ ೫ ಜನ ಬೇಗಂಗಳಿದ್ದಾರೆ. |
| | ಅಜಮನಾರ | | ಅಜಮ್ | ಆಲಂ ಬಹದೂರ್ ಶಾ (ಮು ಆಜಮ್ ಶಾ) ಎಂಬ ಹೆಸರಿನ ಮತ್ತೊಬ್ಬನೂ ಕಾಣಸಿಗುತ್ತಾರೆ. |
| | ಕಾಂಬಕ್ಸ್ | | ಕಾಂಬಕ್ಸ್ | |

## II ಬಿಜಾಪುರದ ಅರಸರು

| ಕೆ.ನೃ.ವಿ ಪುಟ | ಕೆ.ನೃ.ವಿದಲ್ಲಿ ಹೇಳಿದ ಅರಸರುಗಳ ಹೆಸರು. | Karnataka Through the Ages ಪುಟ | Karnataka Through the Ages ಇದರಲ್ಲಿ ಹೇಳಿದ ಮೇರೆಗೆ | ವಿಶೇಷ ವಿಷಯ |
|---|---|---|---|---|
| ೧ | ೨ | ೩ | ೪ | ೫ |
| ೧೨೭ | ಸುಲ್ತಾನ ಮಹಮದ್ ಅಲ್ಲಿಯೇದುಲ್ ಶಹ ಸುಲ್ತಾನ ಶಿಖೀಂದ್ರ | ೫೭೬ | ಮುಹಮದ್ ಅಲ್ಲಿ ಅದಿಲ್‌ಷಹ ಸಿಕಂದರ್ | |
| | | | ಕಂ॥ ಸುಲುತಾನ ಮಹಮುದಾಖ್ಯಂ<br>ಬಳಿಕಲ್ಲಿಯೆದುಲಶಹಾನ ಸಮನಂತರದೊಳ್<br>ವಿಲಸದ್ವಡೆಸಾಹೇಬತಿ<br>ಸುಲುತಾನ ಶಿಖೀಂದ್ರರೆಂಬವರ್ಕಳ್ ಕ್ರಮದಿಂ<br>ಕೆ.ನೃ.ವಿ. IX ಆಶ್ವಾಸ, ಪು. ೧೨೭ | ೨೩ |

## III [illegible]

## III ತರೀಕೆರೆಯ ಪಾಳೆಯಗಾರರು

| ಕೆ.ನೃ.ವಿ ಪುಟ | ಕೆ.ನೃ.ವಿದಲ್ಲಿ ಹೇಳಿದ ಅರಸರುಗಳ ಹೆಸರು. | ಗೆಜೆಟಿಯರ್ ಪುಟ | ಗೆಜೆಟಿಯರಿನಲ್ಲಿ ಹೇಳಿದ ಮೇರೆಗೆ | ವಿಶೇಷ ವಿಷಯ |
|---|---|---|---|---|
| ೧ | ೨ | ೩ | ೪ | ೫ |
| ೧೫೮ | ಕಾಪಿನಾಯಕ | ೧೧೯೮ | | |
| | ಬುಳ್ಳನಾಯಕ | | | |
| | ಕೆಂಗಾನಾಯಕ | | ಕೆಂಗಪ್ಪ ನಾಯಕ | |
| | ರಡ್ಡಿ ಹನುಮಪ್ಪನಾಯಕ | | | ಹಿರೇಹನುಮಪ್ಪ ನಾಯಕನೆಂದು ಹೇಳಿದೆ. ಇವರಿಬ್ಬರಲ್ಲಿ ಯಾರು ಎಂಬುದು ತಿಳಿದು ಬಂದಿಲ್ಲ |
| | ಕುಂಟ ಹನುಮಪ್ಪನಾಯಕ | | | |
| | ಇಮ್ಮಡಿ ಹನುಮಪ್ಪನಾಯಕ | | ಇಮ್ಮಡಿ ಹನುಮಪ್ಪ ನಾಯಕ | |
| | ನಿಚ್ಚಮದವಣಿಗ ಹನುಮಪ್ಪ ನಾಯಕ | | ನಿಚ್ಚಮದವಣಿಗ ಹನುಮಪ್ಪ ನಾಯಕ | |
| | ಶರಜಾಹನುಮಪ್ಪನಾಯಕ | | ಶರಜಾಹನುಮಪ್ಪ ನಾಯಕ | |
| | ಸೀತಾರಾಮನಾಯಕ | | ಸೀತಾರಾಮಪ್ಪ ನಾಯಕ | |
| | ಪಟ್ಟಾಭಿರಾಮಪ್ಪನಾಯಕ | | | |

IV ಶ್ರೀ ಶೃಂಗೇರಿ ಗುರುಪರಂಪರೆ

| ಕೆ.ನೃ.ವಿ ಪುಟ | ಗುರುಗಳ ಹೆಸರು | ಶೃಂಗೇರಿ ಮಠದ ರಿಕಾರ್ಡಿನ ಪುಟ | Selections from the records of Sringeri Mutt Vol 1. | ವಿಶೇಷ ವಿಷಯ |
|---|---|---|---|---|
| ೧ | ೨ | ೩ | ೪ | ೫ |
| ೧೯೧ | ವಿದ್ಯಾರಣ್ಯರು | Lxxxvi | ವಿದ್ಯಾರಣ್ಯರು | |
| | ಚಂದ್ರಶೇಖರಭಾರತೀಂದ್ರರ್ | | ಚಂದ್ರಶೇಖರ ಭಾರತಿ | |
| | ನೃಸಿಂಹಭಾರತಿಗಳ್ | | ನರಸಿಂಹಭಾರತಿ | |
| | ಪುರುಷೋತ್ತಮಭಾರತಿಗಳ್ | | ಪುರುಷೋತ್ತಮಭಾರತಿ | |
| | ಶಂಕರಭಾರತಿಗಳ್ | | ಶಂಕರಾನಂದಭಾರತಿ | |
| | ಚಂದ್ರಶೇಖರ ಭಾರತಿಗಳ್ | | ಚಂದ್ರಶೇಖರಭಾರತಿ | |
| | ನೃಸಿಂಹಭಾರತಿಗಳ್ | | ನರಸಿಂಹಭಾರತಿ | |
| | ಪುರುಷೋತ್ತಮಭಾರತಿಗಳ್ | | ಪುರುಷೋತ್ತಮಭಾರತಿ | |
| | ರಾಮಚಂದ್ರಭಾರತಿಗಳ್ | | ರಾಮಚಂದ್ರಭಾರತಿ | |
| | ನೃಸಿಂಹಭಾರತಿಗಳ್ | | ನರಸಿಂಹಭಾರತಿ | |
| | ಅಭಿನವನೃಸಿಂಹಭಾರತಿಗಳ್ | | ಇಮ್ಮಡಿನರಸಿಂಹಭಾರತಿ | ಅಭಿನವ ನರಸಿಂಹ ಭಾರತಿಗಳ ಹೆಸರಿನ ಉಲ್ಲೇಖವಿದೆ- |
| | ಸಚ್ಚಿದಾನಂದಭಾರತಿಗಳ್ | | ಸಚ್ಚಿದಾನಂದಭಾರತಿ | |
| | ಅಭಿನವಸಚ್ಚಿದಾನಂದ ಭಾರತಿಗಳ್ | | ಅಭಿನವಸಚ್ಚಿದಾನಂದಭಾರತಿ | ಇಲ್ಲಿಯೂ ನರಸಿಂಹ ಭಾರತಿ ಎಂಬವರು ಒಬ್ಬರು ಇರುವುದು ಕಂಡು ಬರುತ್ತದೆ. |

ಮಾದರಿಗಾಗಿ ಇಲ್ಲಿ ಕೆಲವೇ ವಂಶಗಳನ್ನು ವಿಶ್ಲೇಷಿಸಲಾಗಿದೆ. ಈ ದಿಸೆಯಲ್ಲಿ ಹೆಚ್ಚಿನ ಸಂಶೋಧನೆಯಲ್ಲಿ ಕುತೂಹಲಕರ ಅಂಶಗಳು ಕಂಡುಬರುತ್ತವೆ.

## ಅನುಬಂಧ - ೨

## The Siddhantaas and the Indian Calendar By Robert Sewell, M.R.A.S. (1924)

| Page No. of KNV | Kali | Saka | A.D. | Jovian Samvatsara Southern System | Jovian Samvatsara Northern System |
|---|---|---|---|---|---|
| 1 | 2 | 3 | 4 | 5 | 6 |
| 25 | 4601 | 1422 | 1499-1500 | 53 Siddharthin | 60 Kshaya |
| 27 | 4615 | 1436 | 1513-14 | 7 Srimukha | 15 Vrisha |
| 39 | 4647 | 1468 | 1545-46 | 39 Viswavasu | 47 Pramadin |
| 58 | 4660 | 1481 | 1558-59 | 52 Kalayukta | 60 Kshaya |
| 59 | 4666 | 1487 | 1564-65 | 58 Raktaksha | 6 Angiras |
| 60 | 4660 | 1481 | 1558-59 | 52 Kalayukta | 60 Kshaya |
| 60 | 4672 | 1493 | 1570-71 | 4 Pramoda | 12 Bahudhanya |
| 61 | 4672 | 1493 | 1570-71 | 4 Pramoda | 12 Bahudhanya |
| 62 | 4684 | 1505 | 1582-83 | 16 Chitrabhanu | 24 Vikrita |
| 82 | 4731 | 1552 | 1629-30 | 3 Sukla | 12 Bahudhanya |
| 82 | 4739 | 1560 | 1637-38 | 11 Iswara | 20 Vyaya |
| 82 | 4740 | 1561 | 1638-39 | 12 Bahudhanya | 21 Sarvajit |
| 86 | 4739 | 1560 | 1637-38 | 11 Iswara | 20 Vyaya |
| 86 | 4740 | 1561 | 1638-39 | 12 Bahudhanya | 21 Sarvajit |
| 92 | 4731 | 1552 | 1629-30 | 3 Sukla | 12 Bahudhanya |
| 93 | 4747 | 1568 | 1645-46 | 19 Parthiva | 28 Jaya |
| 102 | 4747 | 1568 | 1645-46 | 19 Parthiva | 28 Jaya |
| 103 | 4762 | 1583 | 1660-61 | 34 Sarvarin | 43 Soumya |
| 104 | 4762 | 1583 | 1660-61 | 34 Sarvarin | 43 Soumya |
| 105 | 4763 | 1584 | 1661-62 | 35 Plava | 44 Sadharana |
| 110 | 4763 | 1584 | 1661-62 | 35 Plava | 44 Sadharana |
| 110 | 4765 | 1586 | 1663-64 | 37 Sobhana | 46 Paridavin |
| 115 | 4773 | 1594 | 1671-72 | 45 Virodhakrit | 54 Raudra |
| 116 | 4774 | 1595 | 1672-73 | 46 Paridhavin | 55 Durmati* |
| 141 | 4791 | 1612 | 1689-90 | 3 Sukla | 13 Pramathin |
| 147 | 4773 | 1594 | 1671-72 | 45 Virodhakrit | 54 Raudra |
| 148 | 4799 | 1620 | 1697-98 | 11 Iswara | 21 Sarvajit |

* No. 56 Dumdubhi was suppressed in the north.

| 1 | 2 | 3 | 4 | 5 | 6 |
|---|---|---|---|---|---|
| 153 | 4799 | 1620 | 1697-98 | 11 Iswara | 21 Sarvajit |
| 153 | 4815 | 1636 | 1713-14 | 27 Vijaya | 37 Sobhana |
| 170 | 4816 | 1637 | 1714-15 | 28 Jaya | 38 Krodhin |
| 171 | 4841 | 1662 | 1739-40 | 53 Siddharthin | 3 Sukla |
| 181 | 4856 | 1677 | 1754-55 | 8 Bhava | 18 Tarana |
| 187 | 4856 | 1677 | 1754-55 | 8 Bhava | 18 Tarana |
| 188 | 4859 | 1680 | 1757-58 | 11 Iswara | 21 Sarvajit* |
| 193 | 4864 | 1685 | 1762-63 | 16 Chitrabhanu | 27 Vijaya |
| 193 | 4864 | 1685 | 1762-63 | 16 Chitrabhanu | 27 Vijaya |

* No. 22 Sarvadharin was suppressed in the north.

ಪೂರ್ಣ ವಿವರಗಳನ್ನು ಕರ್ನಾಟಕ ಭಾರತಿ ಸಂಪುಟ ೭, ಸಂ ೨, ೧೯೭೪, ರಾಜ್ಯೋದಯ ಸಂಚಿಕೆ, (ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ)ಯಲ್ಲಿ ಅವಲೋಕಿಸಬಹುದು.

## ಅನುಬಂಧ ೩

# ಕೃತಿಯಲ್ಲಿ ಕಂಡುಬರುವ ಅವಶೇಷಗಳ ಸಮೀಕ್ಷೆ

೧ ಕಂ ॥ ಇದು ತಾಂ ಪುಂಭೂಮಿಯೆನಿ
ಪ್ಪುದನರಿದೊಡನಲ್ಲಿ ಕೋಂಟೆಯಂ ಬಲಿದು ಬಳಿ
ಕ್ಕದರೊಳರಮನೆಯನಿಂದ್ರನ
ಸದನಕ್ಕಧಿಕಮೆನೆ ರಚನೆಗೈಸಿದನನುವಿಂ ॥ ೭೮.

ವ॥ ಇಂತರಮನೆಯಂ ರಚನೆಗೈಸಿ ತದುಪಯುಕ್ತಮಾದ ಬೊಕ್ಕಸ ಭಂಡಾರ ಲಾಯ ಗಜಾಶ್ವಶಾಲೆಯುಗ್ರಾಣ ಪಣತ ಮುಂತಾದ ಮಹಲ್ಗಳಂ ನಿರ್ಮಾಣಂಗೈಸಿ ಪುರ ಪೇಟೆ ತಳವಾರಗಟ್ಟೆ ಮುಂತಾದುವಂ ರಚನೆಗೈಸಿ........... ಕೆ. ನೃ. ವಿ. ಪು. ೨೬

ವಿದೇಶೀಯ ಪ್ರವಾಸಿ ಪಿಯಟ್ರೋ ಡೆಲ್ಲಾ ವಲ್ಲೆಯು ಕ್ರಿ.ಶ. ೧೭ನೆಯ ಶತಮಾನದಲ್ಲಿ ಇಲ್ಲಿಗೆ ಸಂದರ್ಶಿಸಿ ತಾನೇ ಕಂಡಂತೆ ಹಾಗೂ ಪ್ರವಾಸೀ ಕಥನದಲ್ಲಿ ನಿರೂಪಿಸಿದಂತೆ ಈಗಲೂ ಇಂತಹ ಅವಶೇಷಗಳು ಇಕ್ಕೇರಿಯಲ್ಲಿವೆ.

೨ ವ॥ ಮತ್ತಮದಲ್ಲದಾ ಸದಾಶಿವರಾಯನಾಯಕನಾರಗದ ಕುಶಾವತೀ ನಗರದ ನದೀತೀರದೊಳ್ ಸದಾಶಿವಪುರವೆಂಬಗ್ರಹಾರಮಂ ಕಟ್ಟಿಸಿ ಭೂಸುರರ್ಗಮತ್ಯುತ್ತಮ ನಿವೇಶನ ವೃತ್ತಿಕ್ಷೇತ್ರಂಗಳಂ ಕಲ್ಪಿಸಿ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ಮತ್ತಂ ತದಗ್ರಹಾರದೊಳ್ ಸ್ವನಾಮಾಂಕಿತಮಾದ ಶಿವಲಿಂಗವನಾಗಮೋಕ್ತ ವಿಧಾನದಿಂ ಪ್ರತಿಷ್ಠೆಯಂ ವಿರಚಿಸಿ ದೇವಾಲಯಮಂ ನಿರ್ಮಾಣಂಗೈಸಿ.....

ಕೆ. ನೃ. ವಿ. ಪು ೩೮.

ತೀರ್ಥಹಳ್ಳಿ ತಾಲ್ಲೂಕಿನಲ್ಲಿರುವ ಅಗ್ರಹಾರದಲ್ಲಿ E.C. *VII,* TL ೫. ನ ದಾಖಲೆಯಂತೆ ಈಗಲೂ ಈ ಅವಶೇಷಗಳು ಮತ್ತು ದೇವಾಲಯಗಳು ಇವೆ.

೩.............. ಕಾಶೀಕ್ಷೇತ್ರಕ್ಕೈದಿಯಾ ತಾಣದೊಳ್ ಶಿವಜಂಗಮಧರ್ಮಾರ್ಥಮಾಗಿ ಮಠಮಂ ಕಟ್ಟಿಸಿಯದಕ್ಕೆ ತಕ್ಕ ಭೂಸ್ವಾಸ್ಥೆಯಂ ಬಿಡಿಸಿ....... ಕೆ. ನೃ. ವಿ. ಪುಟ ೫೦

ಕಾಶೀಯಲ್ಲಿರುವ ಕೆಳದಿ ಮಠವೊಂದು ಈಗಲೂ ಇರುವುದು ತಿಳಿದುಬಂದಿದೆ.

೪ ಕಂ ॥ ಸಾಗರದ ಪೊಳಲೊಳೆಸೆವ ಮ
ಹಾಗಣಪತಿಯಂ ಪ್ರತಿಷ್ಠೆಯಂ ವಿರಚಿಸಿ ಚ
ನ್ನಾಗಿರೆ ತಟಾಕಮಂ ತಾ
ನಾಗಿಸಿ ಬಳಿಯೊಳ್ ಸುಸೌಧಮಂ ಕಟ್ಟಿಸಿದಂ ॥ ೪೫

ಕೆ. ನೃ. ವಿ. ಪು ೭೫.

ಇಲ್ಲಿ ಹಾಗೂ ೭೬ನೇ ಪುಟದಲ್ಲಿ ಹೇಳಿದ ದೇವಾಲಯಗಳು, ಅಗ್ರಹಾರಗಳು ಚಂದ್ರಮಾವಿನಕೊಪ್ಪಲು ಎಂಬ ಹೆಸರಿನ ಚಂದಬನವೂ ಈಗಲೂ ಗುರುತಿಸಬಹುದಾದ ತಾಣಗಳಾಗಿವೆ.

೫ (a) ಶಿವತತ್ವರತ್ನಾಕರ ಹಾಗೂ ಕೆಳದಿನೃಪವಿಜಯದ ಮೇರೆಗೆ ಕರ್ಣಾಟಕ ಪರಂಪರೆ ಸಂಪುಟ ೨, ಪುಟ ೧೯೦ರಲ್ಲಿ ಹೇಳಿದಂತೆ ಸಾಗರದಿಂದ ಕೆಳದಿಯ ಮಾರ್ಗ ಮಧ್ಯದಲ್ಲಿರುವ ಸಂಗಳ ಎಂಬ ಗ್ರಾಮದಲ್ಲಿರುವ ದೊಡ್ಡಕೆರೆ ಹಾಗೂ ಹೂದೋಟದ ತಾಣವು ಗುರುತಿಸತಕ್ಕ ಪ್ರದೇಶವಾಗಿದೆ.

(b) ................ ಕೊಲ್ಲೂರು ಮೂಕಾಂಬಿಕೆಯಂಮನವರ ದೇವಸ್ಥಾನಮಂ ವಿಸ್ತಾರವಾಗಿ ಶಿಲಾಮಯವನಾಗಿಸಿ ವಿಶೇಷ, ಭೂಸ್ವಾಸ್ಥೆಯಂ ಬಿಡಿಸಿ...........

(c) .................. ಮೂಲಿಕೆ ಕೊಡೆಯಾಲ ಮೂಡಬಿದಿರೆ ಉಳ್ಳಾಲ, ಕುಂಬಳೆ ಕಾಸರಗೋಡು ಪುದುವೆಟ್ಟು ಬೆಳ್ಳರೆ ಕಾಂತಮಂಗಲ ಬಂದ್ಯಡಕ ಕುಂಡಂಕುಳಿ ಕೊಲ್ಲೂರ ಬಾಚಿ ಶಿಶಿಲ ಚಂದ್ರಗಿರಿ........... ಮುಂತಾದ ಕೋಂಟೆಗಳಂ ಬಲಿಯಿಸಿದನಂತು ಮಲ್ಲದೆಯಂ.....

ಕೆ. ನೃ. ವಿ. ಪುಟ ೭೧

ಸುಪ್ರಸಿದ್ಧ ದೇವಾಲಯಗಳಲ್ಲಿ ಒಂದಾದ ಶ್ರೀ ಮೂಕಾಂಬಿಕಾ ದೇವಾಲಯವನ್ನು ಕರಾವಳಿಯಲ್ಲಿರುವ ಕೊಲ್ಲೂರಿನಲ್ಲಿಯೂ ಹಾಗೂ ಇದಕ್ಕೆ ಈ ನಾಯಕರು ನೀಡಿರುವ ಸೇವಾದಿಗಳ ವಿವರಗಳನ್ನು ಪ್ರಾಚ್ಯಸಂಶೋಧನಾ ಇಲಾಖೆಯ ವರದಿಗಳಲ್ಲಿಯೂ, (c)ನಲ್ಲಿ ಹೇಳಿದ ಕೋಟೆಗಳನ್ನು ಆಯಾ ಪ್ರದೇಶಗಳಲ್ಲಿ * ಈಗಲೂ ಅವಲೋಕಿಸಬಹುದಾಗಿದೆ.

೬ ....... ಶಕವರ್ಷ ೧೫೬೧ನೆಯ ಬಹುಧಾನ್ಯ ಸಂವತ್ಸರದ ಮಾರ್ಗಶಿರ ಮಾಸದಲ್ಲಿ ಬಿದರೂರ ಕೋಂಟೆಯರಮನೆಯೊಳ್ ನೆಲೆಯಾಗಿ ನಿಂದು......

ಕೆ. ನೃ. ವಿ. ಪುಟ ೮೬

ಹಳೆಯನಗರದಲ್ಲಿರುವ ಕೋಟೆ ಹಾಗೂ ಇಂತಹ ಅವಶೇಷಗಳು ಗಮನಾರ್ಹವಾಗಿವೆ.

೭....... ಇಂತು ಮಂಗಲೂರ ಕೋಂಟೆಯಂ ಕೊಂಡನಂತರ-ಮಳವೆಯಂ ಕಟ್ಟಿ ಕೀಳೂರಂ ಸಾಧಿಸಿ ಬೇಕಲ ಚಿತ್ತಾರಿಗಳೆಂಬ ಕೋಂಟೆಗಳುಮಂ ಮತ್ತಂ ಚಂದ್ರಗಿರಿ ಮುಂತಾದ ಕೋಂಟೆಗಳುಮಂ ಬಲ್ಪುಗೈಸಿದನಂತುಮಲ್ಲದೆಯುಂ......

---

* These places where he built forts were Kumbala Kasaragod and Chandragiri (Keladi Nayakas and Malabar 1550-1669-Journal of Kerala Studies, Vol, I No. 2 & 3.

ಕಂ ॥ ಬಳಿಕುರುನೀಲೇಶ್ವರದು
ಜ್ವಳಿಪಳಿಯಂ ಕೊಂಡು ನಾಯಿಮಾರರ ನೆಲದೊಳ್
ತೊಲಗದ ಕಂಬವನನುವಿಂ
ನಿಲಿಸಿ ಮಹಾದ್ಭುತಪರಾಕ್ರಮವನುರೆ ಮೆರೆದಂ ಕೆ. ನೃ. ವಿ. ಪುಟ ೯೬.

ಇಂತಹ ಕೋಟೆಗಳ ವಿವರಗಳನ್ನೂ ಹಾಗೂ ಅವಶೇಷಗಳನ್ನೂ ಡಾ. ಬಿಟ್ನೀಸ್‌ರವರ ಮತ್ತು ಶ್ರೀ ಕೆ. ಜಿ. ವಸಂತಮಾಧವರವರ ಗ್ರಂಥ ಮತ್ತು ಲೇಖನದಲ್ಲಿ ಅವಲೋಕಿಸಬಹುದಾಗಿದೆ.*

೮ (a) ........... ಬಸವಾಪಟ್ಟಣದ ಸೀಮಾಸನ್ನಿವೇಶದೊಳ್ ಹೊಲಿಕೆರೆಯೆಂಬ ಸ್ಥಳದೊಳ್ ವಿರಾಜಿಪ ಕೋಂಟೆಯಂ ಸ್ವಾಧೀನಂಗೈದದಕ್ಕೆ ಸ್ವನಾಮಾಂಕಿತಮಾದ ಚನ್ನಗಿರಿಯ ಕೋಂಟೆಯೆಂದು ಪೆಸರಿಟ್ಟು ತತ್ಪರಿಸ್ತರಣವುಂ ಬಲ್ಪುಗೈಸಿದಳಂತುಮಲ್ಲದೆಯುಂ.....

(b) ....... ಕೆಳದಿ ವೀರಭದ್ರದೇವಸ್ಥಾನದ ಶಿಲಾಮಯ ಶಿಖರದ ಕೆಲಸಮುಮಂ ತದ್ರಂಗಮಂಟಪದ ರಚನಾದಿ ನವೀನ ಕೆಲಸಂಗಳುಮಂ ಸಂಪೂರ್ಣಮೆನಲಾಗಿಸಿ ಭೋಗಮಂಟಪದ ಸಮ್ಮುಖದೊಳ್ ಧ್ವಜಸ್ತಂಭಮಂ ನಿಲ್ಲಿಸಿ.....

ಈಗಲೂ ಅನೇಕ ದೇವಾಲಯದಲ್ಲಿರುವ ಧ್ವಜಸ್ತಂಭದಲ್ಲಿನ ಶಿಲಾಲೇಖವೂ ಹಾಗೂ ಚನ್ನಗಿರಿಯ ಕೋಟೆಯೂ ಈ ಗ್ರಂಥದಲ್ಲಿ ಉಕ್ತವಾಗಿರುವುದನ್ನು ಸಾಕ್ಷೀಕರಿಸುತ್ತವೆ. ಇತ್ಯಾದಿ.

ಇಂತಹ ಅನೇಕ ದೇವಾಲಯಗಳೂ, ಕೋಟೆಗಳೂ, ಕೆಳದಿ, ಇಕ್ಕೇರಿ ಹಾಗೂ ನಗರದಲ್ಲಿನ ಅವಶೇಷಗಳೂ. ಕೆಳದಿ ನೃಪವಿಜಯದಲ್ಲಿ ಉಲ್ಲೇಖಿಸಿದ ರಾಣಿ ವೀರಮ್ಮಾಜಿಯು ದತ್ತಿಬಿಟ್ಟ ಶೃಂಗೇರಿಯ ದಾಖಲೆಗಳು ಇತ್ಯಾದಿ ಅನೇಕ ಅಂಶಗಳು ಈಗಲೂ ಸಮೀಕ್ಷಾದಾಖಲೆಗೆ ಈ ಇತಿಹಾಸವನ್ನು ಸಮಗ್ರವಾಗಿ ರೂಪಿಸಲು ಸಹಕಾರಿಗಳಾಗಿವೆ.

ಮೈಸೂರು ಪ್ರಾಚ್ಯವಸ್ತು ಸಂಶೋಧನಾ ಇಲಾಖೆಯ ವರದಿಗಳು ಮತ್ತು ಇನ್ನಿತರ ಸಂಶೋಧನಾತ್ಮಕ ಅಂಶಗಳೊಡನೆ ಇವುಗಳನ್ನು ವಿವರಣಾತ್ಮಕ ಅಂಕಿ ಅಂಶಗಳ ಮೂಲಕ ಸಿದ್ಧಪಡಿಸುವುದು ಈಗ ಅಗತ್ಯತೆಗಳಲ್ಲಿ ಒಂದಾಗಿದೆ. ಶರಾವತಿ ಅಣೆಕಟ್ಟಿನ ಕಾಲದಲ್ಲಿ ಅನೇಕ ಇಂತಹ ಅವಶೇಷಗಳು ಈಗಾಗಲೇ ಮುಳುಗಿಹೋಗಿದ್ದು ಇತಿಹಾಸ ರಚನೆಗೆ ತುಂಬಲಾರದ ನಷ್ಟವಾಗಿರುತ್ತದೆ.

---

* Keladi polity, Karnatak University, Dharwar, 1974 (and op. cit page 293)

# ಅನುಬಂಧ - ೪

## ಪಾಠಾಂತರಗಳಲ್ಲಿ ಕಂಡುಬರುವ ವಿಭಿನ್ನ ಅಂಶಗಳು

| ನಂ. | ಪುಟ | ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಓಲೆಪ್ರತಿ (ಓ) | ಮದರಾಸಿನ ಪ್ರಾಚ್ಯ ಸಂಶೋಧನಾ ಸಂಸ್ಥೆಯ ಓಲೆ ಪ್ರತಿ (ಗ) | ಮದರಾಸಿನ ಕಡತದ ಪ್ರತಿ (ಮ) | ಮೈಸೂರಿನ ಕಾಗದದ ಪ್ರತಿ (ಕ) | ವಿಶೇಷ ವಿಷಯ |
|---|---|---|---|---|---|---|
| ೧ | ೧೮ | ಈತನ ಮಕ್ಕಳು ಪೆದ್ದ ವೆಂಕಟಪತಿ ರಾಯಂ ಚಿಕ್ಕ ವೆಂಕಟಪತಿರಾಯಂ | — | — | ಹಿರೇಮಗ ತಿಮ್ಮಪ್ಪ ರಾಯ ರಾಮ ರಾಯರು | ಅಧಿಕ ಭಾಗ |
| ೨ | ೨೨ | ಅರಿವೊಡಾರಾಯರಿಂ ಗಲ .................................. | — | ಈ ಪ್ರತಿಯಲ್ಲಿಲ್ಲ | — | ಈ ಪದ್ಯವು 'ಮ' ಪ್ರತಿಯಲ್ಲಿರುವುದಿಲ್ಲ ಕಾರಣ? 'ಕ' ಪ್ರತಿಯಲ್ಲಿ ಇದು ಅಧಿಕ ಭಾಗವಾಗಿದೆ. ಇದು ಪ್ರಾಮುಖ್ಯ ಅಂಶಗಳಲ್ಲೊಂದು ಈ ಭಾಗ ಎಂದರೆ ಪೂರ್ತಿ ಪದ್ಯವೇ? |
| ೩ | ೨೬ | ..... ರಾಜಪರಿಪಾಲನಂ ಗೈದಂ | — | — | ಈ ಚೌಡಪನಾಯಕರಿಗೆ ಇಕ್ಕೇರಿಯುರ ಮನೆಯ ಕೊಪ್ಪಲಲ್ಲಿ ಸಮಾಧಿಯಾಯ್ತು | |
| ೪ | ೩೧ | ಕಂ॥ ಭರಿಕೈಗಳೊಳಾಂತೆಸಿ ಬಕ .................................... .................................... ....................................ಯೊಳ್ | — | ಈ ಪ್ರತಿಯಲ್ಲಿಲ್ಲ | — | |

| | | | | | | |
|---|---|---|---|---|---|---|
| ೫ | ೩೮ | ರಾಜ್ಯಪ್ರತಿಪಾಲಂಗೈದರ್ | — | — | ಈ ಸದಾಶಿವನಾಯಕರಿಗೆ ರಾಯರ ರಾಜಕಾರ್ಯದ ಮೇಲೆ ಜಗ್ಗುಪಾಳ್ಯವೆಂಬ ಸ್ಥಳದಲ್ಲು ದೇಹಾಯಾಸ ತೊಡಗಿ ಐಕ್ಯವಾದಲ್ಲಿ ಆ ಸ್ಥಳದಲ್ಲಿಯೇ ಸಮಾಧಿಯಾಯ್ತು. | ಕ್ರಮಾಂಕ IIIರಲ್ಲಿ ಕಂಡಂತೆ ಇದು ಪ್ರಾಮುಖ್ಯ ಅಂಶ |
| ೬ | ೩೮ | ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ಆರಭ್ಯ | — | ಈ ಪ್ರತಿಯಲ್ಲಿಲ್ಲ | — | ಕಾಲ ಪರಿಗಣನೆಯಲ್ಲಿ ಇವು ಅತ್ಯವಶ್ಯ ಅಂಶಗಳು ಇಡೀ ಪದ್ಯಭಾಗ |
| ೭ | ೪೨ | ಪರಿಶೋಭಿಸುವಾ ಪೊಳಲ್ಕೈ<br>..................................<br>..................................<br>.................................. | — | ಈ ಪ್ರತಿಯಲ್ಲಿಲ್ಲ | — | |
| ೮ | ೪೫ | ಓರೊರ್ವರ್ರ್ ನೀಕ್ಷಿಸಿ ಖತಿ<br>..................................<br>..................................<br>.................................. | — | ಈ ಪ್ರತಿಯಲ್ಲಿಲ್ಲ | — | „ |
| ೯ | ೪೬ | ಮಸೆಗಂಡೆಕ್ಕಲಗಳೊಮಿಗೆ | — | ಈ ಪ್ರತಿಯಲ್ಲಿಲ್ಲ | — | „ |

| | | | | | | |
|---|---|---|---|---|---|---|
| ೧೦ | ೫೩ | — | | | — | ಈ ಭಾಗವು ಪುಟ ೫೪ ರಲ್ಲಿ ಬರಬೇಕಾಗಿತ್ತು. ಅಲ್ಲದೆ ಪದ್ಯದ ಸಂಖ್ಯೆಯೂ ಕ್ರಮವಾಗಿ ೫೩, ೫೪, ೫೫, ೫೬, ೫೭ ಆಗುತ್ತದೆ. ಈ ಭಾಗ 'ಕ' ಪ್ರತಿಯಲ್ಲಿ ಅಧಿಕವಾಗಿದ್ದು ಐತಿಹಾಸಿಕ ಸಂಗತಿಯನ್ನು ಪ್ರಶ್ನಿಸುವಂತಿದೆ. |
| ೧೧ | ೬೦ | ಹಿರಿಯಸಂಕಣನರೇಂದ್ರನ ವರ ತನುಜಂ ರಾಮರಾಜ ನಿಳೆಗರಸಾದಂ | — | — | ಈ ಚಿಕ್ಕಸಂಕಣ ನಾಯಕರು ರಾಮರಾಜನಾಯಕರ ಶಸ್ತ್ರದಿಂದ ಮೃತಿಯಂ ಪಡೆದರು; ಇಕ್ಕೇರಿಯ ಅರಮನೆಯ ಕೊಪ್ಪಲ ಸ್ಥಳದಲ್ಲೂ ಸಮಾಧಿಯಾಯಿತು. | |
| ೧೨ | ೬೨ | ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೦೫ನೆಯ ಚಿತ್ರಭಾನು ನಾಮ ಸಂವತ್ಸರದ ಶುದ್ಧ ೫ ಯಲ್ಲಿ | ಚಿತ್ರಭಾನು ಸಂವತ್ಸರ ಮಾರ್ಗಶಿರ ಶುದ್ಧ ೫ ಆರಭ್ಯ ಶುಕ್ಲ ಸಂವತ್ಸರದ .................. ಅಧಿಕ ಭಾಗ. | — | — | ಕಾಲ ಗಣನೆಯಲ್ಲಿ ಇವು ಪ್ರಮುಖ ಅಂಶಗಳು ಒ ಪ್ರತಿಯಲ್ಲಿ ಮಾಸವು ಕೈಬಿಟ್ಟು ಹೋಗಿದೆ. |

| | | | | | |
|---|---|---|---|---|---|
| ೩೧೨ | ೧. ಆ ರಾಮರಾಜನಾಯಕ ................. ಸಾದಂ<br>೨. ಇರೆ ತದ್ವೆಂಕಟಧರಣೀ ................. ಮನೋಜಂ | —<br>— | ಈ ಪದ್ಯಗಳಿಲ್ಲ | — | ಕೈಬಿಟ್ಟಿರುವ (ವು) ಪ್ರತಿಯಲ್ಲಿ ಇವು ಪ್ರಮುಖ ಅಂಶಗಳು. |
| ೧೪ ೭೫ | ಭೈರಸವೊಡೆಯರ ಮದೋದ್ರೇಕ ವಮಂ .................... ಶೃಂಗೇರಿಯ ಧರ್ಮಸಂಸ್ಥಾನ ವನುದ್ಧರಿಸಿ .................... | ಶೃಂಗೇರಿಯ ಪುರ ವನ ಮಂ ವೇಡೈಸಿ ...... ತದ್ಭೈರಸ ಒಡೆಯರ ಮದೋ ದ್ರೇಕಮಂ ಮಗ್ಗಿಸಿ ಮುತ್ತಿಗೆ ತೆಗೆಸಿ ಬಳಿಕ್ಕವನ | — | — | ಐತಿಹಾಸಿಕ ಮಹತ್ವ ವಿರುವ ಇಂತಹ ವ್ಯತ್ಯಾಸಗಳನ್ನು ಹೇರಳ ವಾಗಿ ಗಮನಿಸ ಬಹುದು. |
| ೧೫ ೧೧೬ | ಪರೀಧಾವಿ ನಾಮ ಸಂವತ್ಸರದ ಶ್ರಾವಣ ಶುದ್ಧ ೧೪ಯ | — | '೪' | — | '೧೪' ಹಾಗೂ '೪'ಕ್ಕೆ ಹತ್ತುದಿವಸಗಳ ವ್ಯತ್ಯಾಸವು ಅಲ್ಲಲ್ಲಿಯೇ ಕಂಡು ಬರುತ್ತದೆ. |

## ವಿದ್ಯಾರಣ್ಯ ಕಾಲಜ್ಞಾನದ ಶ್ಲೋಕಗಳು

೧. ಏತಸ್ಮಿನ್ನಂತರೇ ಕಾಲೇ ಕುರುವಂಶ ಪ್ರಸೂತಿಜೌ
ಕೋಶಾಗಾರ ಪ್ರತೀಹಾರೌ ವೀರರುದ್ರ ಮಹೀಪತೇಃ
ಅಗತೌ ಯವನಾಕ್ರಾಂತಾವಸಹಾಯೌ ಶಿಲಾಪುರೀಂ
ರಾಮನಾಥಂ ನಿಷೇವಾತೇ ರಾಜಾನಂ ಕೋಶಪಾಲನೇ

ಸಾಮ್ರಾಜ್ಯಲಕ್ಷಣೋಪೇತೌ ಮಹೋರಸ್ಕೌ ಮಹಾಭುಜೌ
ಉಡುಪೇನ ಸಮುತ್ತೀರ್ಯ ಕೃಷ್ಣವೇಣೀಂ ಸಮಾಗತೌ
ಬಲ್ಲಾಳಕ್ಷಿತಿಪಾಲೇನ ಯುದ್ಧಂ ಕೃತ್ವಾ ಪರಾಜಿತೌ
..............................................................

ಅನುಜ್ಞಪ್ತೌ ತತೋಗತ್ವಾ ಬಲ್ಲಾಳಕ್ಷಿತಿಪಂ ಪುನಃ
ವಿಚಿತ್ರ ರಾಜ್ಯಮಾಕ್ರಮ್ಯ ಹಸ್ತಕೋಣಾಹ್ವಯೇ ಪುರೇ
..............................................................

ಈ ನಡುವಣ ಕಾಲದಲ್ಲಿ ಓರಂಗಲ್ಲಿನ ವೀರರುದ್ರ ಮಹಾರಾಜನ ಅರಮನೆಯ ಭಂಡಾರದ ಕಾವಲುಗಾರರೂ, ಕುರುವಂಶದಲ್ಲಿ ಹುಟ್ಟಿದವರೂ ಆದ ಇಬ್ಬರು ಸಹೋದರರು ಮುಸಲ್ಮಾನರ ಧಾಳಿಗೆ ಗುರಿಯಾಗಿ, ಅಸಹಾಯಕರಾಗಿ ಶಿಲಾಪುರಿಗೆ ಬಂದರು, ಅಲ್ಲಿ ರಾಮನಾಥರಾಜನು ಭಂಡಾರವನ್ನು ಕಾಯುವ ಸೇವೆಯನ್ನು ಮಾಡುತ್ತಿದ್ದನು.

ಅವರಿಬ್ಬರೂ ರಾಜಲಕ್ಷಣಗಳಿಂದ ಕೂಡಿದ್ದರು. ಅಗಲವಾದ ಎದೆ ಹಾಗೂ ಉದ್ದ ತೋಳುಗಳುಳ್ಳವರಾಗಿದ್ದರು. ಕೃಷ್ಣವೇಣೀ ನದಿಯನ್ನು ಇಬ್ಬರೂ ಒಂದು ತೆಪ್ಪದ ಮುಖಾಂತರ ದಾಟಿ ಬಂದರು. ಬಲ್ಲಾಳರಾಜನೊಡನೆ ಯುದ್ಧಮಾಡಿ ಸೋತುಹೋದರು.

..................................................

ಅವರು ಅನುಮತಿಯನ್ನು ಪಡೆದು ಮತ್ತೆ ಬಲ್ಲಾಳರಾಜನನ್ನು ಗೆದ್ದು ರಾಜ್ಯವನ್ನು ಆಕ್ರಮಿಸಿ ಹಸ್ತಿಕೋಣ (ಆನೆಗೊಂದಿ) ಎಂಬ ಪಟ್ಟಣದಲ್ಲಿ..................................

..............................................................................................

೨. ಪುರಾದ್ವೌ ಪುರುಕ್ಷೌ[೧] ವೀರೌ ಭ್ರಾತರೌತುಯಶಸ್ವಿನೌ
ಗೃಹೀತೌ ತೌ ಸುರತ್ರಾಣಭಟೈರ್ನಿರ್ಗತ್ಯ ಸಂಸ್ಥಿತೌ
ಸುರತ್ರಾಣಗೃಹೀತೌ ತೌ ತತ್ರೈಕದಿವಸಾತ್ಯಯೇ
ರಾತ್ರಾವಶನಿಪಾತಾಂಬು ಮೇಘಘೋಷನಿರಾಕುಲೌ

ದ್ವಾರಭಿತ್ಯಾಸ್ಸಮೀಷಸ್ಥೌ ಸುರತ್ರಾಣೇಪಿ ನಿದ್ರಿತೇ
ಬಹಿರ್ನಿರ್ಗತ್ಯ ತೌ ವೃಷ್ಟ್ವಾ ಕಾ[೨]ವೇತಾವತ ಸಂಸ್ಥಿತೌ
ಗೃಹೀತೌ ಭ್ರಾತರೌ ಮತ್ವಾ ಸತ್ಯಸಂಧೌ ತತಃ ಸುಧೀಃ
ತಯೋರ್ದತ್ವಾದೇಶಮಾದೌ ಕರ್ಣಾಟಂ ತು ವಿಸೃಷ್ಟವಾನ್

ತೇನಾಜ್ಞಪ್ತೌತು ತೌ ವೀರೌ ಶೀಘ್ರಮಾಗತ್ಯ ತೌ ನದೀಂ
ಉಡುಪೇನ ಸಮುತ್ತೀರ್ಯ ಕೃಷ್ಣವೇಣೀಂ ಸಮಾಗತೌ
ಬಲ್ಲಾಳಕ್ಷಿತಿಪಾಲೇನ ಯುದ್ಧಂ ಕೃತ್ವಾ ಪರಾಜಿತೌ
ವನಮಧ್ಯೇ ಪರಿಶ್ರಾಂತಾ ವೃಕ್ಷಮೂಲಮುಪಾಶ್ರೀ ತೌ

....................................................................

ತಸ್ಮಿನ್ನೇವ ಕ್ಷಣೇಪೂರ್ವಂ ಭಗ್ನ ಸೈನ್ಯಂ ಸಮಾಗತಂ
ಕ್ರೋಡೀಕೃತ್ಯ ತದಾ ಸರ್ವಂ ವಿದ್ಯಾರಣ್ಯ ಮುನೀಶ್ವರಂ
ದದರ್ಶತುರ್ವದಾನ್ಯೌ ತೌ ತೇನಾಶೀರ್ವಚನಾದಿಭಿಃ
ಅನುಜ್ಞಾತೌ ತದಾ ವೀರಬಲ್ಲಾಳನೃಪತಿಂ ಪುನಃ

ಹಿಂದೆ ಕೀರ್ತಿಶಾಲಿಗಳಾದ ಇಬ್ಬರು ವೀರ ಸಹೋದರರು ಸುರತ್ರಾಣ ಭಟರಿಂದ ಹಿಡಿಯಲ್ಪಟ್ಟರು. ಅಲ್ಲಿಂದ ಹೊರಟು ಅವರಿಬ್ಬರು ಅಲ್ಲಿ ಒಂದು ದಿನದ ಬಳಿಕ ರಾತ್ರಿಯಲ್ಲಿ ಸಿಡಿಲು, ಮಳೆ ಗುರುಡುಗಳಿಂದ ಕಂಗೆಟ್ಟರು.

ಸುರತ್ರಾಣನೂ ಕೂಡ ನಿದ್ರಿಸಿದ್ದಾಗ ಬಾಗಿಲ ಗೋಡೆಯ ಹತ್ತಿರದಲ್ಲಿದ್ದ ಆ ಸಹೋದರರು ಹೊರಗಡೆಗೆ ಬಂದರು. ಇಲ್ಲಿರುವ ಇಬ್ಬರು ಯಾರು ಎಂದು ಕೇಳಲ್ಪಟ್ಟರು. ಆಮೇಲೆ ಬುದ್ಧಿಶಾಲಿಯಾದ ಆತನು 'ಇವರು ಬಂಧಿಸಲ್ಪಟ್ಟ ಸತ್ಯಸಂಧರಾದ ಸಹೋದರರು' ಎಂದು ತಿಳಿದು, ಅವರಿಬ್ಬರಿಗೆ ಅಪ್ಪಣೆಕೊಟ್ಟು ಕರ್ಣಾಟಕಕ್ಕೆ ಕಳುಹಿಸಿದನು.

ಅವನಿಂದ ಆ ವೀರರಿಬ್ಬರೂ ಆಜ್ಞೆ ಹೊಂದಿ ಬೇಗನೇ ಬಂದು ಕೃಷ್ಣವೇಣೀ ನದಿಯನ್ನು ತೆಪ್ಪದ ಮೂಲಕ ದಾಟಿ ಬಲ್ಲಾಳರಾಜನೊಡನೆ ಯುದ್ಧ ಮಾಡಿ ಸೋತರು. ಅವರುಕಾಡಿನ ಮಧ್ಯೆ ಬಳಲಿ ಮರದ ಬುಡದಲ್ಲಿ ಇದ್ದರು.

....................................................................................................

೧ ಷೌ ? ೨. ತಾ ?

ನಿರ್ಜಿತ್ಯ ರಾಜ್ಯಮಾಕ್ರಮ್ಯ ಶಾಸತುರ್ಬಾಹುಶಾಲಿನೌ
ತದಾ ಹಿ ಕ್ಷೇತ್ರನಿಕ್ಷಿಪ್ತಂ ಸಿಂಹಪೀಠಂ ಪ್ರಲೇಭತುಃ
ಲಬ್ಧ್ವಾ ತು ಸಿಂಹಪೀಠಂಚ ಸಮಾಗತ್ಯ ಸಮಾಶ್ರಿತೌ
ತುಂಗಭದ್ರಾನದೀತೀರೇ ಹಸ್ತಿಕೋಣಾಹ್ವಯೇ ಪುರೇ

ತಸ್ಮಿನ್ನೇವ ತು ಕಾಲೇ ಚ ಮೃಗಯಾಂ ಗಂತುಮುದ್ಯತೌ
ತುಂಗಭದ್ರಾನದೀಂ ತೀರ್ತ್ವಾ ದಕ್ಷಿಣೇ ದಿಗ್ವಿಭಾಗಕೇ

.......................................................................

ತಚ್ಛೃತ್ವಾ ವಚನಂ ಯೋಗೀ ಸಮಯಾತಸ್ತದನ್ವಿತಃ
ತಾಂ ಸ್ಥಳೀಂ ಸ ಸಮೀಕ್ಷ್ಯಾಥ ರಾಜಧಾನೀಂ ಮಹೀಕ್ಷಿತಾಂ
ತದ್ವಂಶಜಾನಾಮನ್ಯೇಷಾಂ ಕರ್ತುಮೇವೋಪಚಕ್ರಮೇ
ದಿಕ್ಸಂಖ್ಯಾಬಾಣಯುಕ್ತದ್ವಿಚಂದ್ರಯುಕ್ತಶಕಾ (೧೨೫೮) ನ್ವಿತೇ

ಧಾತ್ರಬ್ದೇ ಸಿತಸಪ್ತಮ್ಯಾಂ ವೈಶಾಖೇ ಮಾಸಿ ಭಾಸ್ಕರೇ
ಸುಲಗ್ನೇ ಶುಭನಕ್ಷತ್ರೇ ಮಾಘಾಖ್ಯೇ ಚ ವಿಶೇಷತಃ
ರಚಿತಾ ನಗರೀ ರಮ್ಯಾ ಪುರುಷಾಕೃತಿಶಾಲಿನೀ

...............................................................

ಅದೇ ಕ್ಷಣದಲ್ಲಿ ಈ ಹಿಂದೆ ಸೋತ ಅವರ ಸೈನ್ಯವು ಅಲ್ಲಿಗೆ ಬಂದಿತು. ಆ ಸೇನೆಯನ್ನು ಸೇರಿಸಿಕೊಂಡು ಅವರಿಬ್ಬರು ವಿದ್ಯಾರಣ್ಯ ಮುನಿಯನ್ನು ನೋಡಿದರು, ಅವರ ಆಶೀರ್ವಾದ ರಕ್ಷೆಗಳಿಂದ ಅನುಮತಿ ಪಡೆದ, ಉದಾರಿಗಳಾದ ಆ ಸಹೋದರರು ಮತ್ತೆ ವೀರಬಲ್ಲಾಳರಾಜನನ್ನು ಸೋಲಿಸಿ ರಾಜ್ಯವನ್ನು ಆಕ್ರಮಿಸಿಕೊಂಡು ಆಳಿದರು.

ಆಗ ಪ್ರದೇಶದಲ್ಲಿ ಸ್ಥಾಪಿಸಲ್ಪಟ್ಟ ಸಿಂಹಾಸನವನ್ನು ಪಡೆದರು. ಸಿಂಹಾಸನವನ್ನು ಹೊಂದಿದ ಬಳಿಕ ತುಂಗಭದ್ರಾನದಿಯ ತೀರಕ್ಕೆ ಬಂದು ಹಸ್ತಿಕೋಣ (ಆನೆಗೊಂದಿ) ಎಂಬ ಪಟ್ಟಣದಲ್ಲಿ ನೆಲೆಸಿದರು.

ಆ ಕಾಲದಲ್ಲಿಯೇ ಬೇಟೆಯಾಡಲು ತುಂಗಭದ್ರಾನದಿಯನ್ನು ದಾಟಿ ದಕ್ಷಿಣ ದಿಕ್ಕಿನ ಪ್ರದೇಶದಲ್ಲಿ

...............................................................................

ವಿದ್ಯಾರಣ್ಯಮುನಿಯು ಇದನ್ನು ತಿಳಿದು ಅವರ ಜೊತೆಗೆ ಆ ಸ್ಥಳವನ್ನು ಪರಿಶೀಲಿಸಿದರು, ಆ ರಾಜರ ಮತ್ತು ಅದೇ ವಂಶದ ಇತರ ರಾಜರ ರಾಜಧಾನಿಯನ್ನಾಗಿ ಅದನ್ನೇ ಮಾಡಲು ತೊಡಗಿದನು.

ತಸ್ಯಾಂ ಪುರ್ಯಾಂ ಚ ರಾಜಾನಸ್ತ್ರಯೋದಶ ಯಥಾಕ್ರಮಂ
ಹ ಬು ಹೋವಿದರಾವಿದೇವಿಮಾರಾವಿ ಸಂಜ್ಞಿತಾಃ
ಭವಿಷ್ಯಂತಿ ಮಹೀಪಾಲಾಃ ಕರ್ಣಾಟಕ್ಷಿತಿಮಂಡಲೇ

.................................................................

ಭೂಪಾಲೇ ನವಮೇ ಯಾತೇ ರಾಷ್ಟ್ರಕ್ಷೋಭಾದಿಕಂ ಬಹು
ಭವಿಷ್ಯತಿ ತತೋ ರಾಜ್ಯಂ ತ್ರಿಭಿರೇವ ಹಿ ಪಾಲತೇ
ತತೋ ವೈ ನಗರೀ ಸಾತು ಪಾಲ್ಯತೇ ಕೃಚ್ಛ್ರ ತೋನೃಪೈಃ
ತತ್ವಂಶಪ್ರಭವೋಂತ್ಯಸ್ತು ಶತ್ರುಭಿಃ ಪರಿಪೀಡಿತಃ

ಪ್ರಪಲಾಯ್ಯ ನದೀಂ ತೀರ್ತ್ವಾಹ್ಯನ್ಯದೇಶಂ ಸಮಾಶ್ರಿತಃ
ಮರಿಷ್ಯತಿ ನ ಸಂದೇಹಃ............................

.................................................................

ಪಂಚಾಶದುತ್ತರಶತೇ ವಂಶಪೂರ್ತಿರ್ಭವಿಷ್ಯತಿ

ಶಾ.ಶ. ೧೨೫೮ರಲ್ಲಿ ಧಾತು ಸಂವತ್ಸರದ ಶುಕ್ಲಪಕ್ಷ ಸಪ್ತಮಿಯಲ್ಲಿ ವೈಶಾಖಮಾಸದಲ್ಲಿ ಒಳ್ಳೆಯ ಲಗ್ನದಲ್ಲಿ ಮಘಾ ಎಂಬ ಶುಭನಕ್ಷತ್ರದಲ್ಲಿ ಗಂಡು ಭೂಮಿಯಿಂದ ಕೂಡಿದ ಸುಂದರವಾದ ಪಟ್ಟಣವೊಂದನ್ನು ನಿರ್ಮಿಸಿದನು.*೧

ಆ ಪಟ್ಟಣದಲ್ಲಿ ಹದಿಮೂರು ಮಂದಿ ರಾಜರು ಕ್ರಮವಾಗಿ ಹ, ಬು, ಹ, ವಿ, ಬು, ದೇ, ರಾ, ವಿ, ದೇ, ವಿ, ಮಾ, ರಾ, ವಿ *೨, ಎಂಬ ಸಂಕೇತ ಅಥವಾ ಸಂಜ್ಞೆಯುಳ್ಳವರು ಕರ್ನಾಟಕ ರಾಜ್ಯದ ಅರಸರಾಗಿ ಆಗುವರು.

ಒಂಭತ್ತನೇ ರಾಜನು ಆಳಿದ ಮೇಲೆ ಅನೇಕ ರಾಷ್ಟ್ರಕ್ಷೋಭೆಯೂ ಆಗುತ್ತವೆ. ಆಮೇಲೆ ರಾಜ್ಯವು ಮೂವರಿಂದ ಮಾತ್ರ ಪಾಲಿಸಲ್ಪಡುತ್ತದೆ, ಆ ರಾಜರುಗಳಿಂದ ಆ ಪಟ್ಟಣವು ಬಹಳ ಕಷ್ಟದಿಂದ ಪಾಲಿಸಲ್ಪಡುತ್ತದೆ, ಆ ವಂಶದಲ್ಲಿಯೇ ಹುಟ್ಟಿದ ಕೊನೆಯ ರಾಜನು ಶತ್ರುಗಳಿಂದ ಪೀಡಿಸಲ್ಪಟ್ಟವನಾಗಿ, ಓಡಿಹೋಗಿ ನದಿಯನ್ನು ದಾಟಿ, ಬೇರೆ ದೇಶವನ್ನು ಆಶ್ರಯಿಸಿ ಸಾಯುವನು. ಇದರಲ್ಲಿ ಸಂದೇಹವಿಲ್ಲ–

---

*೧ ಒಂದು ದಿನ ರಾಜನು ತುಂಗಭದ್ರಾನದಿಯನ್ನು ದಾಟಿ ಆಚೆಯ ದಡದಲ್ಲಿ ಬೇಟೆಯಾಡುತ್ತಿರುವಾಗ ತಾವು ಅಟ್ಟಿಸಿಕೊಂಡು ಹೋಗುತ್ತಿದ್ದ ಮೊಲವು, ಬೇಟೆಯ ನಾಯಿಯನ್ನು ಕಚ್ಚಿ ಅದೃಶ್ಯವಾಯಿತು. ಈ ಪ್ರದೇಶವು ರಾಜಧಾನಿಯನ್ನು ಕಟ್ಟುವುದಕ್ಕೆ ಸರ್ವೋತ್ತಮವಾದುದು ಹಾಗೂ ಗಂಡು ಭೂಮಿಯೆಂದು ತಿಳಿದು ವಿದ್ಯಾರಣ್ಯರು ಅಲ್ಲಿ ವಿಜಯನಗರವನ್ನು ಕಟ್ಟಿಸಿ ಹಕ್ಕನಿಗೆ ಪಟ್ಟಾಭಿಷೇಕ ಮಾಡಿದರು

*೨ ಈ ಸಂಕೇತಾಕ್ಷರಗಳು ವಿಜಯನಗರವನ್ನು ಆಳಿದ ಹದಿಮೂರು ಜನರ ಹೆಸರುಗಳು, ಹ-ಹರಿಹರರಾಯ, ಬು-ಬುಕ್ಕರಾಯ, ಹ-ಹರಿಹರರಾಯ, ವಿ-ವಿರೂಪಾಕ್ಷರಾಯ, ಬ-ಬುಕ್ಕರಾಯ,

...............................................................

.................. ಇತಿ ಸಂಪ್ರೋಕ್ತಂ ಪುರಾ ಪೃಷ್ಟೇನ ಧೀಮತಾ
ವಿದ್ಯಾರಣ್ಯೇನ ಯತಿನಾ ರಾಜ್ಞೇ ಹರಿಹರಾಯ ಚ

ತತ್ಸರ್ವಂ ತನ್ಮುಖಾಚ್ಛ್ರುತ್ವಾ ವಿದ್ಯಾರಣ್ಯಸಕಾಶತಃ
ಭಾರತೀಕೃಷ್ಣಯತಿನಾ ನೃಪಾಣಾಮಾವಳಿಸ್ತಥಾ
ಕಾಲಸಂಖ್ಯಾ ಚ ಕರ್ಣಾಟಕ್ಷಿತಿದೇಶೇ ಯಥಾಕ್ರಮಂ
ಆಖ್ಯಾತೋ ಗ್ರಂಥರೂಪೇಣ ವಿದ್ಯಾರಣ್ಯಸ್ಯಚಾಜ್ಞಯಾ

ಒಂದು ನೂರಾ ಐವತ್ತು ವರ್ಷಗಳಲ್ಲಿ ವಂಶ ಮುಕ್ತಾಯವಾಗುವುದು,

ಹೀಗೆ ಪ್ರಶ್ನೆ ಮಾಡಿದ್ದರಿಂದ ಬುದ್ಧಿವಂತನಾದ ವಿದ್ಯಾರಣ್ಯ ಮಹರ್ಷಿಯು ರಾಜನಾದ ಹರಿಹರನಿಗೆ ಈ ರೀತಿ ಹೇಳಿದನು.

ಅದೆಲ್ಲವನ್ನೂ ಅವನ ಬಾಯಿಯಿಂದಲೂ ವಿದ್ಯಾರಣ್ಯರ ಹತ್ತಿರದಿಂದಲೂ ಕೇಳಿ, ಭಾರತೀಕೃಷ್ಣಮುನಿಯಿಂದ ರಾಜರುಗಳ ಹೆಸರುಗಳ ಹಾಗೆಯೇ ಕಾಲ-ಸಂಖ್ಯೆ, ಕರ್ನಾಟಕ ರಾಜ್ಯದಲ್ಲಿ ಅವರು ಕ್ರಮವಾಗಿ ಆಳಿದ ವಿಚಾರವು ವಿದ್ಯಾರಣ್ಯರ ಅಪ್ಪಣೆ ಪ್ರಕಾರ ಗ್ರಂಥರೂಪವಾಗಿ ನಿರೂಪಿತವಾಯಿತು.

ದೇ-ದೇವರಾಯ, ರಾ-ರಾಮರಾಯ, ವಿ-ವಿರೂಪಾಕ್ಷರಾಯ, ದೇ-ದೇವರಾಯ, ವಿ-ವಿಠಲರಾಯ, ಮ-ಮಲ್ಲಿಕಾರ್ಜುನರಾಯ, ರಾ-ರಾಮರಾಯ, ವಿ-ವಿರೂಪಾಕ್ಷರಾಯ

